

# ಸನ್ಮತಿ ಶ್ರೀವಿಹಾರ

## [ಜೈನಧರ್ಮದ ಪ್ರಾಚೀನ ಇತಿಹಾಸ]

ರಚಯಿತರು :

ಯಂ. ಡಿ. ವಸಂತರಾಜ್, ಎಂ.ಎ.

ಅಧ್ಯಾಪಕ :

ಸಂಸ್ಕೃತ ವಿಭಾಗ, ಮಹಾರಾಜಾ ಕಾಲೇಜು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು

೧೯೭೧

ಪ್ರತಿ : ೧೦೦೦

ಸಾಧಾರಣ ರಕ್ಷಾಕವಚ ಬೆಲೆ : ರೂ. ೧೫-೦೦

ಉತ್ತಮ ರಕ್ಷಾಕವಚ ಬೆಲೆ : ರೂ. ೨೦-೦೦



ಶ್ರೀವರ್ಧಮಾನಮಜಿತಂ ಜಿನ ವರ್ಧಮಾನಂ ।
ತ್ವಾಂ ಶಂ ನಯೇ ಸ್ತುತಿಪಥೇ ಪಥಿ ಸಂಪ್ರಧೌತೇ ॥
ಯೋಽಂತ್ಯೋಽಪಿ ತೀರ್ಥಕರಮಗ್ರಿಮಮುಷ್ಯಜೈಷೀ ।
ತ್ಕಾಲೇ ಕಲೌ ಚ ಪೃಥುಲೀಕೃತಧರ್ಮತೀರ್ಥಃ ॥

[ಉತ್ತರಪುರಾಣ_ವ.ಪು. ೧೭೪೬]

ಶ್ರೀ

# ಸಮರ್ಪಣೆ



ಜಿತಮ್ಭಗವತಾ ಶ್ರೀಮದ್ಧರ್ಮತೀರ್ಥವಿಧಾಯಿನಾ ।
ವರ್ಧಮಾನೇನ ಸಮ್ಪ್ರಾಪ್ತಸಿದ್ಧಿಸೌಖ್ಯಾಮೃತಾತ್ಮನಾ ।
ಲೋಕಾಲೋಕದ್ವಯಾಧಾರವಸ್ತುಸ್ಥಾಸ್ನು ಚರಿಷ್ಣು ಚ ।
ಸಚ್ಚಿದಾಲೋಕಶಕ್ತಿಃ ಸ್ವಾವ್ಯಶ್ನುತೇ ಯಸ್ಯ ಕೇವಲಾ ॥

ಜಗತ್ಯಚಿಂತ್ಯಮಾಹಾತ್ಮ್ಯಪೂಜಾತಿಶಯಮೀಯುಷಃ ।
ತೀರ್ಥಕೃನ್ನಾಮಪುಣ್ಯೌಘಮಾರ್ಹನ್ತ್ಯಮುಪೇಯುಷಃ ॥
ತದನುಶ್ರೀವಿಶಾಲೇಯಜ್ಜಯತ್ಯದ್ಯ ಜಗದ್ಧಿತಂ ।
ತಸ್ಯಶಾಸನಮವ್ಯಾಜಂ ಪ್ರವಾದಿಮತಶಾಸನಂ ॥

ಅಥ ಸಕಲಜಗದುದಯಕರಣೋದಿತಾತಿಶಯಗುಣಾಸ್ಪದೀಭೂತಪರಮಜಿನಶಾಸನ
ಸರಸ್ಸಮಭಿವರ್ಧಿತಭವ್ಯಜನಕಮಲವಿಕಸನವಿತಿಮಿರಗುಣಕಿರಣಸಹಸ್ರಮಹೋತಿ
ಮಹಾವೀರಸವಿತರಿ ಪರಿನಿರ್ವೃತೇ ಭಗವತ್ಪರಮರ್ಷಿಗೌತಮಗಣಧರ ಸಾಕ್ಷಾಚ್ಛಿಷ್ಯ
ಲೋಹಾರ್ಯಜಮ್ಬುವಿಷ್ಣುದೇವಾಪರಾಜಿತಗೋವರ್ಧನಭದ್ರಬಾಹುವಿಶಾಖ
ಪ್ರೋಷ್ಠಿಲಕ್ಷತ್ರಿಕಾರ್ಯ್ಯಜಯನಾಮಸಿದ್ಧಾರ್ಥಧೃತಿಷೇಣಬುದ್ಧಿಲಾದಿ
ಗುರುಪರಮ್ಪರೀಣಕ್ರಮಾಭ್ಯಾಗತ ಮಹಾಪುರುಷಸನ್ತತಿ
ಸಮವದ್ಯೋತಿತಾನ್ವಯರಾದ

**ಪೂಜ್ಯಶ್ರೀ ನಿರ್ಗ್ರಂಥ ಪರಮಗುರು**

## ೧೦೮ ಶ್ರೀ ವಿದ್ಯಾನಂದ ಮಹಾಮುನಿವರ್ಯರ

ಪಾವನಚಿದ್ರೂಪಸನ್ನಿಧಿಯಲ್ಲಿ ಭಕ್ತಿಪುರಸ್ಸರವಾಗಿ ಸಮರ್ಪಿತವಾದ
ಗ್ರಂಥಕುಸುಮಂ





ಪೂಜ್ಯ ಶ್ರೀ ೧೦೮ ವಿದ್ಯಾನಂದ ಮುನಿವರ್ಯರು

# ವಿಷಯ ಪರಿಚಯ



# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
| --- | --- | --- | --- |
| ೫ | ೨೬ | ಚಂದಾವರು | ಚಂದಾರವರು |
| ೬ | ೧ | ಸನಿವೇಶ | ಸನ್ನಿವೇಶ |
| ೮ | ೧೩ | ನೂರನೇ ವಯಸ್ಸಿನಲ್ಲಿ | ನೂರನೇ ವರ್ಷದ ವಯಸ್ಸಿನಲ್ಲಿ |
| ೯ | ೧೧ | ಶಿಶುನ | ಶಿಶುವಿನ |
| ೧೨ | ೧ | ಈದಿನದವರೆವಿಗೂ | ಇಂದಿನವರೆವಿಗೂ |
| ೧೫ | ೨೩ | ಒಂದು ವರ್ಷದ | ಆರು ವರ್ಷದ |
| ೧೫ | ೨೪–೫ | ಆರು ವರ್ಷಗಳ | ಹದಿಮೂರು ವರ್ಷಗಳ |
| ೧೬ | ೧೦ | ರ್ವಾಣದಂದೇ | ನಿರ್ವಾಣದಂದೇ |
| ೧೭ | ೨೦ | ಶ್ರೀ ಗೌತಮನು | ಶ್ರೀ ಗೌತಮಬುದ್ಧನು |
| ೧೭ | ೨೭ | ನಲವತ್ತೆರಡು | ಮುವ್ವತ್ತನಾಲ್ಕು |
| ೧೭ | ೨೯–೩೦ | ಆರನೇ ವರ್ಷದ ತಪಶ್ಚರ್ಯೆಯಲ್ಲಿದ್ದನು. | ೨೮ ನೇ ವರ್ಷ ವಯೋಮಾನದಲ್ಲಿದ್ದು, ಗೃಹಸ್ಥ ಪರ್ಯಾಯದಲ್ಲಿದ್ದನು. |
| ೧೭ | ೩೨ | ಆರುವರ್ಷ | ಹದಿಮೂರು ವರ್ಷ |
| ೧೮ | ೨ | ಈ ಆರು ವರ್ಷ | ಈ ಹದಿಮೂರು ವರ್ಷ |
| ೨೨ | ೧ | ಬೌದ್ಧಮತದ ಸಂಪ್ರದಾಯದ | ಬೌದ್ಧಮತಸಂಪ್ರದಾಯದ |
| ೨೮ | ೩೦ | ಅವನ | ಅವನು |
| ೩೦ | ೮ | ಉಜ್ಜಯಿನಿಯೋ | ಉಜ್ಜಯಿನೀಯೋ |
| ೩೬ | ೫ | ಜಿಲಾತಪುತ್ರ | ಚಿಲಾತಪುತ್ರ |
| ೩೬ | ೯ | ಮೈದಡವು | ಮೈದಡವಿ |
| ೪೬ | ೧೦ | ಆರನೇ ವರ್ಷದ | ಐದನೇ ವರ್ಷದ |
| ೪೩ | ಕೊನೆ | ಆರನೇ | ಐದನೇ |
| ೫೦ | ೧೧ | ಕಥಾಂತವೇ | ಕಥಾಂಶವೇ |
| ೫೧ | ೧೯ | ನಂದರಾಜಮನೆಪನದ | ನಂದರಾಜಮನೆತನದ |
| ೫೮ | ೩ | ವಾಯುಪುರಾದ | ವಾಯುಪುರಾಣದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬೫ | ೫ | ಅರನಾಗಿ | ಅರಸನಾಗಿ |
| ೬೭ | ೧೮ | ಕೊಂದು | ಕೊಂದ |
| ೬೮ | ೧೦ | ಗುರನಿಹ್ನವ | ಗುರುನಿಹ್ನವ |
| ೬೯ | ೧೪ | ತಂದೆ | ತಂದೆಗೆ |
| ೭೧ | ೩೦ | ಬಿಂಬಿಸಾರಗಿಂತ | ಬಿಂಬಿಸಾರನಿಂದ |
| ೭೬ | ೪–೫ | ಆದರಿಂದ | ಆದ್ದರಿಂದ |
| ೮೦ | ೧೦ | ಕೂಣಕ | ಕೂಣಿಕ |
| ೯೫ | ೨೧ | ತಿಕಾರನ | ಕೃತಿಕಾರನ |
| ೧೦೧ | ೨೨ | ೬ ನೇ ವರ್ಷದ | ಐದನೇ ವರ್ಷದ |
| ೧೦೧ | ೨೨ | ಶ್ರೀ ವೀರತೀರತೀರ್ಥಂಕರನು | ಶ್ರೀ ವೀರತೀರ್ಥಂಕರನು |
| ೧೧೦ | ೧೨ | ಅಶಂವು | ಅಂಶವು |
| ೧೧೮ | ೧ | ರಾಜ್ಯಭಾರಮಾಡಿರುವನೆಂದು | ರಾಜ್ಯಭಾರಮಾಡಿರುವರೆಂದು |
| ೧೨೦ | ಕೊನೆ | ಮೂವರಾಗಿರುವನೆಂದು | ಮೂವರಾಗಿರುವರೆಂದು |
| ೧೨೧ | ಕೊನೆ | ನಿರ್ದೇಶಿತನಾಗಿರುವ | ನಿರ್ದೇಶಿತರಾಗಿರುವ |
| ೧೨೬ | ೧೮ | ಯುದ್ಧವತಿ | ಯದ್ಧವತಿ |
| ೧೩೨ | ೨೧ | 'ಷಡ್ವಿಂಶತಿಕ' | ಷಡ್ವಿಂಶತಿಕ |
| ೧೩೫ | ೧೦ | ಶೇಷ ಶೇಷ | ಶೇಷ |
| ೧೩೯ | ೩೧ | ನಿರ್ದೇಶಿಸಿರುವನೆಂದು | ನಿರ್ದೇಶಿಸಿರುವನೆಂಬುದು |
| ೧೪೨ | ಕೊನೆ | ಶಕವಂಸದ | ಶಕವಂಶದ |
| ೧೪೪ | ೪ | ನಿರ್ತೇಶಿಸಲಾಗಿರುವುದು | ನಿರ್ದೇಶಿಸಲಾಗಿರುವುದು |
| ೧೪೮ | ಕೊನೆ | ಪ್ರರೂಪಿಸಸಾಗಿದೆಯೆಂದು | ಪ್ರರೂಪಿಸಲಾಗಿದೆಯೆಂದು |
| ೧೫೯ | ೮ | ಸಾಟಲೀವುತ್ರ | ಪಾಟಲೀಪುತ್ರ |
| ೧೬೧ | ೨೫ | ನಿರ್ದೇಶಕವಾಗಿರುವ | ನಿರ್ದೇಶಿತವಾಗಿರುವ |
| ೧೬೧ | ಕೊನೆ | ಸೂಚಕವಾಗಿದೆಯೆಂಬು | ಸೂಚಕವಾಗಿದೆಯೆಂದು |
| ೧೬೭ | ೧೦ | ಚಂದ್ರಗುಪ | ಚಂದ್ರಗುಪ್ತ |
| ೧೬೭ | ೨೪ | ಇತಿಹಾಸವದ್ನು | ಇತಿಹಾಸವನ್ನು |
| ೧೬೮ | ೧೧ | ಸೂಚಿತವಾಗುವುಪಾದ್ದರಿಂದ | ಸೂಚಿತವಾಗುವುದಾದ್ದರಿಂದ |
| ೧೭೧ | ೧೭ | ತನ್ನದಾಗಿಸಿಕೊಂದು | ತನ್ನದಾಗಿಸಿಕೊಂಡು |
| ೧೮೯ | ೨೫–೬ | ಪ್ರಶಿಸುವಂತಿದ್ದ | ಪ್ರಶ್ನಿಸುವಂತಿದ್ದ |
| ೨೦೬ | ೧೩ | ಪ್ರಾರ್ಥಿಸಿದ್ದ ತನ್ನನ್ನು | ತನ್ನನ್ನು ಪ್ರಾರ್ಥಿಸಿದ್ದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೨೩ | ೧೨ | ಐತಿಹ್ಯಾಂಶಗಳಲ್ಲಿ | ಐತಿಹ್ಯಾಂತರಗಳಲ್ಲಿ |
| ೨೨೪ | ೪ | ಆಕ್ರಮಣಮಾಡಿದನೆಂಬದು | ಆಕ್ರಮಣಮಾಡಿದನೆಂಬುದು |
| ೨೩೩ | ೧೪–೧೫ | ಭದಬಾಹು | ಭದ್ರಬಾಹು |
| ೨೬೨ | ೯–೧೦ | ಸಮರ್ಥಿತವಾತಾಗುವುದು | ಸಮರ್ಥಿತವಾಗುವುದು |
| ೨೭೦ | ೧೮ | ವ್ರ ವು | ವ್ರತವು |
| ೨೭೦ | ೨೨–೨೩ | ಏತದ್ವಿಸಯಾ | ಏತದ್ವಿಷಯಾ |
| ೨೭೦ | ೨೫–೨೬ | ಪರಿಭತೂಂ | ಪರಿಭೂತೋ |
| ೨೭೧ | ೨ | ಆದಿಷ್ಟವಾಗಿದ್ದಿತು | ಅತಿಚಾರಮಾತ್ರಕ್ಕೆ ಆದಿಷ್ಟ ವಾಗಿದ್ದಿತು |
| ೨೭೮ | ೪–೫ | ಶ್ರೀ ಪಾರ್ಶ್ವನಾಥ ತೀರ್ಥಂಕರ ನಿಂದ ಉಪದಿಷ್ಟವಾದ | ಶ್ರೀ ಪಾರ್ಶ್ವನಾಥ ತಿರ್ಥಂಕರ ನಿಂದ ಮತ್ತು ಶ್ರೀ ವೀರ ತೀರ್ಥಂಕರನಿಂದ ಯತಿಗಳಿಗೆ ಉಪದಿಷ್ಟವಾದ |
| ೨೮೫ | ೧೧ | 'ಲು' | 'ಎ' |
| ೨೯೭ | ೧ | ಪ್ರಥಮಯುವರಾದ | ಪ್ರಥಮರಾದ |
| ೨೯೭ | ೧೦–೧೧ | ಹೇಳಲಾಗಿರುವುದರನ್ನು ಗುಣವಾಗಿ | ಹೇಳಲಾಗಿರುವುದರನು ಗುಣವಾಗಿ |
| ೩೦೦ | ೧೭–೧೮ | ಆಚಾರ್ಯಪರಂಪರೆಯನ್ನು ಕ್ರಮದ | ಆಚಾರ್ಯಪರಂಪರೆಯನು ಕ್ರಮದ |
| ೩೪೧ | ೨೮ | ಹೆಸರುಗಳು ಮಧ್ಯವರ್ತಿಯಾಗಿ | ಹೆಸರುಗಳ ಮಧ್ಯವರ್ತಿಯಾಗಿ |



## ದಿಗಂಬರಜೈನಆವ್ನಾಯಾನುಸಾರ ಚತುರ್ಭೇದಸವಾಶ್ರಿತ (ಚಾಉಜ್ಜಾವು) ಧರ್ಮ

- ೧) ಸಮ್ಯಗ್ದರ್ಶನ
- ೨) ಸಮ್ಯಜ್ಞಾನ
- ೩) ಸಮ್ಯಕ್ಚಾರಿತ್ರ=ಸಮ್ಯಕ್‌ಸಂಯಮ
  - 1) ಸಕಲಚಾರಿತ್ರಧರ್ಮ (ಮುನಿಗಳ ಪಂಚಾಚಾರ ಧರ್ಮ)
    - 1) ಜ್ಞಾನಾಚಾರ
    - 2) ದರ್ಶನಾಚಾರ
    - 3) ವಿನಯಾಚಾರ
    - 4) ಚಾರಿತ್ರಾಚಾರ
      - ತ್ರಿಗುಪ್ತಿ
      - ಪಂಚಸಮಿತಿ
      - ಪಂಚಮಹಾವ್ರತ
    - 5) ತಪಆಚಾರ
  - 2) ವಿಕಲಚಾರಿತ್ರಧರ್ಮ (ಶ್ರಾವಕ ಧರ್ಮ)
    - ೧) ದರ್ಶನಪ್ರತಿಮಾ
    - ೨) ವ್ರತಪ್ರತಿಮಾ
    - ೩) ಸಾಮಾಯಿಕಪ್ರತಿಮಾ
    - ೪) ಪ್ರೋಷಧೋಪವಾಸಪ್ರತಿಮಾ
    - ೫) ಸಚಿತ್ತತ್ಯಾಗಪ್ರತಿಮಾ
    - ೬) ರಾತ್ರಿಭೋಜನತ್ಯಾಗಪ್ರತಿಮಾ
    - ೭) ಬ್ರಹ್ಮಚರ್ಯಪ್ರತಿಮಾ
    - ೮) ಆರಂಭತ್ಯಾಗಪ್ರತಿಮಾ
    - ೯) ಪರಿಗ್ರಹತ್ಯಾಗಪ್ರತಿಮಾ
    - ೧೦) ಅನುಮತಿತ್ಯಾಗಪ್ರತಿಮಾ
    - ೧೧) ಉದ್ದಿಷ್ಟತ್ಯಾಗಪ್ರತಿಮಾ
- ೪) ಸಮ್ಯಕ್ತಪ

---

ವಿ. ಸೂ. : ಈ ವಿಷಯದ ವಿವರಣೆಯು ಪುಟಸಂಖ್ಯೆ ೨೬೫ ರಿಂದ ೨೮೩ ರ ಒಳಗಿದೆ.

# ಅರಿಕೆ

ಬಹುದೀರ್ಘಕಾಲದಿಂದ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದ ಸಮಸ್ಯೆಯೊಂದಕ್ಕೆ ಪರಿಹಾರಕಾಣುವ ಯತ್ನವು ನಡೆದು ತತ್ಫಲವಾಗಿ ನಾನು ಕಂಡ ಪರಿಹಾರವನ್ನು ಪ್ರಾಜ್ಞರ ಸಮ್ಮುಖದಲ್ಲಿರಿಸಬೇಕೆಂಬ ಆಶಯವು ಈ ಕೃತಿಯ ರೂಪದಲ್ಲಿ ವ್ಯಕ್ತಗೊಳ್ಳುತ್ತಿದೆ. ಮನೋಗತವಾಗಿದ್ದ ಆ ಸಮಸ್ಯೆ ಮತ್ತು ಅದರ ಪರಿಹಾರದ ಸ್ಥೂಲಪರಿಚಯವು ಇಲ್ಲಿದೆ.

ಶ್ರವಣಬೆಳಗುಳದ ಶಾಸನಾಂಕ ೧ ರ ಹೇಳಿಕೆ ಹಾಗೂ ಭದ್ರಬಾಹುಕಥಾನಕದ ಹೇಳಿಕೆಗಳನ್ನಾಧರಿಸಿ, ಮೌರ್ಯ ಚಂದ್ರಗುಪ್ತನು ಮುನಿದೀಕ್ಷೆ ಪಡೆದು ಪ್ರಭಾಚಂದ್ರ ಎಂಬ ಹೆಸರನ್ನು ಹೊಂದಿ, ಶ್ರ. ಬೆಳಗುಳದ ಚಂದ್ರಗಿರಿಯಲ್ಲಿ ಸ್ವಲ್ಪಕಾಲ ತನ್ನ ಗುರುವಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಸೇವೆಯಲ್ಲಿ ನಿರತನಾಗಿದ್ದನೆಂಬ ನಿರ್ಣಯವನ್ನು ಸನ್ಮಾನ್ಯ ರೈಸ್‌ರವರು ಮಂಡಿಸಿರುವುದು ವಿದಿತವಿದೆ. ಮೌರ್ಯ ಚಂದ್ರಗುಪ್ತನ ರಾಜ್ಯಭಾರವು ಕ್ರಿ. ಪೂ. ೩೨೨–೧ ರಲ್ಲಿ ಆರಂಭವಾಗಿ ಕ್ರಿ. ಪೂ. ೨೯೮ ನೇ ವರ್ಷದ ಪರಿಸರದಲ್ಲಿ ಕೊನೆಗೊಂಡಿದೆಯೆಂಬುದು ಚರಿತ್ರಕಾರರ ಸರ್ವಸಮ್ಮತವಾದ ಅಭಿಮತವಾಗಿದೆ. ಶ್ರು. ಕೇ. ಭದ್ರಬಾಹುಸ್ವಾಮಿಯವರು ದಿಗಂಬರ ಜೈನಪಂಥದ ಐತಿಹ್ಯದನುಗುಣವಾಗಿ, ಶ್ರೀ ವೀರತೀರ್ಥಂಕರನ ನಿರ್ವಾಣ ಪಶ್ಚಾತ್ ೧೬೨ ನೇ ವರ್ಷದಲ್ಲಿ ಅಥವಾ ಶ್ವೇತಾಂಬರ ಜೈನಪಂಥದ ಐತಿಹ್ಯಾನುಗುಣವಾಗಿ ವೀ. ನಿ. ಪ. ೧೭೦ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿದ್ದಾರೆ. ಇವರು ಸ್ವರ್ಗಸ್ಥರಾದ ಸಮಯದಲ್ಲಿ ಮೌರ್ಯಚಂದ್ರಗುಪ್ತನು ಮುನಿದೀಕ್ಷೆಪಡೆದಿದ್ದನೆಂದಾದ ಪಕ್ಷದಲ್ಲಿ ಶ್ರೀ ವೀರತೀರ್ಥಂಕರನು ಕನಿಷ್ಠಮಿತಿಯಿಂದ (೨೯೮ + ೧೬೨ = ) ೪೬೦ ನೇ ವರ್ಷದಲ್ಲಿ ನಿರ್ವಾಣಹೊಂದಿರಬೇಕೆಂದು ಪರಿಗಣಿತವಾಗುವುದು. ಆದರೆ ಶ್ರೀ ವೀರತೀರ್ಥಂಕರನ ನಿರ್ವಾಣವು ವಿಕ್ರಮಶಕಪೂರ್ವ ೪೭೦ ರಲ್ಲಿ ಸಂಘಟಿಸಿದೆಯೆಂಬ ಶ್ವೇತಾಂಬರ ಜೈನ ಆಮ್ನಾಯದ ಐತಿಹ್ಯಾಧಾರ, ಹಾಗೂ (ಶಾ.) ಶಕಪೂರ್ವ ೬೦೫ ರಲ್ಲಿ ಸಂಘಟಿಸಿದೆಯೆಂಬ ದಿಗಂಬರ ಜೈನ ಆಮ್ನಾಯದ ಐತಿಹ್ಯಾಧಾರಗಳಿಗನುಗುಣವಾಗಿ ಕ್ರಿ. ಪೂ. ೫೨೭–೮ ರಲ್ಲಿ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿರುವನೆಂದು ಅಧಿಗತವಾಗುವುದು. ಇಷ್ಟಲ್ಲದೆ ಮಗಧರಾಜಸಂತತಿಯ ರಾಜ್ಯಭಾರ ಕಾಲಗಣನೆಯನ್ನಧಿಕರಿಸಿದಂತೆ ಜೈನ ಆಮ್ನಾಯದಲ್ಲಿ ಉಳಿದುಬಂದಿರುವ ಐತಿಹ್ಯದನುಗುಣವಾಗಿ ಮೌರ್ಯರಾಜಮನೆತನದ ರಾಜ್ಯಭಾರವು ಶ್ರೀ ವೀರನಿರ್ವಾಣ ಸಮಯದಿಂದ (೬೦+ ೧೫೫ = ) ೨೧೫ ವರ್ಷಗಳ ಪರಿಸರದಲ್ಲಾಗಿದೆಯೆಂದು ಸೂಚಿತವಾಗುವುದಾದ್ದರಿಂದ ವೀ. ನಿ. ಪ. ೧೬೨ ರಲ್ಲಿ ಅಥವಾ ೧೭೦ ರಲ್ಲಿ ಸ್ವರ್ಗಸ್ಥರಾದ ಶ್ರು. ಕೇ. ಭದ್ರಬಾಹುಸ್ವಾಮಿಯವರ ಸೇವೆಯಲ್ಲಿ ನಿರತನಾಗಿದ್ದನೆಂದು ಹೇಳಲಾಗಿರುವ ಚಂದ್ರಗುಪ್ತಮುನಿ

ಯನ್ನು ಮೌರ್ಯಚಂದ್ರಗುಪ್ತನೆಂದು ಗುರುತಿಸಲಾಗಿರುವುದು ಸುಸಂಗತವೆನಿಸು ವುದಿಲ್ಲ. ಇದು ಶ್ರೀ ವೀರನಿರ್ವಾಣಸಮಯಸಂಬಂಧಿಯಾದ ಸಮಸ್ಯೆ. ಇಷ್ಟಲ್ಲದೆ ಶ್ರೀ ವೀರತೀರ್ಥಂಕರನ ಸಮಕಾಲೀನನಾಗಿದ್ದ ಶ್ರೀ ಗೌತಮಬುದ್ಧನ ನಿರ್ವಾಣಸಮಯದ ವಿಷಯ ಹಾಗೂ ಈ ಮಹಾಪುರುಷರೀರ್ವರ ಸಮಕಾಲೀನರೆನಿಸಿ ನಿರ್ದೇಶಿತರಾಗಿರುವ ಶ್ರೇಣಿಕ ಬಿಂಬಿಸಾರ ಮತ್ತು ಅಜಾತಶತ್ರುರಾಜರ ರಾಜ್ಯಭಾರಕಾಲವಿಷಯಗಳು ಈ ನಿರ್ವಾಣಸಮಯದ ಸಮಸ್ಯೆಯನ್ನು ಮತ್ತೂ ಜಟಿಲಗೊಳಿಸಿವೆ. ಇದು ಸಮಸ್ಯೆಯ ಸ್ಥೂಲಪರಿಚಯ. ಇದರ ಪರಿಹಾರಕ್ಕಾಗಿ ನಡೆಸಿದ ಪರಿಶೋಧನೆಯ ಫಲಿತಾಂಶವು ಸ್ಥೂಲರೂಪದಿಂದ ಮುಂದಿನಂತಿದೆ.

ಬೃಹದ್ರಥಮನೆತನದ ಅಂತಿಮರಾಜ ರಿಪುಂಜಯ. ಇವನನ್ನು ಕುಣಕನಾಡಿನ ರಾಜನು ಕೊಂದು ತನ್ನ ಮಗನಾದ ಚಿಲಾತಪುತ್ರ–ಪ್ರದ್ಯೋತನಿಗೆ ಕ್ರಿ. ಪೂ. ೫೮೨-೩ ರಲ್ಲಿ ಮಗಧರಾಜ್ಯದ ರಾಜಪಟ್ಟಕಟ್ಟುತ್ತಾನೆ. ೧೨ ವರ್ಷಕಾಲದ ಪ್ರಜಾಪೀಡಾ ಕಾರಿಯಾದ ಆಡಳಿತದ ಅನಂತರ ಅವನ ಭ್ರಾತೃವಾದ ಶ್ರೇಣಿಕ ಬಿಂಬಿಸಾರನ ರಾಜ್ಯಭಾರವು ಆರಂಭವಾಗುತ್ತದೆ. ಇವನ ರಾಜ್ಯಭಾರವು ೩೮ ವರ್ಷಕಾಲ. ತರು ವಾಯ ಇವನ ಸುತನಾದ ಅಜಾತಶತ್ರುವು ೩೨ ವರ್ಷಕಾಲ ರಾಜ್ಯವಾಳುತ್ತಾನೆ. 'ಕುಣಿಕ', 'ಕೊಣಿಕ' ಅಥವಾ 'ಕೋಣಕ' ಎಂಬುವು ಇವನ ಗೋತ್ರನಾಮಾವಶೇಷ ರೂಪಗಳು. 'ದರ್ಶಕ' ಎಂಬುದು ಇವನ ನಿಜನಾಮಧೇಯ. ಅಜಾತಶತ್ರು ಎಂಬುದು ಬಿರುದಿನ ರೂಪದ ಹೆಸರು. ಇವನ ರಾಜ್ಯಭಾರದ ೫ ನೇ ವರ್ಷ, ಕ್ರಿ. ಪೂ. ೫೨೮ ರಲ್ಲಿ ಮತ್ತು ೮ ನೇ ವರ್ಷ, –ಕ್ರಿ. ಪೂ. ೫೨೫ ರಲ್ಲಿ ಅನುಕ್ರಮವಾಗಿ ಶ್ರೀ ವೀರ ತೀರ್ಥಂಕರನ ನಿರ್ವಾಣ ಮತ್ತು ಶ್ರೀ ಗೌತಮಬುದ್ಧನ ನಿರ್ವಾಣ ಪ್ರಸಂಗಗಳು ಸಂಘಟಿಸಿವೆ. ಅಜಾತಶತ್ರುವಿನ ತರುವಾಯ ಅವನ ಮಗನಾದ ಉದಾಯಭದ್ರನು ೧೬ ವರ್ಷಕಾಲ ರಾಜ್ಯವಾಳಿದ್ದಾನೆ. ಇವನೊಡನೆ ಕೋಣಕ ಮನೆತನದ ನಾಲ್ವರು ರಾಜರ ರಾಜ್ಯಭಾರವು ಕೊನೆಗೊಳ್ಳುವುದು. ಉದಾಯಿಭದ್ರನನ್ನು ಮುನಿವೇಷಧಾರಿ ಯಾದ ನಾಗದಾಸಕನು ಕೊಲೆಮಾಡಿ ಮಗಧರಾಜ್ಯದ ಸಿಂಹಾಸನವನ್ನು ಆಕ್ರಮಿಸು ತ್ತಾನೆ. ಮುನಿವ್ರತಧಾರಣೆಮಾಡಿದ್ದು, ಉದಾಯಿರಾಜನನ್ನು ಕೊಂದು ಸಿಂಹಾಸನಾ ರೋಹಣಮಾಡಿದ ಇವನಿಗೆ 'ಮುಂಡ' ಎಂಬ ಹೆಸರು ಆರೂಢವಾಗುತ್ತದೆ. ಇವನು ೧೭ ವರ್ಷಕಾಲ ರಾಜ್ಯವಾಳುತ್ತಾನೆ. ಇಲ್ಲಿಗೆ ಬೃಹದ್ರಥರ ರಾಜ್ಯಭಾರಾಂತ್ಯ ಸಮ ಯದಿಂದ ೧೧೫ ವರ್ಷಗಳೂ ಶ್ರೀ ವೀರನಿರ್ವಾಣಸಮಯದಿಂದ ೬೦ ವರ್ಷಗಳೂ ಸಂದಿ ರುತ್ತವೆ. ಮುಂದೆ ಮಗಧರಾಜ್ಯವು ನಂದರಾಜನ ಪ್ರಭುತ್ವಕ್ಕೊಳಪಡುತ್ತದೆ.

ಪುರಾಣಗಳಲ್ಲಿ ಇವನನ್ನು 'ನಂದಿವರ್ಧನ' ಎಂದು ಹೆಸರಿಸಿದೆ. ಶಿಶುನಾಗ, ವಿಜಯಸೇನ, ವಿಶಾಹಭೂಪ ಎಂಬುವು ನಂದರಾಜನ ಅಡ್ಡಹೆಸರುಗಳು. ಬೌದ್ಧ ಇತಿ ವೃತ್ತದ ಕಥನಾನುಸಾರವಾಗಿ ಇವನು 'ವೇಸಾಲೀಯ'–ಅಂದರೆ ವಿಶಾಲಾ = ಉಜ್ಜ

ಯಿನಿಯ ರಾಜವುನೆತನದವನು. ಜೈನ ಆವ್ನಾಯದ ಕಥನಾಧಾರದಿಂದಲೂ ಇವನು ಅವಂತೀರಾಜವುನೆತನದ ಅರಸನೆಂದು ಸೂಚಿತವಾಗುವುದು. ಅವಂತಿಯ ಪ್ರಸಿದ್ಧ ರಾಜನಾದ ಪ್ರದ್ಯೋತನ ಮರಣ ಮತ್ತು ಶ್ರೀ ವೀರತೀರ್ಥಂಕರನ ನಿರ್ವಾಣಗಳು ಸಮಕಾಲೀನ ಘಟನೆಗಳು. ಪ್ರದ್ಯೋತನ ತರುವಾಯ ಪಂಚಪ್ರಾದ್ಯೋತರ ೫೨ವರ್ಷ ಕಾಲದ ರಾಜ್ಯಭಾರ ನಡೆಯುತ್ತದೆ. ಅನಂತರ ನಂದಿವರ್ಧನನು ಕ್ರಿ. ಪೂ. ೪೭೬-೫ ರಲ್ಲಿ ಅವಂತಿಯ ರಾಜನಾಗಿ ಅಭಿಷಿಕ್ತನಾಗುತ್ತಾನೆ. ಇವನ ಈ ರಾಜ್ಯಾಭಿಷೇಕ ಸಮಯವನ್ನಾಧರಿಸಿ 'ವಿಜಯಾಭಿನಂದನ' ಶಕೆಯು ಪ್ರವರ್ತಿತವಾಯಿತು. ಮುಂದೆ ಎಂಟುವರ್ಷಗಳ ಅನಂತರಇವನು ಮಗಧರಾಜ್ಯದ ಪ್ರಭುತ್ವಪಡೆಯುತ್ತಾನೆ. ಈ ಸಮಯದಿಂದ ಮುಂದೆ ೩೨ ವರ್ಷಗಳಕಾಲ ಇವನ ರಾಜ್ಯಭಾರ ನಡೆಯುತ್ತದೆ. ತರುವಾಯ ಇವನ ಮಗನಾದ ಮಹಾನಂದನು ಸಿಂಹಾಸನದಲ್ಲಿ ಅಧಿಷ್ಠಿತನಾಗುತ್ತಾನೆ. ಕಾಲಾಶೋಕ, ಕಾಕವರ್ಣಿ ಮತ್ತು ವೀರಸೇನ ಎಂಬುವು ಇವನ ಅಡ್ಡಹೆಸರುಗಳು. ಶ್ರೀ ಗೌತಮಬುದ್ಧನ ನಿರ್ವಾಣಾನಂತರದ ೯೧ ನೇ ವರ್ಷದಲ್ಲಿ ಇವನ ರಾಜ್ಯಾಭಿ ಷೇಕವಾಗಿದೆ. ಪ್ರದ್ಯೋತ ರಾಜನ ರಾಜ್ಯಭಾರಾಂತ್ಯ ಸಮಯದಿಂದ ೧೩೮ ನೇ ವರ್ಷ ದಲ್ಲಿ ಇವನ ೪೬ ವರ್ಷಗಳ ರಾಜ್ಯಭಾರವು ಕೊನೆಗೊಂಡಿದೆ. ತರುವಾಯ ಇವನ ಸುತನಾದ ಭದ್ರಸೇನನು ೧೦ವರ್ಷಕಾಲ ರಾಜ್ಯವಾಳುವನು. 'ಪದ್ಮನಂದ' ಎಂಬುದು ಇವನ ಮತ್ತೊಂದು ಹೆಸರು. ಇವನು ತನ್ನ ದಾಯಾದ್ಯಭ್ರಾತೃವಾದ ಮಹಾಪದ್ಮನ ವಿವಂಚನೆಗೊಳಗಾಗಿ ಮೃತನಾಗುತ್ತಾನೆ. ನಂದರಾಜನು ಮಗಧರಾಜನಾಗಿ ಅಭಿ ಷಿಕ್ತನಾದ ಸಮಯದಿಂದ ಪದ್ಮನಂದನ ರಾಜ್ಯಭಾರಾಂತ್ಯಸಮಯಕ್ಕೆ ೮೮ ವರ್ಷಗಳಾ ಗುವುವು. ಮುಂದೆ ಇವನ ಎಂಟು ಜನ ಸಹೋದರರು ೭ ವರ್ಷಕಾಲ ರಾಜ್ಯವಾಳು ವರು. ಇವರೆಲ್ಲರೂ ಮಹಾಪದ್ಮನಂದನ ಕುಟಿಲತೆಗೆ ತುತ್ತಾಗಿ ಹತರಾಗುವರು. ಕಾಲಾಶೋಕನ ತರುವಾಯ ಅವನ ೧೦ ಜನ ಸುತರು ೨೨ ವರ್ಷಕಾಲ ರಾಜ್ಯವಾಳುವ ರೆಂಬ ಮಹಾವಂಸೋಕ್ತಿಯ ಹೇಳಿಕೆಯಿಂದ ಸೂಚಿತವಾಗುವಂತೆ ಪದ್ಮನಂದಾದಿ ೯ಜನ ಸಹೋದರರ ೧೭ ವರ್ಷಕಾಲದ ರಾಜ್ಯಭಾರದ ತರುವಾಯ ಮತ್ತೊಬ್ಬರಾಜನು ೫ ವರ್ಷಕಾಲ ರಾಜ್ಯವಾಳಿರುವನೆಂದು ಹೇಳಲವಕಾಶವಾಗುವುದು. ಪದ್ಮನಂದಾದಿ ೯ ಜನ ಸಹೋದರರಲ್ಲಿ ಕೊನೆಯವನ ರಾಜ್ಯಭಾರವು ಶ್ರೀ ವೀರನಿರ್ವಾಣಸಮಯ ದಿಂದ ೧೫೫ ನೇ ವರ್ಷದಲ್ಲಿ ಅಂತ್ಯಗೊಂಡಿದೆ. ಪರಿಶಿಷ್ಟಪರ್ವದಲ್ಲಿ ಉಲ್ಲಿಖಿತವಿರುವ ಶ್ಲೋಕವೊಂದರ ಹೇಳಿಕೆಯಂತೆ ವೀರನಿರ್ವಾಣಸಮಯದಿಂದ ೧೫೫ ನೇ ವರ್ಷದ ತರು ವಾಯದಲ್ಲಿ ಚಂದ್ರಗುಪ್ತನ ರಾಜ್ಯಾಭಿಷೇಕ ನಡೆದಿದೆ. ಇವನು ಮಹಾನಂದನ ಮೊಮ್ಮಗ. ಕೇವಲ ಹೆಸರಿನ ಸಾಮ್ಯದ ವಿಪ್ರತಿಪತ್ತಿಯಿಂದ ಇವನನ್ನೇ ಮೌರ್ಯ ಚಂದ್ರಗುಪ್ತನೆಂದು ಗುರುತಿಸಲಾಗಿದೆ. ನಂದರಾಜನು ಮಗಧಸಾಮ್ರಾಟನಾಗಿ ಅಭಿ ಷಿಕ್ತನಾದ ಸಮಯದಿಂದ ೧೦೦ ನೇ ವರ್ಷದಲ್ಲಿ ಇವನ ರಾಜ್ಯಭಾರವು ಅಂತ್ಯಗೊಂಡಿದೆ. 'ಭುಕ್ತ್ವಾಮಹೀಂವರ್ಷ ಶತಂ ನಂದೇಂದುಃ ಸಭವಿಷ್ಯತಿ' ಎಂಬ ವಾಯುಪುರಾಣದ

ಹೇಳಿಕೆಗೆ ಯುಕ್ತವಾದ ಅರ್ಥವಿದೆಯೆನ್ನುವುದಾದಲ್ಲಿ ಅದು ಈ ನಂದಚಂದ್ರ(ಗುಪ್ತ)ನ ರಾಜ್ಯಭಾರಾಂತ್ಯ ಸಮಯದ ಸೂಚಕವಾಗಿದ್ದಲ್ಲದೆ ಅನ್ಯಥಾ ಅರ್ಥವತ್ತಾಗುವುದಿಲ್ಲ. ಶ್ರೀ ವೀರನಿರ್ವಾಣಪಶ್ಚಾತ್ ೧೬೧ ನೇ ವರ್ಷದಲ್ಲಿ ಇವನ ರಾಜ್ಯಭಾರವು ಅಂತ್ಯಗೊಂಡಿದೆಯಾಗಿ, ವೀ. ನಿ. ಪ. ೧೬೨ ರಲ್ಲಿ ಶ್ರವಣ ಬೆಳಗೊಳದ ಚಂದ್ರಗಿರಿಯಲ್ಲಿ ಸ್ವರ್ಗಸ್ಥರಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಸೇವೆಯಲ್ಲಿ ನಿರತನಾಗಿದ್ದವನು ಇವನೇ ಆಗಿರುವನೆಂದು ಗ್ರಹಿಸಲು ಭಾಧಕವಾಗುವುದಿಲ್ಲ. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ನಂದಚಂದ್ರಗುಪ್ತನಿಂದೊಡಗೂಡಿದ ಮುನಿಸಂಘಸಮೇತರಾಗಿ ವೀ. ನಿ. ಪ. ೧೬೧ರಲ್ಲಿ ಉತ್ತರಾಪಥವನ್ನು ತ್ಯಜಿಸಿ, ದಕ್ಷಿಣಾಪಥಕ್ಕೆ ಪಯಣಮಾಡಿದ್ದಾರೆ. ಈ ಸಂದರ್ಭದಲ್ಲಿ ಉತ್ತರಾಪಥದಲ್ಲಿಯೇ ಉಳಿದುಕೊಂಡ ಯತಿಸಮಾಜದ ಅಧಿನಾಯಕರಾಗಿ ಆಚಾರ್ಯಪದವಿಯನ್ನಲಂಕರಿಸಿದ ಸ್ಥೂಲಭದ್ರಸ್ವಾಮಿಯವರು ೪೫ ವರ್ಷಕಾಲ ಆಚಾರ್ಯಪಟ್ಟಸ್ಥರಾಗಿದ್ದು ಸ್ವರ್ಗಸ್ಥರಾಗಿದ್ದಾರೆ. 'ಚಂದ್ರಗುಪ್ತನ ರಾಜ್ಯಾಭಿಷೇಕ ನಡೆದ ವರ್ಷದಲ್ಲಿಯೇ ಸ್ಥೂಲಭದ್ರಸ್ವಾಮಿಯವರು ಸ್ವರ್ಗಸ್ಥರಾದರು' ಎಂಬ ಪರಂಪರಾಗತ ಐತಿಹ್ಯವಿದೆ. ಇದರಿಂದ ವೀ. ನಿ. ಪ. (೧೬೧+೪೫=) ೨೦೬ ರಲ್ಲಿ=ಕ್ರಿ. ಪೂ. ೩೨೨ ರಲ್ಲಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕ ನಡೆದಿರುವುದೆಂದು ಸೂಚಿತವಾಗುವುದು. ನಂದಚಂದ್ರಗುಪ್ತನ ರಾಜ್ಯಪರಿತ್ಯಾಗಸಮಯ ಮತ್ತು ಮೌರ್ಯ ಚಂದ್ರಗುಪ್ತನ ರಾಜ್ಯಾಭಿಷೇಕ ಸಮಯಗಳ ಮಧ್ಯವರ್ತಿಯಾದ ೪೫ ವರ್ಷಗಳ ಅವಧಿಯಲ್ಲಿ ಮೊದಲ ೩೩ ವರ್ಷಕಾಲ ಮಹಾಪದ್ಮನಂದನೂ, ತರುವಾಯದ ೧೨ ವರ್ಷಕಾಲ ಇವನ ಎಂಟು ಜನ ಸುತರೂ ರಾಜ್ಯವಾಳಿದ್ದಾರೆ. ಚಂದ್ರಗುಪ್ತ ಮೌರ್ಯನ ರಾಜ್ಯಾಭಿಷೇಕಪರ್ಯಂತಕಾಲದ ಮಗಧ-ಅವಂತೀರಾಜಸಂತತಿಯ ಅನುಕ್ರಮ ರಾಜ್ಯಭಾರಕಾಲಗಣನೆಯ ಚೌಬಂಧವನ್ನು ಪುಟಸಂಖ್ಯೆ ೧೯೨ ರಿಂದ ೧೯೪ ರಲ್ಲಿ ಗಮನಿಸಬಹುದು. ಚಂದ್ರಗುಪ್ತಮೌರ್ಯನು ನಂದಚಂದ್ರಗುಪ್ತನ ಮೊಮ್ಮಗ, ಮುರಿಯ-ಕುಮುದನಂದನ ಮಗ. ಮೌರ್ಯವಂಶದ ಪ್ರಸಿದ್ಧ ರಾಜನಾದ ಅಶೋಕಸಾಮ್ರಾಟನ ರಾಜ್ಯಾಭಿಷೇಕವು ಶ್ರೀ ಗೌತಮಬುದ್ಧನ ನಿರ್ವಾಣ ಪಶ್ಚಾತ್ ೨೫೬ ನೇ ವರ್ಷದಲ್ಲಿ ನಡೆದಿದೆ. ಬು. ನಿ. ಪ. ೨೧೯ ನೇ ವರ್ಷದಲ್ಲಿ ಜನಿಸಿದ ಇವನು ತನ್ನ ೩೭ ನೇ ವರ್ಷದ ವಯೋಮಾನದಲ್ಲಿ ರಾಜ್ಯಭಾರಾಧಿಷ್ಠಿತನಾಗಿ ೩೬ ವರ್ಷಕಾಲ ರಾಜ್ಯವಾಳಿದ್ದಾನೆ. ಇವನ ತರುವಾಯ ಮೌರ್ಯ ಸಂತತಿಯ ಆರು ಜನ ರಾಜರು ರಾಜ್ಯವಾಳಿದ್ದಾರೆ. ಮೌರ್ಯ ಸಂತತಿ ಖರಸರ ಒಟ್ಟು ರಾಜ್ಯಭಾರಕಾಲ ೧೩೭ ವರ್ಷ. ಕ್ರಿ. ಪೂ. ೧೮೫-೪ ರಲ್ಲಿ ಮೌರ್ಯ ಮನೆತನದ ರಾಜ್ಯಭಾರವು ಕೊನೆಗೊಂಡು ಶುಂಗಮನೆತನದ ರಾಜ್ಯಭಾರವು ಆರಂಭವಾಗಿದೆ. ಈ ಮನೆತನದ ಮೊದಲ ಮೂವರು ರಾಜರ ೯೫ ವರ್ಷಗಳ ರಾಜ್ಯಭಾರಾನಂತರದಲ್ಲಿ ಅವಂತೀರಾಜ್ಯವು ಮಗಧ ರಾಜ್ಯದರಸರ ಶಾಸನಾಧಿಕಾರದಿಂದ ವಿಮೋಚನೆಪಡೆದು ಸ್ವತಂತ್ರರಾಜ್ಯವೆನಿಸಿಕೊಂಡಿದೆ. ಅವಂತೀರಾಜ್ಯದ ಈ ಸ್ವಾತಂತ್ರ್ಯವನ್ನು ಸಾಧಿಸಿದವನು ಗಂಧರ್ವಸೇನ

ರಾಜ. ಇವನು ೪೦ ವರ್ಷಕಾಲ ರಾಜ್ಯವಾಳಿದ್ದಾನೆ. ವಿಕ್ರಮಾದಿತ್ಯನು ಇವನ ಮಗನು. ಗಂಧರ್ವಸೇನನ ೩೨ ನೇ ವರ್ಷದ ರಾಜ್ಯಭಾರಸಮಯವಾದ ವೀ. ನಿ. ಪ. ೪೭೦ ರಲ್ಲಿ ವಿಕ್ರಮನು ಜನಿಸಿದ್ದಾನೆ. ಮುಂದೆ ೮ ವರ್ಷಗಳ ತರುವಾಯದಲ್ಲಿ ಗರ್ದಭಿಲ್ಲನಿಂದ ಗಂಧರ್ವಸೇನನು ಪರಾಜಿತನಾದನಾಗಿ ವಿಕ್ರಮಾದಿತ್ಯನಿಗೆ ದೇಶಾಟನೆಯ ಪರಿಸ್ಥಿತಿಯುಂಟಾಯಿತು. ಗಂಧರ್ವಸೇನನನ್ನು ಪರಾಜಯಗೊಳಿಸಿ, ಉಜ್ಜಯಿನಿಯ ರಾಜ್ಯವನ್ನು ಆಕ್ರಮಣಮಾಡಿದ ಗರ್ದಭಿಲ್ಲನು ೧೩ ವರ್ಷಕಾಲ ರಾಜ್ಯವಾಳಿ, ಶಕರಾಜನಿಂದ ಪರಾಜಿತನಾದನು. ಮುಂದಿನ ನಾಲ್ಕನೇ ವರ್ಷದಲ್ಲಿ ಶಕರಾಜನನ್ನು ವಿಕ್ರಮಾದಿತ್ಯನು ಪರಾಜಯಗೊಳಿಸಿ, ಉಜ್ಜಯಿನಿಯ ಸಿಂಹಾಸನದಲ್ಲಿ ಅಧಿಷ್ಠಿತನಾದನು. ಈ ರೀತಿಯಾಗಿ ಪೈತೃಕವಾದ ತನ್ನ ರಾಜ್ಯವನ್ನು ಪುನಃ ಸ್ವಾಧೀನಪಡಿಸಿಕೊಂಡ ವಿಕ್ರಮಾದಿತ್ಯನು ೫೬ ವರ್ಷಕಾಲ ರಾಜ್ಯವಾಳಿ ಕ್ರಿ. ಶ. ೨೩ ರಲ್ಲಿ ದಿವಂಗತನಾದನು. ಈಗ ಪ್ರವರ್ತಿತವಿರುವ ವಿಕ್ರಮಶಕೆಯು ಇವನ ಜನ್ಮಸಮಯವನ್ನಾಧರಿಸಿದ್ದಾಗಿದೆ.

ಶ್ರೀ ವೀರತೀರ್ಥಂಕರನ ನಿರ್ವಾಣಾನಂತರಕಾಲೀನ ಗುರುಪರಂಪರೆಯನುಕ್ರಮದ ಐತಿಹ್ಯಗಳು ದಿಗಂಬರ ಮತ್ತು ಶ್ವೇತಾಂಬರ ಜೈನ ಪಂಥಗಳೆರಡರಲ್ಲಿಯೂ ಉಳಿದುಬಂದಿವೆ. ದಿಗಂಬರ ಜೈನ ಪಂಥದ ಐತಿಹ್ಯದಲ್ಲಿ ನಿರ್ದೇಶಿತವಿರುವಂತೆ ಶ್ರೀ ವೀರನಿರ್ವಾಣಸಮಯದಿಂದ ಮುಂದೆ ೬೮೩ ವರ್ಷಗಳ ಅವಧಿಯಲ್ಲಿ ಆದ ಆಚಾರ್ಯಸಂತತಿಯಲ್ಲಿ 'ಭದ್ರಬಾಹು' ಎಂಬ ಹೆಸರಿನ ಮೂವರು ಆಚಾರ್ಯರನ್ನು ಗುರುತಿಸಬಹುದು. ಇವರಲ್ಲಿ ಮೊದಲನೆಯವರು ದ್ವಾದಶಾಂಗ ಚತುರ್ದಶಪೂರ್ವಿಗಳಾದ ಶ್ರುತಕೇವಲಿಭದ್ರಬಾಹುಸ್ವಾಮಿಯವರು. ಶ್ರೀ ವೀರತೀರ್ಥಂಕರನ ನಿರ್ವಾಣಾನಂತರಕಾಲೀನ ಗೌತಮಸ್ವಾಮಿಯಾದಿಯಾದ ಆಚಾರ್ಯಾನುಕ್ರಮದಲ್ಲಿ ಇವರು ಎಂಟನೆಯವರು. ವೀ. ನಿ. ಪ. ೧೩೩ನೇ ವರ್ಷಾನಂತರ ೨೯ ವರ್ಷಕಾಲ ಆಚಾರ್ಯಪಟ್ಟಸ್ಥರಾಗಿದ್ದು, ವೀ. ನಿ. ಪ. ೧೬೨ ರಲ್ಲಿ ಶ್ರ. ಬೆಳಗುಳದ ಚಂದ್ರಗಿರಿಯಲ್ಲಿ ಸ್ವರ್ಗಸ್ಥರಾಗಿದ್ದಾರೆ. ಉತ್ತರಭಾರತಪ್ರದೇಶದಲ್ಲಿ ಮಹಾಪದ್ಮನಂದ ರಾಜನಿಂದ ನಗ್ನಯತಿಗಳ ಸಂಚಾರಕ್ಕೆ ಆತಂಕವುಂಟಾಯಿತಾಗಿ, ಇವರು ನಿರ್ಗ್ರಂಥಯತಿಗಳ ನಿಯತಾಚಾರವಾದ ನಾಗ್ನ್ಯವ್ರತದ ರಕ್ಷಣೆಗಾಗಿ ದಕ್ಷಿಣಾಪಥದತ್ತ ಪಯಣ ಕೈಗೊಂಡರು. ನಂದಚಂದ್ರಗುಪ್ತನು ಇವರಿಂದ ದೀಕ್ಷೆಪಡೆದು ಮುನಿಸಂಘದೊಡನೆ ಶ್ರ. ಬೆಳಗುಳವನ್ನು ಸೇರಿ ಚಂದ್ರಗಿರಿಯಲ್ಲಿ ಸಲ್ಲೇಖನ ಕೈಗೊಂಡ ತನ್ನ ಗುರುಗಳ ಸೇವೆಯಲ್ಲಿ ನಿರತನಾಗಿದ್ದನು. 'ಭದ್ರಬಾಹು' ಎಂಬ ಹೆಸರಿನ ಮೂವರು ಆಚಾರ್ಯರಲ್ಲಿ ಎರಡನೆಯವರು ಅಷ್ಟಅಂಗಶ್ರುತಪಾಠಿಗಳಾಗಿದ್ದರು. ಪ್ರಸಿದ್ಧಜ್ಯೋತಿಷಗ್ರಂಥಗಳ ಕರ್ತೃಗಳಾದ ವರಾಹಮಿಹಿರಾಚಾರ್ಯರು ಇವರ ಸಹೋದರರು. ಇವರು ವಿಕ್ರಮಾದಿತ್ಯನ ಸಮಕಾಲೀನರಾಗಿದ್ದರು. ಗೌತಮಸ್ವಾಮಿಯವರಾದಿಯಾಗಿ ೨೬ ನೆಯವರಾಗಿ ೫೨ ವರ್ಷಕಾಲ ಆಚಾರ್ಯಪಟ್ಟಸ್ಥರಾಗಿದ್ದ ಇವರು ವೀ. ನಿ. ಪ. ೫೬೫ ರಲ್ಲಿ ಉಜ್ಜ

ಯಿನಿಯ ಸಮೀಪದ ಭಾದ್ರಪದ ಎಂಬ ಪ್ರದೇಶದಲ್ಲಿ ಸ್ವರ್ಗಸ್ಥರಾದರು. ಮೂರ ನೆಯ ಭದ್ರಬಾಹುಸ್ವಾಮಿಯವರು ಗೌತಮಸ್ವಾಮಿಯವರಾದಿಯಾದ ಆಚಾರ್ಯ ಸಂತತಿಯಲ್ಲಿ ೩೧ ನೆಯವರು. ಆಚಾರಾಂಗಶ್ರುತಪಾಠಿ ಆಚಾರ್ಯರಲ್ಲಿ ನಾಲ್ಕ ನೆಯವರಾದ ಇವರು ವೀ. ನಿ. ಪ. ೬೧೦ ರಿಂದ ೬೩೩ ರ ಪರ್ಯಂತ ೨೩ ವರ್ಷ ಕಾಲ ಆಚಾರ್ಯಪಟ್ಟಸ್ಥರಾಗಿದ್ದರು. ಉತ್ತರ ಭಾರತಪ್ರದೇಶದಲ್ಲಿ ೧೨ ವರ್ಷಗಳ ಕಾಲ ದುರ್ಭಿಕ್ಷವುಂಟಾಗಲಿರುವುದನ್ನು ಮುಂಗಂಡು ಮುನಿಸಂಘ ದೊಡನೆ ದಕ್ಷಿಣಾಪಥದತ್ತ ಪಯಣಕ್ಕೆಗೊಂಡರು. ತಮ್ಮ ಆಯುಷ್ಯವು ಅಲ್ಪತರ ವಾಗಿರುವುದನ್ನು ತಿಳಿದು ಶ್ರ. ಬೆಳಗುಳದ ಚಂದ್ರಗಿರಿಯಲ್ಲಿ ಸಲ್ಲೇಖನವನ್ನು ಕೈಗೊಂಡು ಸ್ವರ್ಗಸ್ಥರಾದರು. ಈ ಸಮಯದಲ್ಲಿ ಪ್ರಭಾಚಂದ್ರ ಎಂಬ ಹೆಸರಿನ ಶಿಷ್ಯರು ಇವರಿಗೆ ಸೇವೆಸಲ್ಲಿಸಿದರು. ಶ್ರ. ಬೆಳಗುಳದ ೧ ನೇ ಶಾಸನದ ಐತಿಹ್ಯವು ಈ ಭದ್ರಬಾಹುಸ್ವಾಮಿಯವರನ್ನಧಿಕರಿಸಿದ್ದಾಗಿದೆ. ಈ ಭದ್ರಬಾಹುಸ್ವಾಮಿಯವರ ಉತ್ತರಾಧಿಕಾರಿಯಾಗಿ ಅರ್ಹದ್ಬಲಿಸ್ವಾಮಿಯವರು ಆಚಾರ್ಯಪದಾಧಿಷ್ಠಿತರಾದರು. ಇವರು ಮುನಿಸಂಘವನ್ನು ನಂದಿ ಮೊದಲಾದ ಹೆಸರಿನ ಐದು ಶಾಖೆಗಳನ್ನಾಗಿ ವಿಭಜಿಸಿ ಪ್ರತಿಯೊಂದು ಶಾಖೆಗೂ ಒಬ್ಬೊಬ್ಬ ಯತಿವರ್ಯರನ್ನು ಸಂಘನಾಯಕರನ್ನಾಗಿ ನಿಯೋಜಿಸಿದರು. ಮೂರನೇ ಭದ್ರಬಾಹುಸ್ವಾಮಿಯವರಿಂದ ಶ್ರುತವಿದ್ಯೋಪದೇಶ ಪಡೆದು ಶ್ರುತವಿದ್ಯೆಯ ಪ್ರವರ್ತನೆಗೆ ಕಾರಣಕರ್ತೃಗಳೆನಿಸಿದ ಶಿಷ್ಯರಲ್ಲಿ ಧರಸೇನ ಸ್ವಾಮಿಯವರು ಮತ್ತು ಗುಣಧರಸ್ವಾಮಿಯವರು ಪ್ರಮುಖರು. ಧರಸೇನಸ್ವಾಮಿ ಯವರಿಂದ ಶ್ರುತವಿದ್ಯೋಪದೇಶ ಪಡೆದ ಪುಷ್ಪದಂತ ಮತ್ತು ಭೂತಬಲಿಸ್ವಾಮಿ ಯವರು ಷಟ್ಖಂಡಾಗಮ ಗ್ರಂಥವನ್ನು ರಚನೆಮಾಡಿದರು. ಗುಣಧರಸ್ವಾಮಿಯವರು ಕಷಾಯಪಾಹುಡ ಆಗಮಗ್ರಂಥವನ್ನು ರಚಿಸಿದರು. ಶ್ರೀ ವೀರತೀರ್ಥಂಕರನ ಶ್ರೀವಿಹಾರದ ಸಮಯದಲ್ಲಿ ಗೌತಮಗಣಧರಸ್ವಾಮಿಯವರಿಂದ ನಿಬದ್ಧವಾದ ದ್ವಾದ ಶಾಂಗಶ್ರುತದ ಅವಶೇಷವು ಈ ಆಗಮಗ್ರಂಥಗಳಲ್ಲಿ ಸಂರಕ್ಷಿತವಾಗಿ ಇಂದಿನವರೆವಿಗೂ ಉಳಿದುಬಂದಿದೆ.

**ಗುರುಹಿರಿಯರಿಗೆ ಅಭಿವಾದನಂಗಳು :** ಪೂಜ್ಯರಾದ ಎಂ. ಡಿ. ಧರ್ಮರಾಜ ಪಂಡಿತ್ ಮತ್ತು ಬೊಮ್ಮಾಜಮ್ಮನವರು ನನ್ನ ಜನ್ಮದಾತೃಗಳು ಮತ್ತು ನನ್ನ ಬಾಲ್ಯ ಕಾಲದ ಪ್ರಥಮ ವಿದ್ಯಾಗುರುಗಳೂ ಆಗಿದ್ದಾರೆ. ಪೂಜ್ಯ ದೊಡ್ಡಪ್ಪಾಜಿಯವರಾದ ಡಿ. ನಾಗರಾಜಶಾಸ್ತ್ರಿಗಳು, ಇವರ ಸುತರಾದ ರ್ಯ. ಪಾರ್ಶ್ವನಾಥಶಾಸ್ತ್ರಿಯವರು, ನನ್ನ ಹಿರಿಯಣ್ಣನವರಾದ ಯಂ. ಡಿ. ಪದ್ಮರಾಜ್‌ರವರು ಮತ್ತು ಇತರ ಬಂಧು ಬಾಂಧವರು ನನ್ನ ವಿದ್ಯಾರ್ಥಿದಶೆಯಲ್ಲಿ ಅನುಪಮ ಪ್ರೀತಿವಾತ್ಸಲ್ಯಪೂರ್ವಕ ಪ್ರೋತ್ಸಾ ಹವಿತ್ತು ಉಪಕರಿಸಿದ್ದಾರೆ. ಇವರೆಲ್ಲರಿಗೂ ಸನ್ನುತಿಪೂರ್ವಕವಾದ ವಂದನೆಗಳು. ನನ್ನ ವಿದ್ಯಾರ್ಥಿದಶೆಯ ಅಂತಿಮ ಘಟ್ಟದಲ್ಲಿ ಅಪಾರವಾದ ವಾತ್ಸಲ್ಯಭಾವದಿಂದ

ನನ್ನನ್ನು ಮುನ್ನಡೆಸಿ ಬದುಕಿನ ಮಾರ್ಗವನ್ನು ಸುಗಮಗೊಳಿಸಿಕೊಟ್ಟ ನನ್ನ ಇಬ್ಬರು ಪೂಜ್ಯ ಗುರುವರ್ಯರಿಗೆ ನಾನು ಆಜೀವಪರ್ಯಂತ ಋಣಿಯಾಗಿದ್ದೇನೆ. ಮೈಸೂರು ವಿಶ್ವವಿದ್ಯಾನಿಲಯ ಸಂಸ್ಕೃತ ವಿಭಾಗದಲ್ಲಿ ಮಹಾಮಹೋಪಾಧ್ಯಾಯರಾಗಿದ್ದು; ಸದ್ಯ ವಿಶ್ರಾಂತರಿರುವ ಪ್ರೊ. ಯಸ್. ರಾಮಚಂದ್ರರಾವ್‌ರವರು ಮತ್ತು ಸದ್ಯ ಮಹಾ ಮಹೋಪಾಧ್ಯಾಯಪದವಿಯನ್ನಲಂಕರಿಸಿ ಸಂಸ್ಕೃತದ ಸರ್ವತೋಮುಖವಾದ ಪ್ರಗತಿ ಗಾಗಿ ನಿರಂತರವಾಗಿ ಶ್ರಮಿಸುತ್ತಿರುವ ಡಾ|| ಜಿ. ಮರುಳಸಿದ್ದಯ್ಯನವರು ಪೂರ್ವ ಸಂಸ್ತುತರಾದ ಆ ನನ್ನ ಇಬ್ಬರು ಗುರುವರ್ಯರುಗಳು. ಈ ಪೂಜ್ಯರೀರ್ವರಿಗೆ ಭಕ್ತಿ ಪುರಸ್ಸರವಾದ ನನ್ನ ವಂದನೆಗಳು.

### ಸಹೃದಯ ಮಹೋದಯರಿಗೆ–ಸನ್ಮಿತ್ರರಿಗೆ ಸನ್ನುತಿಗಳು :

ಈ ಕೃತಿಯ ರಚನೆಗೆ ಆವಶ್ಯಕವಾದ ವಿಷಯಗಳನ್ನು ಅನೇಕ ಗ್ರಂಥಗಳಿಂದ ಸಂಕಲನಮಾಡಿದೆಯಾಗಿ ಆ ಗ್ರಂಥಗಳ ರಚನಕಾರರಿಗೆ ಮತ್ತು ಸಂಪಾದಕರಿಗೆ ಕೃತ ಜ್ಞತಾಪೂರ್ಣವಾದ ವಂದನೆಗಳು. ಭಾರತದೇಶ-ಪುರಾತನವಸ್ತುಶೋಧನ ಸಂಸ್ಥೆ (ಮೈಸೂರು) ಮುಖ್ಯಾಧಿಕಾರಿಗಳಾದ ಸನ್ಮಾನ್ಯ ಡಾ|| ಜಿ. ಎಸ್. ಗಾಯ್‌ರವರು ವಿಷಯಸಂಕಲನದ ಅಪೇಕ್ಷೆಯಿಂದ ಉಪಯುಕ್ತವಾದ ಅಂಶಗಳನ್ನು ಕುರಿತು ಮಾರ್ಗ ನಿರ್ದೇಶನಮಾಡಿ, ತಮ್ಮಲ್ಲಿದ್ದ ಅಪೂರ್ವವಾದ ಅನೇಕ ಗ್ರಂಥಗಳ ಅವಲೋಕನಕ್ಕೆ ಅವಕಾಶವಿತ್ತು ಮಹದುಪಕಾರಮಾಡಿದ್ದಾರೆ. ಈ ಮಹೋದಯರಿಗೆ ನನ್ನ ಕೃತ ಜ್ಞತಾಪೂರ್ವಕವಾದ ಸನ್ನುತಿಗಳು ಸಲ್ಲುವುವು. ಇಂತೆಯೇ ಆವಶ್ಯಕವೆನಿಸಿದ ಇತರ ಅನೇಕ ಗ್ರಂಥಗಳ ಅವಲೋಕನಕ್ಕೆ ಮೈಸೂರು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ ನಲ್ಲಿ ಸೌಲಭ್ಯ ಪಡೆದು ಅತಿಶಯರೀತಿಯಿಂದ ಉಪಕಾರಭಾಗಿಯಾಗಿದ್ದೇನೆ. ಈ ಸಂಸ್ಥೆಯಿಂದಾಗಿರುವ ಉಪಕಾರಕ್ಕಾಗಿ ಕೃತಜ್ಞತಾಪೂರ್ವಕವಾದ ಅಭಿವಾದನಗಳು.

ಈ ಕೃತಿಯನ್ನು ಮುದ್ರಣಮಾಡಿಸಲು ಪ್ರೋತ್ಸಾಹವಿತ್ತವರು ಸನ್ಮಾನ್ಯರಾದ ಆಸ್ಥಾನ ವಿದ್ವಾನ್ ಯಸ್. ಬಿ. ಜಿನಚಂದ್ರಶಾಸ್ತ್ರಿಗಳವರು. ಸದ್ಯ ಗೋಣಿಕೊಪ್ಪಲ್ ಕಾಲೇಜ್‌ನ ಪ್ರಿನ್ಸಿಪಾಲರಾಗಿರುವ ಸನ್ಮಾನ್ಯ ಮಿತ್ರ ಶ್ರೀ ಕೆ. ಸಿ. ಪಂಚಲಿಂಗೇಗೌಡ ರವರು ಈ ಕೃತಿಯನ್ನು ಪರಾಮರ್ಶಿಸಿ, ದೋಷಗಳನ್ನು ತಿದ್ದಿ ಉಪಕರಿಸಿದ್ದಾರೆ. ಮಂಡ್ಯ ಗೌರ್ನಮೆಂಟ್ ಕಾಲೇಜಿನಲ್ಲಿ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ ಸನ್ಮಾನ್ಯ ಶ್ರೀ ಜಯಚಂದ್ರರವರು ಈ ಕೃತಿಯ ಮುದ್ರಣಕ್ಕಾಗಿ ಸ್ವಯಂಪ್ರೇರಣೆಯಿಂದ ೨೫ ರೂ. ಗಳನ್ನಿತ್ತು ನನ್ನನ್ನು ಋಣಿಯಾಗಿಸಿಕೊಂಡಿದ್ದಾರೆ. ವಕೀಲರಾದ ಸನ್ಮಾನ್ಯ ಶ್ರೀ ಎಸ್. ಪಿ. ನಾಗೇಂದ್ರಯ್ಯನವರು, ಹುಬ್ಬಳ್ಳಿ ಶಾಖೆಯ ಹೌಸಿಂಗ್ ಬೋರ್ಡ್ ಕಛೇರಿಯಲ್ಲಿ ಕಾರ್ಯನಿರತರಾಗಿರುವ ಸನ್ಮಾನ್ಯ ಶ್ರೀ ಯಸ್. ಬಿ. ವಸಂತರಾಜಯ್ಯ

ರವರು, ಸಕ್ಕರೆ ಮಂಡಿ ಬ್ರಹ್ಮಪ್ಪನವರ ಸುಪುತ್ರರಾದ ಸನ್ಮಾನ್ಯ ಶ್ರೀ ಇಂದ್ರಕುಮಾರ್ ರವರು, ಮೈಸೂರು ರತ್ನತ್ರಯ ಸಂಘದ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ದೇವೇಂದ್ರ ಕುಮಾರ್‌ರವರು, ಇದೇ ಸಂಘದ ಕಾರ್ಯದರ್ಶಿಯವರಾದ ಸನ್ಮಾನ್ಯ ಶ್ರೀ ನಾಗರತ್ನರಾಜು ರವರು, ಸರಗೂರು ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಸನ್ಮಾನ್ಯ ಶ್ರೀ ವಸಂತ ಕುಮಾರ್‌ರವರು, ಶ್ರವಣಬೆಳಗುಳದ ಕಾಲೇಜಿನ ಪ್ರಿನ್ಸಿಪಾಲರಾದ ಸನ್ಮಾನ್ಯ ಶ್ರೀ ಜಿ. ಬ್ರಹ್ಮಪ್ಪನವರು, ಮೈಸೂರು ಮಹಾರಾಜಾ ಕಾಲೇಜಿನ ಪೋಲಿಟಿಕ್ಸ್ ವಿಭಾಗ ದಲ್ಲಿ ಪ್ರಾಧ್ಯಾಪಕರಾಗಿರುವ ಸನ್ಮಾನ್ಯ ಶ್ರೀ ಈಶ್ವರಾಚಾರ್‌ರವರು ಮತ್ತು ಸನ್ಮಾನ್ಯ ಶ್ರೀ ಡಾ|| ಹೆಚ್. ಡಿ. ಚಂದ್ರಕೀರ್ತಿಯವರು, ಮಾನಸಗಂಗೋತ್ರಿ ಇಂಗ್ಲೀಷ್ ವಿಭಾಗ ದಲ್ಲಿ ಪ್ರಾಧ್ಯಾಪಕರಾಗಿರುವ ಸನ್ಮಾನ್ಯ ಶ್ರೀ ರಾಮಮೂರ್ತಿಯವರು – ಇವರೆಲ್ಲರೂ ಈ ಕೃತಿಯ ಪ್ರಕಾಶನದ ವಿಷಯವಾಗಿ ಸ್ನೇಹಪೂರ್ವಕವಾಗಿ ಪ್ರೋತ್ಸಾಹವಿತ್ತಿದ್ದಾರೆ. ಈ ಮಹೋದಯರೆಲ್ಲರಿಗೂ ಮೈತ್ರೀಯುತವಾದ ಸನ್ನುತಿಗಳು.

ಪೂಜ್ಯ ದೊಡ್ಡಪ್ಪಾಜಿಯವರಾದ ಆಸ್ಥಾನ ವಿದ್ವಾನ್ ಪಾರ್ಶ್ವನಾಥ ಶಾಸ್ತ್ರಿ ಯವರು (ಯಂ. ಯಲ್. ಜೈನ ಬೋರ್ಡಿಂಗ್ ದೇವಸ್ಥಾನ) ತಮ್ಮಲ್ಲಿದ್ದ ಧವಲ ಗ್ರಂಥಗಳ ಪ್ರಥಮ ಮತ್ತು ದ್ವಿತೀಯ ಭಾಗಗಳನ್ನು ಕೊಟ್ಟು ನನ್ನ ಈ ಕೃತಿರಚನೆಯ ವಿಷಯದಲ್ಲಿ ಅತಿಶಯವಾದ ಪ್ರೋತ್ಸಾಹವಿತ್ತಿದ್ದಾರೆ. ಇವರಿಗೆ ನನ್ನ ವಿನಯಪೂರ್ವಕ ವಾದ ವಂದನೆಗಳು.

ಜೈನಾಗಮದಲ್ಲಿ ಪರಿಣತಮತಿಗಳೂ, ಸದ್ಧರ್ಮವತ್ಸಲರೂ, ಜೈಹಿಂದ್.ಪ್ರೆಸ್ ಮಾಲೀಕರೂ ಆದ ಸನ್ಮಾನ್ಯ ಶ್ರೀ ಟಿ. ಪಿ. ಬ್ರಹ್ಮಸೂರಯ್ಯನವರು, ಇವರ ಶ್ರೀಮತಿ ಯವರು ಮತ್ತು ಇವರ ಸುಪುತ್ರರೀರ್ವರು ಅತಿಶಯವಾತ್ಸಲ್ಯಪೂರ್ವಕ ಈ ಪುಸ್ತಕದ ಮುದ್ರಣಕಾರ್ಯವನ್ನು ನಿರ್ವಹಿಸಿದ್ದಾರೆ. ವರ್ಧಮಾನಶ್ರೀಸಂಪನ್ನರಾದ ಇವರಿಗೆ ಕೃತಜ್ಞತಾಪೂರ್ಣವಾದ ಧನ್ಯವಾದಗಳು.

1168, ಬಜ್ಜಣ್ಣ ಲೇನ್<br>ಚಾಮರಾಜಪುರಂ<br>ಮೈಸೂರು–4<br>ವೀ. ನಿ. ಸಂ. ೨೪೯೯

ಇಂತು<br>ಯಂ. ಡಿ. ವಸಂತರಾಜ್





# ಸನ್ಮತಿ ಶ್ರೀವಿಹಾರ

ಲೋಕದಲ್ಲಿರುವ ಜೀವಿಗಳೆಲ್ಲರೂ ಸುಖಾಪೇಕ್ಷೆಯುಳ್ಳವರಾಗಿದ್ದಾರೆ. ಸುಖ ಮಾತ್ರ ಬೇಕೆಂಬುದು ಪ್ರತಿಯೊಂದು ಜೀವಿಯ ಇಚ್ಛೆಯಾಗಿದೆ ನಿಜ : ಆದರೆ ಇಚ್ಛೆಗೆ ವಿರುದ್ಧವಾದ ಅನಿಷ್ಟರೂಪದ ದುಃಖವೂ ಪ್ರತಿಯೊಂದು ಜೀವಿಯ ಪಾಲಿಗೆ ಗಂಟು ಬಿದ್ದಿದೆ. ಪ್ರಾಣಿವರ್ಗದಲ್ಲೆಲ್ಲಾ ಹೆಚ್ಚು ಬುದ್ಧಿಶಕ್ತಿಯುಳ್ಳ ಮನುಷ್ಯನೂ ದುಃಖವೇ ಇಲ್ಲದಿರುವಂತಹ ಯಥೇಷ್ಟ ಸುಖವನ್ನು ಹೊಂದಲು ಸಮರ್ಥನಾಗಿಲ್ಲ. ದುಃಖ ನಿವಾರಣೆ ಮತ್ತು ಸುಖಸಿದ್ಧಿಗಾಗಿ ಮನುಷ್ಯನು ಹಲವಾರು ರೀತಿಯ ಕಾರ್ಯಗಳಲ್ಲಿ ನಿರತನಾಗಿದ್ದಾನೆ. ಹಲವಾರು ಭೋಗೋಪಭೋಗವಸ್ತುಗಳ ಆಶ್ರಯ ಪಡೆದು ಇಷ್ಟಾವಾಪ್ತಿ ಮತ್ತು ಅನಿಷ್ಟನಿವಾರಣೆ ಮಾಡಿಕೊಳ್ಳಲು ಸದಾ ಯತ್ನಶೀಲನಾಗಿ ದ್ದಾನೆ. ಇಷ್ಟಾದರೂ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಿಂದ ಒದಗಿಬರುವ ಅನಿಷ್ಟಪ್ರಸಂಗಗಳನ್ನು ನಿವಾರಣೆಮಾಡಿಕೊಂಡು ಯಥೇಷ್ಟ ಸುಖವನ್ನನುಭವಿಸಲು ಸಾಧ್ಯವಾಗಿಲ್ಲ. ಮನುಷ್ಯನ ಜೀವನವು ಎಂದೆಂದಿನಿಂದಲೂ ಸುಖದುಃಖ ಮಿಶ್ರ ವಾಗಿಯೇ ಉಳಿದಿದೆ. ಯಥೇಷ್ಟ ಭೋಗೋಪಭೋಗ ಸಾಮಗ್ರಿಗಳಿದ್ದೂ, ಅವು ಗಳಿಂದ ಯಥೇಷ್ಟ ಸುಖವನ್ನು ಪಡೆಯಲು ಪ್ರಯತ್ನಿಸಿದರೂ, ಮನುಷ್ಯನ ಬಯಕೆ ಯಂತೆ ಸುಖಮಾತ್ರವು ದೊರೆಯದೆ, ಜೊತೆಗೆ ಕ್ಲೇಶ ಮತ್ತು ದುಃಖವೂ ಸೇರಿಯೇ ಇರುತ್ತದೆ. 'ಹೀಗಾಗಲು ಕಾರಣವೇನು?' ಎಂಬ ಪ್ರಶ್ನೆಯು ಇದರಿಂದ ಸಹಜ ವಾಗಿಯೇ ಮೂಡುತ್ತದೆ. ಸುಖವನ್ನೊದಗಿಸಿಕೊಡುವ ಭೋಗೋಪಭೋಗವಸ್ತು ಗಳಲ್ಲಿಯೇ ಇರುವ ಯಾವುದಾದರೊಂದು ರೀತಿಯ ದೋಷವೋ ಅಥವಾ ಈ ವಸ್ತು ಗಳಿಂದ ಸುಖವನ್ನು ಪಡೆಯುವುದಕ್ಕಾಗಿ ನಡೆಸುವ ಕಾರ್ಯದಲ್ಲಿರುವ ದೋಷವೋ, ಹಾಗೂ ಅಲ್ಲದೆ ಈ ಎರಡರಿಂದಲೂ ಭಿನ್ನವಾದ ಮತ್ತಾವುದೋ ಒಂದು ಅದೃಶ್ಯ ಶಕ್ತಿಯ ಕೈವಾಡದಿಂದಲೋ ಮನುಷ್ಯನಿಗೆ ಅಪೇಕ್ಷಿತವಾದ ಸುಖಮಾತ್ರವು ದೊರೆ ಯದೆ ಜೊತೆಗೆ ದುಃಖವೂ ಸೇರಿರುತ್ತದೆಯೆಂದು ಭಾವಿಸಬೇಕಾಗುತ್ತದೆ. ಭೋಗೋಪ ಭೋಗವಸ್ತುಗಳಲ್ಲಿರುವ ದೋಷ ಮತ್ತು ಸುಖವನ್ನು ಪಡೆಯಲು ನಡೆಯಿಸುವ ಪ್ರಯತ್ನದಲ್ಲಿರಬಹುದಾದ ದೋಷಗಳನ್ನು ನಿವಾರಿಸಿಕೊಳ್ಳಲು ಮನುಷ್ಯನಿಗೆ ಸಾಮರ್ಥ್ಯವಿದ್ದೂ ದುಃಖನಿವಾರಣೆಯನ್ನು ಮಾಡಿಕೊಳ್ಳಲು ಸಾಧ್ಯವಾಗಿಲ್ಲವಾದ್ದ

ರಿಂದ ಮೂರನೆಯದಾದ ಅದೃಶ್ಯ ಶಕ್ತಿಯ ಕೈವಾಡದಿಂದಲೇ ಮನುಷ್ಯನು ತನಗೆ ಅನಪೇಕ್ಷಿತವಾದ ದುಃಖವನ್ನೂ ಅನುಭವಿಸುತ್ತಿದ್ದಾನೆಂದು ಭಾವಿಸಬೇಕಾಗುತ್ತದೆ.

ಹಾಗಾದರೆ ಅದೃಶ್ಯರೂಪದ ಈ ಶಕ್ತಿ ಯಾವುದಿರಬಹುದು? ಇದರ ಸ್ವರೂಪ ವೇನು? ಇದರ ಹಿಡಿತದಿಂದ ತಪ್ಪಿಸಿಕೊಂಡು ನಿರಾತಂಕವಾದ ಸುಖಪಡೆಯಲು ಸಾಧ್ಯವೆ? ಈ ಮುಂತಾದ ವಿಚಾರಧಾರೆಯು ಸಹಜವಾಗಿಯೇ ಉತ್ಪನ್ನವಾಗು ತ್ತದೆ. ಈ ಅದೃಶ್ಯ ಶಕ್ತಿಯನ್ನು ನಾನಾ ಹೆಸರಿನಲ್ಲಿ, ನಾನಾ ವಿಧದಲ್ಲಿ ವಿವರಿಸುವ ವಿಭಿನ್ನ ವಿಚಾರಧಾರೆಗಳು ಲೋಕದಲ್ಲಿ ಅನೇಕ ಹೆಸರುಗಳಿಂದ ಪ್ರಸಿದ್ಧವಾಗಿವೆ. ನಮ್ಮ ಭಾರತ ದೇಶದಲ್ಲಿ ವೈದಿಕಮತ ಪರಂಪರೆಯಲ್ಲಿ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸ ಮತ್ತು ಉತ್ತರಮೀಮಾಂಸ (ವೇದಾಂತ) ಗಳೆಂಬ ಆರು ಮೂಲ ವಿಚಾರಧಾರೆಗಳು 'ಷಡ್ದರ್ಶನ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಈ ಷಡ್ದರ್ಶನಗಳಲ್ಲದೆ, ವೈದಿಕಮತವಿರೋಧಿಗಳೆಂದು ಗಣನೆಹೊಂದಿರುವ ಜೈನ ಮತ್ತು ಬೌದ್ಧ ದರ್ಶನಗಳು ಪ್ರಾಚೀನ ಕಾಲದಿಂದಲೂ ಉಳಿದು ಬಂದಿವೆ. ಇಂತೆಯೇ ಮುಸಲ್ಮಾನ, ಕ್ರೈಸ್ತ, ಸಿಖ, ಪಾರಸೀಕಗಳೇ ಮೊದಲಾದ ಇನ್ನೂ ಅನೇಕ ವಿಚಾರ ಧಾರೆಗಳು ನಮ್ಮ ಭಾರತ ಭೂಮಿಯಲ್ಲಿ ನೆಲೆನಿಂತಿವೆ. ಈ ಮೇಲ್ಕಂಡ ವಿಚಾರ ಧಾರೆ, ದರ್ಶನ, ಆಗಮ, ಸಿದ್ಧಾಂತ ಅಥವಾ ಧರ್ಮಪಂಥಗಳಲ್ಲಿ ಪ್ರತಿಯೊಂದೂ ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಈ ಎಲ್ಲ ವಿಚಾರಧಾರೆಗಳ ಇತಿಹಾಸ ವನ್ನು ವಿವರಿಸುವ ಅನೇಕ ಕೃತಿಗಳು ರಚಿತವಾಗಿವೆ. ಹೀಗೆ ರಚಿತವಾಗಿರುವ ಕೃತಿ ಗಳಲ್ಲಿ ಕಂಡುಬರುವ ಲೋಪದೋಷಗಳನ್ನು ಕ್ರಮಪಡಿಸಲೋಸುಗ ಮತ್ತು ಹೊಸ ವಿಷಯಗಳನ್ನು ಹೇಳಲೋಸುಗ ಹೊಸ ಹೊಸ ಕೃತಿಗಳು ರಚಿತವಾಗುತ್ತಲೇ ಇವೆ. ಪ್ರಾಚೀನಕಾಲದಿಂದಲೂ ಭಾರತೀಯ ಜನಜೀವನದ ಮೇಲೆ ಅಪಾರ ಪರಿಣಾಮ ಬೀರಿರುವ ಜೈನಮತದ, ಅದರಲ್ಲಿಯೂ ದಿಗಂಬರ ಜೈನಮತ ಶಾಖೆಯ ಸ್ಥೂಲ ಇತಿ ಹಾಸವು ಇಲ್ಲಿ ಉದ್ದೇಶಿತವಾದ ವಸ್ತುವಾಗಿದೆ.

**ಜೈನಧರ್ಮದ ಉತ್ಪತ್ತಿ–**

**ಸಾಂಪ್ರದಾಯಿಕ ಮತ:** ಸಂಪ್ರದಾಯಾನುಸಾರ ನಿಶ್ಚಯ ದೃಷ್ಟಿಯಿಂದ ಯಾವುದೇ ಒಂದು ವಸ್ತುವಿನ ಹುಟ್ಟು ಮತ್ತು ವಿನಾಶವೆಂಬುದಿಲ್ಲ. ವಸ್ತುವಿನ ಹುಟ್ಟು ಮತ್ತು ನಾಶವೆಂಬುವು ವ್ಯಾವಹಾರಿಕ ದೃಷ್ಟಿಯಿಂದ ಗ್ರಾಹ್ಯವಾಗಿವೆ. ಜೈನ ಆಗಮದ ಅನುಸಾರ ವಸ್ತುಸ್ವಭಾವವೇನೆಂಬುದನ್ನು ಸ್ವಾಮಿ ಕುಂದಕುಂದಾ ಚಾರ್ಯರು ಬಹು ಸುಂದರವಾಗಿ ಹೇಳಿದ್ದಾರೆ:

**ಭಾವಸ್ಸ ಣತ್ಥಿ ಣಾಸೋ ಣತ್ಥಿ ಅಭಾವಸ್ಸಚೇವ ಉಪ್ಪಾದೋ।**
**ಗುಣಪಜ್ಜಯೇ ಹಿ ಭಾವಾ ಉಪ್ಪಾದವ್ವಯೆಂ ಪಕುವ್ವಂತಿ॥**

[ಪ್ರವಚನಸಾರ]

" ಇರುವುದರ ನಾಶವೆಂಬುದಿಲ್ಲ; ಇಲ್ಲದಿರುವುದರ ಹುಟ್ಟು ಎಂಬುದೂ ಇಲ್ಲ; ಇರುವಂತಹವುಗಳೇ ಗುಣಪರ್ಯಾಯಗಳಿಂದ ಉತ್ಪತ್ತಿ ವ್ಯಯಗಳನ್ನು ರೂಪಿಸುತ್ತವೆ"

ಈ ಗಾಹೆಯಲ್ಲಿ ಹೇಳಿರುವಂತೆ ನಿಶ್ಚಯದೃಷ್ಟಿಯಿಂದ ಯಾವುದೇ ಧರ್ಮದ ಹುಟ್ಟು ಎಂಬುದೂ ಇಲ್ಲ ಅಥವಾ ನಾಶವೆಂಬುದೂ ಇಲ್ಲ. ಆದರೆ ದೇಶ ಕಾಲಾದಿಗಳ ಅಪೇಕ್ಷೆಯಿಂದ ವಸ್ತುವೊಂದರ ಹುಟ್ಟು ಮತ್ತು ನಾಶಗಳು ವ್ಯವಹೃತವಾಗಿವೆ. ಅಂತೆಯೇ ಜೈನಧರ್ಮದ ಉತ್ಪತ್ತಿ ಎಂಬುದೂ ವ್ಯವಹಾರ ದೃಷ್ಟಿಯಿಂದ ಸ್ವೀಕೃತವಾಗಿದೆ. 'ಸಂಸಾರ' ವೆಂಬುದರ ಸ್ವರೂಪವು ಹೇಗೆ ಅನಾದ್ಯನಂತವೋ ಹಾಗೆಯೇ 'ಮೋಕ್ಷ' ವೆಂಬುದರ ಸ್ವರೂಪವೂ ಅನಾದ್ಯನಂತವಾದುದಾಗಿದೆ. ಆದ್ದರಿಂದ ಮೋಕ್ಷಸಾಧಕವಾದ ಧರ್ಮವೂ ಅನಾದ್ಯನಂತಸ್ವರೂಪ ಉಳ್ಳದ್ದಾಗಿದೆ. ಆದರೆ ಕ್ಷೇತ್ರ ಮತ್ತು ಕಾಲಗಳ ಅಪೇಕ್ಷೆಯಿಂದ ಈ ಧರ್ಮದ ಉತ್ಪತ್ತಿಯನ್ನು ಹೇಳಲಾಗುವುದು. ಜೈನ ಆಗಮಗಳ ಪ್ರಕಾರವಾಗಿ ಪಂಚವಿದೇಹಕ್ಷೇತ್ರಗಳಲ್ಲಿ ಜೈನಧರ್ಮವು ಅನಾದ್ಯನಂತಸ್ವರೂಪದ್ದಾಗಿದೆ. ಆದರೆ ಪಂಚ ಭರತ ಮತ್ತು ಪಂಚ ಐರಾವತ ಕ್ಷೇತ್ರಗಳಲ್ಲಿಗುವ ಕಾಲವಿಭಾಗದ ಅಪೇಕ್ಷೆಯಿಂದ ಜೈನಧರ್ಮವು ಆಗಾಗ್ಗೆ ಮರೆಗೊಂಡು ಪುನಃ ಪುನಃ ಪ್ರವರ್ತಿತವಾಗುತ್ತಿರುತ್ತದೆ. ಈ ಕ್ಷೇತ್ರಗಳಲ್ಲಿ ಜೈನಧರ್ಮವು ಮರೆಗೊಂಡಾಗ ಅಥವಾ ತೀವ್ರತರ ಗ್ಲಾನಿಗೊಳಗಾದಾಗ, ಇಲ್ಲಿ ಜನ್ಮ ಪಡೆಯುವ ತೀರ್ಥಂಕರರಿಂದ ಅದು ಪುನಃಪುನಃ ಪ್ರಕಾಶಗೊಳ್ಳುವುದು. ತೀರ್ಥಂಕರರಾಗಲಿರುವ ಮಹಾತ್ಮರು ಗರ್ಭಸ್ಥರಾಗಿರುವಾಗಲೇ ಮತಿ, ಶ್ರುತ ಮತ್ತು ಅವಧಿಗಳೆಂಬ ಮೂರು ರೀತಿಯ ಜ್ಞಾನಾತಿಶಯದಿಂದ ಕೂಡಿರುತ್ತಾರೆ. ಇಂತಹ ಜ್ಞಾನಾತಿಶಯಸಂಪನ್ನರಾದ ಇವರು ಪರೋಪದೇಶವಿಲ್ಲದೆ, ಆತ್ಮನನ್ನು ಸಾಂಸಾರಿಕ ದುಃಖದಿಂದ ವಿಮುಕ್ತಗೊಳಿಸಿ ಅಕ್ಷಯವೂ, ಅನಂತವೂ, ಅವ್ಯಾಬಾಧವೂ ಆದ ಮೋಕ್ಷ ಸುಖವನ್ನು ಪಡೆಯಲು ಸಾಧಕವಾದ ಧರ್ಮ ಸ್ವರೂಪವನ್ನು ಸ್ವಯಂ ಅರಿಯಬಲ್ಲವರಾಗಿರುತ್ತಾರೆ. ತಪಸ್ಸು ಮತ್ತು ಧ್ಯಾನಗಳ ಮೂಲಕ ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯಗಳೆಂಬ ನಾಲ್ಕು ಘಾತಿ ಕರ್ಮಗಳನ್ನು ನಿರ್ಮೂಲಗೊಳಿಸಿ, ಕೇವಲಜ್ಞಾನಾದಿ ಅನಂತ ಚತುಷ್ಟಯಗಳ ಪರಿಪೂರ್ಣತೆ ಪಡೆಯುತ್ತಾರೆ. ಅನಂತರ ಇತರ ಜೀವಿಗಳಿಗೂ, ಆತ್ಮನ ಶ್ರೇಯೋಮಾರ್ಗಸಾಧಕವಾದ ಧರ್ಮಸ್ವರೂಪವನ್ನು ಬೋಧನೆಮಾಡುವುದರ ಮೂಲಕ ಧರ್ಮವನ್ನು ಪ್ರವರ್ತನೆಗೊಳಿಸುತ್ತಾರೆ. ಇಂತಹ ಧರ್ಮವು 'ತೀರ್ಥ' ವೆನ್ನಿಸಿಕೊಂಡಿದೆ. ಧರ್ಮತೀರ್ಥವನ್ನು ಪ್ರವರ್ತನೆಗೊಳಿಸುವವರು ತೀರ್ಥಂಕರರೆನ್ನಿಸಿಕೊಳ್ಳುತ್ತಾರೆ. ಅವ್ಯಾಬಾಧಸುಖಾನುಭವಕ್ಕೆ ಆತಂಕಗಳಾಗಿರುವ ಕರ್ಮಗಳನ್ನು ಜಯಿಸಿದ ಆತ್ಮನು 'ಜಿನ' ಎನ್ನಿಸಿಕೊಳ್ಳುತ್ತಾನೆ. ಇಂತಹ ಜಿನನಿಂದ ಪ್ರತಿಪಾದಿತವಾದ ಧರ್ಮ ಅಥವಾ ಆತ್ಮನು 'ಜಿನತ್ವ' ವನ್ನು ಸಾಧಿಸಲು ಸಾಧಕವಾದ ಧರ್ಮವೇ ಜೈನಧರ್ಮವೆನ್ನಿಸಿಕೊಂಡಿದೆ. ಪಂಚ

ಭರತ ಮತ್ತು ಪಂಚ ಐರಾವತ ಕ್ಷೇತ್ರಗಳಲ್ಲಿ ಜಿನಧರ್ಮವು ಮರೆಗೊಂಡಾಗ ಅಥವಾ ತೀವ್ರತರ ಗ್ಲಾನಿಗೊಳಗಾದಾಗ ಅದು ತೀರ್ಥಂಕರರಿಂದ ಪುನಃಪುನಃ ಪ್ರಕಾಶ ಗೊಂಡು ಪ್ರವರ್ತಿತವಾಗುತ್ತದೆ.

ನಮ್ಮ ಭರತಕ್ಷೇತ್ರದಲ್ಲಿ ಈಗ ನಡೆಯುತ್ತಿರುವ ಅವಸರ್ಪಿಣೀಕಾಲದ ತೃತೀಯ ಭಾಗದ ಅಂತ್ಯದಲ್ಲಿ ಹದಿನಾಲ್ಕನೇ ನಾಭಿರಾಜನ ಪತ್ನಿ ಮರುದೇವಿಯು ಶ್ರೀ ಋಷಭನಾಥನಿಗೆ ಜನ್ಮವಿತ್ತಳು. ತೃತೀಯ ಕಾಲದ ಅಂತ್ಯದಲ್ಲಿ ಭರತ ಕ್ಷೇತ್ರದ ಪ್ರಕೃತಿಯು ವಿಶೇಷ ರೀತಿಯ ಮಾರ್ಪಾಡುಗಳಿಗೊಳಗಾಯಿತು. ಈ ಸಮಯದಿಂದ ಹಿಂದಿನ ಕಾಲದಲ್ಲಿ ಇಲ್ಲಿ ಜೀವಿಸಿದ್ದ ಜನರ ಸುಖ ಜೀವನಕ್ಕೆ ಅವಶ್ಯಕವಾದ ಭೋಗೋಪಭೋಗವಸ್ತುಗಳೆಲ್ಲವೂ ಸ್ವಯಂ ಸಿದ್ಧವಾಗಿ ದೊರಕುತ್ತಿದ್ದುವು. ಜನರು ತಮಗೆ ಬೇಕಾದ ಭೋಗೋಪಭೋಗವಸ್ತುಗಳನ್ನು ದೈಹಿಕ ಶ್ರಮದಿಂದ ಪಡೆಯ ಬೇಕಾಗಿರಲಿಲ್ಲ. ಆದ್ದರಿಂದ ಭರತ ಕ್ಷೇತವು ತೃತೀಯ ಕಾಲದ ಅಂತ್ಯದವರೆವಿಗೂ ಭೋಗಭೂಮಿಯೆನ್ನಿಸಿಕೊಂಡಿದ್ದಿತು. ತೃತೀಯ ಕಾಲದ ಅಂತ್ಯದಲ್ಲಿ ಸ್ವಯಂಸಿದ್ಧ ವಾಗಿ ದೊರಕುತ್ತಿದ್ದ ಭೋಗೋಪಭೋಗವಸ್ತುಗಳು ಪ್ರಕೃತಿಯಲ್ಲಾದ ಮಾರ್ಪಾಡಿ ನಿಂದ ಮರೆಗೊಂಡುವು. ಇದರಿಂದ ಜನರು ಜೀವನ ನಿರ್ವಹಣೆಯ ಮಾರ್ಗಕಾಣದೆ ದುಃಖಿತರಾದರು. ಈ ಸಮಯದಲ್ಲಿ ಶ್ರೀ ಋಷಭನಾಥನು ಅಸಿ, ಮಸಿ, ಕೃಷಿ, ವಾಣಿಜ್ಯ, ವಿದ್ಯೆ ಮತ್ತು ಶಿಲ್ಪಗಳೆಂಬ ಷಟ್ಕರ್ಮಗಳ ಮೂಲಕ ಜನಕ್ಕೆ ಜೀವನಾಧಾರ ವೃತ್ತಿಗಳನ್ನು ಕಲ್ಪಿಸಿದನು. ಹೀಗೆ ಷಟ್ಕರ್ಮಗಳಾಧಾರದಿಂದ ಜನಜೀವನ ನಿರ್ವ ಹಣೆಯು ಆರಂಭವಾದಂದಿನಿಂದ ಭರತಕ್ಷೇತ್ರವು ಕರ್ಮಭೂಮಿಯೆನಿಸಿಕೊಂಡಿತು. ಜೀವನ ನಿರ್ವಹಣೆಯ ವಿಷಯದಲ್ಲಿ ಒದಗಿಬಂದ ಕಷ್ಟಸನ್ನಿವೇಶದಿಂದ ತಮ್ಮನ್ನು ಪಾರುಮಾಡಿದ ಶ್ರೀ ಋಷಭನಾಥನನ್ನು ಜನರು ತಮ್ಮ ನಾಯಕನನ್ನಾಗಿ ಮಾಡಿ ಕೊಂಡು ಪ್ರೀತಿಭಕ್ತಿ ಪುರಸ್ಸರವಾಗಿ ಸತ್ಕರಿಸಿದರು. ಇದರಿಂದ ಶ್ರೀ ಋಷಭನಾಥನು ಆದೀಶ್ವರ, ಆದಿನಾಥ, ಯುಗಪುರುಷ ಎಂದು ಮುಂತಾದ ಸ್ತುತಿಪರವಾಕ್ಯಗಳಿಂದ ಸಂಪೂಜಿತನಾದನು. ಉತ್ತಮಕ್ಷಮಾದಿಗುಣಸಂಪನ್ನನಾದ ಶ್ರೀ ಋಷಭನಾಥನ ರಾಜ್ಯ ಭಾರ ಕಾಲದಲ್ಲಿ ಪ್ರಜೆಗಳೆಲ್ಲರೂ ಸನ್ಮಾರ್ಗಾವಲಂಬಿಗಳಾಗಿ ಸುಖವಾಗಿದ್ದರು. ಸಾಂ ಸಾರಿಕ ಜೀವನದ ಭೋಗೋಪಭೋಗಗಳ ಕ್ಷಣಭಂಗುರತೆಯನ್ನು ಸ್ವಾನುಭವದಿಂ ದಲೇ ಮನಗಂಡ ಶ್ರೀ ಋಷಭನಾಥನು, ರಾಜ್ಯಭಾರವನ್ನು ಮಕ್ಕಳಿಗೆ ವಹಿಸಿಕೊಟ್ಟು, ಸರ್ವ ಸಂಗತ್ಯಾಗವಮಾಡಿ ನಿರ್ಗ್ರಂಥಯತಿದೀಕ್ಷೆಯನ್ನು ಧಾರಣೆಮಾಡಿದನು. ಬಾಹ್ಯಾ ಭ್ಯಂತರ ತಪಸ್ಸು ಧ್ಯಾನಗಳ ಮೂಲಕ ಘಾತಿಕರ್ಮಚತುಷ್ಟಯಗಳನ್ನು ನಿರ್ಮೂಲ ಗೊಳಿಸಿ ಫಾಲ್ಗುಣ ಬಹುಳ ಏಕಾದಶಿಯಂದು ಅನಂತದರ್ಶನ, ಅನಂತಜ್ಞಾನ (ಕೇವಲಜ್ಞಾನ), ಅನಂತವೀರ್ಯ ಮತ್ತು ಅನಂತಸುಖಗಳೆಂಬ ಅನಂತಚತುಷ್ಟಯ ಗಳ ಸಿದ್ಧಿಪಡೆದನು. ಹೀಗೆ ಪರಮೌದಾರಿಕ ದಿವ್ಯದೇಹಧಾರಿಯಾದ ಶ್ರೀ ಋಷಭ ನಾಥನು ಸ್ವಯಂಭೂ, ಆದಿಬ್ರಹ್ಮ, ಆದಿಜಿನೇಶ್ವರ, ಅರಹಂತಪರಮೇಷ್ಠಿ ಎಂದು

ಮುಂತಾಗಿ ಸಂಸ್ತುತನಾದನು. ಈ ಆದಿಜಿನೇಶ್ವರನು, ಇತರ ಜೀವಿಗಳಿಗೂ ಆತ್ಮ ಶ್ರೇಯಸ್ಸನ್ನು ಸಾಧಿಸಿಕೊಳ್ಳಲು ಸಾಧಕವಾದ ಧರ್ಮವನ್ನು ಬೋಧನೆಮಾಡುವುದರ ಮೂಲಕ ಧರ್ಮತೀರ್ಥವನ್ನು ಪ್ರವರ್ತನಗೊಳಿಸಿ ಆದಿತೀರ್ಥಂಕರನೆನ್ನಿಸಿಕೊಂಡನು. ಹೀಗೆ ಆದಿಜಿನೇಶ್ವರನಿಂದ ಪ್ರವರ್ತಿತವಾದ ಧರ್ಮವು ಜೈನಧರ್ಮವೆನ್ನಿಸಿಕೊಂಡಿದೆ. ಶ್ರೀ ಋಷಭನಾಥನು ಬಹುಕಾಲದವರೆಗೆ ಧರ್ಮತೀರ್ಥಪ್ರವರ್ತಕನಾಗಿ ವಿಹರಿಸುತ್ತಿದ್ದು ಕೊನೆಗೆ ಕೈಲಾಸಪರ್ವತದಲ್ಲಿ ಧ್ಯಾನನಿರತನಾಗಿ, ತನ್ನಲ್ಲಿ ಅವಶೇಷಗೊಂಡಿದ್ದ ವೇದನೀಯ, ಆಯು, ನಾಮ ಮತ್ತು ಗೋತ್ರಗಳೆಂಬ ನಾಲ್ಕು ಅಘಾತಿ ಕರ್ಮಗಳನ್ನು ನಿರ್ಮೂಲಗೊಳಿಸಿ, ಅನಂತ ಆನಂದಮಯವಾದ ಪರಮಾತ್ಮಸ್ವರೂಪ ಪಡೆದು ಸಿದ್ಧನಾದನು. ಇಂತಹ ಸರ್ವಮಂಗಲಸ್ವರೂಪದ ಸಿದ್ಧಪದವಿಯನ್ನು ಪಡೆದ ಆದಿತೀರ್ಥಂಕರನು ಶಿವ, ಸಿದ್ಧಪರಮೇಷ್ಠಿ, ಪರಬ್ರಹ್ಮ ಎಂದು ಮುಂತಾಗಿ ಸಂಸ್ತುತನಾದನು. ಮಾಘಮಾಸ, ಕೃಷ್ಣಪಕ್ಷ, ಚತುರ್ದಶಿಯಂದು ಸೂರ್ಯೋದಯ ಸಮಯದಲ್ಲಿ ಶ್ರೀ ಋಷಭನಾಥನು ನಿರ್ವಾಣಹೊಂದಿದನು. ಶ್ರೀ ಆದಿತೀರ್ಥಂಕರ ಋಷಭನಾಥನು ನಿರ್ವಾಣಹೊಂದಿದ ಈ ಮಂಗಲದಿನವು ಶಿವರಾತ್ರಿ ಎಂಬ ಹೆಸರನ್ನು ಹೊಂದಿತು. ಇಂದಿಗೂ ಜೈನರು ಶಿವರಾತ್ರಿಯಂದು ಬಹು ಭಕ್ತಿಭಾವದಿಂದ ಶ್ರೀ ಋಷಭನಾಥನ ವಿಶೇಷ ಪೂಜೋತ್ಸವಗಳನ್ನಾಚರಿಸುತ್ತಾರೆ. ಶ್ರೀ ಋಷಭತೀರ್ಥಂಕರನ ಅನಂತರ ಇಪ್ಪತ್ತಮೂರು ತೀರ್ಥಂಕರರು ಜನ್ಮ ಪಡೆದು ಜಿನಧರ್ಮವನ್ನು ಪುನಃಪುನಃ ಪ್ರಕಾಶಗೊಳಿಸಿದರು. ಹೀಗೆ ನಮ್ಮ ಭರತಕ್ಷೇತ್ರದಲ್ಲಿ ಈಗ ನಡೆಯುತ್ತಿರುವ ಅವಸರ್ಪಿಣೀ ಕಾಲದ ತೃತೀಯ ಕಾಲದ ಅಂತ್ಯದಲ್ಲಿ ಶ್ರೀ ಋಷಭನಾಥನೂ ಮತ್ತು ಚತುರ್ಥಕಾಲದಲ್ಲಿ ಇತರ ಇಪ್ಪತ್ತಮೂರು ತೀರ್ಥಂಕರರೂ ಧರ್ಮಪ್ರವರ್ತನೆಗೊಳಿಸಿದ್ದಾರೆ. ಈ ಇಪ್ಪತ್ತನಾಲ್ಕು ತೀರ್ಥಂಕರರ ಪರಂಪರೆಯಲ್ಲಿ ಶ್ರೀ ಮಹಾವೀರ ತೀರ್ಥಂಕರನು ಕೊನೆಯವನು. ಶ್ರೀ ಮಹಾವೀರ ತೀರ್ಥಕರನ ನಿರ್ವಾಣಾನಂತರ ಜಿನಧರ್ಮವು ಆರ್ಷಆಗಮ ಪರಂಪರೆಯಲ್ಲಿ ಪ್ರವರ್ತನೆಗೊಂಡು ಇಂದಿನವರೆವಿಗೂ ಉಳಿದುಬಂದಿದೆ.

**ಜೈನಧರ್ಮ-ಐತಿಹಾಸಿಕ ದೃಷ್ಟಿಯಿಂದ:** ಈಗ ತಿಳಿದಿರುವಂತೆ ನಮ್ಮ ಭಾರತ-ದೇಶದ ಅತ್ಯಂತ ಪ್ರಾಚೀನಕಾಲದ ಇತಿಹಾಸವು ಮೊಹೆಂಜೊದಾರೊ ಮತ್ತು ಹರಪ್ಪ ಸನ್ನಿವೇಶಗಳಲ್ಲಿ ದೊರೆತ ಪುರಾವೃತ್ತಸಾಮಗ್ರಿಗಳಲ್ಲಿ ಪ್ರತಿಬಿಂಬಿತವಾಗಿದೆ. ಶ್ರೀಯುತ ಆರ್. ಪಿ. ಚಂದಾವರು, ಮೊಹೆಂಜೊದಾರೊ ಸನ್ನಿವೇಶದಲ್ಲಿ ದೊರೆತ ಆರು ಮುದ್ರೆಗಳಲ್ಲಿರುವ ನಗ್ನ ಯೋಗಿ ಚಿತ್ರಗಳು ಜಿನಮೂರ್ತಿಗಳ ಪ್ರತೀಕಗಳಾಗಿವೆ ಯೆಂದು ಅಭಿಪ್ರಾಯಪಟ್ಟಿದ್ದಾರೆ. [ಮಾಡರ್ನ್ ರಿವ್ಯೂ, ಆಗಸ್ಟ್ ೧೯೩೨] ಕಾಯೋತ್ಸರ್ಗ ಮಾದರಿಯ (ಎರಡು ತೋಳುಗಳನ್ನೂ ನೀಳವಾಗಿ ಇಳಿಬಿಟ್ಟು ಧ್ಯಾನಮಗ್ನಭಾವದಿಂದ ಕೂಡಿರುವ) ನಗ್ನಮೂರ್ತಿಗಳ ಆರಾಧನೆಯ ಪರಿಪಾಠವಿರುವುದು ಜೈನಧರ್ಮಪಂಥದಲ್ಲಿ ಮಾತ್ರ. ಇಂತಹ ಕಾಯೋತ್ಸರ್ಗ ಮಾದರಿಯ

ಚಿತ್ರಗಳು ಮೊಹೆಂಜೊದಾರೋ ಸನ್ನಿವೇಶದಲ್ಲಿ ದೊರೆತ ಮುದ್ರೆಗಳಲ್ಲಿವೆ. [ಶ್ರೀಯುತ ಸರ್ ಜಾರ್ನ್‌ಮಾರ್ಷಲ್‌ರವರ ಕೃತಿ, ಮೊಹೆಂಜೊದಾರೋ ಅಂಡ್ ದಿ ಇಂಡಸ್‌ಸಿವಿಲೈಜೇಷ‌ನ್ ಪ್ಲೇಟ್ xii ಮತ್ತು cxviii ] ಇದಲ್ಲದೆ ಇತರ ಮೂರು ಮುದ್ರೆಗಳಲ್ಲಿಯೂ [ಪೂ. ಸೂ. ಪ್ಲೇಟ್ ii] ನಗ್ನಯೋಗಿಚಿತ್ರಗಳಿವೆ. ಈ ನಗ್ನಯೋಗಿಚಿತ್ರಗಳ ತಳ ಭಾಗದಲ್ಲಿ ಹೋರಿಯ (ವೃಷಭ) ಚಿತ್ರಗಳೂ ಇವೆ. ಸಾಮಾನ್ಯವಾಗಿ ಶ್ರೀ ಋಷಭ ತೀರ್ಥಂಕರನ ವಿಗ್ರಹಗಳ ಪಾದತಲದಲ್ಲಿ ಹೋರಿಯ ಚಿತ್ರವನ್ನು ಅಂಕಿತಗೊಳಿಸ ಲಾಗಿರುತ್ತದೆ. ವೃಷಭವು ಶ್ರೀ ಋಷಭತೀರ್ಥಂಕರನ ಚಿಹ್ನೆಯಾಗಿದೆ. ಆದ್ದರಿಂದ ಈ ಮೇಲೆ ಹೇಳಿದ ಮುದ್ರೆಗಳಲ್ಲಿರುವ ಚಿತ್ರಗಳು ಶ್ರೀ ಋಷಭತೀರ್ಥಂಕರನ ಚಿತ್ರ ಗಳಾಗಿವೆಯೆಂದು ಗ್ರಹಿಸಲವಕಾಶವಿದೆ.

ಇದರಿಂದ ಶ್ರೀ ಋಷಭತೀರ್ಥಂಕರನ ಆರಾಧನೆಯು ಕ್ರಿ. ಪೂ. ೨೫೦೦ ವರ್ಷ ಗಳಿಂದಲೂ ಉಳಿದು ಬಂದಿದೆಯೆಂದು ಸಾಕ್ಷೀಕೃತವಾಗುವುದು. ಇಂತೆಯೇ ಇತರ ತೀರ್ಥಂಕರರ ವಿಷಯವೂ ಐತಿಹಾಸಿಕ ತಥ್ಯವುಳ್ಳದ್ದಾಗಿದೆಯೆಂದು ಗ್ರಹಿಸಲವಕಾಶ ವಿದೆ. ಈ ವಿಷಯವಾಗಿ ಜನರಲ್ ಶ್ರೀ ಜೆ. ಜಿ. ಫರ್ಲ್ಲೋಂಜ್‌ರವರು ಈ ಮುಂದಿ ನಂತೆ ಅಭಿಪ್ರಾಯಪಟ್ಟಿದ್ದಾರೆ :

" ಆರ್ಯರು ಗಂಗಾ ಅಥವಾ ಸರಸ್ವತಿ ನದಿಯನ್ನು ತಲಪುವ ಬಹುಕಾಲದ ಮುನ್ನವೇ ಇಪ್ಪತ್ತೆರಡು ಪ್ರಧಾನ ಬುದ್ಧರು, ಶ್ರಮಣರು ಅಥವಾ ತೀರ್ಥಂಕರರು ಜೈನರಿಗೆ (ಮಾರ್ಗ) ಉಪದೇಶಮಾಡಿದ್ದರು. ಕ್ರಿ. ಪೂ. ಎಂಟು ಅಥವಾ ಒಂಭ ತ್ತನೇ ಶತಮಾನಕಾಲದ ಪಾರ್ಶ್ವನಾಥ ಬೋಧನು ತನಗಿಂತ ಹಿಂದಿನ ಕಾಲದ ತೀರ್ಥಂಕರರ ವಿಷಯವೆಲ್ಲವನ್ನೂ ತಿಳಿದಿದ್ದನು. ಪೂರ್ವ ಅಥವಾ ಪುರಾಣ ಎಂಬ ಸಾಹಿತ್ಯವು ಬಹು ಪ್ರಾಚೀನ ಕಾಲದಿಂದಲೂ ಸ್ಮೃತಿರೂಪದಲ್ಲಿ ಬಂದಿದ್ದಿತು......... ಇದು ಜೈನ ಧರ್ಮ ಪರಂಪರೆ." [ಶಾರ್ಟ್ ಸ್ಟಡೀಸ್ ಇನ್ ದಿ ಸೈನ್ಸ್ ಆಫ್ ಕಂಪ್ಯಾರಿಟಿವ್ ರಿಲಿಜಿಯನ್ಸ್. ಪು. ಸಂ. ೨೪೩-೪]

ಮೊಹೆಂಜೋದಾರೋ ಸಂಸ್ಕೃತಿಯು ಋಗ್ವೇದಾದಿ ಸಾಹಿತ್ಯದಲ್ಲಿ ಪ್ರತಿಬಿಂಬಿತ ವಾಗಿರುವ ವೈದಿಕ ಸಂಸ್ಕೃತಿಯಿಂದ ಭಿನ್ನಸ್ವರೂಪದ ಪ್ರಾಚೀನ ಸಂಸ್ಕೃತಿಯಾಗಿದೆ ಯೆಂಬುದು ಸಂಶೋಧಕ ವಿದ್ವಾಂಸರ ಅಭಿಪ್ರಾಯವಾಗಿದೆ. ಮೊಹೆಂಜೊದಾರೊ ಸಂಸ್ಕೃತಿಯ ಅನಂತರ ವೈದಿಕ ಸಂಸ್ಕೃತಿಯು ಭಾರತ ದೇಶದಲ್ಲಿ ಪ್ರಭಾವಶಾಲಿಯಾಗಿ ಪರಿವೃದ್ಧಿಗೊಂಡಿದೆ. ಮೊಹೆಂಜೊದಾರೋ ಮತ್ತು ವೈದಿಕ ಸಂಸ್ಕೃತಿಗಳ ಪ್ರತಿನಿಧಿ ಗಳಾಗಿದ್ದ ಎರಡು ಜನಾಂಗಗಳ ಮಧ್ಯೆ ಬಹುಕಾಲ ಘರ್ಷಣೆಗಳು ನಡೆದಿವೆಯೆಂಬು ದಕ್ಕೆ ಆಧಾರಗಳಿವೆ. ಶಿಶ್ನದೇವರ ವಿಷಯವನ್ನು ಹೇಳುವ ಋಗ್ವೇದದ ಎರಡು ಮಂತ್ರಗಳನ್ನು ಈ ಸಂದರ್ಭದಲ್ಲಿ ಉದಹರಿಸಬಹುದು. [ಋಗ್ವೇದ-೭-೨೧-೫ ಮತ್ತು ೧೦-೯೯-೩] ಮೊದಲನೆಯ ಮಂತ್ರದಲ್ಲಿ ಶಿಶ್ನದೇವರುಗಳು ಯಜ್ಞದ ಬಳಿ ಬಾರದಂತೆ

ತಡೆಯಲು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಎರಡನೆಯ ಮಂತ್ರದಲ್ಲಿ ಶಿಶ್ನದೇವ ರನ್ನು ಕೊಂದು ಸಂಪತ್ತನ್ನು ವಶಪಡಿಸಿಕೊಂಡನೆಂದು ಇಂದ್ರನನ್ನು ಸ್ತುತಿಸಲಾಗಿದೆ. ಋಗ್ವೇದದ ಮಂತ್ರದಲ್ಲಿ ಕಂಡುಬರುವ ಇಂತಹ ಹೇಳಿಕೆಗಳು ಮೊಹೆಂಜೊದಾರೊ ಮತ್ತು ವೈದಿಕ ಜನಾಂಗಗಳ ಮಧ್ಯೆ ನಡೆದ ದೀರ್ಘಕಾಲದ ಘರ್ಷಣೆಯ ಸೂಚಕ ಗಳಾಗಿವೆ. ಋಗ್ವೇದದಲ್ಲಿರುವ ಹತ್ತು ಮಂಡಲಗಳಲ್ಲಿ ಮೂರರಿಂದ ಏಳನೆಯ ಮಂಡಲಗಳಲ್ಲಿರುವ ಮಂತ್ರಗಳು ಬಹು ಪ್ರಾಚೀನ ಕಾಲದಲ್ಲಿ ರಚಿತವಾದವುಗಳೆಂದೂ, ಹತ್ತನೆಯ ಮಂಡಲದ ಮಂತ್ರಗಳು ಅಂತಿಮವಾಗಿ ರಚಿತವಾದವುಗಳೆಂದೂ ವಿದ್ವಾಂ ಸರು ಅಭಿಪ್ರಾಯಪಟ್ಟದ್ದಾರೆ. ಈ ಮೇಲೆ ಹೇಳಿದ ಏಳನೇ ಮಂಡಲದ ಮಂತ್ರ ದಲ್ಲಿ, ವೈದಿಕ ಪಂಥದವರು ನಡೆಸುತ್ತಿದ್ದ ಯಜ್ಞಯಾಗಗಳ ವಿಷಯವಾಗಿ ಶಿಶ್ನ ದೇವರ ತೀವ್ರ ವಿರೋಧವಿದ್ದು, ಅವರ ವಿಷಯದಲ್ಲಿದ್ದ ಅಂಜಿಕೆಯ ಭಾವವು ವ್ಯಕ್ತ ಗೊಳ್ಳುತ್ತದೆ. ಹತ್ತನೆಯ ಮಂಡಲದ ಮಂತ್ರದಲ್ಲಿ ಶಿಶ್ನದೇವರು ಇಂದ್ರನಿಂದ ದಮನಗೊಂಡಿದ್ದ ಸೂಚನೆಯಿದೆ. ಇದರಿಂದ ಎರಡು ಜನಾಂಗಗಳ ಮಧ್ಯೆ ದೀರ್ಘ ಕಾಲ ಘರ್ಷಣೆ ನಡೆದು ಕೊನೆಗೆ ವೈದಿಕ ಜನಾಂಗವು ಜಯಶಾಲಿಯಾಗಿದೆಯೆಂದು ಸ್ಪಷ್ಟವಾಗುತ್ತದೆ. ಗೆದ್ದ ಜನಾಂಗವು ಸೋತ ಜನಾಂಗದ ನಡೆನುಡಿ ಆಚಾರವಿಚಾರ ಗಳನ್ನು ತುಚ್ಛೀಕರಿಸಿ ತಮ್ಮ ಆಚಾರ ವಿಚಾರಗಳ ಮೇಲ್ಮೆಯನ್ನು ಪ್ರದರ್ಶಿಸುವುದು ಲೋಕ ಸಹಜ. ಇಂತೆಯೇ ಸೋತ ಜನಾಂಗದಲ್ಲಿ ಕೆಲವರು ತಮ್ಮ ನೂತನ ಯಜ ಮಾನರ ಆಚಾರ ವಿಚಾರಗಳನ್ನು ಗೌರವಿಸಿ, ಅವರ ಆಚಾರ ವಿಚಾರಗಳನ್ನು ಅನು ಕರಿಸಿ ತಾವೂ ದೊಡ್ಡವರೆನ್ನಿಸಿಕೊಳ್ಳಲು ಯತ್ನಿಸುತ್ತಾರೆ. ಸೋತವರಲ್ಲಿ ಆತ್ಮಾಭಿ ಮಾನಿಗಳಾದ ಕೆಲವರುಮಾತ್ರ ಗೆದ್ದವರ ಹಿಡಿತದಿಂದ ತಪ್ಪಿಸಿಕೊಂಡು ತಮ್ಮ ಆಚಾರ ವಿಚಾರಗಳ ಮೇಲ್ಮೆಯನ್ನು ಕಾಯ್ದುಕೊಳ್ಳಲು ಯತ್ನಿಸುತ್ತಾರೆ. ಆದರೆ ಗೆದ್ದ ಜನಾಂಗವು ಬಹುಕಾಲ ಸೋತ ಜನಾಂಗದ ಉತ್ತಮ ಆಚಾರ ವಿಚಾರಗಳ ಪ್ರಭಾವದಿಂದ ಹೊರಗುಳಿಯಲಾಗುವುದಿಲ್ಲ. ಹೀಗೆ ಎರಡು ಸಂಸ್ಕೃತಿಗಳ ಆಚಾರ ವಿಚಾರಗಳು ಕಾಲಾನುಕ್ರಮವಾಗಿ ಮಿಶ್ರಗೊಂಡು ಹೊಸ ಸಂಸ್ಕೃತಿಯು ರೂಪುಗೊಳು ತ್ತದೆ. ನಮ್ಮ ಭಾರತದೇಶದ ಪ್ರಾಚೀನ ಸಂಸ್ಕೃತಿಯ ಕಥೆಯೂ ಹೀಗೆಯೇ ಆಗಿದೆ. ಮೊಹೆಂಜೆದಾರೊ ಮತ್ತು ವೈದಿಕ ಜನಾಂಗಗಳ ಆಚಾರ ವಿಚಾರಗಳು ಕಾಲಾನು ಕ್ರಮದಲ್ಲಿ ಸಮ್ಮಿಶ್ರಗೊಂಡು ನೂತನ ಸಂಸ್ಕೃತಿಯ ಆವಿರ್ಭಾವವಾಗಿದೆ.

ಭಾರತದೇಶದ ಸಂಸ್ಕೃತಿಯು ಮೇಲ್ಕಂಡಂತೆ ಪರಿವರ್ತನೆಗೊಳ್ಳುತ್ತಿದ್ದ ಸಮ ಯದಲ್ಲಿ ಜೈನಮತೀಯರಲ್ಲಿ ಇಪ್ಪತ್ತಮೂರನೆಯ ತೀರ್ಥಂಕರನೆಂದು ಆರಾಧಿತನಾಗಿ ರುವ ಶ್ರೀ ಪಾರ್ಶ್ವನಾಥತೀರ್ಥಂಕರನು ಹುಟ್ಟಿದನು. ಭಾರತ ದೇಶದ ಪ್ರಾಚೀನ ಕಾಲದ ಧರ್ಮಪಂಥಗಳಲ್ಲೊಂದಾಗಿದ್ದ ನಗ್ನಯೋಗಿಗಳ ಅಹಿಂಸಾಧರ್ಮ ಮಾರ್ಗಾನುಯಾಯಿ ಕ್ಷತ್ರಿಯ ಕುಟುಂಬದಲ್ಲಿ ಶ್ರೀ ಪಾರ್ಶ್ವನಾಥನ ಜನನವಾಯಿತು. ವಾರಾಣಸೀ ನಗರ ನಾಯಕನಾಗಿದ್ದ ವಿಶ್ವಸೇನ ಮತ್ತು ಈತನ ಮಡದಿ ಬ್ರಾಹ್ಮಿ

ಅಥವಾ ವಾಮಾದೇವಿ ಎಂಬುವರು ಶ್ರೀ ಪಾರ್ಶ್ವನಾಥನ ತಂದೆತಾಯಿಗಳು. ಶ್ರೀ ಪಾರ್ಶ್ವನಾಥನು ತನ್ನ ಮುವ್ವತ್ತು ವರ್ಷಗಳ ಕೌಮಾರವಯಸ್ಸಿನ ಅನಂತರ ನಿರ್ಗ್ರಂಥಯತಿದೀಕ್ಷಾ-ಧಾರಣೆಮಾಡಿ, ಸ್ವಲ್ಪ ಕಾಲದಲ್ಲಿಯೇ ಘಾತಿಕರ್ಮ ಚತುಷ್ಟಯಗಳನ್ನು ಲಯಗೊಳಿಸಿ ಅನಂತಚತುಷ್ಟಯ ವಿಭೂತಿಸಂಪನ್ನನಾದನು. ಅನಂತರ ಎಪ್ಪತ್ತುವರ್ಷಕಾಲ ಭಾರತದ ನಾನಾ ಪ್ರದೇಶಗಳಲ್ಲಿ ವಿಹಾರನಡೆಸಿ ಧರ್ಮಜಾಗೃತಿಯನ್ನುಂಟುಮಾಡಿದನು. ಶ್ರೀ ಪಾರ್ಶ್ವನಾಥನ ಜನ್ಮಸಮಯದಲ್ಲಿ ಯಜ್ಞ ಯಾಗಾಚರಣಾರೂಪದ ವೈದಿಕಕರ್ಮಕಾಂಡವು ವಿಶೇಷ ಪ್ರಶಸ್ತಿ ಪಡೆದಿದ್ದಿತು. ಶ್ರೀ ಪಾರ್ಶ್ವನಾಥತೀರ್ಥಂಕರನ ಉಪದೇಶಪ್ರಭಾವದಿಂದ ಆತ್ಮವಾದುವು ಪುನಃ ಪ್ರಕಾಶಗೊಂಡಿತು. ವೈದಿಕಮತಧರ್ಮಾನುಯಾಯಿಗಳು ಈ ಆತ್ಮವಾದದಿಂದ ಪ್ರಭಾವಿತರಾದರು. ಇದರಿಂದ ವೈದಿಕಕರ್ಮಕಾಂಡದ ಮಹತ್ವವು ಕುಗ್ಗಿ ಆತ್ಮವಾದದ ಜ್ಞಾನಕಾಂಡವು ಮಹತ್ವಪಡೆದು ವೇದಾಂತವೆನಿಸಿ ಉಪನಿಷತ್ತುಗಳಲ್ಲಿ ಉಳಿದು ಬಂದಿದೆ. ವೈದಿಕಮತದೆದುರಿನಲ್ಲಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಂತಾಗಿದ್ದ ಅಹಿಂಸಾ ಧರ್ಮಾನುಯಾಯಿ ನಗ್ನಯೋಗಿ ಪಂಥವು ಶ್ರೀ ಪಾರ್ಶ್ವನಾಥತೀರ್ಥಂಕರನ ಪ್ರಭಾವದಿಂದ ಪುನಶ್ಚೇತನಗೊಂಡು ಪ್ರಾಬಲ್ಯತೆ ಪಡೆದು ಮುಂದುವರೆಯಿತು. ಶ್ರೀ ಪಾರ್ಶ್ವನಾಥತೀರ್ಥಂಕರನು ತನ್ನ ನೂರನೆಯ ವಯಸ್ಸಿನಲ್ಲಿ ವಿಹಾರವನ್ನು ನಿಲ್ಲಿಸಿ, ಸಮ್ಮೇದಗಿರಿಯ ಶಿಖರದಲ್ಲಿ ಶುಕ್ಲಧ್ಯಾನಾರೂಢನಾಗಿ ನಿರ್ವಾಣ ಹೊಂದಿದನು.

**ಶ್ರೀ ಮಹಾವೀರತೀರ್ಥಂಕರ :–** ಶ್ರೀ ಪಾರ್ಶ್ವನಾಥತೀರ್ಥಂಕರನ ನಿರ್ವಾಣದ ಬಳಿಕ ಸುಮಾರು 178 ವರ್ಷಗಳ ಸಮಯದಲ್ಲಿ. ಕುಂಡಪುರಾಧೀಶ ಸಿದ್ಧಾರ್ಥರಾಜನ ಮಡದಿ ಪ್ರಿಯಕಾರಿಣೀದೇವಿಯು ಅಂತಿಮತೀರ್ಥಂಕರನಾದ ಶ್ರೀ ಮಹಾವೀರನಿಗೆ ಜನ್ಮವಿತ್ತಳು. ಶ್ರೀ ವೀರನಾಥನ ಜೀವನದ ವಿಷಯವು ಪುರಾಣ ಮತ್ತು ಇತರ ಹತ್ತಾರು ಕಾವ್ಯಗಳಲ್ಲಿ ನಿರೂಪಿತವಾಗಿದೆ. ಕ್ರಿ. ಶ. 9 ನೇ ಶತಮಾನದಲ್ಲಿ ಗುಣಭದ್ರಾಚಾರ್ಯರಿಂದ ರಚಿತವಾಗಿರುವ ಪುರಾಣದಲ್ಲಿ ನಿರೂಪಿತವಾಗಿರುವ ಶ್ರೀ ವೀರನಾಥನ ಜೀವನ ವೃತ್ತಾಂತವನ್ನು ಈ ಮುಂದೆ ಸಂಗ್ರಹಿಸಲಾಗಿದೆ.

'ಈ ಭರತ ಕ್ಷೇತ್ರದ ವಿದೇಹವೆಂಬ ದೇಶದ ಕುಂಡಪುರದ ಅರಸನಾದ ಸಿದ್ಧಾರ್ಥರಾಜನ ಅರಮನೆಯ ಅಂಗಳದಲ್ಲಿ, ಆರುತಿಂಗಳಕಾಲ ಪ್ರತನಿತ್ಯವೂ ಏಳುವರೆ ಕೋಟಿರತ್ನದ ವಸುಧಾರೆಯಾಯಿತು. ಇದು ಮುಂದೆ ತೀರ್ಥಂಕರನು ಉದಯಿಸಲಿರುವನೆಂಬುದರ ಸೂಚಕವಾಗಿದ್ದಿತು. ಆಷಾಢಮಾಸ, ಶುಕ್ಲಪಕ್ಷ, ಷಷ್ಠಿ ತಿಥಿಯಂದು ಬೆಳಗಿನ ಝಾವದಲ್ಲಿ ಸಿದ್ಧಾರ್ಥ ರಾಜನ ಪ್ರಿಯಭಾರ್ಯೆ ಪ್ರಿಯಕಾರಿಣೀದೇವಿಯು ಹದಿನಾರು ಸ್ವಪ್ನಗಳನ್ನು ಕಂಡು ಕೊನೆಯದಾಗಿ ಆನೆಯೊಂದು ತನ್ನ

ಮುಖವನ್ನು ಪ್ರವೇಶಮಾಡಿದಂತೆ ಕಂಡಳು ಅನಂತರ ಎಚ್ಚೆತ್ತ ಪ್ರಿಯಕಾರಿಣೀ
ದೇವಿಯು ನಿತ್ಯಾನುಷ್ಠಾನುಗಳನ್ನು ಪೂರಯಿಸಿ ಪತಿಗೆ ವಂದನೆಮಾಡಿ ಸ್ವಪ್ನಫಲ
ಗಳನ್ನು ಕೇಳಿ ಅಂತಿಮತೀರ್ಥಂಕರನ ತಾಯಿಯಾಗುವ ಮಹತ್ಪುಣ್ಯವು ತನ್ನ
ದಾಗಿದೆಯೆಂಬುದನ್ನು ತಿಳಿದು ಆನಂದಪಟ್ಟಳು. ಈ ಸಮಯಕ್ಕೆ ಇಂದ್ರಾದಿ
ದೇವತೆಗಳು ಬಂದು ಈ ದಂಪತಿಗಳಿಗೆ ಕಲ್ಯಾಣಾಭಿಷೇಕವನ್ನು ಮಾಡಿ ಗರ್ಭಕಲ್ಯಾ
ಣೋತ್ಸವವನ್ನು ಆಚರಿಸಿದರು. ಇವರ ಸೇವೆಗಾಗಿ ದೇವದೇವತೆಗಳನ್ನು ನಿಯಮಿಸಿ
ಇಂದ್ರಾದಿದೇವತೆಗಳು ಸ್ವಸ್ಥಾನಗಳಿಗೆ ತೆರಳಿದರು. ಅನಂತರ ಒಂಭತ್ತು ತಿಂಗಳು
ಪೂರ್ಣಗೊಳ್ಳುತ್ತಿರಲು, ಚೈತ್ರಮಾಸ, ಶುಕ್ಲಪಕ್ಷ, ತ್ರಯೋದಶಿ ದಿನದಂದು ಪ್ರಿಯ
ಕಾರಿಣೀ ದೇವಿಯು ಅಂತಿಮ ತೀರ್ಥಂಕರ ಶಿಶುವಿಗೆ ಜನ್ಮವಿತ್ತಳು. ಈ ಶಿಶುವು
ಜನ್ಮ ಪಡೆದ ಸಮಯದಲ್ಲಿ ಲೋಕದೆಲ್ಲೆಡೆಯಲ್ಲಿಯೂ ತಾನೇ ತಾನಾಗಿ ಪ್ರಸನ್ನತೆ
ಯುಂಟಾಗಿ ಸಮಸ್ತ ಜೀವಿಗಳೂ ಆನಂದಾನುಭವಪಡೆದರು. ಶಿಶುವಿನ ತೀರ್ಥಂ
ಕರನಾಮಪುಣ್ಯಕರ್ಮ ಪ್ರಭಾವದಿಂದ ಪ್ರೇರಿತನಾದ ಇಂದ್ರನು ದೇವತೆಗಳೊ
ಡಗೂಡಿ ಬಂದು, ಶಿಶುವನ್ನು ಮೇರುಪರ್ವತಕ್ಕೆ ಒಯ್ದು ಜನ್ಮಾಭಿಷೇಕ ಕಲ್ಯಾಣ
ವನ್ನು ನೆರವೇರಿಸಿದನು. ಅನಂತರ ಶಿಶುವಿಗೆ ವೀರ ಮತ್ತು ವರ್ಧಮಾನನೆಂದು
ನಾಮಕರಣಮಾಡಿ, ಜನನೀಜನಕರ ಬಳಿ ಶಿಶುವನ್ನು ಬಿಟ್ಟು ಸ್ವಸ್ಥಾನಕ್ಕೆ ತೆರಳಿ
ದನು. ಒಮ್ಮೆ ಸಂಜಯ ಮತ್ತು ವಿಜಯರೆಂಬ ಚಾರಣ ಋಷಿಗಳೀರ್ವರಿಗೆ ತತ್ವ
ವಿಷಯದಲ್ಲಿ ಸಂದೇಹ ಉಂಟಾಗಿದ್ದಿತು. ಇವರಿಬ್ಬರಿಗೂ ಶ್ರೀ ವೀರನಾಥ ಶಿಶುವಿನ
ದರ್ಶನ ಮಾತ್ರದಿಂದ ತತ್ವವಿಷಯದಲ್ಲಿ ಉಂಟಾಗಿದ್ದ ಸಂದೇಹವು ದೂರವಾಯಿತು.
ಆಗ ಅವರು ಭಕ್ತಿಯಿಂದ ಶ್ರೀ ವೀರನಾಥನನ್ನು 'ಸನ್ಮತಿ' ಎಂದು ಹೆಸರಿಸಿ ಸ್ತುತಿಸಿ
ದರು. ಶ್ರೀ ವೀರನಾಥನು ಒಂದು ದಿನ ತನ್ನ ಓರಗೆಯ ಬಾಲಕರೊಡನೆ ಉದ್ಯಾನವನ
ವೊಂದರಲ್ಲಿ ಆಟವಾಡುತ್ತಿದ್ದನು. ಬಾಲಕರೆಲ್ಲರೂ ಮರವೊಂದನ್ನು ಏರಿ ಆಟವಾಡುವು
ದರಲ್ಲಿ ಮಗ್ನರಾಗಿರಲು ಒಂದು ಘಟಸರ್ಪವು ಆ ಮರದ ಬುಡದಿಂದ ಕಾಂಡದವರೆ
ವಿಗೂ ಸುತ್ತಿಕೊಂಡು ಭಯಂಕರವಾಗಿ ಬುಸುಗುಟ್ಟತೊಡಗಿತು. ಇದನ್ನು ಕಂಡ
ಬಾಲಕರೆಲ್ಲರೂ ಭಯಭೀತರಾಗಿ ಕೂಡಲೆ ಮರದಿಂದ ಧುಮುಕಿ ಪಲಾಯನಮಾಡಿ
ದರು. ಶ್ರೀ ವೀರನಾಥನೊಬ್ಬನು ಮಾತ್ರ ಆ ಘಟಸರ್ಪಕ್ಕೆ ಹೆದರದೆ ಅದರ ಹೆಡೆ
ಹಿಡಿದು ಆಟವಾಡಲಾರಂಭಿಸಿದನು. ಆದರೆ ನಿಜವಾಗಿಯೂ ಅದೊಂದು ಸರ್ಪವಾಗಿ
ರಲಿಲ್ಲ, ನೈಗಮ ದೇವನೊಬ್ಬನು ಶ್ರೀ ವೀರನಾಥನ ಧೈರ್ಯವನ್ನು ಪರೀಕ್ಷಿಸುವ
ಉದ್ದೇಶದಿಂದ ಸರ್ಪರೂಪವನ್ನು ಧರಿಸಿದ್ದನು. ಶ್ರೀ ವೀರನಾಥನ ಅನುಪಮ
ಧೈರ್ಯ ಸ್ಥೈರ್ಯಗಳನ್ನು ಕಂಡು ಸಂತುಷ್ಟನಾಗಿ 'ಮಹಾವೀರ' ನೆಂದು
ಹೆಸರಿಸಿ ಸ್ತುತಿಸಿದನು.

ಶ್ರೀ ವೀರನಾಥನಿಗೆ ಮುವ್ವತ್ತುವರ್ಷಗಳ ಕೌಮಾರ ವಯಸ್ಸು ಕಳೆಯುತ್ತಿ
ರಲು, ಒಂದು ದಿನ ಮತಿಜ್ಞಾನದ ಕ್ಷಯೋಪಶಮನಿಮಿತ್ತದಿಂದ ಪೂರ್ವಭವಗಳ ಸ್ಮರ

ಣೆಯಾಯಿತು. ಆಗ ಸಾಂಸಾರಿಕ ಜೀವನದಲ್ಲಿ ವಿರಕ್ತಿಮೂಡಿತು. ಮಾರ್ಗಶಿರ ಮಾಸ, ಕೃಷ್ಣಪಕ್ಷ, ದಶಮೀ ತಿಥಿಯ ಆ ದಿನ ಶ್ರೀ ವೀರನಾಥನು ಆರು ಉಪವಾಸ ಗಳ ನಿಯಮಪೂರ್ವಕ ನಿರ್ಗ್ರಂಥಯತಿದೀಕ್ಷೆಯನ್ನು ಧಾರಣೆಮಾಡಿದನು. ಈ ದೀಕ್ಷಾಧಾರಣೆಯ ಸಮಾರಂಭದಲ್ಲಿ ಸನ್ನಿಹಿತರಾಗಿದ್ದ ದೇವಮಾನವರು ಪರಿನಿಷ್ಕ್ರಮಣ ಕಲ್ಯಾಣೋತ್ಸವವನ್ನಾಚರಿಸಿದರು. ಅನಂತರ ಮುನಿಶ್ರೀ ವೀರನಾಥನಿಗೆ ಮನಃಪರ್ಯಯ ಜ್ಞಾನದ ಆವಿರ್ಭಾವವಾಯಿತು. ಉಪವಾಸನಿಯಮದ ಅಂತ್ಯ ದಿನದಂದು ಕೂಲಗ್ರಾಮಾಧಿಪತಿ ಕೂಲನೆಂಬುವನು ಮುನಿಶ್ರೀ ವೀರನಾಥನಿಗೆ ಆಹಾರ ದಾನವಿತ್ತನು. ಒಮ್ಮೆ ಮುನಿಶ್ರೀ ವೀರನಾಥನು ಉಜ್ಜಯನಿಯ ಅತಿಮುಕ್ತಕ ಸ್ಮಶಾನದಲ್ಲಿ ಪ್ರತಿಮಾಯೋಗಧಾರಣೆಮಾಡಿ ಧ್ಯಾನಾಸಕ್ತನಾಗಿದ್ದನು. ಮಂತ್ರ ತಂತ್ರ ವಿದ್ಯಾ ಸಂಪನ್ನನಾದ ರುದ್ರನೆಂಬುವನು ಈ ಮುನಿನಾಥನ ಚಿತ್ತಸ್ಥೈರ್ಯ ವನ್ನು ಪರೀಕ್ಷಿಸುವುದಕ್ಕೋಸ್ಕರ, ತನ್ನ ವಿದ್ಯಾ ಸಾಮರ್ಥ್ಯದಿಂದ ಭೂತ, ಪಿಶಾಚ, ವ್ಯಂತರ, ವ್ಯಾಘ್ರಾದಿಗಳಿಂದ ಕೂಡಿದ ಭಯಂಕರ ವಾತಾವರಣವನ್ನು ರಚಿಸಿದನು. ಇದಾವುದಕ್ಕೂ ಅಂಜದೆ ಪರ್ವತದಂತೆ ಸ್ಥಿರನಾಗಿದ್ದ ಮುನಿಶ್ರೀ ವೀರನಾಥನನ್ನು 'ಮಹತಿ ಮಹಾವೀರ' ನೆಂದು ಹೆಸರಿಸಿ ಸ್ತುತಿಗೈದನು. ಲಿಚ್ಛವಿಮನೆತನದ ಚೇಟಕರಾಜನ ಕಿರಿಕುವರಿ ಚಂದನೆಯು ದುಷ್ಟ ವಿದ್ಯಾಧರನೋರ್ವನಿಂದ ಅಪಹೃತಳಾ ಗಿದ್ದು ಕರ್ಮ ಧರ್ಮವಶದಿಂದ ವತ್ಸದೇಶದ ಕೌಶಾಂಬೀನಗರನಿವಾಸಿ ವೃಷಭದತ್ತ ಶ್ರೇಷ್ಠಿಯ ಮಡದಿ ಸುಭದ್ರೆ ಎಂಬುವಳ ಬಂದಿಯಾಳಾಗಿದ್ದಳು. ಇದೇ ಸಮಯಕ್ಕೆ ಮುನಿಶ್ರೀ ವೀರನಾಥನು ವಿಹಾರ ಕ್ರಮದಿಂದ ಕೌಶಾಂಬೀನಗರಕ್ಕೆ ಬಂದು ಚರ್ಯೆ ಪೂರ್ವಕ ಆಹಾರಕ್ಕಾಗಿ ನಡೆದಿದ್ದನು. ಈ ಮುನಿನಾಥನಿಗೆ ಆಹಾರದಾನ ಕೊಡ ಬೇಕೆಂಬ ಆಶೆಯು ಚಂದನೆಯ ಮನದಲ್ಲಿ ಮೂಡಿತು. ಕೂಡಲೇ ಆಕೆಯ ಕಾಲಿಗೆ ತೊಡರಿದ್ದ ಸಂಕಲೆಗಳು ಕಳಚಿದವು. ಮುನಿನಾಥನನ್ನು ಎದುರುಗೊಂಡು ವಿಧ್ಯನು ಸಾರ ಅರ್ಚಿಸಿ ಸುಭದ್ರೆಯು ದಿನ ನಿತ್ಯದ ಉಣಿಸೆಂದು ತನಗೆ ಕೊಟ್ಟಿದ್ದ ಗಂಜಿಮಿಶ್ರಿತ ಅನ್ನವನ್ನೇ ದಾನಮಾಡಿದಳು. ಶ್ರದ್ಧೆಭಕ್ತಿಯಿಂದ ಕೊಟ್ಟ ಆ ಗಂಜಿಮಿಶ್ರಿತ ಅನ್ನವೇ ಪರಮಾನ್ನವಾಯಿತು.

ಮುನಿಶ್ರೀ ವೀರನಾಥನ ಹನ್ನೆರಡುವರ್ಷಕಾಲದ ತಪಶ್ಚರ್ಯೆಯು ಪೂರ್ಣ ಗೊಳ್ಳುತ್ತಿರಲು, ವೈಶಾಖ ಶುಕ್ಲ ದಶಮಿಯಂದು ಜೃಂಭಿಕ ಗ್ರಾಮದ ಬಳಿ ಋಜು ಕೂಲಾ ನದೀ ತೀರದ ಸಾಲವೃಕ್ಷದ ತಲದಲ್ಲಿ ಶಿಲಾಸನವೊಂದರಮೇಲೆ ಕುಳಿತು ಧ್ಯಾನಾರೂಢನಾಗಿದ್ದನು. ಆಗ ಶ್ರೀ ವೀರ ಮುನಿನಾಥನು ಘಾತಿಕರ್ಮ ಚತುಷ್ಟಯ ಗಳನ್ನು ನಿರ್ಮೂಲಗೊಳಿಸಿ, ಅನಂತ ಚತುಷ್ಟಯಗಳ ಸಂಪನ್ನತೆಯನ್ನು ಪಡೆದನು. ಇಂದ್ರನು ದೇವಾಧಿದೇವತೆಗಳೊಡಗೂಡಿ ಬಂದು ಪರಮೌದಾರಿಕ ದಿವ್ಯದೇಹಧರನಾದ ಶ್ರೀ ವೀರಜಿನೇಂದ್ರನ ಕೇವಲಜ್ಞಾನ ಕಲ್ಯಾಣೋತ್ಸವವನ್ನಾಚರಿಸಿದನು. ಅನಂತರ

ಶ್ರೀ ವೀರತೀರ್ಥಂಕರನಿಂದ ಪ್ರಥಮೋಪದೇಶ ಪಡೆದು, ಪ್ರಥಮ ಗಣಧರನಾಗುವ ಪುಣ್ಯಲಬ್ಧಿಯುಳ್ಳವನಾರೆಂದು, ಇಂದ್ರನು ತನ್ನ ಅವಧಿಜ್ಞಾನದಿಂದ ತಿಳಿದು, ವಟು ವೇಷ ಧಾರಣೆಮಾಡಿ, ಗೌತಮಗ್ರಾಮನಿವಾಸಿ, ಗೌತಮ ಗೋತ್ರಜನಾದ ಇಂದ್ರ ಭೂತಿಯ ಬಳಿ ಬಂದನು. ವೇದವೇದಾಂಗಾದಿ ಸಕಲ ವಿದ್ಯಾಪಾರಂಗತನಾಗಿದ್ದ ಗೌತಮ ಇಂದ್ರಭೂತಿಯು ಆ ಸಮಯದಲ್ಲಿ ತನ್ನ ಐದುನೂರು ಮಂದಿ ಶಿಷ್ಯರಿಗೆ ವೇದಾಭ್ಯಾಸಮಾಡಿಸುತ್ತಿದ್ದನು. ವಟುವೇಷಧಾರಿಯಾದ ಇಂದ್ರನು ಗೌತಮನಲ್ಲಿ ತತ್ವವಿಷಯದ ಕೆಲವು ಪ್ರಶ್ನೆಗಳನ್ನು ಕೇಳಿದನು. ಗೌತಮನಿತ್ತ ಉತ್ತರದಿಂದ ಸಮಾಧಾನ ಹೊಂದದೆ, ತತ್ವವಿಷಯವೇತ್ತರಲ್ಲಿ ಶ್ರೀ ವೀರಜಿನೇಂದ್ರನಿಗೆ ಸರಿಸಮಾನರು ಪ್ರಪಂಚದಲ್ಲಿ ಮತ್ತೊಬ್ಬರಿಲ್ಲೆಂದು ಹೇಳಿದನು. ಮಾನಕಷಾಯ ಪ್ರಚೋದಿತನಾದ ಇಂದ್ರಭೂತಿಯು ಆ ವೀರಜಿನನನ್ನು ವಾದದಲ್ಲಿ ಸೋಲಿಸಿಬಿಡುವುದಾಗಿ ಉದ್ಘೋಷಿಸಿ, ತನ್ನ ಶಿಷ್ಯವೃಂದದೊಡಗೂಡಿ ಶ್ರೀವೀರಜಿನೇಂದ್ರನ ಸಮವಸರಣಕ್ಕೆ ಬಂದನು. ಶ್ರೀ ವೀರಜಿನೇಂದ್ರನ ಬಳಿ ಸಾರುವ ಮುನ್ನ ಮಾನಸ್ತಂಭದ ದರ್ಶನ ಮಾತ್ರದಿಂದ ಇಂದ್ರಭೂತಿಯ ಮಾನಕಷಾಯವು ಅಳಿಯಿತು. ತನ್ನಲ್ಲಾದ ಈ ಪರಿವರ್ತನೆಗೆ ತಾನೇ ಆಶ್ಚರ್ಯ ಪಡುತ್ತಾ, ಶ್ರೀವೀರಜಿನೇಂದ್ರನ ಸನ್ನಿಧಿಗೆ ಬಂದು ಭಕ್ತಿಭಾವವಶನಾಗಿ ವಂದಿಸಿ. ಜೀವತತ್ವ ವಿಷಯದಲ್ಲಿ ತನಗಿದ್ದ ಸಂಶಯವನ್ನು ಪರಿಹರಿಸಿಕೊಳ್ಳಲೋಸುಗ, ಜೀವದ ಸ್ವರೂಪವನ್ನು ಕುರಿತು ಪ್ರಶ್ನಿಸಿದನು. ಶ್ರೀವೀರತೀರ್ಥಂಕರನ ದಿವ್ಯಧ್ವನಿಯಿಂದ ಜೀವತತ್ವ ಸ್ವರೂಪವನ್ನು ತಿಳಿದು ಶ್ರದ್ಧಾವಂತನಾಗಿ ಸಮ್ಯಕ್ತ್ವಧಾರಕನಾದದು. ಅನಂತರ ಇಂದ್ರಭೂತಿ ಗೌತಮನು ತನ್ನ ಶಿಷ್ಯರೊಡಗೂಡಿ ಶ್ರೀವೀರತೀರ್ಥಂಕರನ ಸಮ್ಮುಖದಲ್ಲಿ ನಿರ್ಗ್ರಂಥ ಯತಿ ದೀಕ್ಷೆಯನ್ನು ಸ್ವೀಕರಿಸಿದನು. ಸಂಯಮಧಾರಣೆಯ ಮರುಕ್ಷಣದಲ್ಲಿಯೇ ಶ್ರೀಗೌತಮಸ್ವಾಮಿಗೆ ಸಪ್ತ ಋದ್ಧಿಗಳೂ ಮನಃಪರ್ಯಯ ಜ್ಞಾನವೂ ಆವಿರ್ಭಾವಗೊಂಡವು. ಶ್ರಾವಣಮಾಸ, ಕೃಷ್ಣ ಪಕ್ಷ ಪ್ರಥಮೆಯಂದು ಗೌತಮಮುನಿಯು ಶ್ರುತಜ್ಞಾನಧರನಾದನು. ಭಾವ ಶ್ರುತಜ್ಞಾನಧರನಾದ ಶ್ರೀ ಗೌತಮ ಸ್ವಾಮಿಯು ದ್ವಾದಶಾಂಗಶ್ರುತವನ್ನು ರಚನೆ ಮಾಡಿದನು. ಹೀಗೆ ಶ್ರೀ ಗೌತಮ ಸ್ವಾಮಿಯು ಶ್ರೀ ವೀರತೀರ್ಥಂಕರನ ಸಮವಸರಣದಲ್ಲಿ ಪ್ರಥಮ ಗಣಧರನಾದನು. ಶ್ರೀ ಗೌತಮ ಸ್ವಾಮಿಯ ಅನಂತರ ವಾಯುಭೂತಿ, ಅಗ್ನಿಭೂತಿ, ಸುಧರ್ಮ, ಮೌರ್ಯ, ಮಂದ, ಪುತ್ರ, ಮೈತ್ರೇಯ, ಅಕಂಪನ, ಅಚೇಲ ಮತ್ತು ಪ್ರಭಾಸರೆಂಬುವರು ತಮ್ಮ ತಮ್ಮ ಶಿಷ್ಯವೃಂದಸಮೇತರಾಗಿ ದೀಕ್ಷೆಯನ್ನು ಗ್ರಹಣಮಾಡಿ ಗಣಧರರಾದರು. ಶ್ರೀ ವೀರತೀರ್ಥಂಕರನ ಸಮವಸರಣದಲ್ಲಿ ಹದಿನಾಲ್ಕುಸಹಸ್ರ ಮುನಿಗಳು, ಮುವ್ವತ್ತಾರು ಸಾವಿರ ಮಂದಿ ಆರ್ಯಿಕೆಯರು, ಒಂದು ಲಕ್ಷ ಶ್ರಾವಕರು ಮತ್ತು ಮೂರು ಲಕ್ಷ ಶ್ರಾವಿಕೆಯರಿದ್ದರು. ಇವರಲ್ಲದೆ ತಿರ್ಯಂಚ ಪ್ರಾಣಿಗಳು ಮತ್ತು ಅಸಂಖ್ಯಾತ ದೇವ ದೇವತೆಗಳೂ ಇದ್ದರು. ಆರ್ಯಿಕೆಯರಲ್ಲಿ ಚಂದನಾರ್ಯಿಕೆಯು ಗಣನಾಯಕಿಯಾಗಿದ್ದಳು. ಶ್ರಾವಕರಲ್ಲಿ ಮಗಧದೇಶಾಧಿಪತಿ

ಯಾದ ಶ್ರೇಣಿಕನು ಪ್ರಧಾನನಾಗಿದ್ದನು. ಶ್ರೀ ವೀರತೀರ್ಥಂಕರನು ದ್ವಾದಶ ಗಣ ಪರಿವೇಷ್ಟಿತನಾಗಿ ಭರತ ಕ್ಷೇತ್ರದ ಆರ್ಯಾವರ್ತದಲ್ಲಿ ಮುವ್ವತ್ತು ವರ್ಷಕಾಲ ವಿಹಾರ ನಡೆಸಿ ಧರ್ಮ ಜಾಗೃತಿಯನ್ನುಂಟುಮಾಡಿದನು. ಅನಂತರ ಶ್ರೀ ವಿಹಾರವನ್ನು ಸಮಾಪ್ತಿಗೊಳಿಸಿ ಪಾವಾಪುರದ ಮನೋಹರೋದ್ಯಾನದಲ್ಲಿರುವ ಸರೋವರ ಮಧ್ಯದ ಮಣಿಶಿಲೆಯ ಮೇಲೆ ಎರಡು ದಿನ ಶುಕ್ಲ ಧ್ಯಾನಾರೂಢನಾಗಿದ್ದು ಕಾರ್ತಿಕ ಕೃಷ್ಣಪಕ್ಷ ಚತುರ್ದಶೀ ತಿಥಿ ಸ್ವಾತಿ ನಕ್ಷತ್ರ ಯೋಗವಿದ್ದ ಸಮಯದಲ್ಲಿ ಸಹಸ್ರ ಮುನಿಗಳೊಡನೆ ನಿರ್ವಾಣ ಹೊಂದಿದನು. ನಿರ್ವಾಣ ಹೊಂದುವ ಸಮಯಕ್ಕೆ ಶ್ರೀ ವೀರತೀರ್ಥಂಕರನು ಎಪ್ಪತ್ತೆರಡು ವರ್ಷಗಳಿಗೆ ಸ್ವಲ್ಪ ಕಡಿಮೆಯಾದ ವಯೋಮಾನದವನಾಗಿದ್ದನು. ಇಂದ್ರಾದಿ ದೇವತೆಗಳು ಶ್ರೀ ವೀರಜಿನೇಂದ್ರನ ನಿರ್ವಾಣ ಕಲ್ಯಾಣೋತ್ಸವವನ್ನು ಆಚರಿಸಿದರು. ಈ ನಿರ್ವಾಣ ದಿನದ ನೆನಪಿನಲ್ಲಿ ದೀಪಾವಳೀ ಹಬ್ಬದ ಆಚರಣೆಯು ಆರಂಭಗೊಂಡು ಈ ದಿನದವರೆವಿಗೂ ಮಹೋತ್ಸವ ರೂಪದಲ್ಲಿ ನಡೆದುಬಂದಿದೆ.

**ಶ್ರೀ ಮಹಾವೀರ ತೀರ್ಥಂಕರನ ವಿಷಯದಲ್ಲಿ ಕೆಲವು ಮತಭೇದಗಳು :**–ದಿಗಂಬರ ಜೈನಸಂಪ್ರದಾಯದ ಯತಿಗಳಲ್ಲಿ ಮಾತ್ರ ನಗ್ನ ವ್ರತಾಚರಣೆಯು ರೂಢಿಯಲ್ಲಿದೆ ಮತ್ತು ಈ ರೂಢಿಯು ಶ್ರೀ ಮಹಾವೀರ ತೀರ್ಥಂಕರನಿಂದ ಆಚರಣೆಗೆ ಬಂದಿತು, ಎಂಬ ಅಭಿಪ್ರಾಯವು ವಿಶೇಷವಾಗಿ ಪ್ರಚಲಿತವಿದೆ. ಆದರೆ ಇದು ಕೇವಲ ತಪ್ಪು ಕಲ್ಪನೆಯಾಗಿದೆ : ವೈದಿಕಮತದಲ್ಲಿ ಸನ್ಮಾನಿತವಾಗಿರುವ ಪರಮಹಂಸ ಪರಿವ್ರಾಜಕರಲ್ಲಿಯೂ ನಗ್ನವ್ರತಾಚರಣೆಯು ವಿಶೇಷವಾಗಿ ರೂಢಿಯಲ್ಲಿದ್ದಿತೆಂದು ಅನೇಕ ಆಧಾರಗಳಿಂದ ವ್ಯಕ್ತವಾಗುವುದು. ಪರಮಹಂಸರ ಈ ನಗ್ನವ್ರತಾಚರಣೆಯು ವೈದಿಕ ಧರ್ಮಶಾಸ್ತ್ರಗಳ ಆಧಾರ ಪಡೆದು ಅಧಿಕೃತವೆನ್ನಿಸಿಕೊಂಡಿದೆ. [ಶ್ರೀಯುತ ಯಸ್. ಸಿ. ಘೋಶಾಲ್ ರೂಲ್ಸ್‌ಫಾರ್ ಅಸೆಟಿಕ್ಸ್, ಇನ್ ಜೈನಿಸಂ, ಬುದ್ಧಿಸಂ ಅಂಡ್ ಹಿಂದೂಯಿಸಂ, ಜೈನ ಅಂಟಿಕ್ವೆರಿ ಗ್ರಂಥ ೧–ವಿಭಾಗ–೪, ಮಾರ್ಚ್–೧೯೩೬.]

ಶ್ರೀ ಮಹಾವೀರ ತೀರ್ಥಂಕರನ ಸಮಕಾಲೀನನಾದ ಶ್ರೀ ಗೋಶಾಲನಿಂದ ಪ್ರಚುರಗೊಂಡ ಧರ್ಮ ಪಂಥದ ಯತಿಗಳು ನಗ್ನವ್ರತಾಚರಣೆಯುಳ್ಳವರಾಗಿದ್ದರು. ಶ್ರೀ ಗೌತಮ ಬುದ್ಧನು ಗೃಹತ್ಯಾಗಮಾಡಿದ ಅನಂತರ ಸ್ವಲ್ಪಕಾಲ ನಿರ್ಗ್ರಂಥ ನಗ್ನ ಯತಿ-ದೀಕ್ಷೆಯನ್ನು ಸ್ವೀಕರಿಸಿದ್ದನೆಂದು ಬೌದ್ಧ ಆಗಮ ಗ್ರಂಥದ ಈ ಮುಂದಿನ ಹೇಳಿಕೆಯಿಂದಲೇ ಸ್ಪಷ್ಟವಾಗುತ್ತದೆ.

ಭಗವಾನ್ ಬುದ್ಧನು ಸಾರಿಪುತ್ತನಿಗೆ ಹೇಳುತ್ತಾನೆ : ಎಲೈ ಸಾರಿಪುತ್ತನೆ ! ನಾಲ್ಕು ತರದ ತಪಸ್ಸನ್ನು ಆಚರಿಸಿದ್ದೆನು ಎಂದು ನನ್ನ ಸ್ಮರಣೆಯಲ್ಲಿದೆ. ನಾನು ತಪಸ್ವಿಯಾದೆ, ರೂಕ್ಷನಾದೆ, ಜಿಗುಪ್ಸಿಯಾದೆ, ಪವಿವಿತ್ತನಾದೆ.

ತಪಸ್ವಿತಾ : "ನಾನು ಬತ್ತಲೆಯಾಗಿರುತ್ತಿದ್ದೆ, ಲೌಕಿಕ ಆಚಾರವನ್ನು ಪಾಲಿಸುತ್ತಿದ್ದಿಲ್ಲ, ಭಿಕ್ಷೆಯನ್ನು ಪಾಣಿಪಾತ್ರನಾಗಿ ತಿನ್ನುತ್ತಿದ್ದೆನು. 'ಭದಂತರೆ ಇತ್ತ

ಬನ್ನಿ' ಎಂದು ಯಾರಾದರೂ ನುಡಿದುದನ್ನು ಕಿವಿಯಮೇಲೆ ಹಾಕಿಕೊಳ್ಳುತ್ತಿದ್ದಿಲ್ಲ. 'ಭದಂತರೆ ಎದ್ದು ನಿಲ್ಲಿ' ಎಂದು ನುಡಿದಿದ್ದನ್ನು ಕೇಳಿಕೊಳ್ಳುತ್ತಿರಲಿಲ್ಲ. ಕುಳಿತಲ್ಲಿಯೇ ತಂದುಕೊಟ್ಟ ಅನ್ನವನ್ನು, ನನಗಾಗಿ ತಯಾರುಪಡಿಸಿದ ಅನ್ನವನ್ನು ಸ್ವೀಕರಿಸುತ್ತಿದ್ದಿಲ್ಲ. ನಿಮಂತ್ರಣವನ್ನು ಸ್ವೀಕರಿಸುತ್ತಿದ್ದಿಲ್ಲ. ಬೇಯಿಸಿದ ಪಾತ್ರೆಯಲ್ಲಿಯೇ ತಂದು ನೀಡಿದ ಅನ್ನವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಒರಳಿನೊಳಗಿನ ತಿನ್ನುವ ವಸ್ತುವನ್ನು ಕೊಟ್ಟರೂ ತೆಗೆದುಕೊಳ್ಳುತ್ತಿದ್ದಿಲ್ಲ. ಹೊಸ್ತಿಲ ಇಲ್ಲವೆ ಕಟ್ಟಿಗೆಯ ತುಂಡಿನ ಆ ಕಡೆ ನಿಂತು ಕೊಟ್ಟ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದಿಲ್ಲ. ಇಬ್ಬರು ಉಣ್ಣುತ್ತಿರುವಾಗ ಒಬ್ಬನು ಎದ್ದು ಕೊಟ್ಟುದನ್ನು ಸ್ವೀಕರಿಸುತ್ತಿದ್ದಿಲ್ಲ. ಗರ್ಭಿಣಿಯಾದವಳು, ಕೂಸಿಗೆ ಮೊಲೆಯುಣ್ಣಿಸುವವಳು, ಗಂಡನೊಡನೆ ಏಕಾಂತದಲ್ಲಿರುವವಳು ಕೊಟ್ಟುದನ್ನು ತೆಗೆದುಕೊಳ್ಳುತ್ತಿದ್ದಿಲ್ಲ. ಮೇಳಗಳಲ್ಲಿ ಜಾತ್ರೆಗಳಲ್ಲಿ ತಯಾರುಮಾಡಿದ ಅನ್ನದ ಭಿಕ್ಷೆಯನ್ನು ಹಿಡಿಯುತ್ತಿದ್ದಿಲ್ಲ. ನಾಯಿ ನಿಂತಲ್ಲಿ, ನೊಣಗಳು ಗೊವ್ ಎಂದು ಸುತ್ತಾಡುವಲ್ಲಿ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದಿಲ್ಲ. ಮತ್ಸ್ಯ, ಮಾಂಸ, ಸುರಾ ಮೊದಲಾದವುಗಳನ್ನು ಸ್ವೀಕರಿಸುತ್ತಿದ್ದಿಲ್ಲ. ಒಂದೇ ಮನೆಯಲ್ಲಿ ಭಿಕ್ಷೆಯನ್ನು ಬೇಡಿ ಒಂದೇ ತುತ್ತು ಅನ್ನದಿಂದ ಸಾಗಿಸುತ್ತಿದ್ದೆ. [1] ಇಲ್ಲವೆ ಎರಡುಮನೆಗಳಿಂದ ಬೇಡಿ ಎರಡು ತುತ್ತುಗಳನ್ನು ತಿಂದು ಇರುತ್ತಿದ್ದೆ. ಹೀಗೆ ಏಳುದಿವಸಗಳವರೆಗೆ ಹೆಚ್ಚಿಸುತ್ತ ಹೋಗಿ ಏಳು ಮನೆಗಳ ಭಿಕ್ಷೆಯಿಂದ ಏಳು ತುತ್ತುಗಳನ್ನು ತಿಂದು ಇರುತ್ತಿದ್ದೆ[1].

---

[ಜುಗುಪ್ಸೆ=ಹಿಂಸೆಗೆ ಹೇಸುವುದು] ವಿ. ಸೂ. ಈ ಮೇಲ್ಕಂಡ ಹೇಳಿಕೆಯಲ್ಲಿ '1' ಅಂಕಿಯ ಮಧ್ಯೆಯಿರುವ ಅಂಶವು ಇಂದು ಜೈನ ಯತಿಗಳಲ್ಲಿ ಆಚರಣೀಯವಾಗಿರುವಂತೆ ಕಂಡುಬರುವುದಿಲ್ಲ. ಪ್ರಾಯಃಶಃ ಈ ಸಂದರ್ಭದ ಪಾಲೀಭಾಷಾವಾಕ್ಯವನ್ನು ಅರ್ಥವಿಸುವಲ್ಲಿ ತಪ್ಪರ್ಥವು ಮೂಡಿರಬಹುದಾದ ಸಂಭವವಿದೆ. ಈ ಪಾಲೀಭಾಷಾವಾಕ್ಯವು ಇಂತಿದೆ: 'ಏಗಾರಿಕೊ ವಾ ಹೋಮಿ ಏಕಾಲೋಪಿಕೋ, ದ್ವಾಗಾರಿಕೋ ವಾ ಹೋಮಿ ದ್ವಾಲೋಪಿಕೋ,..................ಸತ್ತಾಗಾರಿಕೋ ವಾ ಹೋಮಿ ಸತ್ತಾಲೋಪಿಕೋ' ಈ ವಾಕ್ಯದ ಅರ್ಥವನ್ನು ಮುಂದಿನಂತೆ ವಿವರಿಸಬಹುದು:

'ಭಿಕ್ಷಾರ್ಥವಾಗಿ ಒಂದೇ ಒಂದು ಮನೆಗೆ ಹೋಗುವ ನಿಯಮಮಾಡಿ ಅಲ್ಲಿ ಆಹಾರದೊರಕಿದಲ್ಲಿ ಒಂದು ತುತ್ತನ್ನು ಮಾತ್ರ ಭುಂಜಿಸುವ ನಿಯಮ, (ಇಂತೆಯೇ) ಎರಡು ಮನೆಗಳಿಗೆ ಮಾತ್ರಹೋಗುವ ನಿಯಮಮಾಡಿ ಆ ಎರಡರಲ್ಲಿ ಯಾವುದಾದರೊಂದು ಮನೆಯಲ್ಲಿ ದೊರೆಯಬಹುದಾದ ಎರಡು ತುತ್ತು ಆಹಾರವನ್ನು ಮಾತ್ರ ಭುಂಜಿಸುವ ನಿಯಮ (ಇಂತೆಯೇ ಪರಿವರ್ಧಿಸುತ್ತಾ) ..................ಏಳು ಮನೆಗಳಿಗೆ ಮಾತ್ರ ಹೋಗಿ ಆ ಏಳರಲ್ಲಿ ಯಾವುದಾದರೊಂದು ಮನೆಯಲ್ಲಿ ದೊರೆಯಬಹುದಾದ ಏಳು ತುತ್ತು ಆಹಾರವನ್ನು ಮಾತ್ರ ಭುಂಜಿಸುವ ನಿಯಮ ಉಳ್ಳವನಾಗಿದ್ದೆನು.'

ಒಂದು ಸೌಟಿನಷ್ಟೇ ಅನ್ನವನ್ನು ತಿನ್ನುತ್ತಿದ್ದೆ. ಹೀಗೆ ಏಳು ದಿನಗಳವರೆಗೆ ಹೆಚ್ಚಿಸುತ್ತಾ ಹೋಗಿ, ಏಳು ಸೌಟು ಅನ್ನ ತಿಂದು ನಿರ್ವಾಹ ನಡೆಸುತ್ತಿದ್ದೆ. ಒಂದು ದಿನ ಬಿಟ್ಟು ಒಂದು ದಿನ ಉಣ್ಣುತ್ತಿದ್ದೆ. ಎರಡು ದಿನಬಿಟ್ಟು ಒಂದು ದಿನ ಉಣ್ಣುತ್ತಿದ್ದೆ. ಹೀಗೆ ಉಪವಾಸದ ಅವಧಿಯನ್ನು ಬೆಳೆಸುತ್ತಾ ಹೋಗಿ ಏಳು ದಿನಗಳನ್ನು ಇಲ್ಲವೆ ಹದಿನೈದು ದಿನಗಳನ್ನು ಬಿಟ್ಟು ಒಂದು ದಿನ ಉಣ್ಣುತ್ತಿದ್ದೆ. ಗಡ್ಡಮೀಸೆಗಳನ್ನೂ ಕೂದಲುಗಳನ್ನೂ ಕಿತ್ತು ತೆಗೆಯುತ್ತಿದ್ದೆ. ನಿಂತುಕೊಂಡೇ ತಪಸ್ಸನ್ನು ಆಚರಿಸುತ್ತಿದ್ದೆ. ಕಾಲ್ತುದಿಯಮೇಲೆ ಕುಳಿತು ತಪಸ್ಸನಾಚರಿಸುತ್ತಿದ್ದೆ."

ರೂಕ್ಷತೆ: "ಎಲೈ ಸಾರಿಪುತ್ತನೆ! ನನ್ನ ರೂಕ್ಷತೆ ಹೇಗಿತ್ತೆಂಬುದನ್ನು ಹೇಳುವೆ: ಅನೇಕ ವರ್ಷಗಳ ಧೂಳು ನನ್ನ ಮೈಮೇಲೆ ಹೊಲಸಿನ ಪರಿಗಳಾಗಿ ಹೆಪ್ಪುಗಟ್ಟುತ್ತಿತ್ತು. ಅನೇಕ ವರ್ಷಗಳ ಹುಡಿಯಿಂದ ತಿಂದು ವೃಕ್ಷದ ತೊಗಟೆ ಹೊಲಸಾದಂತೆ ನನ್ನ ದೇಹವಾಗಿದ್ದಿತು. ಆದರೆ ಈ ಹುಡಿಯ ಹಳಿಕೆಯನ್ನು ನಾನಾಗಲೀ ಇನ್ನೊಬ್ಬರಾಗಲೀ ಕೈಯಿಂದ ಜಾಡಿಸಬೇಕೆಂದು ಮಾತ್ರ ನನಗೆನ್ನಿಸಲಿಲ್ಲ.—ಹೀಗಿದ್ದಿತು ನನ್ನ ರೂಕ್ಷತೆ."

ಜುಗುಪ್ಸೆ: "ಇನ್ನು ನನ್ನ ಜುಗುಪ್ಸೆ ಹೇಗಿದ್ದಿತೆಂದು ಹೇಳುವೆ: "ನಾನ್ಸು ಹೆಚ್ಚು ಕಾಳಜಿಯಿಂದ ಹೋಗಿಬರುತ್ತಿದ್ದೆ. ನೀರಹನಿಯಮೇಲೆ ಕೂಡ ನನಗೆ ಅತೀವ ದಯೆ ಇದ್ದಿತು. ವಿಷಮ ಪರಿಸ್ಥಿತಿಯಲ್ಲಿ ಸಿಕ್ಕ ಸೂಕ್ಷ್ಮಪ್ರಾಣಿಯ ನಾಶವು ನನ್ನ ಕೈಯಿಂದಾಗಬಾರದೆಂದು ನಾನು ಅತ್ಯಂತ ದಕ್ಷತೆಯನ್ನು ವಹಿಸುತ್ತಿದ್ದೆ. ಹೀಗಿದ್ದಿತು ನನ್ನ ಜುಗುಪ್ಸೆ."

ಶ್ರೀ ಗೌತಮ ಬುದ್ಧನು ಸ್ವಯಂ ಆಚರಿಸಿದೆನೆಂದು ಹೇಳಿರುವ ಈ ಮೇಲ್ಕಂಡ ವ್ರತಾಚರಣೆಯು ನಿರ್ಗ್ರಂಥ ನಗ್ನಯತಿಗಳಲ್ಲಿ ಇಂದಿಗೂ ಆಚರಣೆಯಲ್ಲಿರುವಂತಹುದಾಗಿದೆ. ಆದ್ದರಿಂದ ಶ್ರೀ ಗೌತಮ ಬುದ್ಧನು ಸ್ವಲ್ಪಕಾಲ ನಿರ್ಗ್ರಂಥ ನಗ್ನಯತಿಯ ಆಚರಣೆಯಲ್ಲಿದ್ದು ಅನಂತರ ಅದನ್ನು ಬಿಟ್ಟು ತನ್ನದೇ ಆದ ಮಧ್ಯಮಮಾರ್ಗವನ್ನನುಸರಿಸಿದನೆಂಬುದರಲ್ಲಿ ಸಂಶಯವಿಲ್ಲ, ಈ ಮೇಲ್ಕಂಡ ಹೇಳಿಕೆಯಲ್ಲದೆ ಜೈನ ಆಗಮ ಗ್ರಂಥದಲ್ಲಿಯೂ, ಶ್ರೀ ಗೌತಮ ಬುದ್ಧನು ಸ್ವಲ್ಪಕಾಲ ನಗ್ನಯತಿಯ ವ್ರತಾಚರಣೆ ನಡೆಸಿದ್ದನೆಂಬ ಹೇಳಿಕೆಯಿದೆ. ಶ್ರೀ ದೇವಸೇನಾಚಾರ್ಯ ವಿರಚಿತ 'ದರ್ಶನಸಾರ' ದಲ್ಲಿ ಈ ಮುಂದಿನಂತೆ ಹೇಳಲಾಗಿದೆ:—

---

ಈ ಅರ್ಥವಿವರಣೆಯು ಅಸಂಗತವೆನಿಸುವುದಿಲ್ಲವಾದಲ್ಲಿ ಈ ವಾಕ್ಯವೂ ದಿಗಂಬರ ಜೈನಯತಿಗಳ ಭಿಕ್ಷಾಚರ್ಯೆಯ ನಿಯಮದ ಅಭಿದ್ಯೋತಕವಾಗಿದೆ.

[ಈ ಮೇಲ್ಕಂಡ ನಿರೂಪಣೆಯು ಮಜ್ಝಿಮನಿಕಾಯಮಹಾಸೀಹನಾದ ಸುತ್ತ ೧೨ ರಲ್ಲಿದೆ—ಶ್ರೀ ಧರ್ಮಾನಂದ ಕೋಸಾಂಬಿಯವರ 'ಗೌತಮ ಬುದ್ಧ' ಶ್ರೀ ಆದ್ಯರಂಗಾಚಾರ್ಯರ ಕನ್ನಡಾನುವಾದ ಪು. ಸಂ. ೭೫_೭೭ ಕ್ಕೆ ಋಣಿ.]

ಸಿರಿಪಾಸಣಾಹತಿತ್ಥೇ ಸರಯೂತೀರೇ ಪಲಾಸಣಯರತ್ಥೋ ।
ಪಿಹಿಯಾಸವಸ್ಸಸಿಸ್ಸೋ ಮಹಾಸುದೋ ಬುಡ್ಢಕಿತ್ತಿಮುಣೀ ॥ ೬ ॥

ತಿಮಿಪೂರಣಾಸಣೇಹಿಂ ಅಹಿಗಯಪಬಜ್ಜಾ ಓ ಪರಿಬ್ಭಟ್ಟೋ ।
ರತ್ತಂಬರಂ ಧರಿತ್ತಾ ಪವಟ್ಟಿಯಂ ತೇಣ ಏಯಂತಂ ॥ ೭ ॥

ಅರ್ಥ: "ಶ್ರೀ ಪಾರ್ಶ್ವನಾಥನ ತೀರ್ಥಕಾಲದಲ್ಲಿ ಸರಯೂತೀರದ ಪಲಾಶ ನಗರದಲ್ಲಿದ್ದ ಪಿಹಿತಾಸ್ರವ ಮುನಿಯ ಶಿಷ್ಯನು ಪ್ರಸಿದ್ಧನಾದ ಬುದ್ಧಕೀರ್ತಿ ಎಂಬ ಮುನಿಯು. ಮತ್ಸ್ಯಮಾಂಸಾಹಾರ ಸೇವನೆಯಕಾರಣ ಮುನಿವ್ರತದಿಂದ ಭ್ರಷ್ಟ ನಾದನು. ಕೆಂಪುಬಣ್ಣದ ವಸ್ತ್ರಧಾರಣೆಮಾಡಿದ ಅವನಿಂದ ಏಕಾಂತವಾದ ಮತವು ಸ್ಥಾಪನೆಗೊಂಡಿತು."

ಶ್ರೀ ದೇವಸೇನಾಚಾರ್ಯರ ಈ ಹೇಳಿಕೆ ಮತ್ತು ಈ ಹಿಂದೆ ಉಲ್ಲೇಖಿಸಿರುವ ಬೌದ್ಧಆಗಮಗ್ರಂಥ ಮಜ್ಝಿಮನಿಕಾಯದ ಉಕ್ತಿಗಳಿಂದ, ಶ್ರೀ ಗೌತಮ ಬುದ್ಧನು ತನ್ನ ಸಾಧಕ ಅವಸ್ಥೆಯಲ್ಲಿ ಸ್ವಲ್ಪಕಾಲ ನಗ್ನ ನಿರ್ಗ್ರಂಥ ಯತಿಯಾಗಿದ್ದನೆಂದು ಖಚಿತಗೊಳ್ಳುತ್ತದೆ. ಶ್ರೀ ದೇವಸೇನಾಚಾರ್ಯರ ಹೇಳಿಕೆಯಲ್ಲಿ ಅವಶ್ಯವಾಗಿ ಗಮ ನಿಸಬೇಕಾಗಿರುವ ಮತ್ತೂ ಒಂದು ಅಂಶವಿದೆ. ಶ್ರೀ ಗೌತಮ ಬುದ್ಧನು ಶ್ರೀ ಪಾರ್ಶ್ವ ನಾಥ ತೀರ್ಥಂಕರನ ಧರ್ಮತೀರ್ಥಕಾಲದಲ್ಲಿ ಅಂದರೆ, ಶ್ರೀ ವೀರತೀರ್ಥಂಕರನಿಂದ ಧರ್ಮತೀರ್ಥವು ಪ್ರವರ್ತನಗೊಳ್ಳುವ ಮುನ್ನವೇ ನಿರ್ಗ್ರಂಥ ನಗ್ನಯತಿ ದೀಕ್ಷೆಯನ್ನು ಸ್ವೀಕರಿಸಿದ್ದನೆಂದು ಸ್ಪಷ್ಟವಾಗುತ್ತದೆ. ಇದರಿಂದ ಶ್ರೀ ಪಾರ್ಶ್ವನಾಥ ತೀರ್ಥಂಕರನ ಧರ್ಮತೀರ್ಥಕಾಲದಲ್ಲಿಯೂ ಜೈನಯತಿಗಳು ನಗ್ನವ್ರತಾಚರಣೆಯುಳ್ಳವರಾಗಿದ್ದ ರೆಂದು ವ್ಯಕ್ತಗೊಳ್ಳುವುದಲ್ಲದೆ, ಈ ವ್ರತಾಚರಣೆಯು ಶ್ರೀ ಮಹಾವೀರತೀರ್ಥಂ ಕರನಿಂದ ಪ್ರಚಲಿತವಾಯಿತೆಂಬುದು ಕೇವಲ ಕಲ್ಪನೆಯ ಹೇಳಿಕೆಯಾಗಿದೆಯೆಂದು ಸ್ಪಷ್ಟಗೊಳ್ಳುತ್ತದೆ.

ಶ್ರೀ ವೀರತೀರ್ಥಂಕರನ ಧರ್ಮ ತೀರ್ಥವು ಆರಂಭವಾಗುವ ಮುನ್ನವೇ ಶ್ರೀ ಗೌತಮಬುದ್ಧನು ಗೃಹತ್ಯಾಗಮಾಡಿ ಯತಿದೀಕ್ಷೆಯನ್ನು ಸ್ವೀಕರಿಸಿದ್ದನೆಂದು ತಿಳಿ ದಂತಾಗಿದೆ. ಇಷ್ಟೇ ಅಲ್ಲದೆ ಶ್ರೀ ಗೌತಮಬುದ್ಧನು ಗೃಹತ್ಯಾಗಮಾಡಿ ಸನ್ಯಾಸ ಗ್ರಹಣಮಾಡಿದ ಕನಿಷ್ಟಪಕ್ಷ ಒಂದು ವರ್ಷದ ತರುವಾಯವೇ ಶ್ರೀ ವೀರನಾಥನು ಯತಿದೀಕ್ಷೆಯನ್ನು ಗ್ರಹಣೆಮಾಡಿದನೆಂದೂ ಮತ್ತು ಶ್ರೀ ಗೌತಮಬುದ್ಧನು ಮಹಾ ಬೋಧಿಯನ್ನುಪಡೆದು ಧರ್ಮಪ್ರವರ್ತನೆಗೊಳಿಸಲು ಆರಂಭಿಸಿದ ಸುಮಾರು ಆರು ವರ್ಷಗಳ ತರುವಾಯ, ಶ್ರೀ ವೀರತೀರ್ಥಂಕರನ ಧರ್ಮತೀರ್ಥವು ಆರಂಭಗೊಂಡಿದೆ ಯೆಂದೂ ಹೇಳಲು ಆಧಾರಗಳಿವೆ.

ಬೌದ್ಧ ಆಗಮಗ್ರಂಥಗಳಲ್ಲಿ, ಶ್ರೀ ಗೌತಮಬುದ್ಧನ ಸಮಕಾಲೀನ ಧರ್ಮ ಪ್ರವರ್ತಕರೆಂದು ಗಣನೆಹೊಂದಿರುವ ತೀರ್ಥಂಕರರಲ್ಲಿ ಒಬ್ಬನಾದ ನಿಗಂಠನಾತಪುತ್ತನ

ವಿಷಯದಲ್ಲಿ ವಿಶೇಷವಾಹಿತಿಗಳು ಉಳಿದುಬಂದಿವೆ. ಬೌದ್ಧ ತ್ರಿಪಿಟಕಗ್ರಂಥಗಳಲ್ಲಿ ನಿರ್ದೇಶಿತನಾಗಿರುವ ನಿಗಂಠನಾತಪುತ್ರನು ಮತ್ತಾರೂ ಆಗಿರದೆ ಶ್ರೀ ವೀರತೀರ್ಥಂಕರನೇ ಆಗಿರುವನೆಂಬುದು ಈಗ ನಿರ್ಧಾರಗೊಂಡಿರುವ ಅಂಶವಾಗಿದೆ. ಬೌದ್ಧ ಆಗಮ ಗ್ರಂಥಗಳ ಹೇಳಿಕೆಯಂತೆ ಶ್ರೀ ಗೌತಮಬುದ್ಧನು ಮಗಧದೇಶದ ಅಜಾತಶತ್ರು ರಾಜನ ರಾಜ್ಯಭಾರದ ಎಂಟನೇ ವರ್ಷದಲ್ಲಿ ನಿರ್ವಾಣ ಹೊಂದಿದನು. ತನ್ನನಿರ್ವಾಣ ಸಮಯಕ್ಕೆ ಶ್ರೀ ಗೌತಮಬುದ್ಧನು ಎಂಭತ್ತು ವರ್ಷ ವಯಸ್ಸು ತುಂಬಿದವನಾಗಿದ್ದನು. ಶ್ರೀ ವೀರತೀರ್ಥಂಕರನು, ಅಜಾತಶತ್ರುವಿನ ಆಳ್ವಿಕೆಯು ಆರಂಭವಾದ ಅನಂತರ ಹಾಗೂ ಶ್ರೀ ಗೌತಮಬುದ್ಧನು ನಿರ್ವಾಣಹೊಂದುವಮುನ್ನ, ನಿರ್ವಾಣಹೊಂದಿದನೆಂದು ಹೇಳಲು ಸಾಕಷ್ಟು ಆಧಾರಗಳಿವೆ. ಶ್ರೀ ವೀರತೀರ್ಥಂಕರನ ನಿರ್ವಾಣದಂದೇ ಪಾಲಕ ಅವಂತಿಸುತನು ಅವಂತಿಯಲ್ಲಿ ರಾಜ್ಯಾಭಿಷೇಕ ಹೊಂದಿದನೆಂಬ ಐತಿಹ್ಯವು ಜೈನ ಆಗಮಗ್ರಂಥಗಳಲ್ಲಿ ಪರಂಪರಾಗತವಾಗಿ ಉಳಿದು ಬಂದಿದೆ. ಈ ಅವಂತಿಸುತನ ತಂದೆಯಾದ ಪ್ರದ್ಯೋತ (ಮಹಾಸೇನ) ನು, ಮಗಧದಲ್ಲಿ ಅಜಾತಶತ್ರುವಿನ ಆಳ್ವಿಕೆಯಾರಂಭವಾದ ಸ್ವಲ್ಪಕಾಲದ ಅನಂತರವೂ ಜೀವಿಸಿದ್ದನೆಂದು ಇತರ ಐತಿಹ್ಯಗಳ ಆಧಾರದಿಂದ ತಿಳಿಯಬಹುದಾಗಿದೆ. ಇದರಿಂದ ಶ್ರೀ ವೀರತೀರ್ಥಂಕರನ ನಿರ್ವಾಣವು ಅಜಾತಶತ್ರುವಿನ ಆಳ್ವಿಕೆಯು ಆರಂಭಗೊಂಡ ಅನಂತರವೇ ಆಗಿದೆಯೆಂದು ವ್ಯಕ್ತಗೊಳ್ಳುತ್ತದೆ. ಇದೂ ಅಲ್ಲದೆ ಬೌದ್ಧ ಆಗಮಗ್ರಂಥಗಳ ಆಧಾರದಿಂದಲೂ ಈ ಅಭಿಪ್ರಾಯವು ಪುಷ್ಟಿಗೊಳ್ಳುತ್ತದೆ. ಅಜಾತಶತ್ರುವು ತನ್ನ ತಂದೆಯ (ಬಿಂಬಿಸಾರನ) ಮರಣಕ್ಕೆ ತಾನೇ ಕಾರಣನಾದೆನೆಂದು ಮನಃ ಸ್ವಾಸ್ಥ್ಯಕಳೆದುಕೊಂಡಿರುತ್ತಾನೆ. ಯಾರಾದರೊಬ್ಬ ಮಹಾತ್ಮನ ಸಂದರ್ಶನ ಪಡೆದು ಮನಃಶಾಂತಿಪಡೆಯಲು ಬಯಸುತ್ತಾನೆ. ಈ ಸಂದರ್ಭದಲ್ಲಿ ಅವನ ಅಮಾತ್ಯರು ಪ್ರಸಿದ್ಧರಾದ ಮಹಾತ್ಮರನ್ನು ಹೆಸರಿಸುತ್ತಾರೆ. ಹೀಗೆ ಸೂಚಿತವಾದ ಹೆಸರುಗಳಲ್ಲಿ ನಿಗಂಠನಾತಪುತ್ರನ ಹೆಸರೂ ಒಂದಾಗಿದೆ. ಇದರಿಂದ ಶ್ರೀವೀರತೀರ್ಥಂಕರನ ನಿರ್ವಾಣವು ಅಜಾತಶತ್ರುವಿನ ಸಿಂಹಾಸನಾರೋಹಣಾನಂತರವೇ ಆಗಿದೆಯೆಂದು ಮತ್ತೂ ಖಚಿತಗೊಳ್ಳುತ್ತದೆ. ಹೀಗೆಯೆ ಶ್ರೀ ವೀರತೀರ್ಥಂಕರನು ಶ್ರೀ ಗೌತಮ ಬುದ್ಧನಿಗಿನ್ನ ಮುಂಚಿತವಾಗಿಯೇ ನಿರ್ವಾಣ ಹೊಂದಿದನೆಂಬುದಕ್ಕೂ ಸಾಕಷ್ಟು ಆಧಾರಗಳಿವೆ. ಶ್ರೀ ಗೌತಮ ಬುದ್ಧನ ಪ್ರಮುಖ ಶಿಷ್ಯರಲ್ಲೊಬ್ಬನಾದ ಸಾರಿಪುತ್ರನು ನಿಗಂಠನಾಥನ ನಿಧನ ವಾರ್ತೆಯನ್ನು ವರದಿ ಮಾಡಿದ ಹೇಳಿಕೆಯು ಸಂಗೀತಿ ಸುತ್ತಂತದಲ್ಲಿ ಉಳಿದು ಬಂದಿದೆ. ಈ ಸಾರಿಪುತ್ರನು ಶ್ರೀ ಗೌತಮಬುದ್ಧನಿಗಿನ್ನ ಮುನ್ನವೇ ಸ್ವರ್ಗಸ್ಥನಾದನೆಂಬ ಹೇಳಿಕೆಯೂ ಉಳಿದುಬಂದಿದೆ. ಇದೂ ಅಲ್ಲದೆ, ಶ್ರೀ ಗೌತಮಬುದ್ಧನು ಇನ್ನೂ ಜೀವಿತನಿದ್ದ ಕಾಲದಲ್ಲಿ, ಚುಂದನೆಂಬುವನು ಆನಂದನ ಸಂಗಡ ಶ್ರೀ ವೀರತೀರ್ಥಂಕರನ ನಿಧನ ವಾರ್ತೆಯನ್ನು ಹೇಳಿದನೆಂದು ಪಾಸಾದಿಕಸುತ್ತದಿಂದ ತಿಳಿದುಬರುತ್ತದೆ. ಆದ್ದರಿಂದ ಶ್ರೀ ವೀರತೀರ್ಥಂಕರನ ನಿರ್ವಾಣವು ಅಜಾತಶತ್ರುವಿನ ಸಿಂಹಾಸನಾರೋ

ಹಣ ಕಾಲ ಮತ್ತು ಶ್ರೀ ಗೌತಮಬುದ್ಧನ ಪರಿನಿರ್ವಾಣ ಕಾಲಗಳ ಮಧ್ಯವರ್ತಿ ಕಾಲದಲ್ಲಿ ಆಗಿದೆಯೆಂದು ನಿಶ್ಚಿತವಾಗುತ್ತದೆ. ಶ್ರೀ ಗೌತಮಬುದ್ಧನ ಪರಿನಿರ್ವಾಣದಿಂದ ಒಂದು ಅಥವಾ ಎರಡು ವರ್ಷ ಮುನ್ನ ಶ್ರೀ ವೀರತೀರ್ಥಂಕರನು ನಿರ್ವಾಣ ಹೊಂದಿದನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಶ್ರೀ ಗೌತಮಬುದ್ಧನ ಪರಿನಿರ್ವಾಣದ ಎರಡು ವರ್ಷ ಮುನ್ನ ಶ್ರೀ ವೀರತೀರ್ಥಂಕರನ ಪರಿನಿರ್ವಾಣವಾಗಿದೆಯೆಂಬ ಗಣನೆಯಾನುಕ್ರಮ ಮುಂದೆ ಮಗಧ ರಾಜ್ಯದ ರಾಜಸಂತತಿಯ ಆಳ್ವಿಕೆಯ ಕಾಲ ನಿರ್ಣಯವು ಕ್ರಮಬದ್ಧವಾಗುವುದು. ಆದ್ದರಿಂದ ಶ್ರೀ ಗೌತಮಬುದ್ಧ ಮತ್ತು ಶ್ರೀ ವೀರನಾಥರ ಪರಿನಿರ್ವಾಣ ಸಮಯಗಳ ಅಂತರವನ್ನು ಎರಡು ವರ್ಷಗಳೆಂದು ಗ್ರಹಿಸುವುದು ಅಸಂಬದ್ಧವೆನಿಸುವುದಿಲ್ಲ. ಇದರಂತೆ ಶ್ರೀ ಗೌತಮಬುದ್ಧನು ೭೮ ನೇ ವಯಸ್ಸಿನಲ್ಲಿರುವಾಗ ಶ್ರೀ ವೀರತೀರ್ಥಂಕರನು ತನ್ನ ಎಪ್ಪತ್ತೆರಡನೇ ವಯಸ್ಸಿನಲ್ಲಿ ನಿರ್ವಾಣ ಹೊಂದಿದ್ದಾನೆ. ಈ ಗಣನೆಯಂತೆ ಶ್ರೀ ವೀರತೀರ್ಥಂಕರನಿಗಿಂತ ಶ್ರೀ ಗೌತಮ ಬುದ್ಧನು ಕನಿಷ್ಠಪಕ್ಷ ಆರು ವರ್ಷಗಳ ವಯೋಮಾನದಿಂದ ಹಿರಿಯನಾಗಿದ್ದನು. ಶ್ರೀ ಗೌತಮಬುದ್ಧನನ್ನು ಮಗಧ ರಾಜನಾದ ಬಿಂಬಿಸಾರನು ಸಂದರ್ಶನಪಡೆದನೆಂದೂ, ಈ ಸಮಯಕ್ಕೆ ಶ್ರೀ ಗೌತಮಬುದ್ಧನು ೩೫ ವರ್ಷ ವಯಸ್ಸಿನವನಾಗಿದ್ದು ಬಿಂಬಿಸಾರನು ೩೦ ವರ್ಷ ವಯಸ್ಸಿನವನಾಗಿದ್ದನೆಂದು ಬೌದ್ಧ ಸಂಪ್ರದಾಯದ ಇತವೃತ್ತಿಗಳಲ್ಲಿ ಹೇಳಲಾಗಿದೆ. ಈ ಸಮಯಕ್ಕೆ ಶ್ರೀ ಗೌತಮಬುದ್ಧನು ಆದಾಗಲೇ ಬೋಧಿಸಂಪನ್ನನಾಗಿದ್ದು ತನ್ನ ಧರ್ಮ ಪ್ರಚಾರಕಾರ್ಯದಲ್ಲಿದ್ದನೆ? ಅಥವಾ ಸಾಧಕಾವಸ್ಥೆಯಲ್ಲಿದ್ದನೆ? ಎಂಬುದನ್ನು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲವಾಗಿದೆ. ಶ್ರೀ ಗೌತಮಬುದ್ಧನು ಶ್ರೀ ವೀರನಾಥನಿಗಿಂತ ವಯೋಮಾನದಲ್ಲಿ ೬ ವರ್ಷ ಹಿರಿಯನಾಗಿದ್ದನೆಂದು ಈ ಹಿಂದೆ ಹೇಳಿದೆ. ಇದರಂತೆ ಶ್ರೀ ಗೌತಮನಿಗೆ ೩೫ ವರ್ಷ ವಯಸ್ಸಾಗಿದ್ದಾಗ ಶ್ರೀ ವೀರನಾಥನು ೨೯ ವರ್ಷ ವಯೋಮಾನದವನಾಗಿದ್ದನು. ಶ್ರೀ ವೀರನಾಥನು ತನ್ನ ೩೦ ನೇ ವಯಸ್ಸಿನಲ್ಲಿ ಯತಿ ದೀಕ್ಷೆ ಗ್ರಹಣಮಾಡಿದನಾದುದರಿಂದ, ಶ್ರೀ ಗೌತಮಬುದ್ಧನು ಯತಿ ದೀಕ್ಷೆಗ್ರಹಣಮಾಡಿದ ಸಮಯದಲ್ಲಿನ್ನೂ ಶ್ರೀ ವೀರನಾಥನು ಗೃಹತ್ಯಾಗಮಾಡಿ ಯತಿಯಾಗಿರಲಿಲ್ಲೆಂದು ಖಚಿತಗೊಳ್ಳುತ್ತದೆ. ಶ್ರೀ ಗೌತಮಬುದ್ಧನು ತನ್ನ ಏಳು ವರ್ಷಗಳ ತಪಸ್ಸಾಧನೆಯ ಅನಂತರ ಮಹಾಬೋಧಿಪಡೆದು ಧರ್ಮ ಪ್ರವರ್ತಕನಾದನೆಂದು ಬೌದ್ಧ ಆಗಮ ಗ್ರಂಥಗಳಿಂದ ತಿಳಿದುಬರುತ್ತದೆ. ಈ ಸಮಯಕ್ಕೆ ಶ್ರೀ ಗೌತಮಬುದ್ಧನು ನಲವತ್ತೆರಡು ವರ್ಷ ವಯೋಮಾನದವನಾಗಿದ್ದನು. ಇದರಂತೆ ಶ್ರೀ ಗೌತಮಬುದ್ಧನ ಧರ್ಮ ಪ್ರವರ್ತನೆಯು ಆರಂಭಗೊಂಡ ಕಾಲದಲ್ಲಿ ಶ್ರೀ ವೀರನಾಥನಿನ್ನೂ ತನ್ನ ಆರನೆಯ ವರ್ಷದ ತಪಶ್ಚರ್ಯೆಯಲ್ಲಿದ್ದನು. ಶ್ರೀ ವೀರನಾಥನು ತನ್ನ ೧೨ ವರ್ಷಗಳ ತಪಶ್ಚರ್ಯೆಯ ಅನಂತರ ಧರ್ಮತೀರ್ಥಪ್ರವರ್ತಕನಾದನು. ಆದ್ದರಿಂದ ಶ್ರೀ ವೀರನಾಥನ ಧರ್ಮತೀರ್ಥಪ್ರವರ್ತನೆಯಾಗುವ ಸಮಯಕ್ಕೆ ಕನಿಷ್ಠಪಕ್ಷ ಆರು ವರ್ಷ

ಮುನ್ನವೇ ಶ್ರೀ ಗೌತಮಬುದ್ಧನಿಂದ ಧರ್ಮತೀರ್ಥವು ಪ್ರವರ್ತನೆಗೊಂಡಿದ್ದಿತೆಂದು ಸ್ಪಷ್ಟಗೊಳ್ಳುತ್ತದೆ. ಈ ಆರು ವರ್ಷಗಳ ಕಾಲದಲ್ಲಿ ಬೌದ್ಧ ಧರ್ಮವು ಬಹು ಪ್ರಭಾವಶಾಲಿಯಾಗಿ ಪರಿವೃದ್ಧಿಗೊಂಡಿತು. ಶ್ರೀ ಗೌತಮಬುದ್ಧನ ಧರ್ಮಪ್ರವರ್ತನೆಯಕಾಲದಲ್ಲಿ ನಿಗಂಠನಾತಪುತ್ತನಲ್ಲದೆ ಇನ್ನೂ ಬೇರೆ ಐವರು ಹೆಸರಾಂತ ತೀರ್ಥಕರರು ತಮ್ಮ ತಮ್ಮ ಧರ್ಮ ಮಾರ್ಗವನ್ನು ಪ್ರಚಾರಗೊಳಿಸುತ್ತಿದ್ದರೆಂದು ಬೌದ್ಧ ಆಗಮ ಗ್ರಂಥಗಳಿಂದ ತಿಳಿದುಬರುತ್ತದೆ ಶ್ರೀ ವೀರತೀರ್ಥಂಕರನಿಂದ ಧರ್ಮ ಪ್ರವರ್ತನೆಯಾಗುವ ಮುನ್ನ ಶ್ರೀ ಗೌತಮಬುದ್ಧನು ಮಗಧ, ಅಂಗ, ಕೋಸಲ, ಕಾಶಿ ವಜ್ಜಿಯೇ ಮೊದಲಾದ ಪ್ರಾಂತಗಳಲ್ಲಿ ವಿಹಾರನಡೆಸಿ ಧರ್ಮ ಪ್ರಚಾರಮಾಡಿದ್ದನು. ಮಗಧದ ಬಿಂಬಿಸಾರ ಮತ್ತು ಕೋಸಲದ ಪ್ರಸೇನದಿಯಂತಹ ಪ್ರಮುಖ ರಾಜರು ಶ್ರೀ ಗೌತಮಬುದ್ಧನ ಉಪಾಸಕರಾಗಿದ್ದರು. ಇದರಿಂದ ಈ ಸಮಯದಲ್ಲಿ ಬೌದ್ಧ ಧರ್ಮವು ಹೇಗೆ ಪರಿವೃದ್ಧಿ ಹೊಂದಿತೆಂಬುದನ್ನು ಊಹಿಸಬಹುದು.

ಶ್ರೀ ಗೌತಮಬುದ್ಧನಿಂದ ಧರ್ಮಬೋಧೆಯಾಗುತ್ತಿದ್ದ ಕಾಲದಲ್ಲಿ, ಶ್ರೀ ಪೂರಣಕಾಸ್ಸಪ, ಶ್ರೀ ಮಕ್ಖಲಿಗೋಸಾಲ, ಶ್ರೀ ಅಜಿತಕೌಸಕಂಬಲ ಶ್ರೀ ಪಕುಧಕಚ್ಚಾಯನ ಮತ್ತು ಶ್ರೀ ಸಂಜಯಬೇಲಟ್ಠಪುತ್ರರೆಂಬ ಇತರ ಐವರು ಧರ್ಮಬೋಧಕರು ತಮ್ಮತಮ್ಮ ಧರ್ಮಮಾರ್ಗಗಳನ್ನು ಬೋಧಿಸುತ್ತಿದ್ದರು. ಶ್ರೀ ಪೂರಣ ಮತ್ತು ಶ್ರೀ ಮಕ್ಖಲಿಗೋಸಾಲರು ನಿರ್ಗ್ರಂಥಯತಿಗಳಂತೆ ನಗ್ನವ್ರತಾಚರಣೆಯುಳ್ಳವರಾಗಿದ್ದರೆಂದು ಬೌದ್ಧ ಮತ್ತು ಜೈನ ಆಗಮಗ್ರಂಥಗಳಿಂದ ತಿಳಿದುಬರುತ್ತದೆ. ಶ್ರೀ ಮಕ್ಖಲಿಗೋಸಾಲನಿಂದ ಪ್ರವರ್ತನೆಗೊಂಡ 'ಆಜೀವಕ' ಧರ್ಮಪಂಥವು ಅಶೋಕ ಸಾಮ್ರಾಟನ ಕಾಲದಲ್ಲಿಯೂ ಪ್ರಭಾವಶಾಲಿಯಾಗಿದ್ದಿತ್ತೆಂದು ಈ ಸಾಮ್ರಾಟನ ಶಿಲಾಶಾಸನಗಳಿಂದ ಸೂಚಿತವಾಗುವುದು. ತೇಜಸ್ವಿಯೂ, ಪ್ರಭಾವಶಾಲಿಯೂ ಆದ ಶ್ರೀ ಗೌತಮಬುದ್ಧನ, ಹಾಗೂ ಮೇಲ್ಕಂಡ ಇತರ ಐವರು ಧರ್ಮಬೋಧಕರ ಧರ್ಮಪ್ರಸಾರದೆದುರಿನಲ್ಲಿ ನಿರ್ಗ್ರಂಥಧರ್ಮವು ತನ್ನ ಪೂರ್ವದ ವರ್ಚಸ್ಸನ್ನು ಕಳೆದುಕೊಂಡು ತೀವ್ರತರಗ್ಲಾನಿಗೊಳಗಾಗಿದ್ದಿತು. ಹೀಗೆ ನಿರ್ಗ್ರಂಥಧರ್ಮವು ತೀವ್ರತರಗ್ಲಾನಿಗೊಳಗಾಗಿದ್ದ ಸಮಯದಲ್ಲಿ ಶ್ರೀ ವೀರತೀರ್ಥಂಕರನಿಂದ ಧರ್ಮತೀರ್ಥಪ್ರವರ್ತನೆಯಾಯಿತು. ಇದರ ಪರಿಣಾಮವಾಗಿ ನಿರ್ಗ್ರಂಥಧರ್ಮವು ಪುನಶ್ಚೇತನಗೊಂಡು ಅಭಿವೃದ್ಧಿಹೊಂದಿತು.

## ಶ್ರೀ ವೀರತೀರ್ಥಂಕರನ ನಿರ್ವಾಣಸಮಯ

ಭಾರತದೇಶದ ಚರಿತ್ರೆಯಲ್ಲಿ ಮಗಧರಾಜ್ಯದ ಪ್ರಾಚೀನ ಇತಿಹಾಸವು ಒಂದು ಪ್ರಮುಖ ಅಧ್ಯಾಯವಾಗಿದೆ. ಮಗಧರಾಜ್ಯದಲ್ಲಾಳಿದ ಬಿಂಬಸಾರನೇ ಮೊದಲಾದ ರಾಜರ ಜೀವಿತಸಮಯಗಳನ್ನು ನಿರ್ಣಯಿಸುವಲ್ಲಿ ಶ್ರೀ ವೀರತೀರ್ಥಂಕರನ ಮತ್ತು

ಶ್ರೀ ಗೌತಮಬುದ್ಧನ ನಿರ್ವಾಣಸಮಯಗಳು ವಿಶೇಷ ಉಪಯುಕ್ತವಾದ ಅಂಶಗಳಾಗಿವೆ. ಆದರೆ ಈ ನಿರ್ವಾಣಸಮಯಗಳ ವಿಷಯದಲ್ಲಿಯೂ ಚರಿತ್ರಕಾರರಲ್ಲಿ ಒಮ್ಮತವಿಲ್ಲದಿರುವುದು ಕಂಡುಬರುತ್ತದೆ. ಶ್ರೀ ವೀರತೀರ್ಥಂಕರನ ನಿರ್ವಾಣಸಮಯ ವಿಷಯದಲ್ಲಿ ಪ್ರಧಾನವಾಗಿ ಈ ಮುಂದಿನ ನಾಲ್ಕು ಅಭಿಪ್ರಾಯಭೇದಗಳಿವೆ.

೧) ಕ್ರಿ. ಪೂ. ೬೬೩—೬೬೪

೨) ಕ್ರಿ. ಪೂ. ೫೪೩—೫೪೪—(೫೪೫)

೩) ಕ್ರಿ. ಪೂ. ೫೨೭—೫೨೮

೪) ಕ್ರಿ. ಪೂ. ೪೮೬—೪೮೮

ಶ್ರೀ ವೀರತೀರ್ಥಂಕರನ ನಿರ್ವಾಣಸಮಯದ ವಿಚಾರವಾಗಿ ಮೇಲ್ಕಂಡ ಭಿನ್ನಾಭಿಪ್ರಾಯಗಳೇರ್ಪಡಲು ಸ್ಥೂಲರೀತಿಯಾಗಿ ಈ ಮುಂದಿನ ಅಂಶಗಳು ಕಾರಣಗಳಾಗಿವೆ :

೧) ಶ್ರೀ ವೀರನಿರ್ವಾಣಸಮಯದಿಂದ ೬೦೫ ವರ್ಷ ೫ ತಿಂಗಳುಗಳ ಸಮಯದಲ್ಲಿ ಒಬ್ಬ ಶಕರಾಜನಾದನೆಂದು ತಿಲೋಯಪಣ್ಣತ್ತಿಯೇ ಮೊದಲಾದ ಕೃತಿಗಳಲ್ಲಿ ಹೇಳಲಾಗಿದೆ. ಮುಂದೆ ಕ್ರಿ. ಶ. ಸುಮಾರು ೧೧ ನೇ ಶತಮಾನದಲ್ಲಿ ರಚಿತವಾಗಿರುವ ತ್ರಿಲೋಕಸಾರದ ಟೀಕೆಯಲ್ಲಿ ಈ ಶಕರಾಜನನ್ನು ವಿಕ್ರಮಾಂಕನೆಂದು ಹೆಸರಿಸಿದೆ. ಇದರಿಂದ ಕ್ರಿ. ಪೂ. ೫೭-೮ ರಲ್ಲಿ ಪ್ರಾರಂಭವಾದ ವಿಕ್ರಮಶಕೆಯ ಸಮಯಕ್ಕೆ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿ ೬೦೫ ವರ್ಷ ೫ ತಿಂಗಳು ಗತಿಸಿದ್ದುವೆಂದು ಅಭಿಪ್ರಾಯವೇರ್ಪಡಲು ಅವಕಾಶವಾಯಿತು. ಈ ಅಭಿಪ್ರಾಯಕ್ಕನುಗುಣವಾಗಿ ಶ್ರೀ ವೀರತೀರ್ಥಂಕರನು, ಕ್ರಿ. ಪೂ. (೫೭+೬೦೬ = ) ೬೬೩ ರಲ್ಲಿ ನಿರ್ವಾಣಹೊಂದಿರುವನೆಂಬ ವಾದವು ಮಂಡಿತವಾಗಿದೆ.

೨) ಶ್ರೀ ಗೌತಮಬುದ್ಧನು ಕ್ರಿ. ಪೂ. ೫೪೩ ರಲ್ಲಿ ನಿರ್ವಾಣ ಹೊಂದಿರುವನೆಂಬ ದಾಕ್ಷಿಣಾತ್ಯ ಬೌದ್ಧ ಮತದ ಸಂಪ್ರದಾಯದಾಧಾರದಿಂದ ಶ್ರೀ ವೀರತೀರ್ಥಂಕರನು ಕ್ರಿ. ಪೂ. ೫೪೪-೫ ರಲ್ಲಿ ನಿರ್ವಾಣ ಹೊಂದಿರಬೇಕೆಂಬ ವಾದವು ಆರೂಢವಾಗಿದೆ.

೩) ಶ್ವೇತಾಂಬರ ಜೈನ ಆಮ್ನಾಯಾನುಸಾರವಾಗಿ ಶ್ರೀ ವೀರತೀರ್ಥಂಕರನ ನಿರ್ವಾಣಾನಂತರ ೪೭೦ ನೇ ವರ್ಷದಲ್ಲಿ ವಿಕ್ರಮನು ಉಜ್ಜಯಿನಿಯಲ್ಲಿ ರಾಜ್ಯಾಭಿಷಿಕ್ತನಾದನೆಂದೂ, ಇವನ ಈ ರಾಜ್ಯಭಾರಾರಂಭ ಸಮಯದಿಂದ ವಿಕ್ರಮ ಶಕೆಯು ಪ್ರವರ್ತಿತವಾಯಿತೆಂದೂ ಗಣನೆಮಾಡಲಾಗಿದೆ. ಈ ವಿಕ್ರಮ ಶಕೆಯು ಕ್ರಿ. ಪೂ. ೫೭ ರಲ್ಲಿ ಪ್ರವರ್ತಿತವಾಯಿತೆಂಬ ಪರಿಗಣನೆಯಂತೆ ಶ್ರೀ ವೀರನಿರ್ವಾಣವು ಕ್ರಿ. ಪೂ. (೫೭+೪೭೦ = )೫೨೭ ರಲ್ಲಾಗಿದೆಯೆಂದು ನಿರ್ಣಯಿಸಲಾಗಿದೆ.

೪) ಶ್ರೀ ಗೌತಮಬುದ್ಧನ ನಿರ್ವಾಣಪಶ್ಚಾತ್ ೨೧೭-೮ ರಲ್ಲಿ ಮೌರ್ಯ ಅಶೋಕ ಸಾಮ್ರಾಟನು ಪಾಟಲೀಪುತ್ರನಗರದಲ್ಲಿ ರಾಜ್ಯಾಭಿಷೇಕ ಹೊಂದಿದನೆಂದು ಲಂಕಾದ್ವೀಪದಲ್ಲಿ ರಚಿತವಾಗಿರುವ 'ದೀಪವಂಸೋ' ಮತ್ತು 'ಮಹಾವಂಸೋ' ಎಂಬ ಕೃತಿಗಳಲ್ಲಿ ಹೇಳಿದೆಯಾದುದರಿಂದ ಮತ್ತು ಅಶೋಕ ಸಾಮ್ರಾಟನ ಶಾಸನ ಹಾಗೂ ಇತರ ಆಧಾರಗಳಿಂದ ಈ ಸಾಮ್ರಾಟನು ಕ್ರಿ. ಪೂ. ೨೬೯-೭೦ ರಲ್ಲಿ ರಾಜ್ಯಾಭಿಷಿಕ್ತನಾಗಿರುವನೆಂದು ಸೂಚಿತವಾಗುವುದಾದ ಕಾರಣ, ಶ್ರೀ ಗೌತಮಬುದ್ಧನು (ಕ್ರಿ. ಪೂ. ೨೬೯+೨೧೭=) ೪೮೬ ರಲ್ಲಿ ನಿರ್ವಾಣಹೊಂದಿರುವನೆಂಬ ವಾದವು ಮಂಡಿತವಾಗಿದ್ದು, ಈ ವಾದದನುಸಾರವಾಗಿ ಶ್ರೀ ವೀರತೀರ್ಥಂಕರನು ಕ್ರಿ. ಪೂ. ೪೮೮ ರಲ್ಲಿ ನಿರ್ವಾಣಹೊಂದಿದನೆಂದು ಅಭಿಪ್ರಾಯಪಡಲಾಗಿದೆ.

ಈ ಮೇಲ್ಕಂಡ ಅಂಶಗಳಿಂದ ಶ್ರೀ ವೀರತೀರ್ಥಂಕರನ ನಿರ್ವಾಣಸಮಯದ ವಿಷಯವು ಸಮಸ್ಯೆಯಾಗಿ ಪರಿಣಮಿಸಿದೆಯೆಂಬುದು ಸ್ಪಷ್ಟವಿದೆ. ಇಷ್ಟಲ್ಲದೆ ಶ್ರೀ ವೀರತೀರ್ಥಂಕರ ಮತ್ತು ಶ್ರೀ ಗೌತಮಬುದ್ಧರ ಸಮಕಾಲೀನ ರಾಜರಲ್ಲಿ ಪ್ರಮುಖರಾದ ಪ್ರದ್ಯೋತ, ಶ್ರೇಣಿಕಬಿಂಬಸಾರರೇ ಮೊದಲಾದ ರಾಜರ ಜೀವಿತಸಮಯ ಹಾಗೂ ಅವಂತಿ ಮತ್ತು ಮಗಧರಾಜ್ಯಗಳ ರಾಜಸಂತತಿಯ ಅನುಕ್ರಮ ರಾಜ್ಯಭಾರ ಕಾಲಗಣನೆಗಳೇ ಮೊದಲಾದ ಐತಿಹಾಸಿಕಾಂಶಗಳು ನಿರ್ವಾಣಸಮಯದ ಪ್ರಶ್ನೆಯೊಡನೆ ಸಂಕಲಿತವಾಗಿರುವುದರಿಂದ ಸಮಸ್ಯೆಯು ಜಟಿಲ ರೂಪತಳೆದಿದೆ. ಈ ನಿರ್ವಾಣ ಸಮಯದ ಸಮಸ್ಯೆಯು ಅವಂತಿ ಮತ್ತು ಮಗಧರಾಜಸಂತತಿಯ ಅನುಕ್ರಮ ರಾಜ್ಯಭಾರ ಕಾಲಮಾನವು ನಿಶ್ಚಿತವಾದಲ್ಲದೆ ಬಗೆ ಹರಿಯುವುದಿಲ್ಲ. ಆದ್ದರಿಂದ ಈ ರಾಜಸಂತತಿಗಳ ಇತಿಹಾಸ ವಿಷಯವನ್ನು ಕೂಲಂಕಷವಾಗಿ ಪರಾಮರ್ಶಿಸಬೇಕಾದುದು ಅನಿವಾರ್ಯವಾಗಿದೆ.

ಅವಂತಿ ಮತ್ತು ಮಗಧರಾಜ್ಯಗಳ ಪ್ರಾಚೀನಕಾಲದ ರಾಜಸಂತತಿಯ ಇತಿಹಾಸಪುನರ್ರಚನೆಗೆ ಪ್ರಧಾನ ಆಧಾರಗಳೆನಿಸಿರುವ ವೈದಿಕ, ಬೌದ್ಧ ಮತ್ತು ಜೈನ ಮತ ಸಂಪ್ರದಾಯಗಳ ಸಾಹಿತ್ಯಗಳಲ್ಲಿ ಐತಿಹಾಸಿಕ ವಿಷಯವು ಹೇಗೆ ನಿರೂಪಿತವಾಗಿ ಉಳಿದುಬಂದಿದೆಯೆಂಬುದು ಈ ಸಂದರ್ಭದಲ್ಲಿ ಮನವರಿಕೆಯಾಗಬೇಕಾದ ಅವಶ್ಯಕತೆಯಿದೆ.

**ವೈದಿಕಮತ ಸಂಪ್ರದಾಯದ ಪುರಾಣಗಳು**:–ವೈ. ಮ. ಸಂ. ಪುರಾಣಗಳಲ್ಲಿ ಅಷ್ಟಾದಶ (೧೮) ಪುರಾಣಗಳು ಪ್ರಧಾನವಾದುವು. ಸಾಧಾರಣವಾಗಿ ಇವೆಲ್ಲವೂ ಮಹರ್ಷಿವ್ಯಾಸರಿಂದ ರಚಿತವಾಗಿವೆಯೆಂದು ಮತ್ತು ನೈಮಿಷಾರಣ್ಯದಲ್ಲಿ ನಡೆದ ದೀರ್ಘಕಾಲಿಕಯಜ್ಞದ ಸಮಯದಲ್ಲಿ ಶ್ರೋತೃಗಳ ಕೋರಿಕೆಯ ಮೇರೆಗೆ ಸೂತಪುರಾಣಿಕರು ಈ ಪುರಾಣಗಳ ಶ್ರವಣಮಾಡಿಸಿದುದಾಗಿಯೂ ಪುರಾಣೋಕ್ತಿಯಿಂದ ವ್ಯಕ್ತವಾಗುವುದು. ಈ ಪುರಾಣಗಳ ವಂಶಾನುಚರಿತಭಾಗವು ಭಾರತ

ದೇಶದ ಪ್ರಸಿದ್ಧ ರಾಜಮನೆತನಗಳ ಇತಿಹಾಸ ನಿರೂಪಣೆಗೆ ಮೀಸಲಾದುದು. ಪ್ರಸಿದ್ಧ ವಾದ ಈ ಅಷ್ಟಾದಶಪುರಾಣಗಳಲ್ಲಿ, ಇತಿಹಾಸ ನಿರೂಪಣೆಯ ದೃಷ್ಟಿಯಿಂದ ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡಪುರಾಣಗಳು ಮುಖ್ಯವಾದುವು. ಮಗಧರಾಜ್ಯದ ಇತಿವೃತ್ತನಿರೂಪಣೆಯಲ್ಲಿ ಮಹಾಭಾರತಯುದ್ಧಸಮಯಾನಂತರ, ಈ ರಾಜ್ಯದ, ಪ್ರಭುತ್ವ ಹೊಂದಿದ ರಾಜವಂಶಗಳು, ಪ್ರತಿಯೊಬ್ಬ ರಾಜನ ಹೆಸರು ಮತ್ತು ಪ್ರತಿ ಯೊಂದು ರಾಜವಂಶದ ಒಟ್ಟು ರಾಜ್ಯಭಾರ ಕಾಲಾವಧಿಗಳನ್ನು ಅನುಕ್ರಮರೀತಿ ಯಿಂದ ಏಳು ಪುರಾಣಗಳಲ್ಲಿ ಹೇಳಲಾಗಿದೆಯಾದರೆ, ಮೇಲ್ಕಂಡ ಮೂರು ಪುರಾಣ ಗಳಲ್ಲಿ ಅನುಕ್ರಮರೀತಿಯಿಂದ ಪ್ರತಿಯೊಬ್ಬ ರಾಜನ ರಾಜ್ಯಭಾರಕಾಲಾವಧಿಗಳನ್ನೂ ನಿರ್ದೇಶಿಸಲಾಗಿದೆ. ಹೀಗೆ ಪ್ರಾಚೀನಕಾಲದ ಮಗಧರಾಜಸಂತತಿಯ ಅನು ಕ್ರಮವನ್ನು ತಿಳಿಯಲು ಈ ಪುರಾಣಗಳಲ್ಲಿ ಉಳಿದುಬಂದಿರುವ ಇತಿವೃತ್ತ ನಿರೂ ಪಣೆಯು ವಿಶೇಷ ಸಹಕಾರಿಯಾಗಿದೆಯೆಂದು ಹೇಳಿದಲ್ಲಿ ಅತ್ಯುಕ್ತಿಎನಿಸುವುದಿಲ್ಲ. ಆದರೆ ಇವುಗಳಲ್ಲಿ ಉಳಿದುಬಂದಿರುವ ಇತಿವೃತ್ತನಿರೂಪಣೆಯಲ್ಲಿ ಅನೇಕರೀತಿಯ ನ್ಯೂನಾತಿರೇಕದ ಲೋಪದೋಷಗಳು ಅಂತರ್ಗತವಾಗಿವೆಯಾದುದರಿಂದ ವಿಷಯ ಗ್ರಹಣೆಯಲ್ಲಿ ಸಂದಿಗ್ಧತೆಯುಂಟಾಗುವುದು. ಉದಾಹರಣೆಯಾಗಿ: ಭಾಸಕವಿಯ ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ನಾಟಕಗಳು, ಇತರ ಕಥೆಗಳು ಹಾಗೂ ಬೌದ್ಧ ಮತ್ತು ಜೈನ ಆಮ್ನಾಯಗಳ ಕೃತಿಗಳಿಂದ ಪ್ರದ್ಯೋತ. ಪಾಲಕರೇ ಮೊದಲಾದವರು ಆವಂತೀರಾಜರೆಂದು ನಿರ್ದೇಶಿತರಾಗಿದ್ದಾರೆ. ಆದರೆ ವೈ. ಮ. ಸಂ. ಪುರಾಣಗಳಲ್ಲಿ ಈ ಅವಂತಿರಾಜರ ಹೆಸರುಗಳು ಮಗಧರಾಜಸಂತತಿಯ ಹೆಸರುಗಳಾಗಿ ನಿರ್ದೇಶಿತವಾಗಿವೆ. ಈ ಪುರಾಣಗಳಲ್ಲಿ ಉಕ್ತವಾಗಿರುವ ಯಾವು ದಾದರೊಂದು ರಾಜವಂಶದ ಒಟ್ಟು ರಾಜ್ಯಭಾರಕಾಲದೊಡನೆ, ಆ ವಂಶದ ಪ್ರತ್ಯೇಕ ರಾಜರ ರಾಜ್ಯಭಾರ ಕಾಲಗಳ ಮೊತ್ತವು ಸಮತೋಲನ ಹೊಂದುವುದಿಲ್ಲ. ಇಷ್ಟ ಲ್ಲದೆ ರಾಜಸಂತತಿಯ ಅನುಕ್ರಮ ಹೆಸರುಗಳು, ರಾಜ್ಯಭಾರಕಾಲಮಾನಗಳೇ ಮುಂತಾದ ವಿಷಯವಾಗಿ ಅನೇಕ ಸಂದರ್ಭಗಳಲ್ಲಿ ಒಂದು ಪುರಾಣದ ಹೇಳಿಕೆಯೊಡನೆ ಮತ್ತೊಂದು ಪುರಾಣದ ಹೇಳಿಕೆಯು ತಾಳೆಗೂಡುವುದಿಲ್ಲ. ಈ ಲೋಪದೋಷಗಳ ಕಾರಣದಿಂದ ಈ ಪುರಾಣಗಳಲ್ಲಿ ನಿರೂಪಿತವಾಗಿರುವ ಐತಿಹಾಸಿಕ ವಿಷಯದ ತಥ್ಯವು ವಿವಾದಾಸ್ಪದವಾಗಿ ಉಳಿಯುವಂತಾಗಿದೆ. ಆದರೆ ಇಂತಹ ಸಂದರ್ಭಗಳಲ್ಲಿ ಇತರ ಸಂಪ್ರದಾಯಗಳ ಐತಿಹಾಸಿಕ ಸಾಹಿತ್ಯಗಳ ನೆರವಿನಿಂದ ತಥ್ಯಾತಥ್ಯವನ್ನು ನಿರ್ಣ ಯಿಸಲವಕಾಶವಿದೆ.

ಮೇಲ್ಕಂಡ ಪುರಾಣಗಳಲ್ಲದೆ ಪ್ರಾಚೀನಕಾಲದ ಕವಿಗಳಿಂದ ಐತಿಹಾಸಿಕವಿಷಯ ವನ್ನು ವಸ್ತುವಾಗಿಸಿ ರಚಿಸಲಾಗಿರುವ ನಾಟಕ, ಕಥೆ ಇವೇ ಮೊದಲಾದ ಕೃತಿಗಳು ಐತಿಹಾಸಿಕ ವಿಷಯದ ತಥ್ಯಾತಥ್ಯವನ್ನು ವಿವೇಚಿಸಲು ಸಹಕಾರಿಯಾಗಿವೆ.

**ಬೌದ್ಧಮತದಸಂಪ್ರದಾಯದ ಕೃತಿಗಳು :** ಬೌದ್ಧ ಆಮ್ನಾಯದ ಆಗಮ ಗ್ರಂಥಗಳಲ್ಲಿ ಶ್ರೀ ಗೌತಮಬುದ್ಧನ ಸಮಕಾಲೀನರಾಜರ ಮತ್ತು ಮಗಧರಾಜ್ಯದ ರಾಜ್ಯಸಂತತಿಗೆ ಸಂಬಂಧಿಸಿದ ಅನೇಕ ಐತಿಹಾಸಿಕಾಂಶಗಳು ಉಳಿದುಬಂದಿವೆ. ಮೌರ್ಯ ಅಶೋಕಸಾಮ್ರಾಟ್ರನ ಕಾಲದಲ್ಲಿ ಬೌದ್ಧಮತವು ಲಂಕಾದ್ವೀಪದಲ್ಲಿ ಪ್ರಸಾರಗೊಂಡಿತಾಗಿ ಈ ಮತದ ಆಗಮಗ್ರಂಥಗಳು ಅಲ್ಲಿ ಸುರಕ್ಷಿತವಾಗಿ ಉಳಿದು ಬಂದುವು. ಈ ಆಗಮಗ್ರಂಥಗಳ ಮತ್ತು ಇತರ ಕಥಾಯತ್ತ ಐತಿಹಾಸಿಕಾಂಶ ಗಳ ಆಧಾರದಿಂದ ಲಂಕಾದ್ವೀಪದ ಚರಿತ್ರೆಯನ್ನು ನಿರೂಪಿಸುವ ಕೃತಿಗಳು ರಚಿತ ವಾದವು. ಇಂತಹ ಕೃತಿಗಳಲ್ಲಿ 'ದೀಪವಂಸೋ' ಮತ್ತು 'ಮಹಾವಂಸೋ' ಎಂಬ ಕೃತಿಗಳು ಪ್ರಾಚೀನವಾದುವು ಮತ್ತು ಪ್ರಮುಖವಾದುವು. ಈ ಕೃತಿಗಳಲ್ಲಿ ಶ್ರೀ ಗೌತಮಬುದ್ಧನ ಸಮಕಾಲೀನನಾಗಿದ್ದ ಬಿಂಬಿಸಾರನಾರಭ್ಯ ಮೌರ್ಯ ಅಶೋಕ ಸಾಮ್ರಾಟನ ಪರ್ಯಂತ ಆದ ಮಗಧರಾಜ್ಯಸಂತತಿಯ ಇತಿವೃತ್ತವು ನಿರೂಪಿತವಾಗಿದೆ. ಇಂತೆಯೇ ಬೌದ್ಧಮತದ ಪ್ರಧಾನನೆಲೆಗಳೆನಿಸಿರುವ ಬರ್ಮಾಮುಂತಾದ ಇತರ ದೇಶ ಗಳಲ್ಲಿಯೂ ಇಂತಹ ಕೃತಿಗಳು ರಚಿತವಾಗಿವೆ. ಸನ್ಮಾನ್ಯ ಜೈಜೆರ್‌ರವರ ಅಭಿಪ್ರಾಯ ದಂತೆ ಲಂಕಾದ್ವೀಪದಲ್ಲಿ ರಚಿತವಾಗಿರುವ ಮೇಲ್ಕಂಡ ಎರಡು ಕೃತಿಗಳಲ್ಲಿ 'ದೀಪ ವಂಸೋ' ಕೃತಿಯು ಪ್ರಾಚೀನವಾದುದು ಈ ಕೃತಿಯು ರಚಿತವಾದ ಸ್ವಲ್ಪಕಾಲಾ ನಂತರದಲ್ಲಿ ಸನ್ಮಾನ್ಯ ಮಹಾನಾಮನೆಂಬುವನಿಂದ ರಚಿತವಾಗಿರುವ ಮಹಾವಂಸೋ ಕೃತಿಯು ವಿಶೇಷ ಪ್ರಚಾರದಲ್ಲಿದೆ. ಭಾರತದೇಶದ ಪ್ರಾಚೀನ ಇತಿಹಾಸ ಸಂಶೋ ಧನೆಗೆ ಈ ಕೃತಿಗಳಿಂದ ಮಹದುಪಕಾರವಾಗಿದೆಯೆಂದು ಹೇಳಿದಲ್ಲಿ ಉತ್ಪ್ರೇಕ್ಷೆಯಾಗು ವುದಿಲ್ಲ. ಆದರೆ, ಈ ಕೃತಿಗಳು ಪ್ರಾಯಿಕವಾಗಿ ಏಕ ಮೂಲಾಧಾರದಿಂದ ರಚಿತ ವಾಗಿವೆಯಾದರೂ, ಇವುಗಳಲ್ಲಿ ನಿರೂಪಿತವಾಗಿರುವ ಅನೇಕ ಐತಿಹಾಸಿಕ ಪ್ರಸಂಗ ಗಳಲ್ಲಿ ಪರಸ್ಪರ ಭಿನ್ನಮತಗಳಿರುವುದು ಕಂಡುಬರುತ್ತದೆ. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಸಂಪ್ರದಾಯೇತರ ಕೃತಿಗಳ ನೆರವಿನಿಂದ ಐತಿಹಾಸಿಕ ತಥ್ಯಾತಥ್ಯ ವನ್ನು ವಿಮರ್ಶಾಪೂರ್ವಕವಾಗಿ ವಿವೇಚಿಸಬೇಕಾದ ಪ್ರಮೇಯವಿದೆ.

**ಜೈನ ಆಮ್ನಾಯದ ಇತಿವೃತ್ತಸಾಹಿತ್ಯ :** ಶ್ವೇತಾಂಬರ ಜೈನ ಆಗಮ ಗ್ರಂಥಗಳಲ್ಲಿ ಉಳಿದುಬಂದಿರುವ ಶ್ರೀ ವೀರತೀರ್ಥಂಕರನ ಸಮಕಾಲೀನ ಐತಿಹಾಸಿಕ ಪ್ರಸಂಗೋಕ್ತಿಗಳು ಹಾಗೂ ಇದೇ ಆಮ್ನಾಯದ ಸುಪ್ರಸಿದ್ಧ ಆಚಾರ್ಯರಾದ ಹೇಮ ಚಂದ್ರಸೂರಿಯವರಿಂದ ವಿರಚಿತವಾಗಿರುವ 'ಸ್ಥವಿರಾವಲೀ ಚರಿತ್ರ-ಪರಿಶಿಷ್ಟಪರ್ವ'ದ ಹೇಳಿಕೆಗಳು ಚರಿತ್ರೆಯಕೃತಿಗಳಲ್ಲಿ ಸಂದರ್ಭೋಚಿತವಾಗಿ ಉಲ್ಲಿಖಿತವಾಗಿದೆ. ಶ್ರೀ ವೀರತೀರ್ಥಂಕರನ ನಿರ್ವಾಣಾನಂತರದ ಸೂರಿಪರಂಪರೆಯನ್ನು ಪ್ರರೂಪಣೆಮಾಡುವ ಮೂಲೋದ್ದೇಶವುಳ್ಳ ಪರಿಶಿಷ್ಟಪರ್ವದಲ್ಲಿ ಪ್ರಸಂಗವಶವಾಗಿ ಮಗಧರಾಜ್ಯದ ಇತಿ ವೃತ್ತವು ಸ್ಥಾನಪಡೆದು ಉಳಿದುಬಂದಿದೆ. ಆದರೆ ಈ ಕೃತಿಯಲ್ಲಿ ಉಕ್ತವಾಗಿರುವ

ಕೆಲವಾರು ಪ್ರಸಂಗೋಕ್ತಿಗಳು ಇದೇ ಆವ್ನಾಯದ ಇತರ ಕೃತಿಗಳ ಹೇಳಿಕೆಗಳೊಡನೆ ಸಮತೋಲನ ಹೊಂದದಿರುವುದು ಕಂಡುಬರುತ್ತದೆ. ಉದಾಹರಣೆಗಾಗಿ ಶ್ರೀ ವೀರ ನಿರ್ವಾಣಪಶ್ಚಾತ್ ೬೦ ವರ್ಷ ಮತ್ತು ೧೫೫ ವರ್ಷಗಳ ತರುವಾಯ ಸಮಯ ಗಳಲ್ಲಿ ಯಥಾನುಕ್ರಮವಾಗಿ ನಂದ ಮತ್ತು ಮೌರ್ಯ ಚಂದ್ರಗುಪ್ತರು ಮಗಧರಾಜ್ಯ ದಲ್ಲಿ ಅಭಿಷಿಕ್ತರಾದುದಾಗಿ ಪರಿಶಿಷ್ಟಪರ್ವದಲ್ಲಿ ಹೇಳಲಾಗಿದೆ. ಇದರಂತೆ ನಂದರಾಜ ಮನೆತನದ ಒಟ್ಟು ರಾಜ್ಯಭಾರಕಾಲವು (೧೫೫–೬೦=) ೯೫ ವರ್ಷಗಳ ಅವಧಿಯು ಳ್ಳದ್ದಾಗುವುದು. ಆದರೆ ಶ್ವೇತಾಂಬರ ಜೈನ ಆವ್ನಾಯದ ಪಟ್ಟಾವಲಿಗಳೇ ಮೊದ ಲಾದ ಇತರ ಕೃತಿಗಳಲ್ಲಿ, ನಂದರಾಜಮನೆತನದ ಒಟ್ಟು ರಾಜ್ಯಭಾರ ಕಾಲಾವಧಿ ಯನ್ನು ೧೫೫ (ಅಥವಾ ೧೫೦) ವರ್ಷಗಳೆಂದು ನಿರ್ದೇಶಿಸಲಾಗಿದೆ. ಹೀಗೆ ಒಂದೇ ಆವ್ನಾಯದ ಕೃತಿಗಳ ಮಧ್ಯೆ ಏಕೈಕವಿಷಯವಾಗಿ ಭಿನ್ನಾಭಿಪ್ರಾಯಗಳಿರುವುದು ಕಂಡುಬರುವುವಾದುದರಿಂದ, ಇಂತಹ ಪ್ರಸಂಗಗಳ ಐತಿಹಾಸಿಕತಥ್ಯವು ಪ್ರಶ್ನವಶ ವಾಗುವುದು. ಆದ್ದರಿಂದ ಇಂತಹ ಪ್ರಸಂಗಗಳಲ್ಲಿ ಐತಿಹಾಸಿಕತಥ್ಯವನ್ನು ವಿಮರ್ಶಾ ಪೂರ್ವಕವಾಗಿ ಪರ್ಯಾಲೋಚಿಸಬೇಕಾಗುವುದು.

ಶ್ವೇತಾಂಬರ ಜೈನ ಆವ್ನಾಯದ ಕೃತಿಗಳಂತೆ ದಿಗಂಬರ ಜೈನ ಆವ್ನಾಯದ ಪಟ್ಟಾವಲಿಗಳು, ಪುರಾಣಗಳು ಮತ್ತು ವಿಶೇಷವಾಗಿ ಆರಾಧನಾ ಕಥೆಗಳಲ್ಲಿ ಪ್ರಾಚೀನ ಕಾಲದ ಐತಿಹಾಸಿಕ ಪ್ರಸಂಗಗಳು ಅಂತರ್ಗತವಾಗಿ ಉಳಿದುಬಂದಿವೆ. ಜೈನ ಧರ್ಮದ ನಿಯಮಾನುಸಾರವಾಗಿ ಎಂತಹದಾರುಣವಾದ ಉಪಸರ್ಗ ಪ್ರಸಂಗ ಗಳಲ್ಲಿಯೂ ಸಮತಾಭಾವದಿಂದ ವಿಚಲಿತರಾಗದೆ ಶಾಂತಭಾವವನ್ನು ಕಾಯ್ದುಕೊಂಡು ಸ್ವರ್ಗಾಪವರ್ಗವನ್ನು ಹೊಂದಿದವರ ಐತಿಹ್ಯನಿರೂಪಣೆಯು ಆರಾಧನಾ ಕಥೆಗಳ ಮೂಲೋದ್ದೇಶವಾಗಿದ್ದು ಪ್ರಸಂಗವಶದಿಂದ ಪ್ರಾಚೀನಕಾಲದ ಇತರ ಐತಿಹಾಸಿಕ ಪ್ರಸಂಗಗಳು ಇವುಗಳಲ್ಲಿ ಅಂತರ್ಗತವಾಗಿ ಉಳಿದುಬಂದಿವೆ. ಈ ಕಥೆಗಳ ಮೂಲ ಮತ್ತು ಪ್ರಾಚೀನತೆಯ ವಿಷಯವಾಗಿ ಸನ್ಮಾನ್ಯ ಅ. ನೇ. ಉಪಾಧ್ಯೆಯವರಿಂದ ಸಂಪಾದಿತವಾಗಿರುವ ಬೃಹತ್ಕಥಾಕೋಶದ ಮುನ್ನುಡಿಯಲ್ಲಿ ವಿವರಣೆದೊರೆಯುವುದು. ಐತಿಹಾಸಿಕ ಪ್ರಸಂಗಗಳ ವಿಷಯವಾಗಿ ಇತರ ಸಂಪ್ರದಾಯಗಳ ಕೃತಿಗಳಲ್ಲಿ ಕಂಡು ಬರುವ ಲೋಪದೋಷಗಳು ಈ ಆರಾಧನಾ ಕಥೆಗಳಲ್ಲಿ ವಿಶೇಷರೀತಿಯಿಂದ ಕಂಡು ಬರುತ್ತವೆ. ವಿಭಿನ್ನಕರ್ತೃಗಳ ಹೆಸರಿನಲ್ಲಿ ಉಳಿದುಬಂದಿರುವ ಈ ಆರಾಧನಾಕಥೆಗಳ ಕೃತಿಗಳಲ್ಲಿ ಅನೇಕವೇಳೆ ಏಕೈಕ ಐತಿಹಾಸಿಕಪ್ರಸಂಗವನ್ನು ಹೇಳುವಲ್ಲಿ ಪರಸ್ಪರ ಮತ ಭೇದಗಳಿರುವುದು ಕಂಡುಬರುತ್ತದೆ. ಈ ಕೃತಿಗಳಲ್ಲಿ ಇಂತಹ ಮತಭೇದಗಳಾಗಲು ಕಾರಣವೇನೆಂಬುದನ್ನು ಸನ್ಮಾನ್ಯ ನಾಥೂರಾಮ್ ಪ್ರೇಮಿಯವರ ಈ ಮುಂದಿನ ಹೇಳಿಕೆಯು ಸ್ಪಷ್ಟಗೊಳಿಸುವುದು.

"ಜೈನಾಚಾರ್ಯರ ಅನೇಕ ಗ್ರಂಥಗಳಲ್ಲಿ ಪರಸ್ಪರ ಯಾವ ಅಸಮಾನತೆ ಮತ್ತು ಭಿನ್ನತಗಳಿವೆಯೋ ಅದರ ಕಾರಣವು ಇಂತಿದೆ: ಆಚಾರ್ಯರ ಸಮ್ಮುಖದಲ್ಲಿ

'ನಾಮಾವಲೀನಿಬದ್ಧ' ಸಾಹಿತ್ಯವಿದ್ದಿತು ಮತ್ತು ಆಚಾರ್ಯಪರಂಪರಾಗತವಾದ ಸ್ಮೃತಿಯಿದ್ದಿತು. ಇವೆರಡರ ಸಹಾಯದಿಂದ ತಮ್ಮ ತಮ್ಮ ರುಚಿಗನುಸಾರವಾಗಿ ಕಥೆಗಳನ್ನು ಹೆಣೆಯುವಲ್ಲಿ ಭಿನ್ನತೆಯೇರ್ಪಡುವುದು ಸ್ವಾಭಾವಿಕ" ['ನಾಮಾವಲೀ ನಿಬದ್ಧ ಸಾಹಿತ್ಯ' ವೆಂದರೆ ಕಥೆಯ ಪ್ರಧಾನವ್ಯಕ್ತಿಗಳು, ಅವರ ವಾಸಸ್ಥಾನಗಳೇ ಮೊದಲಾದ ಅಂಶಗಳ ಹೆಸರುಗಳನ್ನು ಮಾತ್ರನಿರೂಪಿಸುವಂತಹ ಸಾಹಿತ್ಯ ಜೈ. ಸಾಹಿತ್ಯ ಔರ್ ಇತಿಹಾಸ್–ಪು. ಸಂ. ೧೯., ಅ. ಟಿ. ೧]

ಈ ರೀತಿಯಾಗಿ ಭಾರತದೇಶದ ಇತಿಹಾಸ ವಿಷಯವನ್ನು ನಿರೂಪಿಸುವ ಸಂಪ್ರದಾಯತ್ರಯದ ಎಲ್ಲ ಕೃತಿಗಳಲ್ಲಿಯೂ ನಾನಾರೀತಿಯ ಲೋಪದೋಷಗಳು ಇರುವುವಾದರೂ, ವಿಮರ್ಶಾತ್ಮಕ ಪರಿಶೋಧನೆಯ ಮೂಲಕ ಐತಿಹಾಸಿಕ ವಿಷಯವನ್ನು ಪರಿಷ್ಕರಿಸಿ ಚರಿತ್ರೆಗಳಲ್ಲಿ ನಿರೂಪಿಸಲಾಗಿದೆ. ಇಷ್ಟಾದರೂ ಪ್ರಾಚೀನಕಾಲದ ಅನೇಕ ಐತಿಹಾಸಿಕಪ್ರಸಂಗಗಳು ವಿವಾದಾತ್ಮಕವಾಗಿಯೇ ಉಳಿದಿವೆ. ಹೀಗೆ ವಿವಾದಾತ್ಮಕವಾಗಿ ಉಳಿದಿರುವ ಅಂಶಗಳನ್ನು ಪೂರ್ವೋಕ್ತವಾದ ಸಂಪ್ರದಾಯ ತ್ರಯದ ಇತಿವೃತ್ತಕೃತಿಗಳ ಆಧಾರದಿಂದ ಪರಿಷ್ಕರಿಸಿ, ಶ್ರೀ ವೀರನಿರ್ವಾಣಸಮಯದ ವಿಷಯವಾಗಿ ಏರ್ಪಟ್ಟಿರುವ ಸಂದಿಗ್ಧತೆಯನ್ನು ನಿವಾರಿಸಬಹುದಾಗಿದೆ.

ಜೈನ ಆಮ್ನಾಯದ ಅನೇಕಕೃತಿಗಳಲ್ಲಿ ಶ್ರೀ ವೀರತೀರ್ಥಂಕರನ ನಿರ್ವಾಣ ಸಮಯಸೂಚಕವಾದ ಐತಿಹ್ಯವು ಗಾಹೆ ಅಥವಾ ಶ್ಲೋಕಬದ್ಧವಾಗಿ ಉಳಿದುಬಂದಿದೆ. ಈ ವಿಷಯವಾಗಿ ದಿಗಂಬರ ಆಮ್ನಾಯದಕೃತಿ 'ತಿಲೋಯಪಣ್ಣತ್ತಿ' ಹಾಗೂ ಶ್ವೇತಾಂಬರ ಜೈನ ಆಮ್ನಾಯದ 'ತಿತ್ಥೋಗಾಲೀಪಇನ್ನಯ' ಮತ್ತು 'ತೀರ್ಥೋದ್ಧಾರ ಪ್ರಕರಣ' ಗಳಲ್ಲಿ ಉಕ್ತವಾಗಿರುವ ಅಂಶಗಳನ್ನು ಸಂಕಲನಮಾಡಿ ಮುಂದೆ ಚೌಬಂಧದಲ್ಲಿ ಕೊಡಲಾಗಿದೆ: (26 ಮತ್ತು 27 ನೇ ಪುಟ ನೋಡಿ) [ಶ್ವೇತಾಂಬರ ಆಮ್ನಾಯದ ಈ ಕೃತಿಗಳೆರಡರ ಹೇಳಿಕೆಗಳನ್ನು 'ಜಯಧವಲಾಸಹಿತ ಕಸಾಯ ಪಾಹುಡ' ಕೃತಿಯ ಭಾ. ೧ ಮುನ್ನುಡಿ ಪು. ಸಂ. ೫೧–೨ ರಿಂದ ಸಂಕಲನ ಮಾಡಲಾಗಿದೆ.]

ಶ್ರೀ ವೀರತೀರ್ಥಂಕರ ನಿರ್ವಾಣಸಂಬಂಧಿ ಐತಿಹ್ಯವು ಸಾಧಾರಣವಾಗಿ ಎಲ್ಲ ಮೂಲಗಳಲ್ಲಿಯೂ ಈ ಮುಂದಿನ ಗಾಹೆಗಳಲ್ಲಿ ಕಂಡುಬರುವ ಐತಿಹ್ಯೋಕ್ತಿಯಿಂದ ಆರಂಭವಾಗುವುದು.

> ಜಂ ಕಾಲೇ ವೀರಜಿಣೋ ಣಿಸ್ಸೇಯಸಸಂಪಯಂ ಸಮಾವಣ್ಣೋ ।
> ತಕ್ಕಾಲೇ ಅಭಿಸಿತ್ತೋ ಪಾಲಯಣಾಮೋ ಅವಂತಿಸುದೋ ॥

ಅರ್ಥ: 'ಯಾವಂದು ಶ್ರೀ ವೀರಜಿನನು ನಿಶ್ರೇಯಸಸಂಪತ್ತನ್ನು ಹೊಂದಿದನೋ ಅಂದು ಪಾಲಕನಾಮ ಅವಂತಿಸುತನು ಅಭಿಷಿಕ್ತನಾದನು.'

ಈ ಗಾಹೆಯಲ್ಲಿ ಹೆಸರಿಸಲಾಗಿರುವ ಪಾಲಕನು ಅಭಿಷಿಕ್ತನಾದಸಮಯದ ವಿಷಯವಾಗಿ ಪಟ್ಟಾವಲೀ ಸಮುಚ್ಚಯದ ಈ ಮುಂದಿನ ವಾಕ್ಯದಿಂದ ವಿಶೇಷ ವಿವರಣೆದೊರೆಯುವುದು.

'ಸಿರಿಜಿಣಣಿವ್ವಾಣಗಮಣರಯಣೀಯೇ ಉಜ್ಜೇಣೀಏ ಚಂಡಪಜ್ಜೋಅಮರಣೇ ಪಾಲಓ ರಾಜಾ ಅಹಿಸಿತ್ತೊ। ತೇಣಯ ಅಪುತ್ತಉದಾಯಿಮರಣೇ ಕೋಣಿಅರಜ್ಜಂ ಪಾಡಲಿಪುರಂಪಿ ಅಹಿಟ್ಠಿಅಂ॥'

ಈ ವಾಕ್ಯವನ್ನು ಸನ್ಮಾನ್ಯ ನಾಥೂರಾಮ್‌ಪ್ರೇಮಿಯವರ 'ಜೈನಸಾಹಿತ್ಯ ಔರ್ ಇತಿಹಾಸ್' ಎಂಬ ಕೃತಿ-ಪು. ಸಂ. ೧೯ ಅ.ಟಿ. ೧ ರಿಂದ ಇಲ್ಲಿ ಉಲ್ಲೇಖಿಸಲಾಗಿದೆ]

ಉಜ್ಜಯಿನಿಯಲ್ಲಿ ಚಂಡಪ್ರದ್ಯೋತನ ರಾಜ್ಯಭಾರವು ಅಂತ್ಯಗೊಂಡಿದ್ದು, ಪಾಲಕನ ರಾಜ್ಯಭಾರವು ಆರಂಭವಾದದಿನದಂದು ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿದ ನೆಂದು ಮೇಲ್ಕಂಡ ಐತಿಹ್ಯೋಕ್ತಿಗಳಿಂದ ವ್ಯಕ್ತವಾಗುವುದು. ಆದ್ದರಿಂದ ಪ್ರದ್ಯೋತನ ರಾಜ್ಯಭಾರಾಂತ್ಯಸಮಯವು ನಿಶ್ಚಿತವಾದಲ್ಲಿ ಶ್ರೀ ವೀರತೀರ್ಥಂಕರನ ನಿರ್ವಾಣ ಸಮಯ ಸಂಬಂಧಿ ಸಂದಿಗ್ಧತೆಯು ಪರಿಹೃತವಾದಂತಾಗುವುದು. ಆದರೆ ಪ್ರದ್ಯೋತನ ರಾಜ್ಯಭಾರಾಂತ್ಯಸಮಯವನ್ನು ನಿರ್ಣಯಿಸುವಲ್ಲಿ ಈ ಮುಂದಿನ ಎರಡು ಅಂಶಗಳು ಆತಂಕಕಾರಿಯಾಗಿವೆ.

೧) ಭಾಸಕವಿ ವಿರಚಿತವಾಗಿರುವ ಸ್ವಪ್ನವಾಸವದತ್ತನಾಟಕದ ಹೇಳಿಕೆ ಯಂತೆ ಅವಂತೀಶನಾದ ಪ್ರದ್ಯೋತ-ಮಹಾಸೇನನು ಉಜ್ಜಯಿನಿಯಲ್ಲಿ ರಾಜ್ಯ ಭಾರಾಧಿಷ್ಠಿತನಾಗಿದ್ದಸಮಯದಲ್ಲಿ ಮಗಧರಾಜ್ಯದಲ್ಲಿ ದರ್ಶಕನೆಂಬ ರಾಜನು ರಾಜ್ಯ ಭಾರಾಧಿಷ್ಠಿತನಾಗಿದ್ದನೆಂದು ಅವಗತವಾಗುವುದು; ಆದರೆ ಬೌದ್ಧಆಮ್ನಾಯದ ಕೃತಿಗಳ ಹೇಳಿಕೆಯಂತೆ, ಮಗಧರಾಜ್ಯದಲ್ಲಿ ಅನುಕ್ರಮವಾಗಿ ಬಿಂಬಿಸಾರ ಹಾಗೂ ಇವನ ಮಗನಾದ ಅಜಾತಶತ್ರುವಿನ ರಾಜ್ಯಭಾರನಡೆದಿದ್ದಸಮಯದಲ್ಲಿ ಪ್ರದ್ಯೋತನು ಉಜ್ಜಯಿನಿಯಲ್ಲಿ ರಾಜ್ಯಭಾರಾಧಿಷ್ಠಿತನಾಗಿದ್ದನೆಂದು ನಿರ್ದೇಶಿತವಾಗುವುದು. ಇಷ್ಟಲ್ಲದೆ ವೈದಿಕಮತಸಂಪ್ರದಾಯದ ಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧರಾಜ ಸಂತತಿಯ ಇತಿವೃತ್ತದಲ್ಲಿ ವಿವಿಸಾರ (ಬಿಂಬಿಸಾರ), ಅಜಾತಶತ್ರು ಮತ್ತು ದರ್ಶಕ ಎಂಬ ಮೂರು ಹೆಸರುಗಳೂ ಇವೆ. ಇದರಿಂದ ಪ್ರದ್ಯೋತನು ಈ ಮೂವರು ರಾಜರ ಸಮಕಾಲೀನನಾಗಿದ್ದಿರಬೇಕೆಂಬ ಅಭಿಪ್ರಾಯಕ್ಕೆ ಅವಕಾಶವಾಗುವುದಲ್ಲದೆ, ಇವನು ಅತಿದೀರ್ಘಕಾಲಪರ್ಯಂತ ರಾಜ್ಯಭಾರಮಾಡಿರಬೇಕೆಂಬ ಗ್ರಹಿಕೆಗವಕಾಶವಾಗು ವುದು.

| ಶ್ರೀ ವೀರತೀರ್ಥಂಕರನು ನಿರ್ವಾಣ ಹೊಂದಿದ ದಿನದಂದು ಅವಂತಿಯಲ್ಲಿ ಅಭಿಷಿಕ್ತನಾದ ಪಾಲಕನಾದಿಯಾಗಿ ಮುಂದೆ ರಾಜ್ಯಭಾರಮಾಡಿದ ರಾಜರ ಅಥವಾ ರಾಜವಂಶಗಳ ಅನುಕ್ರಮ ಹೆಸರುಗಳು. | ತಿಲೋಯ. ಪಣ್ಣತ್ತಿಯನುಸಾರ_ ರಾಜ್ಯಭಾರವರ್ಷಗಳು | ತಿತ್ಥೋಗಾಲೀಪಇನ್ನಯಾನುಸಾರ_ ರಾಜ್ಯಭಾರವರ್ಷಗಳು | ತೀರ್ಥೋದ್ಧಾರ ಪ್ರಕರಣಾನುಸಾರ_ ರಾಜ್ಯಭಾರವರ್ಷಗಳು |
|---|---|---|---|
| ಪಾಲಕ | ೬೦ ವರ್ಷಗಳು | ೬೦ ವರ್ಷಗಳು | ೬೦ ವರ್ಷಗಳು |
| ನಂದವಂಶ | ೧೫೫ ವರ್ಷಗಳು<br>[ವಿ. ಸೂ : ಈ ಕೃತಿಯಲ್ಲಿ 'ವಿಜಯವಂಶ' ಎಂದು ಹೆಸರಿಸಿದೆ] | ೧೫೦ ವರ್ಷಗಳು | ೧೫೫ ವರ್ಷಗಳು |
| ಮೌರ್ಯವಂಶ | ೪೦ ವರ್ಷಗಳು<br>[ವಿ. ಸೂ. : ಮರುದಯವಂಶ] | ೧೬೦ ವರ್ಷಗಳು<br>[ವಿ. ಸೂ. : ಮುರಿಯವಂಶ] | ೧೦೮ ವರ್ಷಗಳು |

| | | | |
|---|---|---|---|
| ಶುಂಗರಾಜರು | ಪುಷ್ಯಮಿತ್ರ– ೩೦ ವರ್ಷಗಳು<br>ಅಗ್ನಿಮಿತ್ರ+ವಸುಮಿತ್ರ– ೬೦ ವರ್ಷ | ಪುಷ್ಯಮಿತ್ರ– ೩೫ ವರ್ಷಗಳು<br>ಬಲಮಿತ್ರ+ಭಾನುಮಿತ್ರ<br>–೬೦ ವರ್ಷಗಳು | ಪುಷ್ಯಮಿತ್ರ– ೩೦ ವರ್ಷಗಳು<br>ಬಲಮಿತ್ರ+ಭಾನುಮಿತ್ರ<br>–೬೦ ವರ್ಷಗಳು |
| | ಗಂಧರ್ವವಂಶ–೧೦೦ ವರ್ಷಗಳು | ನಭಃಸೇನ–೪೦ ವರ್ಷಗಳು | ನರವಾಹನ–೪೦ ವರ್ಷಗಳು |
| | ನರವಾಹನ- ೪೦ ವರ್ಷಗಳು | ಗರ್ದಭಿಲ್ಲ–೧೦೦ ವರ್ಷಗಳು | ಗರ್ದಭಿಲ್ಲ–೧೩ ವರ್ಷಗಳು |
| | ಭೃತ್ಯಾಂಧ್ರ ಅಥವಾ ಶಕವಂಶ–<br>೨೪೨ ವರ್ಷಗಳು | | ಶಕ–೪ ವರ್ಷಗಳು |
| | ಗುಪ್ತವಂಶ–೨೩೧ ವರ್ಷಗಳು | | |
| | ಚತುರ್ಮುಖ ಕಲ್ಕಿ–೪೨ ವರ್ಷಗಳು | | |
| ಮೊತ್ತ | ೧೦೦೦ ವರ್ಷಗಳು | ೬೦೫ ವರ್ಷಗಳು | ೪೭೦ ವರ್ಷಗಳು |

೨) ವೈದಿಕಮತಸಂಪ್ರದಾಯದ ಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧ ರಾಜಸಂತತಿಯಲ್ಲಿ, ಬೃಹದ್ರಥವುನೆತನದ ರಾಜ್ಯಭಾರವು ಅಂತ್ಯಗೊಂಡತರುವಾಯ ಪುಲಿಕ (=ಮುನಿಕ=ಶುನಕ) ನ ಸುತನಾದ ಪ್ರದ್ಯೋತಿಯು ಅಭಿಷಿಕ್ತನಾಗಿ ೨೩ ವರ್ಷಕಾಲ ರಾಜ್ಯಭಾರಮಾಡಿದನೆಂದು ಹೇಳಲಾಗಿದೆಯಲ್ಲದೆ, ಈ ಪ್ರದ್ಯೋತಿ ಯಿಂದ ಸುಮಾರು ಒಂಭತ್ತು ಅಥವಾ ಹತ್ತು ತಲೆಮಾರುಗಳ ಅನಂತರ ಬಿಂಬಿಸಾರ, ಅಜಾತಶತ್ರು ಮತ್ತು ದರ್ಶಕರು ರಾಜ್ಯಭಾರದಲ್ಲಿ ಅಧಿಷ್ಠಿತರಾಗಿದ್ದಂತೆ ನಿರ್ದೇಶಿಸ ಲಾಗಿದೆ. ಭಾಸಕವಿಯ ಸ್ವ. ವಾ. ನಾಟಕದಲ್ಲಿ ಮಗಧರಾಜನಾದ ದರ್ಶಕನು ತನ್ನ ಭಗಿನಿಯಾದ ಪದ್ಮಾವತಿಯನ್ನು ವತ್ಸರಾಜ್ಯಾಧೀಶನಾದ ಉದಯನನಿಗಿತ್ತು ವಿವಾಹ ಮಾಡಿದನೆಂದು ಹೇಳಿದೆಯಾದರೆ, ಬೃಹತ್ಕಥಾಮಂಜರಿಯಲ್ಲಿ, ಈ ಮಗಧರಾಜ ನನ್ನು 'ಪ್ರದ್ಯೋತ' ನೆಂದು ಹೆಸರಿಸಲಾಗಿದೆ. ಇಷ್ಟಲ್ಲದೆ, ಬೌದ್ಧ ಮತ್ತು ಜೈನ ಸಂಪ್ರದಾಯಗಳ ಕಥಾಯತ್ತವಾದ ಐತಿಹ್ಯದಿಂದ 'ಪ್ರದ್ಯೋತ' ಎಂಬ ಹೆಸರಿನ ಇಬ್ಬರು ರಾಜರಿದ್ದಿರಬೇಕೆಂದು ಸೂಚಿತವಾಗುತ್ತದೆ.

ಹೀಗೆ ಪ್ರದ್ಯೋತರಾಜನ ಐತಿಹ್ಯವು ಸಂದಿಗ್ಧತಾವಶವಾಗಿದ್ದು ಸಮಸ್ಯಾತ್ಮಕ ವಾಗಿದೆ. ಈ ಸಮಸ್ಯೆಯ ನಿವಾರಣೆಗಾಗಿ ಪ್ರದ್ಯೋತರಾಜ ಹಾಗೂ ಇವನ ಸಮ ಕಾಲೀನರಾದ ಬಿಂಬಿಸಾರ ಮತ್ತು ಅಜಾತಶತ್ರುರಾಜರ ವಿಷಯವಾಗಿ ಸಂಪ್ರದಾಯ ತ್ರಯದ ಕೃತಿಗಳಲ್ಲಿ ಉಳಿದುಬಂದಿರುವ ಮುಖ್ಯ ಐತಿಹ್ಯಗಳೆಲ್ಲವನ್ನೂ ಗಮನಿಸ ಬೇಕಾದ ಆವಶ್ಯಕತೆಯಿದೆ.

ಬೌದ್ಧಆಮ್ನಾಯದಾಧಾರದಂತೆ: ಶ್ರೀ ಗೌತಮಬುದ್ಧನಕಾಲದಲ್ಲಿ ಚಂಡ ಪ್ರದ್ಯೋತನು ಅವಂತಿರಾಜ್ಯದ ಅರಸನಾಗಿದ್ದನು. ಈ ಹೆಸರಿನ ಮೊದಲಿಗಿರುವ 'ಚಂಡ' ಪದವು ಇವನ ಕೋಪಾತಿಶಯ ಗುಣದ ಸೂಚಕವಾಗಿದೆ. ಒಮ್ಮೆ ಇವನಿಗೆ ಕಾಮಾಲೆವ್ಯಾಧಿಯುಂಟಾಯಿತು. ಈ ವ್ಯಾಧಿಯನ್ನು ಗುಣಪಡಿಸಲು ಯಾವ ವೈದ್ಯ ನಿಗೂ ಸಾಧ್ಯವಾಗಲಿಲ್ಲ. ಆಗ ಪ್ರದ್ಯೋತನು ವೈದ್ಯಜೀವಕನನ್ನು ಕಳುಹಿಸಿಕೊಡ ಬೇಕೆಂದು ಬಿಂಬಿಸಾರನನ್ನು ಕೋರಿದನು. ವ್ಯಾಧಿನಿವಾರಣೆಗೆ ತುಪ್ಪವನ್ನು ಉಪ ಯೋಗಿಸಬೇಕಿದ್ದಿತು. ಆದರೆ ಪ್ರದ್ಯೋತನ ರುಚಿಗೆ ತುಪ್ಪವು ಹಿಡಿಸದಾಗಿದ್ದಿತು. ಜೀವಕನು, ಔಷಧಸಾಮಗ್ರಿಯನ್ನು ಶೀಘ್ರವಾಗಿ ತರಬೇಕಾಗಿದೆಯೆಂಬ ನೆಪಹೇಳಿ ಅರಮನೆಯ ಶೀಘ್ರಗಾಮಿಯಾದ ವಾಹನವೊಂದರಉಪಯೋಗಪಡೆದು ನಗರದಿಂದ ಹೊರಹೋಗಲು ಪೂರ್ವಭಾವಿಯಾಗಿ ರಾಜನ ಅನುಮತಿಪಡೆದು, ಕಟುವಾದ ಕಷಾಯವೊಂದರಲ್ಲಿ ತುಪ್ಪವನ್ನು ಬೆರೆಯಿಸಿ ರಾಜನಿಗೆ ಕುಡಿಯಿಸಿ ನಿಜಸಂಗತಿಯು ತಿಳಿಯುವ ಮುನ್ನವೇ ಭದ್ರವತಿಕಾ ಎಂಬ ಆನೆಯನ್ನೇರಿ ನಗರದಿಂದ ಹೊರಬಿದ್ದನು. ಅನಂತರ ರಾಜನ ಅಪ್ಪಣೆಯಂತೆ ತನ್ನನ್ನು ಅನುಸರಿಸಿಬಂದ ಕಾಕ ಎಂಬುವನಿಗೆ ವಿರೇ ಚಕವನ್ನಿತ್ತು, ರಾಜನಿಗಿತ್ತಿದ್ದ ಔಷಧಿಯು ಪರಿಣಾಮಕಾರಿಯಾಗುವಪರ್ಯಂತ ಅವನ

ಹಿಂದಿರುಗದಂತೆಮಾಡಿದನು. ಸ್ವಲ್ಪಕಾಲಾನಂತರ ವ್ಯಾಧಿವಿಮುಕ್ತನಾಗಿ ಸ್ವಸ್ಥನಾದ ಪ್ರದ್ಯೋತರಾಜನು ಸೀವೇಯ್ಯಕವಸ್ತ್ರದುಡಿಗೆಯೊಡಗೂಡಿದ ಅನರ್ಘ್ಯವಸ್ತುಗಳನ್ನು ಜೀವಕನಿಗೆ ಬಹುಮಾನವಾಗಿ ಕಳುಹಿಸಿದನು.

ಉದಯನರಾಜನು ಶೌರ್ಯದಲ್ಲಿ ಪ್ರದ್ಯೋತನ ಪ್ರತಿಸ್ಪರ್ಧಿಯಾಗಿದ್ದನು. ಆನೆಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಉದಯನನಿಗಿದ್ದ ಅತ್ಯಾಸಕ್ತಿಯ ಲಾಭಪಡೆದು ಇವನನ್ನು ಪ್ರದ್ಯೋತನು ಛಲದಿಂದ ಸೆರೆಹಿಡಿದನು. ಆದರೆ ಇದರ ಪ್ರತಿವಂಚನೆಯಾಗಿ ಉದಯನನು ಪ್ರದ್ಯೋತನ ಮಗಳಾದ ವಾಸವದತ್ತೆಯನ್ನು ಅಪಹರಿಸಿ ತನ್ನ ರಾಜಧಾನಿಯನ್ನು ಸೇರಿ ಅವಳನ್ನು ವಿವಾಹಮಾಡಿಕೊಂಡನು.

ಪ್ರದ್ಯೋತನ ಕುಲಗುರುವಿಗೆ ಮಹಾಕಚ್ಚಾನನೆಂಬ ಸುತನಿದ್ದನು. ಭೂಮಿಯಲ್ಲಿ ಬುದ್ಧನ ಶ್ರೀವಿಹಾರ ನಡೆದುದನ್ನು ತಿಳಿದ ಪ್ರದ್ಯೋತನು ಅವನನ್ನು ಉಜ್ಜಯಿನಿಗೆ ಬರಮಾಡಿಕೊಳ್ಳಲೋಸುಗ ಕಚ್ಚಾನ ಮತ್ತು ಇತರ ಏಳು ಜನರನ್ನು ಕಳುಹಿದನು. ಬುದ್ಧನಬಳಿಬಂದ ಕಚ್ಚಾನ ಮತ್ತು ಅವನ ಸಂಗಡಿಗರು ಅರ್ಹಂತರಾಗಿ ಬುದ್ಧನ ಅಪ್ಪಣೆಯಮೇರೆಗೆ ಅವನ ಧರ್ಮಬೋಧೆಯನ್ನು ಅವಂತಿಯಲ್ಲಿ ಪ್ರಸಾರ ಮಾಡುವುದಕ್ಕಾಗಿ ಉಜ್ಜಯಿನಿಗೆ ಹಿಂದಿರುಗಿಬಂದರು.

'ದುಲ್ವ' ದಲ್ಲಿ ಪ್ರದ್ಯೋತನ ತಂದೆಯನ್ನು 'ಅನಂತನೇಮಿ' ಯೆಂದು ಹೆಸರಿಸಿದೆ. ಬುದ್ಧನ ಜನನವಾದಂದೇ ಪ್ರದ್ಯೋತನು ಜನಿಸಿದನು. ಇವನು ಜನಿಸಿದಸಮಯದಲ್ಲಿ ದೀಪದಿಂದಾಗುವ ಬೆಳಕಿನಂತೆ ಭೂಮಿಯಲ್ಲಿ ಬೆಳಕಾಯಿತಾದುದರಿಂದ ಇವನಿಗೆ ಪ್ರದ್ಯೋತ ಎಂಬ ಹೆಸರಾಯಿತು. ಬುದ್ಧನು ಬೋಧಿಸಂಪನ್ನನಾದ ಸಮಯದಲ್ಲಿ ಪ್ರದ್ಯೋತನು ಉಜ್ಜಯಿನಿಯಲ್ಲಿ ರಾಜ್ಯಾಭಿಷೇಕಹೊಂದಿದನು. ಕುಶಲಮತಿಯಾದ ಭರತಎಂಬುವನು ಪ್ರದ್ಯೋತನ ಮಂತ್ರಿಯಾಗಿದ್ದನು.

ಪ್ರದ್ಯೋತ ಮತ್ತು ಬಿಂಬಿಸಾರರು ಸ್ನೇಹಿತರಾಗಿದ್ದರು. ಅಜಾತಶತ್ರುವಿನಿಂದ ಬಿಂಬಿಸಾರನ ಕೊಲೆಯಾದುದನ್ನು ಕೇಳಿದ ಪ್ರದ್ಯೋತನು ಅಜಾತಶತ್ರುವಿನ ಮೇಲೆ ಯುದ್ಧಹೂಡಲು ಸನ್ನದ್ಧನಾದನೆಂದು ಕಂಡುಬರುವುದು. ಇವನ ಈ ದಂಡಯಾತ್ರೆಯನ್ನೆದುರಿಸಲೋಸುಗ ರಾಜಗೃಹದ ರಕ್ಷಣಾವ್ಯವಸ್ಥೆಯನ್ನು ಬಲಪಡಿಸಲಾಯಿತು. ಆದರೆ ಮುಂದೆ ಯುದ್ಧವು ನಡೆಯಲಿಲ್ಲ.

ಪ್ರದ್ಯೋತನ ಆಧಿಪತ್ಯಕ್ಕೊಳಪಟ್ಟಿದ್ದ ಲಂಬಚೂಲಕವೆಂಬ ಸ್ಥಾನದಲ್ಲಿ ಸಾಲಿಸ್ಸರನೆಂಬ ಯತಿಯೋರ್ವನಿದ್ದುದಾಗಿ ಸರಭಂಗಜಾತಕದಲ್ಲಿ ಹೇಳಲಾಗಿದೆ. ಈ ಕಥೆಯ 'ಪ್ರದ್ಯೋತ' ಎಂಬ ಹೆಸರು ಅವಂತಿಯರಸನ ಸೂಚಕವಾಗಿರದೆ ಮತ್ತೊಬ್ಬ ರಾಜನ ಸೂಚಕವಾಗಿರಬೇಕು ; ಅಥವಾ ಬುದ್ಧನಕಾಲದಲ್ಲಿ ಪ್ರದ್ಯೋತನ ಆಧಿಪತ್ಯ

ಕ್ಕೊಳಪಟ್ಟಿದ್ದ ಸ್ಥಾನ ಒಂದನ್ನು ಲಂಬಚೂಲಕವೆಂದು ಗುರುತಿಸಲಾಗಿದೆಯೆಂದು ಕಂಡು ಬರುವುದು. [ಸನ್ಮಾನ್ಯ ಜಿ. ಪಿ. ಮಲಸೇಕರರವರ 'ಡಿಕ್ಷ್ಯನರಿ ಆಫ್ ಪಾಲಿನೇಮ್ಸ್' ಗ್ರಂ. ಭಾ ೧ ರಿಂದ ಸಂಗ್ರಹಿಸಲಾಗಿದೆ.]

ಭಾಸಕವಿ ರಚಿತ ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ನಾಟಕಗಳ ಕಥಾಧಾರದಂತೆ: ಅವಂತೀರಾಜ್ಯದ ರಾಜಧಾನಿಯಾದ ಉಜ್ಜಯಿನಿಯಲ್ಲಿ ಪ್ರದ್ಯೋತನೆಂಬ ಪರಾಕ್ರಮಶಾಲಿಯಾದ ರಾಜನು ರಾಜ್ಯಭಾರಮಾಡುತ್ತಿದ್ದನು. ಮಹತ್ತಾದ ಸೈನ್ಯವನ್ನು ಹೊಂದಿದ್ದ ಇವನಿಗೆ 'ಮಹಾಸೇನ' ಎಂಬ ಬಿರುದಿನ ಹೆಸರಿದ್ದಿತು. [ಸ್ವ. ವಾ. ನಾಟಕ ಅಂಕ ೨–ಅಸ್ತಿ ಉಜ್ಜಯಿನಿಯೋ ರಾಜಾ ಪ್ರದ್ಯೋತೋ ನಾಮ|ತಸ್ಯ ಬಲಪರಿಮಾಣ ನಿರ್ವೃತ್ತಂ ನಾಮಧೇಯಂ ಮಹಾಸೇನ ಇತಿ] ಇವನ ಹದಿನಾರು ಜನ ಮಡದಿಯರಲ್ಲಿ ಅಂಗಾರವತಿಯೆಂಬುವಳು ಜ್ಯೇಷ್ಠಳಾಗಿದ್ದಳು. [ಸ್ವ. ವಾ. ನಾಟಕ ಅಂಕ ೬–ಪ. ಸಂ. ೯] ಈ ಜ್ಯೇಷ್ಠ ಮಹಿಷಿಯು ಗೋಪಾಲಕ ಮತ್ತು ಪಾಲಕ ಎಂಬೀರ್ವರು ಗಂಡುಮಕ್ಕಳು ಹಾಗೂ ವಾಸವದತ್ತೆಯೆಂಬ ಮಗಳ ಜನ್ಮದಾತೆಯಾಗಿದ್ದಳು. ವಾಸವದತ್ತೆಗಾಗಿ ವರಾನ್ವೇಷಣೆಯಲ್ಲಿತೊಡಗಿದ್ದ ಪ್ರದ್ಯೋತನ ಬಳಿಗೆ ಕನ್ಯಾರ್ಥಿಗಳಾಗಿ ಅನೇಕ ರಾಜರು ದೂತರನ್ನು ಕಳುಹಿದ್ದರು. ಹೀಗೆ ಕನ್ಯಾರ್ಥಿಗಳಾಗಿ ದೂತರನ್ನು ಕಳುಹಿದ್ದವರಲ್ಲಿ ಪ್ರದ್ಯೋತನ ಸಂಬಂಧಿಯಾಗಿದ್ದ ಮಾಗಧನೂ ಒಬ್ಬನಾಗಿದ್ದನು. [ಪ್ರಯೌ ನಾಟಕ-ಅಂಕ ೨ ಪ. ಸಂ. ೮] ಆದರೆ ಪ್ರಸಿದ್ಧಭರತವಂಶಜನೂ, ಸಹಸ್ರಾನೀಕನ ಮೊಮ್ಮಗನೂ ಶತಾನೀಕ–ವೈದೇಹಿಯರ ಸುತನೂ ಆದ ವತ್ಸರಾಜ್ಯಾಧೀಶ ಉದಯನನೊಬ್ಬನ್ನು ಮಾತ್ರ ಪ್ರದ್ಯೋತನ ಮಹಾಬಲಪರಾಕ್ರಮಗಳನ್ನು ಗಣನೆಗೆತಂದುಕೊಳ್ಳದಿದ್ದ ಪ್ರತಿಸ್ಪರ್ಧಿಯಾಗಿದ್ದುದರಿಂದ ಕನ್ಯಾರ್ಥಿಯಾಗಿ ದೂತನನ್ನು ಕಳುಹಲಿಲ್ಲ. ವೀಣಾವಾದನದ ಮೂಲಕ ಆನೆಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಉದಯನನಿಗಿದ್ದ ವಿಶೇಷ ಆಸಕ್ತಿಯನ್ನಾಧರಿಸಿ ಇವನನ್ನು ಪ್ರದ್ಯೋತನ ಮಂತ್ರಿಯಾದ ಭರತರೋಹಕನು ವಂಚನೆಯಿಂದ ಸೆರೆಹಿಡಿಯುವನು. ಆದರೆ ಉದಯನನು ತನಗಾದ ವಂಚನೆಗೆ ಪ್ರತಿ ವಂಚನೆಯಾಗಿ ವಾಸವದತ್ತೆಯನ್ನು ಅಪಹರಿಸಿ ತನ್ನ ರಾಜಧಾನಿಗೆ ಕರೆತಂದು ವಿವಾಹವಾಗುವನು.

.ಉದಯನನು ವಿವಾಹಾನಂತರ ರಾಜಕಾರ್ಯವಿಮುಖನಾಗಿ ಪ್ರೇಮವಿಹಾರ ಮತ್ತು ಮೃಗಯಾವಿಹಾರಗಳಲ್ಲಿ ಆಸಕ್ತನಾದುದರಿಂದ ಇವನ ರಾಜ್ಯವನ್ನು ಶತ್ರುವಾದ ಆರುಣಿಯು ಆಕ್ರಮಣಮಾಡಿ ವಶಪಡಿಸಿಕೊಂಡನು. ಹೀಗೆ ಕೈತಪ್ಪಿದ ರಾಜ್ಯವನ್ನು ಪುನಸ್ಸ್ವಾಯತ್ತೆಗೊಳಿಸಿಕೊಳ್ಳಲೋಸುಗ ಮಂತ್ರಿಯಾದ ಯೌಗಂಧರಾಯಣನು, ಮಗಧರಾಜನಾದ ದರ್ಶಕನ ಸಹಾಯಪಡೆಯುವಉದ್ದೇಶದಿಂದ ಈ ರಾಜನ ಭಗಿನಿ ಪದ್ಮಾವತಿ ಮತ್ತು ಉದಯನರ ವಿವಾಹವು ನಡೆಯುವಂತೆ ಹಂಚಿಕೆಹೂಡಿ

ದನು. ಇದೇ ಸಮಯದಲ್ಲಿ ಪ್ರದ್ಯೋತನು ಪದ್ಮಾವತಿಯನ್ನು ತನ್ನ ಮಗನಿಗೆ ವಿವಾಹ ಮಾಡಿಕೊಡಬೇಕೆಂದು ಮಗಧರಾಜನನ್ನು ಕೋರಿದ್ದನಾದರೂ ಯೌಗಂಧರಾಯಣನ ಹಂಚಿಕೆಯು ಫಲಮುಖವಾಗಿ ಪದ್ಮಾವತಿ ಮತ್ತು ಉದಯನರ ವಿವಾಹನಡೆದು, ಮಗಧರಾಜನ ನೆರವಿನಿಂದ ಉದಯನನು ತನ್ನ ರಾಜ್ಯವನ್ನು ಪುನಃ ಸ್ವಾಧೀನಗೊಳಿಸಿ ಕೊಂಡನು. ಅಳಿಯನಿಗೆ ತನ್ನರಾಜ್ಯದ ಪುನರ್ಲಾಭವಾದ ವಾರ್ತೆಯನ್ನು ತಿಳಿದ ಪ್ರದ್ಯೋತ ಮತ್ತು ಅಂಗಾರವತಿಯರು ತಮ್ಮ ಸಂತಸದ ಸಂದೇಶಕಳುಹುವರು.

## ಜೈನ ಆಮ್ನಾಯದ ಕಥೆಗಳು

**ವೃಷಭಸೇನಭಟ್ಟಾರಕರ ಕಥೆ:**—ಅವಂತಿಯೆಂಬ ನಾಡಿನ ಉಜ್ಜಯಿನೀ ನಗರದಲ್ಲಿ ಪ್ರದ್ಯೋತನೆಂಬ ಅರಸನಿದ್ದನು. ಈತನಿಗೆ ಜ್ಯೋತಿರ್ಮಾಲೆಯೆಂಬ ಪತ್ನಿಯಿದ್ದಳು. ಒಮ್ಮೆ ಕಾಡಾನೆಯನ್ನು ಹಿಡಿಯುವ ಉದ್ದೇಶದಿಂದ ಪ್ರದ್ಯೋತನು ಪಳಗಿದ ಆನೆಯೊಂದನ್ನೇರಿ ಹೊರಟನು. ಆದರೆ ಮದವೇರಿದ ಆ ಆನೆಯು ದೆಸೆ ತಪ್ಪಿ ಓಡಲಾರಂಭಿಸಿ ದಂಡಕಾರಣ್ಯವನ್ನು ಸೇರಲು ಪ್ರದ್ಯೋತನು ಮರದ ಟೊಂಗೆ ಯೊಂದನ್ನು ಹಿಡಿದು ಪಾರಾದನು. ಅನಂತರ ಆತನು ಮರದಿಂದಿಳಿದು ಅಡವಿ ಯನ್ನು ದಾಟಿ ಖೇಟವೆಂಬ ಊರಿನ ಬಾವಿಯಬಳಿಹೋಗಿ ಹಸಿವು, ತೃಷೆಗಳಿಂದ ಕಂಗೆಟ್ಟು ಕುಳಿತನು. ಅಷ್ಟರಲ್ಲಿ ಆ ಊರಿನ ಗಾವುಂಡನಾದ ಜಿನವಾದಿಕ ಮತ್ತು ಈತನ ಪತ್ನಿ ಜಿನಮತಿ ಎಂಬ ದಂಪತಿಗಳ ಮಗಳಾದ ಜಿನದತ್ತೆಯೆಂಬ ರೂಪವತಿ ಯಾದ ಕನ್ಯೆಯು ನೀರಿಗಾಗಿ ಆ ಬಾವಿಯ ಬಳಿ ಬಂದಳು. ಆಕೆಯಂ ಕಂಡರಸ ನೆಲೆ ಕೂಸೆ ನೀರಂ ಕುಡಿಯಲೆರೆಯಾ ಎಂದೊಡಂತೆಗೆಯ್ವೆನೆಂದಾತನ ರೂಪುಂ ಗಾಡಿಯುಂ ತೇಜಮುಂ ಲಾವಣ್ಯಮುಮಂ ಕಂಡಾಟಿಸಿ ನೀರಂ ಸೇದಿಕೊಂಡು ಬಂದು ಕುಡಿಯಲೆರೆಯೆ ಕುಡಿಯೆ ಕುಡಿಯೆ ಕರಗದ ಧಾರೆಯನುಗುದುಕೊಂಡೊಡ ರಸನಾಕೆಯ ಮೊಗಮಂ ನೋಡಿ ನಕ್ಕೇಕೆ ಕಾಡುವಾ ಕೂಸೆ ಕಾಡದೆ ಕುಡಿಯ ಲೆರೆಯಾ ಎಂದೊಡಾಕೆಯುಂ ಕುಡಿಯಲ್ಕೆರೆದು ತನ್ನ ಮನೆಗೆವೋಗಿ ತನ್ನ ತಂದೆ ಗಿಂತೆಂದಳಮ್ಮಾ ಊರ ಪೊರಗಣ ಬಾವಿಯೊಳೊರ್ವಂ ಮಹಾಪುರುಷಂ ಬಂದಿರ್ದೊ ನಾತನಂ ನೀ ಮೊಡಗೊಂಡು ಬನ್ನಿಮೆಂದೊಡಂತೆಗೆಯ್ವೆನೆಂದಾತನುಂ ಪೋಗಿಯೊಡ ಗೊಂಡು ಬಂದಾತನ ಶ್ರಮಂ ಪೋಗೆ ದಿವ್ಯಮಪ್ಪಾಹಾರಮನೂಡಿರ್ದನ್.

ಅರಸನು ಜಿನವಾದಿಕನ ಮನೆಯಲ್ಲಿ ವಿಶ್ರಾಂತಿಪಡೆಯುತ್ತಿರಲು, ರಾಜಭಟರು ಅವನಿಗಾಗಿ ಹುಡುಕುತ್ತಾ ಜಿನವಾದಿಕನ ಮನೆಗೆಬಂದು, ಅರಸನನ್ನು ವಂದಿಸಿ, 'ಜೀಯಾ ಮಹಾಪ್ರಸಾದ' ವೆನ್ನುವುದನ್ನು ಕಂಡ ಜಿನವಾದಿಕನು, ತನ್ನ ಮನೆಗೆ ಬಂದಿರುವಾತನು ಸ್ವಯಂ ಅರಸನಾಗಿದ್ದಾನೆಂದು ತಿಳಿದು ಭಯಭಕ್ತಿಯಿಂದ ಸತ್ಕರಿ ಸಿದನು. ಆಗ ರಾಜನು ತನಗೆ ಕನ್ಯೆಯನ್ನುಕೊಟ್ಟು ವಿವಾಹಮಾಡಿಕೊಡಬೇಕೆನಲು

ಜಿನವಾದಿಕನು ತನ್ನ ಮಗಳನ್ನಿತ್ತು ವಿವಾಹಮಾಡಿಕೊಟ್ಟನು. ಅನಂತರ ಪ್ರದ್ಯೋತನು ತನ್ನ ಈ ನೂತನ ಮಡದಿಗೆ ಮಹಾದೇವಿ ಪಟ್ಟಂಗಟ್ಟಿ ರಾಜಧಾನಿಗೆ ಬಂದು, ಇತರ ಮಡದಿಯರನ್ನು ಕಡೆಗಣಿಸಿ, ನೂತನ ಮಡದಿಯಾದ ಜಿನದತ್ತೆಯಲ್ಲಿ ವಿಶೇಷ ಅನುರಕ್ತಿವುಳ್ಳವನಾಗಿ, ಈಕೆಯ ಅಂತಃಪುರದಲ್ಲಿಯೇ ಇರಲಾರಂಭಿಸಿದನು. ಒಂದುದಿನ ಸೊಕ್ಕಿದಾನೆಯು ಬಾವಿಯಂ ಪೊಕ್ಕು ಕಳಕಳವಾಗಿ ಅರಸನಿಗರುಹಲು, ಆತನು ಕೂಡಲೆ ಆ ಕಾಡಾನೆಯನ್ನು ಕಟ್ಟಿಸಲು ಹೊರಟುಹೋದನು. ಆಗ ಜಿನದತ್ತೆಯು, ಪಸದನಂಗೊಂಡಿರ್ದ ತನ್ನಂ ಬಿಸುಟ್ಟರಸಂ ಪೋದನೆಂದು ಮುಳಿದು ನುಡಿವುದುಮರಸನಾಕೆಯನೊಡಗೊಂಡು ಪೋಗದುದಂ ಕಂಡರಸಿಯರ್ಕಳೆಲ್ಲಂ ಸಂತೋಷಮಾಗಿ ಇನ್ನೆಗಮರಸಂ ಸೂಳು ಪಾಳಿಯುಮನೀಗುಮೆಂದು ರಾಗಿಸಿ ನುಡಿವ ಮಾತುಗಳಂ ಜಿನದತ್ತೆಕೇಳ್ದು ಕಿನಿಸಿ ಇನ್ನಾತನೆನಗೆ ಬಾಳ್ತೆಯಲ್ಲನೆಂದು ತನ್ನ ಮಾಡದಿಂ ಪೊರಮಟ್ಟು ಪೆರತೊಂದು ಪ್ರಾಸಾದದೊಳ್ ಪೋಗಿರ್ದೊಳ್.

ಅರಸನು ಕಾಡಾನೆಯನ್ನು ಕಟ್ಟಿಸಿ ಜಿನದತ್ತೆಯಮಾಡಕ್ಕೆಹೋಗಿ ಅರಸಿಯನ್ನು ಕಾಣದೆ, ಅಲ್ಲಿದ್ದವರನ್ನು ವಿಚಾರಿಸಲು 'ನಿಮ್ಮೊಡನೆ ತನ್ನನ್ನು ಕರೆದುಕೊಂಡು ಹೋಗಲಿಲ್ಲವೆಂದು ಕೋಪಿಸಿಕೊಂಡು ಪುರುಷವ್ರತಪಡೆದು ತಪಸ್ವಿನಿಯಾಗಿ ಪೆರತೊಂದುಮಾಡದಲ್ಲಿರುವಳು' ಎಂದು ಹೇಳಿದರು. ಆಗ ಅರಸನು ಕೋಪಗೊಂಡು 'ಇಂತಹ ವ್ರತ ಮತ್ತು ತಪಸ್ಸು ನನ್ನಲ್ಲಿ ಕೂಡದು, ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿ' ಎಂದು ಹೇಳಲು, ಅವರು ಅಂತೆಯೇ ಒಂಭತ್ತು ತಿಂಗಳ ಗರ್ಭಿಣಿಯಾಗಿದ್ದ ಜಿನದತ್ತೆಯನ್ನು ಮಸಣದಲ್ಲಿ ಬಿಟ್ಟರು. ಜಿನದತ್ತೆಯು ಅಂದಿರುಳಿನಲ್ಲಿಯೇ ಗಂಡುಮಗುವೊಂದನ್ನು ಹೆತ್ತಳು.

ಇತ್ತ ಅರಸನು, ಅದೇ ಇರುಳಿನಲ್ಲಿ ಬಿಳಿದಾದ ಹೋರಿ (ಶ್ವೇತ ವೃಷಭ) ಒಂದನ್ನು ಕನಸಿನಲ್ಲಿ ಕಂಡು ಮರುದಿನ ಆಸ್ಥಾನದಲ್ಲಿ ಮಂತ್ರಿಗೆ ತನ್ನ ಕನಸಿನ ವಿಷಯವನ್ನು ತಿಳಿಸಿದನು. 'ಆಗ ಮಂತ್ರಿಯು ನಿಮಗೆ ಪುತ್ರಲಾಭವಾಗಿದೆ' ಎಂದು ಅರುಹಲು, ಸೇವಕ ಜನರನ್ನು ವಿಚಾರಿಸಿ ತನ್ನ ಅರಸಿಯರಾರೊಬ್ಬರಿಗೂ ಕೂಸು ಜನಿಸಿಲ್ಲವೆಂದು ತಿಳಿದನು. ಅನಂತರ ಮಸಣದಲ್ಲಿ ತ್ಯಕ್ತಳಾಗಿರುವ ಜಿನದತ್ತೆಯಲ್ಲಿ ಕೂಸು ಜನಿಸಿರಬೇಕೆಂದು ಪರಿಭಾವಿಸಿ, ಮಂತ್ರಿ ಮುಖ್ಯರನ್ನು ಕಳುಹಿಸಿ, ಕೂಸನೊಡಗೂಡಿದ ಜಿನದತ್ತೆಯನ್ನು ಕರೆಯಿಸಿ ಆಕೆಯನ್ನು ಸಂತಯಿಸಿ, ಕೂಸಿಗೆ ವೃಷಭಸೇನನೆಂದು ಹೆಸರಿಟ್ಟು ಸುಖದಿಂದಿದ್ದನು.

ವೃಷಭಸೇನನು ಎಂಟು ವರ್ಷ ಪ್ರಾಯದವನಾಗಲು ಪ್ರದ್ಯೋತನು ಆತನಿಗೆ ರಾಜ್ಯಪಟ್ಟಕಟ್ಟಲು ಆಲೋಚಿಸಿದನು. ಆದರೆ ವೃಷಭಸೇನನು ಅದಕ್ಕೆ ಒಪ್ಪದೆ ಮುನಿದೀಕ್ಷೆಪಡೆಯಲು ಸಿದ್ಧನಾದನು. ಆಗ ಪ್ರದ್ಯೋತನು ಜ್ಯೋತಿರ್ಮಾಲೆಯೆಂಬ

ತನ್ನರಸಿಯ ಪುತ್ರನಾದ ವಸುಪಾಲನೆಂಬುವನಿಗೆ ರಾಜ್ಯಭಾರವನ್ನೊಪ್ಪಿಸಿ, ವೃಷಭಸೇನನೊಡನೆ ತಾನೂ ಗುಣಧರರೆಂಬಾಚಾರ್ಯರಬಳಿ ದೀಕ್ಷೆಪಡೆದನು. ವೃಷಭಸೇನಮುನಿಯು ಹನ್ನೆರಡು ವರ್ಷಪರ್ಯಂತ ಗುರುಗಳಬಳಿ ಆಗಮಗಳೆಲ್ಲವನ್ನೂ ಕಲಿತು, ಗುರುವಿನ ಅನುಮತಿಪಡೆದು, ಗ್ರಾಮನಗರಾದಿಗಳಲ್ಲಿ ವಿಹರಿಸುತ್ತಾ ವತ್ಸೆಯೆಂಬ ನಾಡಿನ ಕೋಶಾಂಬೀನಗರದಬಳಿಯ ಉದಯಾವತಪರ್ವತಕ್ಕೆ ಬಂದು, ನಾಲ್ಕು ತಿಂಗಳ ಆತಪಯೋಗವನ್ನು ಕೈಗೊಂಡು ತಪೋನಿರತನಾಗಿರಲು ಶ್ರಾವಕಜನರು ಭಕ್ತ್ಯಾದರಗಳಿಂದ ಪೂಜಿಸುತ್ತಿದ್ದರು. ಇಂತಿರಲು ಆನಗರದ ನಿವಾಸಿಯಾದ ಬುದ್ಧಜನೆಂಬ ಉಪಾಸಕನು ವೃಷಭಸೇನ ಮುನಿಯ ವಿಷಯದಲ್ಲಿ ಮಾತ್ಸರ್ಯಭಾವತಳೆದು, ಮುನಿಯು ಚರಿಗೆಹೋದ ಸಮಯದಲ್ಲಿ ಯೋಗಶಿಲೆಯ ಸುತ್ತಲೂ ಕಿಚ್ಚಸಿಕ್ಕಿ ಅದನ್ನು ಕೆಂಡದಂತೆ ಕಾಯಿಸಿ, ಕೆಂಡಗಳನ್ನು ಆ ಶಿಲೆಯಮೇಲೆ ಹರವಿ ಹೊರಟುಹೋದನು. ಚರಿಗೆಯಿಂದ ಹಿಂದಿರುಗಿದ ವೃಷಭಸೇನಮುನಿಯು ಯೋಗಶಿಲೆಯು ಕೆಂಡದಂತಾಗಿರುವುದನ್ನು ಕಂಡು, ಆಜೀವಪರ್ಯಂತ ಆಹಾರಾದಿವಸ್ತುಗಳ ತ್ಯಾಗಮಂ ಕೈಗೊಂಡು ಯೋಗಶಿಲೆಯನ್ನೇರಿ ತಪೋನಿರತನಾಗಿ ಮಡಿದು ಸ್ವರ್ಗದಲ್ಲಿ ಜನಿಸಿದನು.

[ವಡ್ಡಾರಾಧನೆ–ಕಥಾಸಂಖ್ಯೆ ೧೦]

**ಗುರುನಿಹ್ನವ ಕಥೆ:**

[ಶ್ರೀ ಆ. ನೇ. ಉಪಾಧ್ಯೆಯವರಿಂದ ಸಂಪಾದಿತ–ಬೃಹತ್ಕಥಾಕೋಶ ; ಕಥಾಸಂಖ್ಯೆ ೩೩–ಗುರುನಿಹ್ನವ ಕಥಾನಕಂ]

ಅವಂತೀದೇಶದ ಉಜ್ಜಯಿನೀನಗರದಲ್ಲಿ ಧೃತಿಷೇಣನೆಂಬರಾಜನಿದ್ದನು. ಈತನಿಗೆ ಅಮಲಮತಿಯೆಂಬ ಪತ್ನಿಯಲ್ಲಿ ಚಂಡಪ್ರಜ್ಞನೆಂಬ ಮಗನಾದನು. ವಿನ್ಯಾತಟಪುರದ ಸೋಮಶರ್ಮಮತ್ತು ಸೌಮ್ಯೆಯೆಂಬ ದಂಪತಿಗಳಿಗೆ ಸರ್ವಶಾಸ್ತ್ರಾರ್ಥಕುಶಲನೂ, ಹದಿನೆಂಟು (ಪ್ರಕಾರದ) ಲಿಪಿ ವಿಜ್ಞಾನಸಂಪನ್ನನೂ ಆದ ಕಾಲಸಂದೀವನೆಂಬ ಮಗನಿದ್ದನು. ಚಂಡಪ್ರಜ್ಞನು ಕಾಲಸಂದೀವನ ಬಳಿ ವಿದ್ಯಾಭ್ಯಾಸಮಾಡಿ ಹದಿನೇಳು ಪ್ರಕಾರದ ಲಿಪಿಗಳಲ್ಲಿ ಕುಶಲನಾದನು. ಅನಂತರ ಯವನಲಿಪಿಯನ್ನು ಅಭ್ಯಾಸ ಮಾಡುವಾಗ ಚಂಡಪ್ರಜ್ಞನಲ್ಲಿ ಕಂಡುಬಂದ ಔದಾಸೀನ್ಯಭಾವದಿಂದ ಕೋಪಗೊಂಡ ಕಾಲಸಂದೀವನು, ಚಂಡಪ್ರಜ್ಞನ ತಲೆಗೆ ಕಾಲಿನಿಂದ ಒದ್ದನು. ಇದರಿಂದ ಕೋಪಗೊಂಡ ಚಂಡಪ್ರಜ್ಞನು ಕಾಲಸಂದೀವನನ್ನು ಕುರಿತು 'ದೈವಯೋಗದಿಂದ ನಾನು ರಾಜನಾದಪಕ್ಷದಲ್ಲಿ, ನಿನ್ನ ಕಾಲುಗಳನ್ನು ಕೊಡಲಿಯಿಂದ ಕತ್ತರಿಸಿಹಾಕುವೆನು' ಎಂದು ಹೇಳಿದನು. ಇದಕ್ಕೆ ಪ್ರತಿಯಾಗಿ ಕಾಲಸಂದೀವನು 'ಕುಮಾರನೇ! ನೀನು ರಾಜನಾದಾಗ ನಿಸ್ಸಂಶಯವಾಗಿ ನನ್ನಪಾದಕ್ಕೆ ಪಟ್ಟಬಂಧಮಾಡುವಿ' ಎಂದು ಹೇಳಿದನು. ಕೊನೆಗೆ ಕಾಲಸಂದೀವನು ಚಂಡಪ್ರಜ್ಞನನ್ನು ೧೮ ಪ್ರಕಾರದ ಲಿಪಿಗಳಲ್ಲಿ

ಕುಶಲನನ್ನಾಗಿ ಮಾಡಿ ದಕ್ಷಿಣಾಪಥದತ್ತ ಪ್ರಯಾಣಮಾಡಿದನು. ಅಲ್ಲಿ ಸ್ವಲ್ಪ ಕಾಲದ ಅನಂತರ ಕಾಲಸಂದೀವನು ಶ್ರುತಸಾಗರಯೋಗಿಯಬಳಿ ಜಿನಧರ್ಮಶ್ರವಣ ಮಾಡಿ ಮುನಿದೀಕ್ಷೆಪಡೆದನು.

ಧೃತಿಷೇಣನು ಚಂಡಪ್ರಜ್ಞನಿಗೆ ರಾಜ್ಯಾಭಾರವಹಿಸಿ ದೀಕ್ಷೆಯನ್ನು ಸ್ವೀಕರಿಸಿದನು. ಒಮ್ಮೆ ಯವನರಾಜನೊಬ್ಬನು ಚಂಡಪ್ರದ್ಯೋತನಿಗೆ ಲೇಖನವೊಂದನ್ನು ಕಳುಹಿದನು. ಚಂಡಪ್ರದ್ಯೋತನ ಆಸ್ಥಾನದಲ್ಲಿದ್ದವರಲ್ಲಿ ಯಾರೊಬ್ಬರೂ ಈ ಪತ್ರವನ್ನೋದಲು ಸಮರ್ಥರಾಗಲಿಲ್ಲ. ಚಂಡಪ್ರದ್ಯೋತನು ತಾನೇ ಆ ಪತ್ರವನ್ನು ಓದಿಕೊಂಡನು. ಈ ಘಟನೆಯಿಂದ ಬಹುಹರ್ಷಚಿತ್ತನಾದ ಚಂಡಪ್ರದ್ಯೋತನು ವಿನ್ಯಾತಟದಿಂದ ತನ್ನ ಗುರುವಾದ ಕಾಲಸಂದೀವನನ್ನು ಕರೆಯಿಸಿಕೊಂಡು ಭಕ್ತಿಯಿಂದ ಪೂಜಿಸಿ ಪಾದಗಳಿಗೆ ಅಷ್ಟಾಪದಮಯವಾದ ಪಟ್ಟಬಂಧವನ್ನಿಕ್ಕಿ ವಂದಿಸಿದನು. ಅನಂತರ ಚಂಡಪ್ರಜ್ಞನು ಕಾಲಸಂದೀವನಬಳಿ ದೀಕ್ಷಾಸ್ವೀಕಾರಮಾಡಿದನು. ಹೀಗೆ ದೀಕ್ಷೆಯನ್ನು ಧರಿಸಿದ ಮರುಕ್ಷಣದಲ್ಲಿಯೇ ಇವನ ಶರೀರವು ವಿಶೇಷ ತೇಜೋಯುಕ್ತವಾಗಿ ಧವಲವರ್ಣವುಳ್ಳದ್ದಾಯಿತು. ಇದರಿಂದ ಈತನಿಗೆ ಶ್ವೇತಸಂದೀವನೆಂಬ ಹೆಸರು ಬಂದಿತು.

ಒಮ್ಮೆ ಈ ಯತಿಗಳೀರ್ವರೂ ಶ್ರೀ ವೀರಜಿನನ ಸಮವಸರಣಕ್ಕೆ ಹೋದರು. ಸಮವಸರಣದ ಹೊರವಲಯದಲ್ಲಿ ಶ್ವೇತಸಂದೀವ ಋಷಿಯನ್ನು ಶ್ರೇಣಿಕನು ಸಂದರ್ಶಿಸಿ 'ತಾವು ಯಾರ ಬಳಿ ತಪಸ್ಸನ್ನು ಗ್ರಹಿಸಿದಿರಿ ?' ಎಂದು ಪ್ರಶ್ನಿಸಿದನು. ಶ್ವೇತಸಂದೀವಋಷಿಯು, ಕಾಲಸಂದೀವನನ್ನು ತನ್ನ ಗುರುವೆಂದು ಹೇಳದೆ, ಜ್ಞಾನಸಾಗರನೂ ತಪೋರಾಶಿಯೂ ಆದ ಮಹಾವೀರನು ತನ್ನ ಗುರುವೆಂದು ಹೇಳಿದನು. ಆ ಕೂಡಲೆ ಶ್ವೇತಸಂದೀವನ ಮೈ ಕಪ್ಪಿಟ್ಟಿತು. ಇದರಿಂದ ಕುತೂಹಲಗೊಂಡ ಶ್ರೇಣಿಕನು ಗೌತಮಗಣಧರಸ್ವಾಮಿಯ ಬಳಿ ಹೋಗಿ ಶ್ವೇತಸಂದೀವನ ಶರೀರವು ಕಪ್ಪುಗೊಂಡುದಕ್ಕೆ ಕಾರಣವನ್ನು ವಿವರಿಸಬೇಕೆಂದು ಕೇಳಿದನು. ಗೌತಮಗಣಧರಸ್ವಾಮಿಯು ಶ್ರೇಣಿಕನನ್ನು ಕುರಿತು 'ಶ್ವೇತಸಂದೀವನು ಗುರುನಿಹ್ನವರೂಪದ ಅಸತ್ಯಭಾಷಣದಿಂದ ಪಾಪಭಾಗಿಯಾದುದರಿಂದ, ಆತನ ಮೈಯಿ ಕಪ್ಪುಗೊಂಡಿತು' ಎಂದು ಹೇಳಿದರು. ಶ್ರೇಣಿಕನು ಪುನಃ ಶ್ವೇತಸಂದೀವನನ್ನು ಸಂದರ್ಶಿಸಿ, ತಾನು ಗೌತಮಸ್ವಾಮಿಯಿಂದ ತಿಳಿದ ವಿಷಯವನ್ನರುಹಿ, ಗುರುವಾದ ಕಾಲಸಂದೀವನ ಬಳಿಹೋಗಿ ಆಲೋಚಿಸಬೇಕೆಂದು ತಿಳಿಸಿದನು. ಶ್ವೇತಸಂದೀವನು ಅಂತೆಯೇ ಗುರುವಿನ ಬಳಿ ಹೋಗಿ ವಿನಯಪೂರ್ವಕವಂದಿಸಿ ಪ್ರಾಯಶ್ಚಿತ್ತವನ್ನು ಪಡೆದು ತಪಸ್ಸು ಮಾಡಿ ಮುಕ್ತನಾದನು. [ಈ ಕಥೆಯಲ್ಲಿ ಧೃತಿಷೇಣನ ಪುತ್ರನನ್ನು ಕೆಲವೊಮ್ಮೆ 'ಚಂಡಪ್ರಜ್ಞ' ಎಂದು ಮತ್ತೆ ಕೆಲವೊಮ್ಮೆ 'ಚಂಡಪ್ರದ್ಯೋತ' ಎಂದು ಹೆಸರಿಸಿರುವುದನ್ನು ಗಮನಿಸಿಬೇಕಾಗಿದೆ.]

## ಪ್ರಭಾವತೀ ಕಥೆ:

[ಪುಣ್ಯಾಸ್ರವ ಕಥಾಕೋಶ—ಪು. ಸಂ. ೧೪೪-೧೫೧]

ವತ್ಸದೇಶದ ರೌರಕನಗರದಲ್ಲಿ ಉದ್ದಾಯನನೆಂಬ ರಾಜನಿದ್ದನು. ಈತನಿಗೆ ಜಿನಧರ್ಮಪರಾಯಣಳಾದ ಪ್ರ ಭಾ ವ ತಿ ಯೆಂ ಬ ರಾಣಿಯಿದ್ದಳು. ಪ್ರಭಾವತೀರಾಣಿಯ ದಾದಿಯಾಗಿದ್ದ ಮಂಡೋದರಿಯೆಂಬುವಳು ಸನ್ಯಾಸಗ್ರಹಣಮಾಡಿ ಆಶ್ರಮವಾಸಿಯಾಗಿದ್ದಳು. ಒಮ್ಮೆ ಈ ಮಂಡೋದರಿಯು ಅನೇಕ ಸನ್ಯಾಸಿನಿಯರೊಡಗೂಡಿ ರೌರಕಪುರಕ್ಕೆ ಬಂದು ನಗರದ ಹೊರವಲಯದಲ್ಲಿ ವಿಹರಿಸಿ, ತನ್ನನ್ನು ಬಂದು ಕಾಣಬೇಕೆಂದು ಪ್ರಭಾವತೀರಾಣಿಗೆ ಸಂದೇಶಕಳುಹಿದಳು. ಪ್ರಭಾವತೀರಾಣಿಯು ಅಂತಃಪುರಕ್ಕೆ ಬರಬೇಕೆಂದು ಮಂಡೋದರಿಗೆ ಹೇಳಿಕಳುಹಿದಳು. ಇದರಂತೆ ಮಂಡೋದರಿಯು ಅಂತಃಪುರಕ್ಕೆಬಂದಸಮಯದಲ್ಲಿ ಪ್ರಭಾವತೀರಾಣಿಯು ವಂದನಾದಿಕ್ರಿಯಾಪೂರ್ವಕ ತನ್ನನ್ನು ಸನ್ಮಾನಿಸಲಿಲ್ಲವೆಂಬ ಕಾರಣದಿಂದ ಆಕೆಗೆ ಕ್ರೋಧವುಂಟಾಯಿತು. ಅಂತೆಯೇ ಮಂಡೋದರಿಯು ಪ್ರಭಾವತೀರಾಣಿಯನ್ನು ದಂಡನೆಗೆ ಗುರಿಮಾಡಬೇಕೆಂಬ ಉದ್ದೇಶದಿಂದ, ಆಕೆಯ ಒಂದು ಸುಂದರ ಚಿತ್ರವನ್ನು ಸಿದ್ಧಪಡಿಸಿ ಉಜ್ಜಯಿನಿಯನ್ನು ಸೇರಿ ಆ ಚಿತ್ರವನ್ನು ಚಂದ್ರಪ್ರದ್ಯೋತರಾಜನಿಗೆ ತೋರಿದಳು. ಚಂದ್ರಪ್ರದ್ಯೋತನು, ಚಿತ್ರಗತವಾದ ಪ್ರಭಾವತೀರಾಣಿಯ ರೂಪಿನಿಂದ ವ್ಯಾಮೋಹಿತನಾದನು. ಈ ಸಮಯದಲ್ಲಿ ಉದ್ದಾಯನನು ಯುದ್ಧಪ್ರಸಂಗವಶದಿಂದ ರೌರಕನಗರದಿಂದ ದೂರವಿರುವನೆಂಬ ವಾರ್ತೆಯನ್ನು ಕೇಳಿ, ಪ್ರದ್ಯೋತನು ಸೈನ್ಯಸಮೇತನಾಗಿಹೊರಟು ರೌರಕನಗರದ ಕೋಟೆಯನ್ನು ಬಳಸಿನಿಂತನು. ಅನಂತರ ಪ್ರದ್ಯೋತನು ಚತುರನಾದ ವ್ಯಕ್ತಿಯೊಬ್ಬನನ್ನು ಪ್ರಭಾವತಿಯಬಳಿಗೆ ಕಳುಹಿಸಿ, ತನ್ನ ರೂಪಶೌರ್ಯಾದಿಗುಣಗಾನಮಾಡಿಸಿದನು. ಪ್ರಭಾವತಿರಾಣಿಯು ಆ ವ್ಯಕ್ತಿಯನ್ನು ತುಚ್ಛೀಕರಿಸಿ ಕಳುಹಿದಳು. ಪ್ರದ್ಯೋತನು ಪಟ್ಟಣವನ್ನಾಕ್ರಮಿಸಲೋಸುಗ ಯುದ್ಧವನ್ನಾರಂಭಿಸಿದನು. ಪ್ರಭಾವತೀರಾಣಿಯು, ನಗರದಲ್ಲಿ ಉಳಿದಿದ್ದ ಸೈನ್ಯವನ್ನು ನಗರರಕ್ಷಣೆಮಾಡಲು ನಿಯೋಜಿಸಿ, ಈಗ ಒದಗಿಬಂದಿರುವ ಸಂಕಟವು ಪರಿಹಾರವಾಗುವವರೆವಿಗೂ ತನಗೆ ನಿರಶನವ್ರತವಿರಲೆಂದು ವ್ರತಕೈಗೊಂಡು ದೇವಪೂಜೆಯಲ್ಲಿ ನಿರತಳಾದಳು. ಈ ಸಮಯದಲ್ಲಿ ದೇವನೊಬ್ಬನು ಅಲ್ಲಿ ನಡೆದಿದ್ದ ವಿದ್ಯಮಾನಗಳನ್ನು ತನ್ನ ಅವಧಿಜ್ಞಾನದಿಂದ ತಿಳಿದು ಮಾಯಾಬಲದಿಂದ ಪ್ರದ್ಯೋತನ ಸೇನೆಯೆಲ್ಲವನ್ನೂ ಉಜ್ಜಯಿನಿಗೆ ತಲುಪಿಸಿದನು. ಅನಂತರ ಈ ದೇವನು ಪ್ರದ್ಯೋತನ ವೇಷಧಾರಣೆಮಾಡಿ ಪ್ರಭಾವತಿಯ ಬಳಿಸಾರಿ ಆಕೆಯ ಶೀಲ-ಪರೀಕ್ಷೆ ನಡೆಯಿಸಿದನು. ಪ್ರಭಾವತಿಯಮೇಲೆ ಯಾವರೀತಿಯ ಹಾವಭಾವಪ್ರದರ್ಶನಗಳೂಪರಿಣಾಮಕಾರಿಯಾಗದಿದ್ದುದರಿಂದ, ಆ ದೇವನು ಆಕೆಯ ಶೀಲಕ್ಕೆ ಮೆಚ್ಚಿ ಸ್ತುತಿಗೈದು ಹೊರಟುಹೋದನು ಉದ್ದಾಯನರಾಜನು ತನ್ನ ನಗರಕ್ಕೆ ಹಿಂದಿರುಗಿದ ಅನಂತರ ಇಲ್ಲಿ

ನಡೆದಿದ್ದ ವಿದ್ಯಮಾನಗಳೆಲ್ಲವನ್ನೂ ತಿಳಿದು ಸಂತೋಷಪಟ್ಟನು. ಕೆಲಕಾಲ ಕಳೆದ ಮೇಲೆ ಉದ್ದಾಯನನು ಸುಕೀರ್ತಿಯೆಂಬ ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ ವರ್ಧಮಾನಸ್ವಾಮಿಯ ಸಮವಸರಣಕ್ಕೆ ಬಂದು ಮುನಿದೀಕ್ಷೆ ಪಡೆದನು. ಪ್ರಭಾವತೀ ರಾಣಿಯು ಆರ್ಯಿಕಾವ್ರತಧಾರಣೆಮಾಡಿದಳು.

**ಜಲಾತಪುತ್ರನ ಕಥೆ:** ಮಗಧೆಯೆಂಬ ನಾಡಿನ ರಾಜಗೃಹನಗರದಲ್ಲಿ [1] ಉಪ ಶ್ರೇಣಿಕನೆಂಬ ರಾಜನಿದ್ದನು. ಒಮ್ಮೆ ಇವನು ಬೇಟೆಯಾಡಲೋಸುಗ ಕುದುರೆ ಯೊಂದನ್ನೇರಿ ಹೊರಟನು. ಆ ಕುದುರೆಯು ವಾಯುವೇಗದಿಂದೋಡಿ ವಿಂಧ್ಯಾಟವಿಯ ನಡುವಿನ ಸುರಮ್ಯವೆಂಬ ಬೇಡರ ಹಳ್ಳಿಯ ಬಳಿ ದಣಿದುನಿಂತಿತು. ಆಗ ಉಪಶ್ರೇಣಿ ಕನು ದಣಿದಿದ್ದ ಆ ಕುದುರೆಯನ್ನು ವೈದಡವಿ ನೀರ್ಗುಡಿಸಿ ಮೇಯಲು ಬಿಟ್ಟು ಮರವೊಂದರಕೆಳಗೆ ಚದುರಸಿಗೆಯನ್ನು ಹಾಸಿ ವಿಶ್ರಮಿಸಿದನು. ಈ ಸಮಯಕ್ಕೆ ಆ ಬೇಡರವಳ್ಳಿಯ ನಾಯಕನಾಗಿದ್ದ ಮಹಾಕಾಳ ಮತ್ತು ಆವನರಸಿ ಸೌಂದರಿಯರ ಸುತೆ ಯಾದ ಗುಣಸುಂದರಿಯು ತನ್ನ ಗೆಳತಿಯರೊಡನೆ ಉಪಶ್ರೇಣಿಕನು ವಿಶ್ರಮಿಸಿಕೊಳ್ಳು ತ್ತಿದ್ದ ಸ್ಥಾನಕ್ಕೆಬಂದಳು. ಪರಸ್ಪರ ನೋಟದಿಂದ ಆಕರ್ಷಿತರಾದ ಉಪಶ್ರೇಣಿಕ ಮತ್ತು ಗುಣಸುಂದರಿಯರಲ್ಲಿ ಆನುರಾಗವಂಕುರಿಸಿತು. ಇದನ್ನು ತಿಳಿದ ಮಹಾಕಾಳನು ತನ್ನ ಮಗಳನ್ನು ಉಪಶ್ರೇಣಿಕನಿಗಿತ್ತು ವಿವಾಹಮಾಡಿದನು. ಅನಂತರ ಉಪಶ್ರೇಣಿ ಕನು ಈ ನವವಧುವನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡುಹೋಗಿ ಆವಳಿಗೆ ಚಿಳಾತ ಮಹಾದೇವಿಯೆಂದು ಹೆಸರನ್ನಿಟ್ಟು, ಇಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂಸಲೆ ಚಿಳಾತಮಹಾದೇವಿಯಲ್ಲಿ ಚಿಳಾತಪುತ್ರನೆಂಬ ಹಿರಿಯಮಗನಾದನು. ಆನಂತರ ಉಪಶ್ರೇಣಿಕನ ಹಿರಿಯಮಹಾದೇವಿಗೆ ಶ್ರೇಣಿಕನೆಂಬ ಮಗನಾದನು.

ಒಮ್ಮೆ ಉಪಶ್ರೇಣಿಕನು ತನ್ನ ಮಕ್ಕಳಲ್ಲಿ ಮುಂದೆ ರಾಜನಾಗುವ ಭಾಗ್ಯಶಾಲಿ ಯಾರೆಂದು, ನಿಮಿತ್ತಜ್ಞರಲ್ಲಿ ಪ್ರಶ್ನೆಮಾಡಿದನು. ಅವರಿಂದ, ಶ್ರೇಣಿಕನು ಮುಂದೆ ರಾಜನಾಗಲಿರುವನೆಂಬುದಾಗಿ ತಿಳಿದು, ನಾನಾರೀತಿಯಿಂದ ಶ್ರೇಣಿಕನ ಸತ್ವಪರೀಕ್ಷೆ ಮಾಡಿ ಈತನೇ ರಾಜನಾಗಲು ಅರ್ಹನಾಗಿರುವನೆಂದು ನಿಶ್ಚಯಿಸಿ, ಅಸೂಯಾಪರ ರಾದ ದಾಯಾದರಿಂದ ಅಪಾಯ ಒದಗಬಹುದೆಂಬ ಶಂಕೆಯಿಂದ ಈತನನ್ನು ಅವ ರಿಂದ ದೂರವಿಡಲು ಯೋಚಿಸಿದನು. ಅಂತೆಯೇ, ಶ್ರೇಣಿಕನ ಮೇಲೆ ರಾಜದ್ರೋಹದ ಸುಳ್ಳು ಅಪಾದನೆಯನ್ನು ಹೊರಿಸಿ, ತನ್ನ ರಾಜ್ಯಪ್ರದೇಶವನ್ನು ಬಿಟ್ಟು ಹೊರಟು ಹೋಗಬೇಕೆಂಬ ದಂಡನೆಯನ್ನು ವಿಧಿಸಿದನು. ಶ್ರೇಣಿಕನು ಕೂಡಲೇ ರಾಜಗೃಹ ವನ್ನು ಬಿಟ್ಟು ಪ್ರಯಾಣಮಾಡಿ ನಂದಿಗ್ರಾಮಕ್ಕೆ ಬಂದನು. ರಾಜದಂಡನೆಗೆ ಪಾತ್ರ ನಾಗಿದ್ದ ಇವನನ್ನು ಆ ಗ್ರಾಮನಿವಾಸಿಗಳಾರೂ ಪುರಸ್ಕರಿಸಲಿಲ್ಲ. ಹಸಿವಿನಿಂದ ಬಳ

---

1 ಇವನನ್ನು ಗುಣಭದ್ರಾಚಾರ್ಯವಿರಚಿತ ಉತ್ತರಪುರಾಣದ-ವರ್ಧಮಾನಸ್ವಾಮಿ ಪುರಾಣದಲ್ಲಿ 'ಕುಣಿಕಕ್ಷಿತೀಟ್' ಎಂದು ಹೆಸರಿಸಿದೆ.

ಲಿದ್ದ ಶ್ರೇಣಿಕನು ವೇಷಮರೆಯಿಸಿಕೊಂಡು ಜಠರಾಗ್ನಿ ಭಗವಾನ್ ಎಂಬ ವೈಷ್ಣವ ಪರಿವ್ರಾಜಕರ ಮಠವನ್ನು ಹೊಕ್ಕು ಭೋಜನವನ್ನು ಪಡೆದು ತೃಪ್ತನಾದನು. ಇದರಿಂದ ಪರಿವ್ರಾಜಕಧರ್ಮಗುರುವಿನ ವಿಷಯದಲ್ಲಿ ಶ್ರೇಣಿಕನಿಗೆ ವಿಶೇಷ ಶ್ರದ್ಧಾಭಕ್ತಿಯು ಮೂಡಿತು. ಈ ಸಮಯದಲ್ಲಿ ತೀರ್ಥಯಾತ್ರಾವಶದಿಂದ ಇಲ್ಲಿಗೆ ಬಂದಿದ್ದ ಮಹಾದ್ರಾವಿಡದೇಶದ ಕಾಂಚೀನಗರದ ರಾಜನಾದ ವಸುಪಾಲನ ಮಂತ್ರಿ ಇಂದ್ರದತ್ತನೆಂಬುವನೊಡನೆ ಶ್ರೇಣಿಕನಿಗೆ ಮೈತ್ರಿಯುಂಟಾಯಿತು. [ಪುಣ್ಯಾಸ್ರವಕಥಾಕೋಶದಲ್ಲಿ ಈ ಬ್ರಾಹ್ಮಣನನ್ನು ವೇಣಾತಟಾಕಗ್ರಾಮವಾಸಿಯೆಂದು ಹೇಳಿದೆ]

ಇಂದ್ರದತ್ತನು ಶ್ರೇಣಿಕನನ್ನು ತನ್ನೂರಿಗೆ ಕರೆದುಕೊಂಡುಹೋಗಿ, ತನ್ನ ಮಗಳಾದ ಅಭಯಮತಿಯನ್ನು ಕೊಟ್ಟು ವಿವಾಹಮಾಡಿದನು. ಈಕೆಯಲ್ಲಿ ಜನಿಸಿದ ಅಭಯಕುಮಾರನೆಂಬ ಮಗನ ಬಾಲಲೀಲೆಗಳನ್ನು ನೋಡಿ ಹರ್ಷಿಸುತ್ತ ಶ್ರೇಣಿಕನು ಕಾಲಯಾಪನೆಮಾಡುತ್ತಿದ್ದನು.

ಇತ್ತ ಉಪಶ್ರೇಣಿಕರಾಜನು ರೋರುಗಪುರದ ಉದ್ದಾಯನನೆಂಬ ಮಹಾಸಾಮಂತನನ್ನು ಕರೆಯಿಸಿ, ಉಜ್ಜಯಿನಿಯ ಪ್ರದ್ಯೋತನನ್ನು ಸೆರೆಹಿಡಿದು ತರುವಂತೆ ಆಜ್ಞಾಪಿಸಿದನು. ಅಂತೆಯೇ ದಂಡೆತ್ತಿಹೋದ ಉದ್ದಾಯನನನ್ನು ಪ್ರದ್ಯೋತನು ಸೆರೆಹಿಡಿದು ಬಂಧನದಲ್ಲಿರಿಸಿದನು. ಆಗ ವಿಜಯನೆಂಬ ಕುಮಾರನು ಉಪಾಯಾಂತರದಿಂದ ಉದ್ದಾಯನನನ್ನು ಸೆರೆಯಿಂದ ಬಿಡಿಸಿ ಕರೆತಂದನು. ಇದರಿಂದ ಕೋಪಗೊಂಡ ಪ್ರದ್ಯೋತನು ಸೈನ್ಯ ಸಮೇತನಾಗಿ ರಾಜಗೃಹದಮೇಲೆ ಧಾಳಿಮಾಡಲು ಬಂದನು. ಈ ಸಮಯದಲ್ಲಿ ಉಪಶ್ರೇಣಿಕನು ಪ್ರದ್ಯೋತನನ್ನು ಸೆರೆಹಿಡಿದುಕೊಟ್ಟವರಿಗೆ ಕೋರಿದ ಇಷ್ಟಿತಾರ್ಥವನ್ನು ಸಲ್ಲಿಸುವುದಾಗಿ ಡಂಗುರ ಹೊಯಿಸಿದನು. ಚಿಲಾತಪುತ್ರನು, ಸರೋವರವೊಂದರಲ್ಲಿ ಮೀಯುತ್ತಿದ್ದ ಪ್ರದ್ಯೋತನನ್ನು ಸೆರೆಹಿಡಿದು ಉಪಶ್ರೇಣಿಕನಿಗೊಪ್ಪಿಸಿದನು. ಸಂತುಷ್ಟನಾದ ಉಪಶ್ರೇಣಿಕನು ಇಷ್ಟಾರ್ಥವನ್ನು ಕೋರುವಂತೆ ಚಿಲಾತಪುತ್ರನಿಗೆ ಹೇಳಿದನು. ಚಿಲಾತಪುತ್ರನು 'ನಿಮ್ಮ ಅಂತಃಪುರದ ಹೊರತಾಗಿ ಉಳಿದೆಲ್ಲೆಡೆಯೂ ರಾಜಗೃಹದಲ್ಲಿ ೧೨ ವರ್ಷಕಾಲ ಸ್ವಚ್ಛಂದದಿಂದ ಸುಖಪಡೆಯಲು ಅನುಮತಿಬೇಕು' ಎಂದು ಕೋರಿದನು. ಕೊಟ್ಟಮಾತಿಗೆ ಮೀರಲಾರದೆ ಉಪಶ್ರೇಣಿಕನು ತಥಾಸ್ತು ಎಂದನು. ಹನ್ನೆರಡು ವರ್ಷಗಳ ತರುವಾಯ ಉಪಶ್ರೇಣಿಕನು ಚಿಲಾತಪುತ್ರನನ್ನು ಕರೆದು ದುರ್ನಡತೆಯನ್ನು ನಿಲ್ಲಿಸುವಂತೆ ಹೇಳಿದನು. ಆದರೆ ಚಿಲಾತಪುತ್ರನು ದುರ್ನಡತೆಯನ್ನು ಬಿಡದೆ ಸ್ವೇಚ್ಛಾನುವರ್ತಿಯಾಗಿರಲು ಉಪಶ್ರೇಣಿಕನು ಅವನನ್ನು ದೇಶದಿಂದಹೊರಗಟ್ಟಿ, ಶ್ರೇಣಿಕನನ್ನು ಕರೆಯಿಸಿ ಅವನಿಗೆ ಮಗಧದೇಶದ ರಾಜ್ಯಭಾರವನ್ನು ವಹಿಸಿ, ಮುನಿದೀಕ್ಷೆಯನ್ನು ಸ್ವೀಕರಿಸಿದನು. ಚಿಲಾತಪುತ್ರನು ತನ್ನ ಮಾತಾಮಹನಬಳಿ ಹೋಗಿ ತನ್ನದೇ ಆದ ರಾಜ್ಯವನ್ನು ಕಟ್ಟಿಕೊಂಡನು. [ವಡ್ಡಾರಾಧನೆ ಕಥಾ ಸಂ. ೧೫]

**ಶ್ರೇಣಿಕ :** ಮಗಧರಾಜ್ಯದಲ್ಲಿ ಅಭಿಷಿಕ್ತನಾದ ಅನಂತರ ಶ್ರೇಣಿಕನು ತನ್ನ ಪತ್ನೀಪುತ್ರರಾದ ಅಭಯಮತಿ ಮತ್ತು ಅಭಯಕುಮಾರರನ್ನು ರಾಜಗೃಹಕ್ಕೆ ಕರೆಯಿಸಿಕೊಂಡು ಸುಖವಾಗಿರುತ್ತಿರಲು, ಒಮ್ಮೆ ಚಿತ್ರಕಾರನೊಬ್ಬನು, ಸಿಂಧುದೇಶದ [ಬೃ. ಕ. ಕೋ.-ವಜ್ರದೇಶ-ವಿಶಾಲೀನಗರ] ಚೇಟಕನೆಂಬ ರಾಜನ ಮಗಳಾದ ಚೇಳಿನಿದೇವಿಯ ಚಿತ್ರಪಟವನ್ನು ತೋರಿದನು. ಆ ಚತ್ರಪಟದರ್ಶನದಿಂದ ಶ್ರೇಣಿಕನು ಚೇಳಿನಿಯಲ್ಲಿ ಅನುರಕ್ತನಾದನು. ಆದರೆ ಜಿನಧರ್ಮಾವಲಂಬಿಯಾದ ಚೇಟಕನು ವಿಧರ್ಮೀಯರಿಗೆ ಕನ್ಯೆಯನ್ನು ಕೊಡುವುದಿಲ್ಲೆಂದು, ತಿಳಿದ ಶ್ರೇಣಿಕನು ಚೇಳಿನಿಯನ್ನು ಪಡೆಯುವ ವಿಷಯದಲ್ಲಿ ನಿರಾಶೆಗೊಂಡು ಅಲಸಚಿತ್ತನಾಗಿ ಸೊರಗಿದನು. ಮಂತ್ರಿಗಳು ಶ್ರೇಣಿಕನ ಮನೋಭಿಷ್ಟವನ್ನು ಉಪಾಯಾಂತರದಿಂದ ಸಾಧಿಸಬೇಕೆಂದು ಯೋಚಿಸಿ, ಚತುರನಾದ ಅಭಯಕುಮಾರನನ್ನು ಈ ಕಾರ್ಯದಲ್ಲಿ ನಿಯೋಜಿಸಿದರು. ಅಭಯಕುಮಾರನು, ಶ್ರೇಣಿಕನ ಚಿತ್ರಪಟವೊಂದನ್ನು ಸಿದ್ಧಪಡಿಸಿ, ಚೇಟಕನ ರಾಜಧಾನಿಯನ್ನು ಸೇರಿ ಅಂತಃಪುರದ ಸೇವಕಜನರ ಮೂಲಕ, ಶ್ರೇಣಿಕನಚಿತ್ರವು ಚೇಳಿನಿಯ ದೃಷ್ಟಿಗೋಚರವಾಗುವಂತೆಮಾಡಿ, ಆಕೆಯ ಎದುರಿನಲ್ಲಿ ಶ್ರೇಣಿಕನ ಗುಣಗಾನಮಾಡಿಸಿದನು. ಸ್ವಲ್ಪಸಮಯದ ಅನಂತರ ಚೇಳಿನಿಯು ಶ್ರೇಣಿಕನಲ್ಲಿ ಅನುರಕ್ತಚಿತ್ತಳಾಗಿರುವಳೆಂಬುದನ್ನು ತಿಳಿದ ಅಭಯಕುಮಾರನು ಆಕೆಯನ್ನು ಉಪಾಯಾಂತರದಿಂದ ರಾಜಗೃಹನಗರಕ್ಕೆ ಕರೆದುತಂದನು. ಹೀಗೆ ಮನವೊಲಿದು ಬಂದ ಚೇಳಿನಿಯನ್ನು ಶ್ರೇಣಿಕನು ಮದುವೆಯಾಗಿ ಸುಖದಿಂದಿದ್ದನು. ಕಾಲಾನುಕ್ರಮದಲ್ಲಿ ಚೇಳಿನಿಗೆ ಕುಣಿಕನೇ ಮೊದಲಾದ ಎಂಟುಜನ ಮಕ್ಕಳಾದರು.

ಚೇಳಿನಿಯನ್ನು ವಿವಾಹವಾಗುವಸಮಯಕ್ಕೆ ಶ್ರೇಣಿಕನು ಬೌದ್ಧಧರ್ಮಾವಲಂಬಿಯಾಗಿದ್ದನು. ಆದ್ದರಿಂದ ತನ್ನ ಪ್ರಿಯಪತ್ನಿಯಾದ ಚೇಳಿನಿಯನ್ನೂ ಬೌದ್ಧಧರ್ಮದಲ್ಲಿ ಶ್ರದ್ಧಾವಂತಳನ್ನಾಗಿಮಾಡಲು ಯತ್ನಿಸಿದನು. ಇಂತೆಯೇ ಚೇಳಿನಿಯೂ ತನ್ನ ಪತಿಯನ್ನು ಜಿನಧರ್ಮದಲ್ಲಿ ಶ್ರದ್ಧೆಯುಳ್ಳವನನ್ನಾಗಿಮಾಡಲು ಯತ್ನಿಸುತ್ತಿದ್ದಳು. ಕೊನೆಗೆ ಶ್ರೇಣಿಕನು ಜಿನಧರ್ಮದಲ್ಲಿ ಶ್ರದ್ಧಾಭಕ್ತಿಯುಳ್ಳವನಾಗಿ ಶ್ರೀ ವೀರತೀರ್ಥಂಕರನ ಸಮವಸರಣದ ಶ್ರೋತೃಪ್ರಮುಖನೆನಿಸಿಕೊಂಡನು.

ಶ್ರೇಣಿಕನು ತನ್ನ ಮಗನಾದ [1]ಕುಣಿಕನಿಗೆ ರಾಜ್ಯಭಾರವನ್ನು ವಹಿಸಿದನು. ಕಾರಣಾಂತರದಿಂದ ತಂದೆಯವಿಷಯದಲ್ಲಿ ರುಷ್ಟನಾದ ಕುಣಿಕನು, ಅವನನ್ನು ಲೋಹಪಂಜರವೊಂದರಲ್ಲಿ ಬಂಧಿಸಿಟ್ಟನು. ಆದರೆ ತಾಯಿಯಾದ ಚೇಳನಿದೇವಿಯ ಹಿತೋಕ್ತಿಗಳ ಪ್ರಭಾವದಿಂದ, ತನ್ನ ತಂದೆಯವಿಷಯದಲ್ಲಿ ಅನುಕಂಪಭಾವವುಳ್ಳವನಾಗಿ ಆತನನ್ನು ಬಂಧನವಿಮುಕ್ತನನ್ನಾಗಿ ಮಾಡಲುಹೋದನು. ಈ ಸಮಯದಲ್ಲಿ ಕುಣಿಕನು ವೇಗವಾಗಿ ತನ್ನತ್ತ ಬರುತ್ತಿರುವುದನ್ನು ಕಂಡ ಶ್ರೇಣಿಕನು ತನ್ನನ್ನು ವಧೆಮಾಡಲೋ

1 ಬೃಹತ್ಕಥಾಕೋಶದಲ್ಲಿ 'ಕೋಣಿಕ' ಎಂಬ ಹೆಸರಿದೆ.

ಸುಗ ಅವನು ಬರುತ್ತಿರುವನೆಂದು ಭಾವಿಸಿ, ಸಮೀಪದಲ್ಲಿದ್ದ ಆಯುಧವೊಂದರಿಂದ ಆತ್ಮಹತ್ಯೆಮಾಡಿಕೊಂಡನು.

ಇದುವರೆವಿಗೆ ಉಲ್ಲೇಖಿಸಿರುವ ಕಥಾಯತ್ತ ಐತಿಹ್ಯಾಧಾರದಿಂದ ಪ್ರದ್ಯೋತ, ಬಿಂಬಿಸಾರ ಮತ್ತು ಅಜಾತಶತ್ರುಗಳ ಐತಿಹ್ಯಾಂಶಗಳನ್ನು ವಿವೇಚಿಸಿ ಸಂಕಲನಮಾಡ ಬೇಕಾಗಿದೆ.

ಬೌದ್ಧಆಮ್ನಾಯದ ಕಥನಾನುಸಾರವಾಗಿ ಅವಂತಿಯ ಅರಸನಾದ ಪ್ರದ್ಯೋತನು ಮಗಧರಾಜನಾದ ಬಿಂಬಿಸಾರನೊಡನೆ ಮೈತ್ರಿಯುಳ್ಳವನಾಗಿದ್ದ ಸಮಕಾಲೀನ ರಾಜನಾಗಿದ್ದನು. ಬಿಂಬಿಸಾರನ ಮರಣಾನಂತರ ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾದ ಅಜಾತಶತ್ರುವಿನ ಸಮಕಾಲೀನನಾಗಿ ಸ್ವಲ್ಪಕಾಲಪರ್ಯಂತವಾದರೂ ಪ್ರದ್ಯೋತನು ರಾಜ್ಯಭಾರನಡೆಸುತ್ತಿದ್ದಿರಬೇಕೆಂದು ಈ ಆಮ್ನಾಯದ ಐತಿಹ್ಯಾಧಾರದಿಂದ ವ್ಯಕ್ತವಾಗುವುದು.

ಜೈನಆಮ್ನಾಯದ ಕಥೆಗಳಲ್ಲಿ ಮಗಧರಾಜ ಬಿಂಬಿಸಾರನನ್ನು 'ಶ್ರೇಣಿಕ' ಎಂದು ಹೆಸರಿಸಲಾಗಿದೆಯೆಂದು ಚರಿತ್ರಕಾರರು ಗುರುತಿಸಿದ್ದಾರೆ. ದಿವ್ಯಾವದಾನದಲ್ಲಿ ಈ ರಾಜನನ್ನು 'ಶ್ರೇಣ್ಯೋ ಬಿಂಬಿಸಾರಃ' ಎಂದು ಹೆಸರಿಸಿದೆ. (ಪ್ರೊ. ಕೋವೆಲ್‌ರವರ ಸಂಪಾದಿತ ಕೃತಿ ಪು. ಸಂ. ೧೪೩–೧೪೬) 'ಸೇಣಿಯ' ಎಂಬ ಪ್ರಾಕೃತಪದ ಮೂಲದಿಂದ 'ಶ್ರೇಣ್ಯ' ಮತ್ತು ಶ್ರೇಣಿಕ ಎಂಬ ಹೆಸರುಗಳು ರೂಪಿತವಾಗಿ ಪ್ರಚಲಿತವಾಗಿವೆಯೆಂದು ಕಂಡುಬರುವುದು.

ಶ್ರೇಣಿಕಬಿಂಬಿಸಾರನ ಜೀವಿತಾಂತ್ಯವಿಷಯವಾಗಿ ಬೌದ್ಧ ಮತ್ತು ಜೈನ ಆಮ್ನಾಯಗಳಲ್ಲಿ ಸದೃಶರೀತಿಯ ಐತಿಹ್ಯವು ಉಳಿದುಬಂದಿದೆ. ಅಜಾತಶತ್ರುವು ತನ್ನ ತಂದೆಯಾದ ಬಿಂಬಿಸಾರನನ್ನು ಕೊಲೆಗೈದು ರಾಜ್ಯಭಾರದಲ್ಲಿ ಅಧಿಷ್ಠಿತನಾದನೆಂಬ ಬೌದ್ಧ ಆಮ್ನಾಯದ ಐತಿಹ್ಯದೊಡನೆ ಸಾದೃಶ್ಯತೆಯುಳ್ಳ ಐತಿಹ್ಯವು ಜೈನಆಮ್ನಾಯದ ಶ್ರೇಣಿಕ ಕಥಾನಕದಲ್ಲಿ ಉಳಿದುಬಂದಿದೆ. ಆದರೆ ಜೈನಆಮ್ನಾಯದ ಕಥೆಗಳಲ್ಲಿ ಶ್ರೇಣಿಕಬಿಂಬಿಸಾರನ ಈ ಪಿತೃಘಾತಕಸುತನನ್ನು 'ಅಜಾತಶತ್ರು' ವೆಂದು ಹೆಸರಿಸಿರದೆ, 'ಕುಣಿಕ', 'ಕೂಣಿಕ' ಮತ್ತು 'ಕೋಣಕ' ಎಂದು ಭಿನ್ನಕ್ರಮದಿಂದ ಹೆಸರಿಸುವುದು ಕಂಡುಬರುತ್ತದೆ. ಶ್ರೇಣಿಕಬಿಂಬಿಸಾರನ ತಂದೆಯನ್ನು ಗುಣಭದ್ರಾಚಾರ್ಯ ರಚಿತ ಉತ್ತರಪುರಾಣದ ವರ್ಧಮಾನ ಪುರಾಣ ಭಾಗದಲ್ಲಿ 'ಕುಣಿಕಕ್ಷಿತೀಟ್' ಎಂದು ನಿರ್ದೇಶಿಸಲಾಗಿದೆ. ಈ ಕುಣಿಕಕ್ಷಿತೀಶನ ಮೊಮ್ಮಗನಾದ ಅಜಾತಶತ್ರುವನ್ನು ಪ್ರಾಕೃತಭಾಷಾರೂಪದ 'ಕೋಣಕ' ಎಂಬ ಗೋತ್ರನಾಮದಿಂದ ನಿರ್ದೇಶಿಸುವ ರೂಢಿಯಿದ್ದಿರಬೇಕೆಂದು ಕಂಡುಬರುತ್ತದೆ. ಹಿಂದೆ ಉಲ್ಲೇಖಿಸಲಾಗಿರುವ ಪಟ್ಟಾವಲೀ ಸಮುಚ್ಚಯದ ವಾಕ್ಯದಲ್ಲಿ, ಅಜಾತಶತ್ರುವಿನ ಸುತನಾದ ಉದಾಯಿಯ

ಮರಣಾನಂತರ 'ಕೋಣಕ' ರಾಜ್ಯವು ಪಾಲಕನವಶವಾಯಿತೆಂದು ನಿರ್ದೇಶಿಸಲಾಗಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಇಲ್ಲಿ 'ಕೋಣಕ' ಪದವು ಉದಾಯಿಯ ವಂಶಸೂಚಕವಾಗಿ ಪ್ರಯುಕ್ತವಾಗಿರುವುದು ಸ್ಪಷ್ಟವಿದೆ. ಆದ್ದರಿಂದ ಅಜಾತಶತ್ರುವನ್ನು 'ಕೋಣಕ' ಎಂಬ ಗೋತ್ರನಾಮದಿಂದ ನಿರ್ದೇಶಿಸುವ ಪರಿಪಾಠವಿದ್ದು ಕಾಲಾಂತರದಲ್ಲಿ ವಾಚಕ ಲೇಖಕಾದಿ ಪ್ರಮಾದವಶದಿಂದ, ಕೂಣಿಕ ಮತ್ತು ಕುಣಿಕ ಎಂಬ ಹೆಸರುಗಳು ರೂಪಿತವಾಗಿ ಉಳಿದುಬಂದಿವೆಯೆಂದು ಗ್ರಹಿಸಲವಕಾಶವಾಗುವುದು.

ಬೃಹತ್ಕಥಾಕೋಶದ ಶ್ರೇಣಿಕ ಕಥಾನಕದಲ್ಲಿ ಕೋಣಕನನ್ನು ಧಾರಿಣಿಯೆಂಬುವಳ ಮಗನೆಂದು ಹೇಳಲಾಗಿದೆ. ಆದರೆ ಇತರ ಕೃತಿಗಳ ಕಥೆಗಳಲ್ಲಿ ಇವನನ್ನು ಚೇಳಿನಿಯ ಸುತನೆಂದು ನಿರ್ದೇಶಿಸಲಾಗಿದೆ. ಅಜಾತಶತ್ರುವು ಚೇಳಿನಿಯ ಸುತನಾಗಿರಬೇಕೆಂಬುದು ಆಧಾರಾಂತರದಿಂದಲೂ ಸಮರ್ಥಿತವಾಗುವುದು. ಬೌದ್ಧ ಆಮ್ನಾಯದಲ್ಲಿ ಅಜಾತಶತ್ರುವನ್ನು ವೈದೇಹೀಸುತನೆಂದು ಈ ಮುಂದಿನಂತೆ ನಿರ್ದೇಶಿಸಲಾಗಿದೆ. 'ಮಾಗಧೇನಾಜಾತಶತ್ರುನಾ ವೈದೇಹೀಪುತ್ರೇಣ'. [ದಿವ್ಯಾವದಾನ ಪು. ಸಂ. ೫೫ ಮತ್ತು ಪು. ಸಂ. ೫೪೪] ಇಲ್ಲಿ ವೈದೇಹಿ ಎಂಬ ಹೆಸರು ವಿದೇಹ ಎಂಬ ನಾಡಿನ ಹೆಸರಿನ ಮೂಲದಿಂದ ನಿಷ್ಪನ್ನವಾದುದಾಗಿದೆ. ಭಾಸಕವಿಯು ಉದಯನನನ್ನು ವೈದೇಹೀಪುತ್ರನೆಂದು ನಿರ್ದೇಶಿಸಿರುವುದಾಗಿ ಹಿಂದೆ ಹೇಳಿದೆ. ಉದಯನನ ತಾಯಿ ಮೃಗಾವತಿಯು ಅಜಾತಶತ್ರುವಿನ ತಾಯಿಯಾದ ಚೇಳಿನಿಯ ಹಿರಿಯ ಸಹೋದರಿಯಾಗಿದ್ದಳೆಂದು ಜೈನ ಆಮ್ನಾಯದ ಐತಿಹ್ಯದಿಂದ ನಿರ್ದೇಶಿತವಾಗುವುದು. ಪ್ರಕೃತ ಸಂದರ್ಭದಲ್ಲಿ ಚೇಳಿನಿಯ ಇತರ ಸಹೋದರಿಯರ ವಿಷಯವಾಗಿ ಜೈನ ಆಮ್ನಾಯದ ಕಥನವನ್ನು ಗಮನಿಸಬೇಕಾದ ಆವಶ್ಯಕತೆಯಿದೆ.

ದಿಗಂಬರ ಜೈನಆಮ್ನಾಯದ ಕಥಾಯತ್ತ ಐತಿಹ್ಯದಂತೆ: [1]ವಜ್ರವೆಂಬ ನಾಡಿನ ವಿಶಾಲೀನಗರದ ರಾಜನಾದ ಕೇಕ ಮತ್ತು ಅವನ ರಾಜ್ಞಿ ಯಶೋಮತಿಯರಿಗೆ ವಿನಯಾಚಾರಸಂಪನ್ನನೂ, ಶತ್ರುಮರ್ದನನೂ ಆದ ಚೇಟಕನೆಂಬ ಪುತ್ರನಾದನು. [ಬೃ. ಕ. ಕೋ. ಶ್ರೇಣಿಕಕಥಾನಕ] ಈ ಚೇಟಕನ ಅರಸಿ ಸುಭದ್ರೆಯಲ್ಲಿ ಧನಭದ್ರಾದಿ ಹತ್ತುಜನ ಪುತ್ರರೂ, ಪ್ರಿಯಕಾರಿಣಿ, ಮೃಗಾವತಿ, ಸುಪ್ರಭಾ, ಪ್ರಭಾವತಿ, ಚೇಳಿನಿ, ಜ್ಯೇಷ್ಠಾ ಮತ್ತು ಚಂದನೆಯರೆಂಬ ಏಳುಜನ ಪುತ್ರಿಯರೂ ಆದರು. ಚೇಟಕನು ತನ್ನ ಹಿರಿಯಪುತ್ರಿ ಯಾದ ಪ್ರಿಯಕಾರಿಣಿಯನ್ನು ವಿದೇಹದೇಶದ ಕುಂಡಪುರಾಧೀಶ ನಾಥಕುಲನಾಯಕನಾದ ಸಿದ್ಧಾರ್ಥನಿಗಿತ್ತು ವಿವಾಹಮಾಡಿದನು. ಅಂತಿಮತೀರ್ಥಂಕರನಾದ ಶ್ರೀವೀರನಾಥನು ಈ ದಂಪತಿಗಳ ಸುತನು. ಚೇಟಕನ ಇತರ ಆರು ಮಂದಿ ಹೆಣ್ಣುಮಕ್ಕಳಲ್ಲಿ ನಾಲ್ವರುಮಾತ್ರವಿವಾಹಿತರಾದರು. ಇವರಲ್ಲಿ

---

1 ಉತ್ತರಪುರಾಣದಲ್ಲಿ ಸಿಂಧುದೇಶವೆಂದು ಹೆಸರಿಸಿದೆ.

ಮೃಗಾವತಿಯನ್ನು ವತ್ಸದೇಶದ ಕೌಶಾಂಬೀನಗರಾಧಿಪ ಸೋಮವಂಶಜನಾದ ಶತಾನೀಕನಿಗೂ, ಸುಪ್ರಭೆಯನ್ನು ದಶಾರ್ಣದೇಶದ ಹೇಮಕಚ್ಛಪುರಾಧಿಪ ಸೂರ್ಯವಂಶಜನಾದ ದಶರಥನಿಗೂ ಮತ್ತು ಪ್ರಭಾವತಿಯನ್ನು ಕಚ್ಛದೇಶದ ರೋರುಗಪುರಾಧಿಪ ಉದಯನನಿಗೂ ಕೊಟ್ಟು ವಿವಾಹಮಾಡಿಕೊಡಲಾಯಿತು. ಚೇಳಿನಿಯನ್ನು ಮಗಧರಾಜನಾದ ಶ್ರೇಣಿಕನು ವಿವಾಹವಾದ ವಿಷಯವು ಹಿಂದೆ ಉಲ್ಲೇಖಿಸಿರುವ ಕಥೆಯಿಂದ ಸ್ಪಷ್ಟವಾಗಿದೆ. ಚೇಟಕನ ಇತರ ಈರ್ವರು ಪುತ್ರಿಯರಾದ ಜ್ಯೇಷ್ಠೆ ಮತ್ತು ಚಂದನೆಯರು ವಿವಾಹಿತರಾಗದೆ ಆರ್ಯಿಕಾವ್ರತಧಾರಿಗಳಾದರು. ಮುಂದೆ ಚಂದನೆಯು ಶ್ರೀ ವೀರತೀರ್ಥಂಕರನ ಸಮವಸರಣದ ಆರ್ಯಿಕೆಯರ ಗಣನಾಯಕಿಯಾದಳು.

ಮೇಲಿನ ಐತಿಹ್ಯವಿಷಯದಲ್ಲಿ, ಶ್ವೇತಾಂಬರ ಜೈನಸಂಪ್ರದಾಯಾನುಸಾರವಾಗಿ ಸ್ವಲ್ಪ ಭಿನ್ನಕ್ರಮವಿರುವುದು ಕಂಡುಬರುತ್ತದೆ. ಈ ಭಿನ್ನಕ್ರಮದಲ್ಲಿ ಮುಖ್ಯವಾಗಿ ಎರಡು ಅಂಶಗಳು ಗಮನಾರ್ಹವಾಗಿವೆ: ೧) ಶ್ರೀ ವೀರತೀರ್ಥಂಕರನ ತಾಯಿಯಾದ ಪ್ರಿಯಕಾರಿಣಿ (ತ್ರಿಶಲಾ) ದೇವಿಯು ಈ ಆಮ್ನಾಯದನುಸಾರವಾಗಿ ಚೇಟಕರಾಜನ ಸುತಳಾಗಿರದೆ ಸಹೋದರಿಯಾಗಿದ್ದಾಳೆ. ಚೇಟಕನ ನಾಲ್ಕನೆಯ ಪುತ್ರಿಯು 'ಶಿವಾ' ಎಂಬ ಹೆಸರಿನವಳಾಗಿದ್ದು ಇವಳನ್ನು ಅವಂತೀರಾಜನಾದ ಚಂಡಪ್ರದ್ಯೋತನಿಗಿತ್ತು ವಿವಾಹಮಾಡಿಕೊಡಲಾಗಿದ್ದಿತು. [ಆರ್. ಕೆ. ಮುಕರ್ಜಿಯವರ 'ಹಿಂದೂಸಿವಿಲೈಜೇಷನ್', ಪು. ಸಂ. ೨೩೬]

ಶ್ವೇತಾಂಬರಆಮ್ನಾಯದ ಮೇಲ್ಕಂಡ ಎರಡನೆಯ ಐತಿಹ್ಯಾಂಶವು ಆಧಾರಾಂತರದಿಂದ ಸಮರ್ಥಿತವಾಗುವುದು. ಭಾಸಕವಿಯ ಪ್ರ. ಯೌ. ನಾಟಕದ (೨ನೇ ಅಂಕದ)ಲ್ಲಿ ಪ್ರದ್ಯೋತನು 'ಅಸ್ಮತ್ಸಂಬದ್ಧೋ ಮಾಗಧಃ' ಎಂಬುದಾಗಿ ಹೇಳುವನು. ಈ ಉಕ್ತಿಯಲ್ಲಿ ನಿರ್ದೇಶಿತವಾಗಿರುವ 'ಸಂಬಂಧ'ಕ್ಕೆ ಪ್ರದ್ಯೋತನ ಮಡದಿ ಶಿವೆ ಮತ್ತು ಶ್ರೇಣಿಕ-ಬಿಂಬಿಸಾರನ ಮಡದಿ ಚೇಳಿನಿಯರು ಸಹೋದರಿಯರಾಗಿದ್ದುದೇ ಕಾರಣವಾಗಿರಬೇಕೆಂದು ಗ್ರಹಿಸಲವಕಾಶವಾಗುವುದು.

ಬೌದ್ಧ ಮತ್ತು ಜೈನ ಸಂಪ್ರದಾಯಗಳ ಮೇಲ್ಕಂಡ ಐತಿಹ್ಯಾಂಶಗಳ ಆಧಾರದಿಂದ ಅವಂತಿಯರಸನಾದ ಪ್ರದ್ಯೋತ ಮತ್ತು ಮಗಧರಾಜನಾದ ಶ್ರೇಣಿಕ-ಬಿಂಬಿಸಾರ ಮತ್ತು ವತ್ಸಾಧೀಶ ಶತಾನೀಕರು ಸಮಕಾಲೀನರೂ ಸಂಬಂಧಿಗಳೂ ಆಗಿದ್ದು ಪ್ರಾಯಿಕವಾಗಿ ಸಮಾನವಯಸ್ಕರಾಗಿದ್ದರೆಂದು ವ್ಯಕ್ತವಾಗುವುಲ್ಲದೆ, ಪ್ರದ್ಯೋತನು ಶ್ರೇಣಿಕನ ಸುತನಾದ ಅಜಾತಶತ್ರುವಿನ ರಾಜ್ಯಭಾರವು ಆರಂಭವಾದ ಬಳಿಕವೂ ಸ್ವಲ್ಪಕಾಲ ರಾಜ್ಯಭಾರಾಧಿಷ್ಠಿತನಾಗಿದ್ದಿರಬೇಕೆಂದು ವ್ಯಕ್ತವಾಗುವುದು. ಇಂತೆಯೇ ಈ ಸಂಪ್ರದಾಯಗಳ ಐತಿಹ್ಯಾಧಾರದಿಂದ ಶತಾನೀಕ ಮತ್ತು ಮೃಗಾವತಿಯರ ಸುತನಾದ ಉದಯನ ಹಾಗೂ ಶ್ರೇಣಿಕ-ಬಿಂಬಿಸಾರ ಮತ್ತು ಚೇಳಿನಿಯರ

ಸುತನಾದ ಅಜಾತಶತ್ರುಗಳೀರ್ವರೂ ಪ್ರಾಯಿಕವಾಗಿ ಸಮವಯಸ್ಕರಾಗಿದ್ದಿರಬೇಕೆಂದು ನಿರ್ದೇಶಿತವಾಗುವುದು.

ಪ್ರದ್ಯೋತನ ಸಮಕಾಲೀನರಾಗಿ ಮಗಧರಾಜ್ಯದಲ್ಲಿ ಶ್ರೇಣಿಕ-ಬಿಂಬಿಸಾರ ಮತ್ತು ಇವನ ಮಗನಾದ ಅಜಾತಶತ್ರುವು ರಾಜ್ಯಭಾರಾಧಿಷ್ಠಿತರಾಗಿದ್ದರೆಂದು ಮೇಲ್ಕಂಡ ವಿಚಾರಸರಣಿಯಿಂದ ವ್ಯಕ್ತಪಟ್ಟಿದೆ. ಆದರೆ ಭಾಸಕವಿಯ ಸ್ವ. ವಾ. ನಾಟಕದ ಹೇಳಿಕೆಯಿಂದ ಪ್ರದ್ಯೋತನ ಸಮಕಾಲೀನನಾಗಿ ಮಗಧರಾಜ್ಯದಲ್ಲಿ 'ದರ್ಶಕ' ಎಂಬ ಹೆಸರಿನ ರಾಜನು ರಾಜ್ಯಭಾರನಡೆಸುತ್ತಿದ್ದನೆಂದು ನಿರ್ದೇಶಿತವಾಗುವುದು. ಇಷ್ಟಲ್ಲದೆ ವಾಯುಪುರಾಣದಲ್ಲಿ ವಿವಿಸಾರನ (=ಬಿಂಬಿಸಾರನ) ಅನಂತರವರ್ತಿಯಾಗಿ ರಾಜ್ಯಭಾರಾಧಿಷ್ಠಿತನಾದ ರಾಜನನ್ನು 'ದರ್ಶಕ' ನೆಂದು ಹೆಸರಿಸಿದೆ. (ಅ. ೩೭- ಶ್ಲೋ. ಸಂ. ೩೧೨) ಇದರಿಂದ ಸ್ವ. ವಾ. ನಾಟಕದಲ್ಲಿ ಪ್ರದ್ಯೋತನ ಸಮಕಾಲೀನನಾಗಿ ಹೆಸರಿಸಲಾಗಿರುವ ಮಗಧರಾಜ ದರ್ಶಕನು ಐತಿಹಾಸಿಕ ವ್ಯಕ್ತಿಯಾಗಿರುವನೆಂದು ನಿರ್ದೇಶಿತವಾಗುವುದಲ್ಲದೆ ಇವನು ಶ್ರೇಣಿಕ-ಬಿಂಬಿಸಾರನ ಅನಂತರವರ್ತಿಯಾಗಿ ರಾಜ್ಯಭಾರಾಧಿಷ್ಠಿತನಾಗಿದ್ದಿರಬೇಕೆಂದೂ ಗ್ರಹಿಸಲವಕಾಶವಾಗುವುದು. ಇಂತೆಯೇ ಬ್ರಹ್ಮಾಂಡಪುರಾಣದಲ್ಲಿ ವಿಧಿಸಾರನ (=ಬಿಂಬಿಸಾರನ) ಅನಂತರವರ್ತಿಯಾಗಿ ರಾಜ್ಯಭಾರಾಧಿಷ್ಠಿತನಾದ ರಾಜನನ್ನು 'ಅಜಾತಶತ್ರು' ವೆಂದು ಹೆಸರಿಸಿದೆಯಾದುದರಿಂದ ಈ ಹಿಂದೆ ಪ್ರರೂಪಿಸಲಾಗಿರುವ ಬೌದ್ಧ ಮತ್ತು ಜೈನ ಸಂಪ್ರದಾಯಾನುಸಾರದ ಅಜಾತಶತ್ರುವಿನ ಐತಿಹಾಸಿಕ ತಥ್ಯವು ಸಮರ್ಥಿತವಾಗುವುದು. ಹೀಗೆ ಶ್ರೇಣಿಕ-ಬಿಂಬಿಸಾರನ ಅನಂತರವರ್ತಿಯಾಗಿ ರಾಜ್ಯಭಾರದಲ್ಲಿ ಅಧಿಷ್ಠಿತನಾದ ರಾಜನು 'ದರ್ಶಕ' ಎಂಬ ಹೆಸರಿನವನಾಗಿರುವನೆಂದು ವಾಯುಪುರಾಣ ಮತ್ತು ಸ್ವ. ವಾ. ನಾಟಕಗಳ ಹೇಳಿಕೆಗಳಿಂದ ನಿರ್ದೇಶಿತವಾಗುವುದಾದರೆ, ಬ್ರಹ್ಮಾಂಡ ಪುರಾಣ ಮತ್ತು ಬೌದ್ಧ ಆಮ್ನಾಯಗಳ ಹೇಳಿಕೆಗಳಿಂದ ಈ ರಾಜನು 'ಅಜಾತಶತ್ರು' ಎಂಬ ಹೆಸರಿನವನಾಗಿರುವನೆಂದು ನಿರ್ದೇಶಿತವಾಗುವುದು. ಇದರಿಂದ ಶ್ರೇಣಿಕ-ಬಿಂಬಿಸಾರನ ಅನಂತರವರ್ತಿಯಾಗಿ ರಾಜ್ಯಭಾರಾಧಿಷ್ಠಿತನಾದ ರಾಜನನ್ನು 'ದರ್ಶಕ' ಮತ್ತು ಅಜಾತಶತ್ರು ಎಂಬ ಎರಡು ಹೆಸರುಗಳಿಂದಲೂ ನಿರ್ದೇಶಿಸುವ ಪರಿಪಾಠವಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು.

ಪ್ರಾಯಿಕವಾಗಿ ಚರಿತ್ರಕಾರರು ಬಿಂಬಿಸಾರನ ಅನಂತರವರ್ತಿಯಾಗಿ ಅಜಾತಶತ್ರುವು ರಾಜ್ಯಭಾರಾಧಿಷ್ಠಿತನಾಗಿರುವನೆಂದು ಒಪ್ಪಿರುವರು. ಆದರೆ ಈ ಅಜಾತಶತ್ರುವಿನ ಪೂರ್ವವರ್ತಿಯಾಗಿ ಅಥವಾ ಅನಂತರವರ್ತಿಯಾಗಿ 'ದರ್ಶಕ' ಎಂಬ ಹೆಸರಿನ ಮತ್ತೊಬ್ಬ ರಾಜನಿದ್ದಿರಬೇಕೆಂದು ಚರಿತ್ರಕಾರರಲ್ಲಿ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಬ್ರಹ್ಮಾಂಡ ಮತ್ತು ವಿಷ್ಣುಪುರಾಣಗಳಲ್ಲಿ 'ಅಜಾತಶತ್ರು' ಎಂಬ ಹೆಸರಿನ ಅನಂತರವರ್ತಿಯಾಗಿ 'ದರ್ಭಕ' ಎಂಬುದಾಗಿಯೂ ಮತ್ತು ಮತ್ಸ್ಯಪುರಾಣದಲ್ಲಿ

'ವಂಶಕ' ಎಂಬುದಾಗಿಯೂ ಹೆಸರಿಸಲಾಗಿರುವುದರಿಂದ ಹಾಗೂ ಬೌದ್ಧಆಮ್ನಾಯದ ದೀಪವಂಸೋ, ಮಹಾವಂಸೋ ಮತ್ತು ಬರ್ಮಿಇತಿವೃತ್ತಗಳಲ್ಲಿ 'ಸುಸನಾಗ' ಎಂಬ ಹೆಸರಿನ ಪೂರ್ವವರ್ತಿಯಾಗಿ 'ನಾಗದಾಸ (ಕ)' ಎಂಬುವನನ್ನು ಹೆಸರಿಸಲಾಗಿರುವುದ ರಿಂದ ಮತ್ತು ಈ ಎಲ್ಲ ಹೆಸರುಗಳು 'ದರ್ಶಕ' ಎಂಬ ಹೆಸರಿನೊಡನೆ ಸಾದೃಶ್ಯತೆಯುಳ್ಳ ವಾಗಿವೆಯೆಂಬ ಕಾರಣದಿಂದ, 'ದರ್ಶಕ' ಎಂಬ ಹೆಸರಿನ ಈ ರಾಜನು ಅಜಾತಶತ್ರು ವಿನ ಪೂರ್ವವರ್ತಿಯಾಗಿ ಅಥವಾ ಅನಂತರವರ್ತಿಯಾಗಿ ರಾಜ್ಯಭಾರಮಾಡಿರ ಬೇಕೆಂದು ಚರಿತ್ರಕಾರರಲ್ಲಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

ಈ ಸಂದರ್ಭದಲ್ಲಿ ವೈ. ಮ. ಸಂ. ಪುರಾಣಗಳಲ್ಲಿ ಉಳಿದುಬಂದಿರುವ ಮಗಧ ರಾಜಸಂತತಿಯ ಇತಿವೃತ್ತದ ನಿರೂಪಣೆಯ ವಿಷಯವಾಗಿ ಒಂದು ಅಂಶವನ್ನು ಗಮ ನಿಸಬೇಕಾದ ಅವಶ್ಯಕತೆಯಿದೆ. ಭಾರತಯುದ್ಧಾಂತ್ಯಸಮಯದಾರಭ್ಯ ಗುಪ್ತರಾಜ ಮನೆತನದ ರಾಜ್ಯಭಾರಾರಂಭಸಮಯಪರ್ಯಂತ ಸಹಸ್ರಾರು ವರ್ಷಕಾಲ ಮಗಧ ರಾಜ್ಯದಲ್ಲಿ ರಾಜ್ಯಭಾರನಡೆಸಿದ ರಾಜಸಂತತಿಯ ಅನುಕ್ರಮವನ್ನು ನಿರೂಪಿಸುವ ಈ ಪುರಾಣಗಳ ಇತಿವೃತ್ತವು ನಿಶ್ಚಿತವಾಗಿಯೂ ಭಿನ್ನಕಾಲದ ವಿಭಿನ್ನವ್ಯಕ್ತಿಗಳಿಂದ ರಚಿತ ವಾದ ಇತಿವೃತ್ತಭಾಗಗಳ ಸಂಕಲನವಾಗಿದೆಯೆಂಬುದು ನಿಶ್ಚಿತ. ಪ್ರಾಚೀನಕಾಲದ ಈ ಇತಿವೃತ್ತವನ್ನು ಸಂಕಲನಮಾಡುವಲ್ಲಿ ಅನೇಕರೀತಿಯ ನ್ಯೂನಾತಿರೇಕರೂಪದ ಲೋಪದೋಷಗಳಾಗಿವೆಯೆಂದು ಹೇಳಲು ಸಾಕಷ್ಟು ಆಧಾರಗಳಿವೆ: ಉದಾಹರಣೆಗಾಗಿ ಮತ್ಸ್ಯಪುರಾಣದಲ್ಲಿ ಅಜಾತಶತ್ರುವಿನ ಪೂರ್ವವರ್ತಿಯಾಗಿ ನಿರ್ದೇಶಿತವಾಗಿರುವ 'ಭೂಮಿಮಿತ್ರ' ಮತ್ತು 'ಕಾನ್ವಾಯನ' ಎಂಬ ಹೆಸರುಗಳು, ಇದೇ ಪುರಾಣ ಮತ್ತು ಇತರ ಪುರಾಣಗಳಿಂದ ನಿರ್ದೇಶಿತವಾಗುವಂತೆ ಕಣ್ವಮನೆತನದ ಅರಸರ ಹೆಸರುಗಳಾ ಗಿವೆ. ಇಷ್ಟಲ್ಲದೆ ಈ ಪುರಾಣದಲ್ಲಿ 'ಬಿಂಬಿಸಾರ' ಎಂಬ ಹೆಸರು ಅಥವಾ ಇದಕ್ಕೆ ಸದೃ ಶವಾದ ಹೆಸರೇ ಇಲ್ಲವಾಗಿದೆ. ಹೀಗೆ ಈ ಪುರಾಣದಲ್ಲಿ ಬಿಂಬಿಸಾರನ ಹೆಸರಿರಬೇಕಾದ ಸ್ಥಾನದಲ್ಲಿ ಸುಮಾರು ನಾಲ್ಕುನೂರು ವರ್ಷಗಳಷ್ಟು ಅರ್ವಾಚೀನಕಾಲದ ರಾಜರಾದ ಕಣ್ವಮನೆತನದ ರಾಜರ ಹೆಸರುಗಳು ವಿಕ್ಷೇಪಗೊಂಡು ಸೇರಿರುವುದು ಸ್ಪಷ್ಟವಿದೆ. ವಾಯುಪುರಾಣದಲ್ಲಿ ಬಿಂಬಿಸಾರನ ಅನಂತರವರ್ತಿಯಾಗಿ 'ದರ್ಶಕ' ಎಂಬ ಹೆಸರಿದೆ ಯೆಂದು ಹಿಂದೆ ಹೇಳಿದೆ. ಆದರೆ ಬಿಂಬಿಸಾರನಿಂದ ಪೂರ್ವವರ್ತಿಯಾಗಿ ಈ ಪುರಾಣ ದಲ್ಲಿ 'ಅಜಾತಶತ್ರು' ಎಂಬ ಹೆಸರು ನಿರ್ದೇಶಿತವಾಗಿದೆ. ಇತರ ಎಲ್ಲ ಆಧಾರಗಳಿಂದ 'ಅಜಾತಶತ್ರು'ವು ಬಿಂಬಿಸಾರನ ಸುತನೆಂದು ನಿರ್ದೇಶಿತವಾಗಿರುವಲ್ಲಿ ಈ ಪುರಾಣದಲ್ಲಿ ಮಾತ್ರ ಅಜಾತಶತ್ರುವು ಬಿಂಬಿಸಾರನ ಪೂರ್ವಜನಾಗಿ ನಿರ್ದೇಶಿತವಾಗಿರಲು ಕಾರ ಣವೇನೆಂಬ ಪ್ರಶ್ನೆಮೂಡುದುವು. ಇಂತೆಯೇ ಉದಾಯಿಭದ್ರನ ಅನಂತರಕಾಲದಲ್ಲಿ ರಾಜ್ಯಭಾರ ನಡೆಸಿದ ನಂದವರ್ಧನ ಮತ್ತು ಮಹಾನಂದರ ನಾಮಾಂತರಗಳಾದ ಶಿಶು ನಾಗ ಮತ್ತು ಕಾಕವರ್ಣ ಎಂಬ ಹೆಸರುಗಳು, ಪೃಥಗ್ವ್ಯಕ್ತಿಗಳ ಹೆಸರುಗಳೆನಿಸಿ

ಪ್ರತ್ಯೇಕಗೊಂಡು ವಿಕ್ಷೇಪಪೂರ್ವಕ ಬಿಂಬಿಸಾರನ ಹೆಸರಿನಿಂದಪೂರ್ವವರ್ತಿಯಾಗಿ ನಿರ್ದೇಶಿತವಾಗಿ ಉಳಿದುಬಂದಿವೆಯೆಂದು ಒಬ್ಬಿಬ್ಬರು ಚರಿತ್ರಕಾರರು ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ ಈ ಪುರಾಣಗಳಲ್ಲಿ ಕಂಡುಬರುವ ನ್ಯೂನಾತಿರೇಕಗಳು ಪೌರಾಣಿಕ ಇತಿವೃತ್ತಭಾಗಗಳನ್ನು ಸಂಕಲನಮಾಡಿದ ಸಮಯದಲ್ಲಿ ಏರ್ಪಟ್ಟಿವೆಯೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ ಬಿಂಬಿಸಾರನ ಅನಂತರವರ್ತಿಯಾಗಿ ರಾಜ್ಯ ಭಾರಾಧಿಷ್ಠಿತನಾದ ರಾಜನನ್ನು ನಿರ್ದೇಶಿಸುವಲ್ಲಿಯೂ ಪ್ರಮಾದವೇರ್ಪಟ್ಟಿದೆಯೆಂದು ಕಂಡುಬರುತ್ತದೆ. ಈ ಪ್ರಮಾದಕ್ಕೆ ಮೂಲಇತಿವೃತ್ತದಲ್ಲಿ ಏಕವ್ಯಕ್ತಿ ನಿರ್ದೇಶಕವಾಗಿ ಪ್ರಯುಕ್ತವಾಗಿದ್ದ 'ದರ್ಶಕ' ಮತ್ತು 'ಅಜಾತಶತ್ರು' ಎಂಬ ಹೆಸರುಗಳನ್ನು ಪೃಥಗ್ವ್ಯಕ್ತಿಗಳ ಸೂಚಕಗಳನ್ನಾಗಿ ಇತಿವೃತ್ತ ಸಂಕಲನಕಾರರು ಗ್ರಹಿಸಿದುದು ಕಾರಣವಾಗಿದೆಯೆಂದು ಹೇಳಬಹುದಾಗಿದೆ. ಆದ್ದರಿಂದ 'ದರ್ಶಕ' ಮತ್ತು 'ಅಜಾತಶತ್ರು' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕವಾಗಿವೆಯೆಂದು ಗ್ರಹಿಸಿದಲ್ಲಿ ಪ್ರ. ಯೌ. ನಾಟಕ ಮತ್ತು ಸ್ವ. ವಾ. ನಾಟಕಗಳ ಕಥಾಯತ್ತ ಐತಿಹ್ಯ ಮತ್ತು ಬೌದ್ಧ ಆಮ್ನಾಯದ ಐತಿಹ್ಯಗಳು ನಿರಾಭಾಧವಾಗಿ ಸಮನ್ವಿತವಾಗುವುವು.

ಸ್ವ. ವಾ. ನಾಟಕದಲ್ಲಿ ಕಾಂಚುಕೀಯನು ಪದ್ಮಾವತಿಯನ್ನು ಪರಿಚಯಮಾಡಿಕೊಡುವ ನಿಮಿತ್ತದಿಂದ 'ಏಷಾ ಖಲು ಗುರುಭಿರಭಿಹಿತನಾಮಧೇಯಸ್ಯ ಮಹಾರಾಜ ದರ್ಶಕಸ್ಯ ಭಗಿನೀ ಪದ್ಮಾವತೀ ನಾಮ।' ಎಂದು ಹೇಳುವನು. ಸೇವಕನು ತನ್ನ ಸ್ವಾಮಿಯಾದ ರಾಜನನ್ನು ಹೆಸರಿಸುವಲ್ಲಿ ಅನುಸರಿಸಬೇಕಾದ ಮರ್ಯಾದಾರ್ಥವಾಗಿ ಇಲ್ಲಿ ಕಾಂಚುಕೀಯನು ತನ್ನ ಸ್ವಾಮಿಯಾದ ರಾಜನನ್ನು "ಗುರುಹಿರಿಯರಿಂದ 'ದರ್ಶಕ' ನೆಂದು ಹೆಸರಿಸಲ್ಪಟ್ಟಿರುವ ಮಹಾರಾಜ" ಎಂದು ನಿರ್ದೇಶಿಸಿ ಮರ್ಯಾದೆಯನ್ನು ವ್ಯಕ್ತಪಡಿಸಿದ್ದಾನೆಂಬುದು ನಿಜ. ಆದರೆ ಈ ಉಕ್ತಿಯಲ್ಲಿ ಮರ್ಯಾದೆಯ ಅನುಸರಣಾರ್ಥವು ಮಾತ್ರವಲ್ಲದೆ ವಾಚ್ಯಾರ್ಥದ ತಥ್ಯವೂ ಇದೆಯೆಂದು ಗ್ರಹಿಸಲವಕಾಶವಿದೆ. ಭಾರತೀಯರಲ್ಲಿ ಪ್ರಾಯಿಕವಾಗಿ ಒಬ್ಬನೇ ವ್ಯಕ್ತಿಗೆ ಹುಟ್ಟುಹೆಸರು ಮತ್ತು ಅಡ್ಡಹೆಸರು ಎಂದು ಎರಡೆರಡು ಹೆಸರುಗಳಿರುವುದು ತಿಳಿದ ಸಂಗತಿಯಾಗಿದೆ. ಇಷ್ಟಲ್ಲದೆ ರಾಜರನ್ನು ಗೋತ್ರನಾಮ, ಪೈತೃಕನಾಮ ಮತ್ತು ಪರಾಕ್ರಮಾದಿಗುಣ ಸೂಚಕವಾದ ಬಿರುದಿನರೂಪದ ಖ್ಯಾತಿನಾಮಗಳಿಂದಲೂ ನಿರ್ದೇಶಿಸುವ ರೂಢಿಯು ನಮ್ಮ ದೇಶದಲ್ಲಿ ಬಹುಪ್ರಾಚೀನಕಾಲದಿಂದಲೂ ಉಳಿದುಬಂದಿದೆ. ಅಂತೆಯೇ ಈ ಹಿಂದೆ ಉಲ್ಲೇಖಿಸಲಾಗಿರುವ ಸ್ವ. ವಾ. ನಾಟಕದ ಕಾಂಚುಕೀಯನ ಉಕ್ತಿಯಲ್ಲಿ ವಾಚ್ಯಾರ್ಥದಿಂದ ಮಗಧರಾಜನನ್ನು ಅವನ ಗುರುಹಿರಿಯರಿಂದ ಅಭಿಹಿತವಾದ ಜನ್ಮನಾಮ ಅಥವಾ ಹುಟ್ಟುಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ವ್ಯಕ್ತವಾಗುವುದು. ಪ್ರದ್ಯೋತನಿಗೆ 'ಮಹಾಸೇನ' ಎಂಬುದು ಖ್ಯಾತಿನಾಮವಾಗಿದ್ದಿತೆಂದು ಸ್ವ. ವಾ.

ನಾಟಕದ ಹೇಳಿಕೆಯಿಂದಲೇ ವ್ಯಕ್ತವಾಗುವುದು. ಇಂತೆಯೇ 'ಅಜಾತಶತ್ರು' ಎಂಬುದು 'ದರ್ಶಕ' ಮಹಾರಾಜನ ಖ್ಯಾತಿನಾಮವಾಗಿದೆಯೆಂದು ಗ್ರಹಿಸಬಹುದಾಗಿದೆ.

ಪ್ರ. ಯೌ. ನಾಟಕದಲ್ಲಿ 'ಮಾಗಧ' ಎಂಬ ಅಭಿಧಾನದಿಂದ ಬಿಂಬಿಸಾರನನ್ನು ನಿರ್ದೇಶಿಸಲಾಗಿದೆಯೆಂದು ಹಿಂದೆ ವಿವರಿಸಿಲಾಗಿದೆ. ಇದರಂತೆ ಉದಯನನು ವಾಸವದತ್ತೆಯನ್ನು ಅಪಹರಿಸಿತಂದು ವಿವಾಹವಾದಸಮಯದಲ್ಲಿ ಮಗಧರಾಜ ಶ್ರೇಣಿಕ-ಬಿಂಬಿಸಾರನು ಜೀವಂತನಿದ್ದಿರಬೇಕೆಂದು ವ್ಯಕ್ತವಾಗುವುದು. ಮುಂದೆ ಉದಯನನು ಪದ್ಮಾವತಿಯನ್ನು ವಿವಾಹವಾದಸಮಯದಲ್ಲಿ ಶ್ರೇಣಿಕ-ಬಿಂಬಿಸಾರನು ಜೀವಂತನಿದ್ದಿರಲಿಲ್ಲ. ಆದ್ದರಿಂದಲೇ ಭಗಿನಿಯಾದ ಪದ್ಮಾವತಿಯನ್ನು ವಿವಾಹಮಾಡಿಕೊಡುವ ಹೊಣೆಗಾರಿಕೆಯು ಭ್ರಾತೃವಾದ ದರ್ಶಕ-ಅಜಾತಶತ್ರುವಿನ ಪಾಲಿಗೆ ಬಂದಿದೆ. ಇಷ್ಟಲ್ಲದೆ, ಉದಯನನು ರಾಜ್ಯವನ್ನು ಕಳೆದುಕೊಂಡವಿಷಯದಲ್ಲಿಯೂ ರಾಜಕೀಯದ ಚದುರಂಗದಾಟ ನಡೆದಿದೆಯೆಂದು ಕಂಡುಬರುತ್ತದೆ. ಶ್ರೇಣಿಕ-ಬಿಂಬಿಸಾರನು ಮೃತನಾದ ಬಳಿಕ ಪ್ರದ್ಯೋತನು ಅಜಾತಶತ್ರುವಿನಮೇಲೆ ಯುದ್ಧಹೂಡುವ ಪ್ರಯತ್ನದಲ್ಲಿದ್ದನೆಂದು ಹಾಗೂ ಈ ಕಾರಣದಿಂದ ಅಜಾತಶತ್ರುವು ತನ್ನ ನಗರದಭದ್ರತೆಯನ್ನು ವ್ಯವಸ್ಥೆಗೊಳಿಸಿದನೆಂದು ಬೌದ್ಧಆಮ್ನಾಯದ ಐತಿಹ್ಯದಿಂದ ತಿಳಿದುಬರುವುದು. ಆದರೆ ಸ್ವ. ವಾ. ನಾಟಕದ ಕಥೆಯನುಸಾರವಾಗಿ ಪ್ರದ್ಯೋತನು ತನ್ನ ಮಗನಿಗೆ ಪದ್ಮಾವತಿಯನ್ನು ವಿವಾಹಮಾಡಿಕೊಡಬೇಕೆಂದು ದರ್ಶಕರಾಜನನ್ನು ಕೋರಿದ್ದುದಾಗಿ ತಿಳಿದುಬರುವುದು. ಉದಯನನು ಪದ್ಮಾವತಿಯನ್ನು ವಿವಾಹವಾದುದರಲ್ಲಿ ಅವನು ಕಳೆದುಕೊಂಡಿದ್ದರಾಜ್ಯವನ್ನು ಪುನಃ ಸ್ವಾಯತ್ತೆಗೊಳಿಸಿಕೊಳ್ಳುವುದಕೋಸ್ಕರ ಮಗಧರಾಜ ದರ್ಶಕನ ಸಹಾಯಪಡೆಯುವಉದ್ದೇಶವೂ ಒಂದುಕಾರಣವಾಗಿದೆಯೆಂದು ಸ್ವ. ವಾ. ನಾಟಕದ ಕಥೆಯಿಂದಲೇ ವ್ಯಕ್ತವಾಗುವುದು. ಇಂತೆಯೇ ಬಿಂಬಿಸಾರನು ಮೃತನಾದ ಸಂದರ್ಭದಲ್ಲಿ ಅಜಾತಶತ್ರುವನ್ನು ಕುರಿತು ಶತ್ರುತ್ವಭಾವಹೊಂದಿದ್ದ ಪ್ರದ್ಯೋತನು, ತನ್ನ ಶತ್ರುತ್ವಭಾವವನ್ನು ತೊರೆದು ಪದ್ಮಾವತಿಯನ್ನು ತನ್ನ ಮಗನಿಗೆ ವಿವಾಹಮಾಡಿಕೊಳ್ಳುವಂತಹ ಸ್ನೇಹಾಪೇಕ್ಷೆ ಹೊಂದಿದುದರ ಹಿನ್ನಲೆಯಲ್ಲಿ ಅವನ ಅಳಿಯನಾದ ಉದಯನನು ಕಳೆದುಕೊಂಡಿದ್ದರಾಜ್ಯವನ್ನು ಪುನಃ ಸ್ವಾಯತ್ತೆಗೊಳಿಸಿಕೊಳ್ಳಲು ಮಗಧರಾಜನ ಸಹಾಯವನ್ನು ಪಡೆಯುವ ಉದ್ದೇಶವಿದ್ದಿರಬೇಕೆಂದು ವ್ಯಕ್ತವಾಗುವುದು. ಪ್ರಾಯಶಃ ಉದಯನನ ರಾಜ್ಯವನ್ನು ಅಪಹರಿಸಿದ ಆರುಣಿಗೆ ಅಜಾತಶತ್ರುವು, ಪ್ರತ್ಯಕ್ಷವಾಗಿಯಲ್ಲದಿದ್ದರೂ ಪರೋಕ್ಷವಾಗಿ ಸಹಕಾರನೀಡಿದ್ದಾನೆ. ಈ ವಿಷಯವು ಪ್ರದ್ಯೋತ ಮತ್ತು ಉದಯನರೀರ್ವರಿಗೂ ತಿಳಿದದ್ದು ಅಜಾತಶತ್ರುವಿನ ನೆರವಿಲ್ಲದೆ ರಾಜ್ಯವನ್ನು ಪುನಃ ಸ್ವಾಯತ್ತೆಗೊಳಿಸಿಕೊಳ್ಳಲಾಗುವುದಿಲ್ಲೆಂಬುದೂ ವಿದಿತವಿದ್ದಿತು. ಆದ್ದರಿಂದಲೇ ಪ್ರದ್ಯೋತ ಮತ್ತು ಉದಯನರೀರ್ವರೂ ಅಜಾತಶತ್ರುವಿನೊಡನೆ ಸಂಬಂಧಬೆಳೆಸಲುಯತ್ನಿಸಿದ್ದಾರೆ. ಅಜಾತಶತ್ರುವು ತನ್ನ ತಾಯಿಯ

ಅಕ್ಕನ ಮಗನಾದ ಉದಯನನ ವಿಷಯದಲ್ಲಿ ಮೈತ್ರೀಭಾವವನ್ನು ತಳೆದು ಭಗಿನಿಯಾದ ಪದ್ಮಾವತಿಯನ್ನು ಅವನಿಗಿತ್ತು ವಿವಾಹಮಾಡಿ ಅವನು ತನ್ನ ರಾಜ್ಯವನ್ನು ಪುನಃ ಸ್ವಾಯತ್ತೀಗೊಳಿಸಿಕೊಳ್ಳಲು ಸಹಾಯವಿತ್ತಿದ್ದಾನೆ. ಹೀಗೆ ಬೌದ್ಧಆಮ್ನಾಯದ ಐತಿಹ್ಯ ಮತ್ತು ಭಾಸಕವಿಯ ಪ್ರ. ಯೌ. ನಾಟಕ ಮತ್ತು ಸ್ವ. ವಾ. ನಾಟಕಗಳ ಕಥಾಯುತ್ತ ಐತಿಹ್ಯಗಳು ನಿರಾಭಾಧವಾಗಿ ಸಮನ್ವಯಹೊಂದುವುವಾದ್ದರಿಂದ ಸ್ವ. ವಾ. ನಾಟಕದ 'ದರ್ಶಕಮಹಾರಾಜ' ಮತ್ತು ಬೌದ್ಧಆಮ್ನಾಯದ 'ಅಜಾತಶತ್ರು' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂದು ಫಲಿತವಾಗುವುದು. ಇದರಿಂದ ಹಿಂದೆ ಹೇಳಿರುವಂತೆ, ಪಟ್ಟಾವಲೀ ಸಮುಚ್ಚಯದ ಹೇಳಿಕೆ ಮತ್ತು ಶ್ರೀ ಗೌತಮಬುದ್ಧನ ನಿರ್ವಾಣಸಮಯದ ವಿಚಾರವಾಗಿ ಬೌದ್ಧಆಮ್ನಾಯದ ಹೇಳಿಕೆಗಳನ್ನಾಧರಿಸಿ, ಅಜಾತಶತ್ರುವಿನ ಆರನೇವರ್ಷದ ರಾಜ್ಯಭಾರಸಮಯದಲ್ಲಿ ಪ್ರದ್ಯೋತನ ರಾಜ್ಯಭಾರವು ಅಂತ್ಯಗೊಂಡಿದ್ದು ಇದೇ ಸಮಯದಲ್ಲಿ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿರುವನೆಂದು ನಿರಾಬಾಧವಾಗಿ ನಿರ್ಣಯಿಸಲವಕಾಶವಾಗುವುದು.

ಈಗ 'ಪ್ರದ್ಯೋತ' ಎಂಬ ಹೆಸರಿಗೆಸಂಬಂಧಿತವಾಗಿರುವ ಪೂರ್ವೋಲ್ಲಿಖಿತವಾದ ಇತರ ಕಥೆಗಳಲ್ಲಿ ಕಂಡುಬರುವ ಐತಿಹ್ಯಾಂಶಗಳನ್ನು ಗಮನಿಸಬೇಕಾಗಿದೆ.

ಹಿಂದೆ ಉಲ್ಲೇಖಿಸಿರುವ ವೃಷಭಸೇನಭಟ್ಟಾರಕರ ಕಥೆಯಲ್ಲಿ ನಿರೂಪಿತವಾಗಿರುವ ಐತಿಹ್ಯವು ಅವಂತೀಶನಾದ ಪ್ರದ್ಯೋತಮಹಾಸೇನನನ್ನಧಿಕರಿಸಿದ್ದಾಗಿದೆಯೇ? ಹೇಗೆ? ಎಂಬುದು ವಿಮರ್ಶಾರ್ಹವಾಗಿದೆ. ಈ ಕಥೆಯಲ್ಲಿ ಪ್ರದ್ಯೋತನ ಜ್ಯೇಷ್ಠಮಹಿಷಿಯನ್ನು ಜ್ಯೋತಿರ್ಮಾಲೆಯೆಂದೂ, ಜ್ಯೇಷ್ಠಸುತನನ್ನು ವಸುಪಾಲನೆಂದೂ ಹೆಸರಿಸಿದೆಯಾದರೆ ಭಾಸಕವಿಯ ಪ್ರ. ಯೌ. ನಾಟಕದಲ್ಲಿ ಇವರೀರ್ವರನ್ನೂ ಅಂಗಾರವತಿ ಮತ್ತು ಗೋಪಾಲಕರೆಂದು ಹೆಸರಿಸಿರುವುದು ವಿದಿತವಿದೆ. ಹೀಗೆ ಈ ಹೆಸರುಗಳ ವ್ಯತ್ಯಾಸಮಾತ್ರದಿಂದ ಈ ಕಥೆಯ ಪ್ರದ್ಯೋತನು ಪ್ರ. ಯೌ. ನಾಟಕದ ಪ್ರದ್ಯೋತಮಹಾಸೇನನಿಂದ ಭಿನ್ನವ್ಯಕ್ತಿಯಾಗಿರಬೇಕೆಂದು ಭಾವಿಸುವಂತಿಲ್ಲ; ಜೈನ ಸಂಪ್ರದಾಯದ ಕಥೆಗಳಲ್ಲಿ ಕೆಲವೊಮ್ಮೆ ವ್ಯಕ್ತಿಗಳ ಹೆಸರುಗಳನ್ನು ಅರ್ಥಸಾದೃಶ್ಯವುಳ್ಳ ಇತರ ನಾಮಧೇಯಗಳಿಂದ ಹೆಸರಿಸಿರುವುದು ಕಂಡುಬರುತ್ತದೆ. ಪದ್ಯಬಂಧದ ಅನುಕೂಲ್ಯವಶದಿಂದ ಈ ರೀತಿಯಾಗಿ ವ್ಯಕ್ತಿಗಳ ಹೆಸರುಗಳನ್ನು ಪರ್ಯಾಯಪದಗಳ ಮೂಲಕ ಸೂಚಿಸುವ ರೂಢಿಯಿದ್ದುದರಿಂದ ಕಾಲಾನುಕ್ರಮದಲ್ಲಿ ಒಂದು ಹೆಸರಿನ ಸ್ಥಾನದಲ್ಲಿ ಮತ್ತೊಂದು ಹೆಸರು ಬಳಕೆಗೊಂಡು ಉಳಿದುಬಂದಿದೆಯೆಂದು ಹೇಳಲವಕಾಶವಿದೆ. ಉದಾಹರಣೆಗಾಗಿ ಬೃಹತ್ಕಥಾಕೋಶದ ಅವಂತೀ ಸುಕುಮಾಲ ಕಥೆಯಲ್ಲಿ ಪ್ರದ್ಯೋತನ ಜ್ಯೇಷ್ಠಮಹಿಷಿಯನ್ನು ಒಂದೆಡೆ ಜ್ಯೋತಿರ್ಮಾಲೆಯೆಂದು ಹೆಸರಿಸಿ [ಶ್ಲೋ. ಸಂ. ೨೨೩] ಮತ್ತೊಂದೆಡೆ ಉದ್ಯೋತಮಾಲೆಯೆಂದು [ಶ್ಲೋ. ಸಂ. ೨೨೮] ಹೆಸರಿಸಿದೆ. ವಡ್ಡಾರಾಧನೆಯಲ್ಲಿರುವ ಸುಕುಮಾರಚರಿತೆಯಲ್ಲಿ ಜ್ಯೋತಿ

ವರ್ಾಲೆಯ ಪತಿಯನ್ನು 'ವೃಷಭಾಂಕ' ನೆಂದು ಹೆಸರಿಸಿದೆ. ಇದೂ ಅಲ್ಲದೆ ಒಬ್ಬನೇ ವ್ಯಕ್ತಿಯನ್ನು ಹೆಸರಿಸುವಲ್ಲಿ ಕೆಲವೊಮ್ಮೆ ವೈದಿಕ, ಬೌದ್ಧ ಮತ್ತು ಜೈನ ಸಂಪ್ರದಾಯಗಳಲ್ಲಿ ಪರಸ್ಪರ ಭಿನ್ನ ಭಿನ್ನ ರೀತಿಯಿಂದ ಹೆಸರಿಸಲಾಗಿರುವುದು ತಿಳಿದ ಸಂಗತಿಯಾಗಿದೆ. ಆದ್ದರಿಂದ ವೃ. ಸೇ. ಭ. ಕಥೆಯ ಜ್ಯೋತಿರ್ವಾಲೆ ಮತ್ತು ವಸುಪಾಲ ಎಂಬ ಹೆಸರುಗಳು ಅನುಕ್ರಮವಾಗಿ ಭಾಸಕವಿಯ ನಾಟಕಗಳ ಅಂಗಾರವತಿ ಮತ್ತು ಗೋಪಾಲಕರ ಸೂಚಕಗಳಾಗಿವೆಯೆಂದು ಗ್ರಹಿಸಲವಕಾಶವಿದೆ. ಹೀಗೆ ಈ ಕಥೆಯ ಪ್ರದ್ಯೋತನು ಭಾಸಕವಿಯ ಪೂರ್ವಸೂಚಿತನಾಟಕಗಳ ಪ್ರದ್ಯೋತನಿಂದ ಅಭಿನ್ನವ್ಯಕ್ತಿಯಾಗಿರುವನೆಂದು ಹೇಳಬಹುದಾದರೂ ಹಿಂದೆ ಉಲ್ಲೇಖಿಸಲಾಗಿರುವ ಪಟ್ಟಾವಲೀ ಸಮುಚ್ಚಯದ ಐತಿಹ್ಯವು ಈ ಕಥೆಯ ಐತಿಹ್ಯದಿಂದ ಸ್ವಲ್ಪ ಭಿನ್ನರೀತಿಯದಾಗಿರುವುದನ್ನು ಗಮನಿಸಬೇಕಾಗಿದೆ. ಪಟ್ಟಾವಲೀ ಸಮುಚ್ಚಯದ ಹೇಳಿಕೆಯಂತೆ ಪ್ರದ್ಯೋತನು ಮೃತನಾಗಲು ಪಾಲಕನು ರಾಜ್ಯಾಭಿಷಿಕ್ತನಾಗಿದ್ದಾನಾದರೆ, ಈ ವೃ. ಸೇ. ಭ. ಕಥೆಯ ಹೇಳಿಕೆಯಂತೆ ಪ್ರದ್ಯೋತನು ಮುನಿದೀಕ್ಷೆ ಪಡೆದನಂತರ ಅವನ ಜ್ಯೇಷ್ಠಸುತನಾದ ವಸುಪಾಲನು ರಾಜ್ಯಭಾರದಲ್ಲಿ ಅಭಿಷಿಕ್ತನಾಗಿದ್ದಾನೆ. ಇಲ್ಲಿ ಪ್ರದ್ಯೋತನ ಅನಂತರ ರಾಜ್ಯಭಾರಕ್ಕೆ ಬಂದ ವ್ಯಕ್ತಿಯನ್ನು ಹೆಸರಿಸುವಲ್ಲಿ ಕಂಡುಬರುವ ವ್ಯತ್ಯಾಸವನ್ನು ಗಮನಿಸಬಹುದು. ಪಟ್ಟಾವಲೀ ಸಮುಚ್ಚಯದ 'ಪಾಲಕ' ಎಂಬ ಹೆಸರು ಗೋತ್ರನಾಮವಾಗಿದೆಯೆಂದು ಹೇಳಲವಕಾಶವಿದೆ. ಈ ವಿಷಯವನ್ನು ಮುಂದೆ ಅವಂತೀ ರಾಜಸಂತತಿಯ ಇತಿವೃತ್ತನಿರೂಪಣಾ ಸಂದರ್ಭದಲ್ಲಿ ವಿವರಿಸಲಾಗುವುದು. ಇನ್ನು ಈ ಕಥೆಯ ಹೇಳಿಕೆಯಂತೆ ಪ್ರದ್ಯೋತನು ರಾಜ್ಯಭಾರವನ್ನು ತ್ಯಜಿಸಿ ಮುನಿದೀಕ್ಷೆಪಡೆದನೇ? ಅಥವಾ ಪಟ್ಟಾವಲೀ ಸಮುಚ್ಚಯದ ಹೇಳಿಕೆಯಂತೆ ರಾಜನಾಗಿಯೇ ಅವಸಾನ ಹೊಂದಿದನೇ? ಎಂಬುದು ಪ್ರಶ್ನೆಯಾಗುವುದು. ಆದರೆ ಇವನು ರಾಜನಾಗಿಯೇ ಅವಸಾನಹೊಂದಿರುವನೆಂಬ ಐತಿಹ್ಯವು ಬೃ. ಕ. ಮಂಜರಿಯ ಕಥನದಿಂದ ಸಮರ್ಥಿತವಾಗುವುದು. ಇಷ್ಟಾದರೂ, ಪ್ರದ್ಯೋತನು ಮುನಿದೀಕ್ಷೆಪಡೆದನೆಂಬ ಐತಿಹ್ಯವು ಇದೇ ಹೆಸರಿನ ಮತ್ತೊಬ್ಬ ರಾಜನ ಐತಿಹ್ಯವಾಗಿದ್ದು ಅದು ಈ ಕಥೆಯಲ್ಲಿ ಆರೋಪಿತವಾಗಿವೆಯೆಂದು ಗುರುನಿಹ್ನವ ಕಥೆಯಾಧಾರದಿಂದ ಸೂಚಿತವಾಗುವುದು.

**ಗುರುನಿಹ್ನವ ಕಥೆಯ ಚಂಡಪ್ರದ್ಯೋತ:** ಕಾಲಸಂದೀವಗುರುವಿನಿಂದ ಮುನಿದೀಕ್ಷೆಪಡೆದ ಚಂಡಪ್ರದ್ಯೋತನು 'ಶ್ವೇತಸಂದೀವ'ಎಂಬ ಖ್ಯಾತಿನಾಮಹೊಂದಿ ಶ್ರೀ ವೀರತೀರ್ಥಂಕರನ ಸಮವಸರಣವನ್ನು ಸಂದರ್ಶಿಸಿದ ಸಮಯದಲ್ಲಿ ಇವನನ್ನು ಶ್ರೇಣಿಕ-ಬಿಂಬಿಸಾರನು ಅಭಿವಾದಿಸಿದನೆಂದು ಈ ಕಥೆಯಿಂದ ಸೂಚಿತವಾಗುವುದು. ಇದರಿಂದ ಈ ಕಥೆಯ ಚಂಡಪ್ರದ್ಯೋತನು ಮುನಿದೀಕ್ಷೆಪಡೆದಸಮಯದಲ್ಲಿ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರವು ನಡೆದಿದ್ದಿತೆಂದು ಸೂಚಿತವಾಗುವುದು. ಶ್ರೇಣಿಕ-ಬಿಂಬಿಸಾರನು ಮೃತನಾದ ಆರನೇ ವರ್ಷದಲ್ಲಿ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿ

ರುವನಾಗಿ ಈ ನಿರ್ವಾಣಸಮಯದ ಅತಿಸಮೀಪವರ್ತಿಸಮಯದಲ್ಲಿ ರಾಜ್ಯಭಾರ ದಿಂದ ನಿವೃತ್ತನಾದ ಪ್ರದ್ಯೋತಮಹಾಸೇನನಿಂದ ಈ ಕಥೆಯ ಚಂಡಪ್ರದ್ಯೋತನು ಭಿನ್ನವ್ಯಕ್ತಿಯಾಗಿರಬೇಕೆಂದು ಗ್ರಹಿಸಲವಕಾಶವಾಗುವುದು.

ಈ ಕಥೆಯಲ್ಲಿ ಪ್ರದ್ಯೋತನನ್ನು ಕೆಲವೊಮ್ಮೆ 'ಚಂಡಪ್ರಜ್ಞ' ನೆಂದೂ ಮತ್ತೆ ಕೆಲವೊಮ್ಮೆ 'ಚಂಡಪ್ರದ್ಯೋತ' ನೆಂದೂ ಹೆಸರಿಸಿರುವುದನ್ನು ಗಮನಿಸಬಹುದು. ಕೇವಲ ಲಿಪಿಪ್ರಮಾದವಶದಿಂದ ಹೀಗಾಗಿದೆಯೆಂದು ಹೇಳಲಾಗುವುದಿಲ್ಲ. ಪ್ರಾಯಶಃ ಕಥಾಕಾರರಿಗೂ ವ್ಯ. ಸೇ. ಭ. ಕಥೆ ಮತ್ತು ಗುರುನಿಹ್ನವಕಥೆಗಳ ಪ್ರದ್ಯೋತರೀರ್ವ ರಲ್ಲಿ ಒಬ್ಬನು ಮಾತ್ರ ಪ್ರದ್ಯೋತನೆಂಬ ಹೆಸರಿನವನಾಗಿರಬೇಕೆಂಬ ಸಂಶಯವು ಉತ್ಪನ್ನವಾದುದರಿಂದ, ಗುರುನಿಹ್ನವ ಕಥೆಯ ಪ್ರದ್ಯೋತನನ್ನು ಹೆಸರಿಸುವಲ್ಲಿ ಸ್ಖಾಲಿ ತ್ಯಕ್ಕೆ ಅವಕಾಶವಾಗಿದೆಯೆಂದು ತೋರುತ್ತದೆ.

ಪ್ರಭಾವತೀರಾಣಿಯ ಕಥೆಯಲ್ಲಿ, ಪ್ರದ್ಯೋತನು ಪ್ರಭಾವತಿಯ ಚಿತ್ರಮಾತ್ರ ದರ್ಶನದಿಂದ ವ್ಯಾಮೋಹಿತನಾಗಿ ಆಕೆಯನ್ನು ಪಡೆಯಲೋಸುಗ ದಂಡೆತ್ತಿಹೋಗಿ ರೋರುಕನಗರಕ್ಕೆ ಮುತ್ತಿಗೆಹಾಕಿದನೆಂದು ಹೇಳಲಾಗಿದೆ. ಆದರೆ ಈ ಕಥೆಯ ಪ್ರದ್ಯೋತನು ಉಜ್ಜಯಿನಿಯ ಪ್ರದ್ಯೋತಮಹಾಸೇನನಿಂದ ಭಿನ್ನವ್ಯಕ್ತಿಯಾಗಿರ ಬೇಕೆಂದು ಹೇಳಲವಕಾಶವಿದೆ. ಉಜ್ಜಯಿನಿಯ ಪ್ರದ್ಯೋತಮಹಾಸೇನನಿಗೆ ಮಗಧ ರಾಜ ಶ್ರೇಣಿಕ-ಬಿಂಬಿಸಾರನು ಸಂಬಂಧಿಯಾಗಿದ್ದಂತೆ ರೋರುಕನಗರದ ಉದ್ದಾಯ ನನೂ ನಿಕಟವರ್ತಿಸಂಬಂಧಿಯಾಗಿದ್ದನು. ಇದರಿಂದ ಪ್ರದ್ಯೋತಮಹಾಸೇನನಿಗೆ ಉದ್ದಾಯನನ ಮತ್ತು ಇವನ ಮಡದಿಯಾದ ಪ್ರಭಾವತೀರಾಣಿಯರ ಪರಿಚಯ ವಿದ್ದಿರಲಿಲ್ಲೆಂದು ಹೇಳಲಾಗುವುದಿಲ್ಲ. ಆದ್ದರಿಂದ ಪ್ರಭಾವತೀರಾಣಿಯ ಚಿತ್ರದರ್ಶನ ಮಾತ್ರದಿಂದ ವ್ಯಾಮೋಹಿತನಾಗಿ ಆಕೆಯನ್ನು ವಶಪಡಿಸಿಕೊಳ್ಳಲು ಯತ್ನಿಸಿದನೆಂದು ಹೇಳಲಾಗಿರುವ ಪ್ರದ್ಯೋತನು ಉಜ್ಜಯಿನಿಯ ಪ್ರದ್ಯೋತಮಹಾಸೇನನಿಂದ ಭಿನ್ನ ವ್ಯಕ್ತಿಯಾಗಿರಬೇಕೆಂದೇ ಗ್ರಹಿಸಬೇಕಾಗುವುದು.

ಚಿಲಾತಪುತ್ರ ಕಥೆಯ ಪ್ರದ್ಯೋತ: ಚಿಲಾತಪುತ್ರನು ಪ್ರದ್ಯೋತನನ್ನು ಸೆರೆಹಿಡಿದ ಪ್ರಸಂಗದ ಸಮಯದಿಂದ ಸುಮಾರು ೧೨ ವರ್ಷಗಳ ತರುವಾಯ ಶ್ರೇಣಿಕ-ಬಿಂಬಿಸಾರನು ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾದುದಾಗಿ ಈ ಕಥೆಯಿಂದ ನಿರ್ದೇ ಶಿತವಾಗುವುದು. ಬ್ರಹ್ಮಾಂಡಪುರಾಣದ ಹೇಳಿಕೆಯಾಧಾರದಂತೆ ಶ್ರೇಣಿಕ-ಬಿಂಬಿ ಸಾರನು ೩೮ ವರ್ಷಕಾಲ ರಾಜ್ಯಭಾರಮಾಡಿರುವನು. ಈ ಕಥೆಯ 'ಪ್ರದ್ಯೋತ' ಎಂಬ ಹೆಸರು ಶ್ರೇಣಿಕ-ಬಿಂಬಿಸಾರನ ಸಮಕಾಲೀನನಾಗಿ ಉಜ್ಜಯಿನಿಯಲ್ಲಿ ರಾಜ್ಯ ಭಾರಮಾಡಿದ ಪ್ರದ್ಯೋತಮಹಾಸೇನನ ಸೂಚಕವಾಗಿದೆಯೆಂದು ಗ್ರಹಿಸಿದಲ್ಲಿ, ಈ ಪ್ರದ್ಯೋತಮಹಾಸೇನನು ಕನಿಷ್ಠಮಿತಿಯಿಂದ (೧೨+೩೮+೫=) ೫೫ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಫಲಿತವಾಗುವುದು. ಆದರೆ ಪ್ರದ್ಯೋತಮಹಾಸೇನನು

೨೩ ವರ್ಷಕಾಲ ಮಾತ್ರ ರಾಜ್ಯಭಾರಮಾಡಿರುವನೆಂದು ಪುರಾಣಗಳ ಹೇಳಿಕೆಯಿಂದ ತಿಳಿದುಬರುವುದು. ಆದ್ದರಿಂದ ಈ ಕಥೆಯಲ್ಲಿ ಚಿಲಾತಪುತ್ರನಿಗೆ ಸೆರೆಸಿಕ್ಕಿದನೆಂದು ಹೇಳಲಾಗಿರುವ ಪ್ರದ್ಯೋತನು ಶ್ರೇಣಿಕ-ಬಿಂಬಿಸಾರನ ಸಮಕಾಲೀನನಾದ ಅವಂತಿಯ ಪ್ರದ್ಯೋತಮಹಾಸೇನನಿಂದ ಭಿನ್ನವ್ಯಕ್ತಿಯಾಗಿರಬೇಕೆಂದು ಫಲಿತವಾಗುವುದು. ಆದರೆ ಹೆಸರುಗಳ ಸಾದೃಶ್ಯತೆಯ ಕಾರಣದಿಂದ ಕಾಲಾನುಕ್ರಮದಲ್ಲಿ ಕಥನಕಾರರು, ಪ್ರದ್ಯೋತ ಎಂಬ ಹೆಸರುಗಳಿಗೆ ಸಂಬಂಧಿಸಿದ ಐತಿಹ್ಯವೆಲ್ಲವನ್ನೂ ಪ್ರಸಿದ್ಧನಾದ ಅವಂತಿಯ ಪ್ರದ್ಯೋತಮಹಾಸೇನನೊಬ್ಬನ ಐತಿಹ್ಯವನ್ನಾಗಿ ಗ್ರಹಿಸಿರುವಂತೆ ಕಂಡು ಬರುತ್ತದೆ.

ಇದುವರೆವಿಗೆ ವಿಮರ್ಶಿತವಾದ ಜೈನಆಮ್ನಾಯದ ಕಥೆಗಳಿಂದ 'ಪ್ರದ್ಯೋತ' ಎಂಬ ಹೆಸರಿನ ಇಬ್ಬರು ರಾಜರಿದ್ದರೆಂದು ಸೂಚಿತವಾಗುವಂತೆ, ಬೌದ್ಧ ಮತ್ತು ವೈದಿಕಮತ ಆಮ್ನಾಯಗಳ ಇತಿವೃತ್ತಗಳಿಂದಲೂ ಸೂಚಿತವಾಗುವುದು. ಹಿಂದೆ ಉಲ್ಲೇಖಿಸಲಾಗಿರುವ ಬೌದ್ಧಮತಆಮ್ನಾಯಾನುಸಾರದ ಪ್ರದ್ಯೋತನ ಐತಿಹ್ಯದಲ್ಲಿ ಅವಂತೀಶನಾದ ಪ್ರದ್ಯೋತನಲ್ಲದೆ ಇದೇ ಹೆಸರಿನ ಮತ್ತೊಬ್ಬ ರಾಜನು ಇದ್ದಿರಬೇಕೆಂದು ಸನ್ಮಾನ್ಯ ಜಿ. ಪಿ. ಮಲಸೇಕರರವರು ಅನುಮಾನಿಸಿರುವುದನ್ನು ಗಮನಿಸಬಹುದು. ಇಂತೆಯೇ ಕ್ಷೇಮೇಂದ್ರಕವಿ ವಿರಚಿತವಾದ ಬೃಹತ್ಕಥಾಮಂಜರಿಯ ಈ ಮುಂದಿನ ಕಥನದಿಂದಲೂ ಅವಂತೀಶನಾದ ಪ್ರದ್ಯೋತನಿಂದ ಅನ್ಯವಾದ ಇದೇ ಹೆಸರಿನ ಮತ್ತೊಬ್ಬ ರಾಜನಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು.

ಪ್ರದ್ಯೋತೋ ಮಗಧಾಧೀಶೋ ದೂತೇನಾಭ್ಯರ್ಥ್ಯ ಭೂಭುಜೇ |
ದಾತುಂ ಪದ್ಮಾವತೀಮೈಚ್ಛತ್ ಪಾರ್ವತೀಮಿವ ಶೂಲಿನೇ || ೯೩ ||

[ಪದ್ಮಾವತೀವಿವಾಹ–ಲಂಬಕ ೩]

ಇಲ್ಲಿ ಕ್ಷೇಮೇಂದ್ರ ಕವಿಯು ಪದ್ಮಾವತಿಯನ್ನು ಉದಯನನಿಗಿತ್ತು ವಿವಾಹಮಾಡಿ ಕೊಟ್ಟ ಮಗಧರಾಜನನ್ನು 'ಪ್ರದ್ಯೋತ' ನೆಂದು ಹೆಸರಿಸಿರುವುದು ಸ್ಪಷ್ಟವಿದೆ. ಇಷ್ಟಲ್ಲದೆ ಕ್ಷೇಮೇಂದ್ರಕವಿಯು ಅವಂತೀಶನಾದ ಪ್ರದ್ಯೋತನನ್ನು 'ಪ್ರದ್ಯೋತ' ಎಂಬ ಹೆಸರಿನಿಂದ ನಿರ್ದೇಶಿಸದೆ 'ಚಂಡಮಹಾಸೇನ' ಎಂಬ ಹೆಸರಿನಿಂದ ನಿರ್ದೇಶಿಸಿದ್ದಾನೆ. ಆದರೆ ಇದಕ್ಕೆ ಪ್ರತಿಯಾಗಿ ಭಾಸಕವಿಯ ಸ್ವ. ವಾ. ನಾಟಕದಲ್ಲಿ ಅವಂತೀಶನಾದ ಪ್ರದ್ಯೋತನಿಗೆ 'ಮಹಾಸೇನ' ಎಂಬ ಖ್ಯಾತಿನಾಮವಿದ್ದಿತೆಂದು ಸೂಚಿತವಾಗಿರುವುದನ್ನು ಮತ್ತು ಮಗಧರಾಜಪುತ್ರಿ ಪದ್ಮಾವತಿಯ ಭ್ರಾತೃವನ್ನು 'ದರ್ಶಕ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿರುವುದನ್ನು ಹಿಂದೆ ವಿವರಿಸಲಾಗಿದೆ. ಇದೂ ಅಲ್ಲದೆ ಭಾಸಕವಿಯ ಸ್ವ. ವಾ. ನಾಟಕದ ಕಥಾವಸ್ತುವಿನಿಂದ ಪದ್ಮಾವತಿಯ ವಿವಾಹಸಮಯದಲ್ಲಿ ಆಕೆಯ ತಂದೆಯು ಜೀವಿತನಿದ್ದಿರಲಿಲ್ಲವೆಂಬ ಸೂಚನೆ ದೊರೆಯುತ್ತದೆ. ಈ ನಾಟಕದ ಕಥೆಯಂತೆ, ಪದ್ಮಾವತಿಯ ವಿವಾಹದ ಮುನ್ನವೇ ಈಕೆಯ ತಾಯಿಯು

ಗೃಹತ್ಯಾಗಮಾಡಿ ತಪಸ್ವಿಗಳ ಆಶ್ರಮದಲ್ಲಿ ವಾಸಿಸುತ್ತಿದ್ದಳೆಂಬುದನ್ನು ಮತ್ತು ಇವಳ ವಿವಾಹಕಾರ್ಯವನ್ನು ಭ್ರಾತೃವಾದ ಮಹಾರಾಜ ದರ್ಶಕನು ನೆರವೇರಿಸಿದನೆಂಬುದನ್ನು ಗಮನಿಸಬಹುದು. ಇದರಿಂದ ಪದ್ಮಾವತಿಯ ವಿವಾಹಸಮಯದಲ್ಲಿ ಆಕೆಯ ತಂದೆಯು ಜೀವಿತನಿದ್ದಿರಲಿಲ್ಲವೆಂದು ನಿರ್ದೇಶಿತವಾಗುವುದು. ಭಾಸಕವಿಯು ತನ್ನ ನಾಟಕದ ಉತ್ಕರ್ಷತೆಯ ಸಾಧನೆಗಾಗಿ ಈ ಸಂದರ್ಭದ ಐತಿಹಾಸಿಕಪ್ರಸಂಗವನ್ನು ಮಾರ್ಪಾಡುಗೊಳಿಸಿರಬಹುದೆಂದು ಹೇಳಲೂ ಆಗುವುದಿಲ್ಲ. ಪದ್ಮಾವತಿಯ ತಂದೆಯ ಬದಲಾಗಿ ಭ್ರಾತೃವಾದ ದರ್ಶಕನ ಪಾತ್ರವನ್ನು ರೂಪಿಸಿಕೊಳ್ಳುವುದರಿಂದ ನಾಟಕದ ಉತ್ಕರ್ಷತೆಯು ಸಾಧಿತವಾಗುವಂತಹುದೇನೂ ಕಂಡುಬರುವುದಿಲ್ಲ. ಆದ್ದರಿಂದ ಈ ವಿಷಯವಾಗಿ ಭಾಸಕವಿಯ ಪ್ರ. ಯೌ. ನಾಟಕ, ಸ್ವ. ವಾ. ನಾಟಕಗಳ ಕಥಾಯುತ್ತ ಐತಿಹ್ಯವು ಇತಿಹಾಸದ ತಥ್ಯಕ್ಕೆ ಬಹುಸಮೀಪವರ್ತಿಯಾಗಿದೆಯೆಂದು ಗ್ರಹಿಸಲವಕಾಶವಾಗುವುದಲ್ಲದೆ ಬೃ. ಕ. ಮಂಜರಿಯ ಮೇಲ್ಕಂಡ ಕಥಾಂತವೇ ದೋಷಭಾಗಿಯಾಗಿದೆಯೆಂದು ಫಲಿತವಾಗುವುದು. ಕ್ಷೇಮೇಂದ್ರಕವಿ ವಿರಚಿತ ರಾಮಾಯಣಮಂಜರಿ ಮತ್ತು ಭಾರತಮಂಜರಿಗಳು ರಾಮಾಯಣ ಮತ್ತು ಮಹಾಭಾರತಗಳ ಸಂಗ್ರಹರೂಪದ ಕಥೆಗಳಾಗಿರುವಂತೆ, ಬೃ. ಕ. ಮಂಜರಿಯು ಗುಣಾಢ್ಯಕವಿವಿರಚಿತ ಬೃಹತ್ಕಥೆಯ ಸಂಗ್ರಹವಾಗಿದೆ. ಆದ್ದರಿಂದ ಮಗಧರಾಜನನ್ನು ಪ್ರದ್ಯೋತನೆಂದು ಹೆಸರಿಸುವಲ್ಲಿ ಕ್ಷೇಮೇಂದ್ರ ಕವಿಯು ಸ್ವತಂತ್ರತೆ ವಹಿಸಿದ್ದಾನೆಂದು ಹೇಳಲಾಗುವುದಿಲ್ಲವೆಂಬುದಲ್ಲದೆ ಈ ಕವಿಯು ತನ್ನ ಈ ಕೃತಿರಚನೆಗೆ ಆಧಾರವಾಗಿ ಉಪಯೋಗಿಸಿದ ಮೂಲಕೃತಿಯಲ್ಲಿಯೇ ಮಗಧ ರಾಜನನ್ನು ಪ್ರದ್ಯೋತನೆಂದು ಹೆಸರಿಸಿದ್ದಿರಬೇಕೆಂಬುದು ಸಂಭಾವ್ಯವೆನಿಸುವುದು. ಹೀಗೆ ಬೃಹತ್ಕಥಾಮಂಜರಿಯ ಕಥಾವಿಮರ್ಶೆಯಿಂದಲೂ ಅವಂತಿಯ ಪ್ರದ್ಯೋತ ಮಹಾಸೇನನಿಂದ ಅನ್ಯನಾದ ಮತ್ತೊಬ್ಬ ಪ್ರದ್ಯೋತ ಎಂಬ ರಾಜನ ಪರಂಪರಾಗತವಾದ ಐತಿಹ್ಯವಿದ್ದಿರಬೇಕೆಂದು ವ್ಯಕ್ತವಾಗುವುದು.

ಬ್ರಹ್ಮಾಂಡ ಮತ್ತು ವಾಯುಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧರಾಜ ಸಂತತಿಯ ಇತಿವೃತ್ತದಲ್ಲಿ ಬೃಹದ್ರಥಾರಾಜಮನೆತನದ ಅಂತಿಮರಾಜನಾದ ರಿಪುಂಜಯನನ್ನು ಶುನಕ (=ಮುನಿಕ = ಪುಲಕ) ನೆಂಬುವನು ಕೊಂದು ಮಗನಾದ ಪ್ರದ್ಯೋತಿಗೆ (ಅಥವಾ ಪ್ರದ್ಯೋತನಿಗೆ) ರಾಜ್ಯಭಾರದ ಪಟ್ಟಕಟ್ಟಿದುದಾಗಿ ಹೇಳಲಾಗಿದೆ. ಈ ಪ್ರದ್ಯೋತ ಎಂಬ ಹೆಸರಿನ ಅನಂತರ ಅನುಕ್ರಮವಾಗಿ 'ಪಾಲಕ' ಮತ್ತು ಅಜಕ (=ಆರ್ಯಕ) ಎಂಬ ಹೆಸರುಗಳಿರುವುವಾದುದರಿಂದ, ಮಗಧರಾಜಸಂತತಿಯ ನಾಮಾವಲಿಯ ಮಧ್ಯೆ ಅವಂತೀರಾಜಸಂತತಿಯ ಕೆಲವರು ಅರಸರ ಹೆಸರುಗಳು ಸೇರಿಹೋಗಿವೆಯೆಂದು ಚರಿತ್ರಕಾರರಲ್ಲಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯವು ಸುಸಂಗತವಾಗಿದೆಯೆಂಬುದು ನಿಜವಾದರೂ, ಈ ರೀತಿಯಾಗಿ ಮಗಧರಾಜಸಂತತಿಯ ನಾಮಾವಲಿಯ ಮಧ್ಯೆ ಅವಂತೀರಾಜರ ಹೆಸರುಗಳು ಸಂಯೋಜಿತವಾಗುವಂತಾಗಲು ಯಾವುದಾದರೊಂದು ಪ್ರಬಲ ಕಾರಣವಿರಬೇಕೆಂದು ಭಾವಿಸಬೇಕಾಗುವುದು. ಈಗ

ಉಪಲಬ್ಧವಿರುವ ಪುರಾಣಗಳಲ್ಲಿ ನಿರೂಪಿತವಾಗಿರುವ ರಾಜವಂಶಚರಿತವು ಭಿನ್ನ ಕಾಲದ ಭಿನ್ನವ್ಯಕ್ತಿಗಳಿಂದಾದ ರಚನೆಗಳ ಸಂಕಲನವಾಗಿದೆಯೆಂದು ಹಿಂದೆ ಹೇಳಲಾಗಿದೆ. ಹೀಗೆ ಪುನಃ ಪುನಃ ಸಂಸ್ಕರಣಭಾಗಿಯಾಗಿರುವ ಈ ಪುರಾಣಗಳ ರಾಜಚರಿತದ ಮೂಲಐತಿಹ್ಯದಲ್ಲಿ ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯನ ತರುವಾಯ ಮಗಧರಾಜ್ಯದ ಸಿಂಹಾಸನದಲ್ಲಿ ಅಧಿಷ್ಠಿತನಾದ ರಾಜನನ್ನು 'ಪ್ರದ್ಯೋತಿ' ಅಥವಾ 'ಪ್ರದ್ಯೋತ' ಎಂದು ಹೆಸರಿದ್ದಿರಬೇಕೆಂದು ಹೇಳಬೇಕಾಗುವುದು. ಕ್ಷೇಮೇಂದ್ರ ಕವಿಯ ಬೃ. ಕ. ಮಂಜರಿಯ ಕಥನದಾಧಾರದಿಂದಲೂ ಮಗಧರಾಜಸಂತತಿಯಲ್ಲಿ 'ಪ್ರದ್ಯೋತ' ಎಂಬ ಹೆಸರಿನ ರಾಜನಿದ್ದಿರಬೇಕೆಂದು ಹಿಂದಿನ ವಿಮರ್ಶೆಯಿಂದ ವ್ಯಕ್ತಪಟ್ಟಿದೆ. ಇಷ್ಟಲ್ಲದೆ ಮಗಧರಾಜಸಂತತಿಯ ಇತಿವೃತ್ತದ ಮಧ್ಯೆ ಅವಂತೀರಾಜಸಂತತಿಯ ಇತಿವೃತ್ತಭಾಗವು ಪುರಾಣಗಳ ಮೂಲ ಐತಿಹ್ಯದಲ್ಲಿ ಸಮಾವಿಷ್ಟವಿದ್ದಿರಬೇಕೆಂದು ಹೇಳಲೂ ಅವಕಾಶವಿದೆ. ಈ ಮೂಲಐತಿಹ್ಯವು ಕಾಲಾನುಕ್ರಮದಲ್ಲಿ ಅಸ್ತವ್ಯಸ್ತರೂಪತಳೆದು ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಉಳಿದುಬಂದಿದೆಯಾದುದರಿಂದ, ಮಗಧರಾಜಸಂತತಿಯ ಅನುಕ್ರಮದಲ್ಲಿ ನಿರ್ದೇಶಿತವಾಗಿರುವ ಈ 'ಪ್ರದ್ಯೋತ' ಅಥವಾ 'ಪ್ರದ್ಯೋತಿ' ಎಂಬ ಹೆಸರು, ಮೂಲತಃ ರಿಪುಂಜಯನ ತರುವಾಯ ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾದ ಮಗಧರಾಜನ ಹೆಸರಾಗಿದ್ದಿರಬೇಕೆಂದು ಗ್ರಹಿಸಲವಕಾಶವಿದೆ. ಈ ಗ್ರಹಿಕೆಯ ತಥ್ಯವು ಬೃಹದ್ರಥರಾಜವಂಶತನದ ಅಂತಿಮ ರಾಜನಾದ ರಿಪುಂಜಯನ ಹತ್ಯಾಪ್ರಸಂಗದ ಐತಿಹ್ಯ ಹಾಗೂ ಈ ಸಮಯದ ಅನಂತರ ನಂದರಾಜಮನೆತನದ ರಾಜ್ಯಭಾರಾರಂಭಸಮಯ ಪರ್ಯಂತ ರಾಜ್ಯಭಾರಮಾಡಿದ ಪ್ರತಿಯೊಬ್ಬ ರಾಜನ ರಾಜ್ಯಭಾರಕಾಲನಿರ್ಣಯದ ಮತ್ತು ನಂದರಾಜಮನೆಪನದ ಮೂಲಪುರುಷನ ನಿಜಐತಿಹ್ಯಾಂಶಗಳನ್ನಾಧರಿಸಿದೆ. ಆದ್ದರಿಂದ ಈ ಐತಿಹ್ಯಾಂಶಗಳನ್ನು ಸಂಪ್ರದಾಯತ್ರಯದ ಇತಿವೃತ್ತಾಧಾರದಿಂದ ಪರಿಷ್ಕರಿಸಬೇಕಾಗಿದೆ.

ನಂದರಾಜನು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾದಸಮಯದ ಸೂಚಕವಾಗಿ ವಿಷ್ಣುಪುರಾಣದಲ್ಲಿ ಈ ಮುಂದಿನ ಹೇಳಿಕೆಯಿದೆ:

> ಯಾವತ್ಪರಿಕ್ಷಿತೋ ಜನ್ಮ ಯಾವನ್ನಂದಾಭಿಷೇಚನಂ।
> ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಾಶದುತ್ತರಂ ॥ ೧೦೪ ॥
>
> [ಚತುರ್ಥಾಂಶ—ಅಧ್ಯಾಯ ೨೪]

ಇದರಂತೆ ಪರಿಕ್ಷಿದ್ರಾಜನ ಜನ್ಮಸಮಯದಿಂದ ನಂದರಾಜನ ಅಭಿಷೇಕಸಮಯ ಪರ್ಯಂತ ೧೦೫೦ ವರ್ಷಗಳು ಗತಿಸಿದ್ದುವೆಂದು ನಿರ್ದೇಶಿತವಾಗುವುದು.[1] ಮಹಾ

---

1 ಈ ಸಮಯದಲ್ಲಿ ಅಭಿಷಿಕ್ತನಾದ ರಾಜನನ್ನು ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಅನುಕ್ರಮವಾಗಿ ಮಹಾದೇವ, ಮಹಾಪದ್ಮ ಮತ್ತು ಮಹಾನಂದ ಎಂದು ಹೆಸರಿಸಲಾಗಿದೆ.

ಭಾರತದ ಕಥೆಯಾಧಾರದಿಂದ ಕೌರವರ ಮತ್ತು ಪಾಂಡವರ ಮಧ್ಯೆ ನಡೆದ ಯುದ್ಧಾನಂತರದ ಬಹುಸಮೀಪವರ್ತಿಸಮಯದಲ್ಲಿ ಪರಿಕ್ಷಿತ್ತನ ಜನನವಾಗಿದೆಯೆಂದು ವಿದಿತವಾಗುವುದು. ಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧರಾಜಸಂತತಿಯ ಇತಿವೃತ್ತದನುಸಾರ, ಭಾರತಯುದ್ಧದಲ್ಲಿ ಬೃಹದ್ರಥವಂಶೀತನದ ಜರಾಸಂಧನ ಸುತನಾದ ಸಹದೇವನು ಮೃತನಾಗಲು ಇವನ ಸುತನಾದ ಸೋಮಾಪಿ(ಅಥವಾ ಸೋಮಾಧಿ)ಯು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾಗಿದ್ದಾನೆ. ಇದರಂತೆ ಪರಿಕ್ಷಿತ್ತನ ಜನನ ಮತ್ತು ಸೋಮಾಪಿಯ ರಾಜ್ಯಾಭಿಷೇಕಪ್ರಸಂಗಗಳು ಸಮಕಾಲೀನಪ್ರಸಂಗಗಳಾಗಿವೆಯೆಂದು ವ್ಯಕ್ತವಾಗುವುದು. ಈ ಸೋಮಾಪಿಯಾರಭ್ಯ ಅನುಕ್ರಮವಾಗಿ ಮುಂದೆ ರಾಜ್ಯಭಾರಮಾಡಿದ ರಾಜರೆಲ್ಲರ ಹೆಸರುಗಳು ಮತ್ತು ಈ ರಾಜರ ಪ್ರತ್ಯೇಕ ರಾಜ್ಯಭಾರಕಾಲಗಳನ್ನು ವಾಯು, ಮತ್ಸ್ಯ, ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ನಿರೂಪಿಸಲಾಗಿದೆಯಲ್ಲದೆ, ರಿಪುಂಜಯನೆಂಬ ರಾಜನ ಆಳ್ವಿಕೆಯೊಡನೆ ಅಂತ್ಯಗೊಂಡ ಈ ಬೃಹದ್ರಥರಾಜಸಂತತಿಯ ಒಟ್ಟು ರಾಜ್ಯಭಾರಕಾಲವು ಪೂರ್ಣವಾಗಿ ೧೦೦೦ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದೂ ನಿರ್ದೇಶಿಸಲಾಗಿದೆ.[2] [ವಾಯು-ಅಧ್ಯಾಯ ೩೭., ಮತ್ಸ್ಯಪುರಾಣ-ಅಧ್ಯಾಯ ೨೭೧ ಮತ್ತು ಬ್ರಹ್ಮಾಂಡ-ಅಧ್ಯಾಯ ೭೪] ಹೀಗೆ, ಸೋಮಾಪಿಯ ರಾಜ್ಯಭಾರಾರಂಭಸಮಯ ಹಾಗೂ ಪರಿಕ್ಷಿತ್ತನ ಜನ್ಮಸಮಯದಿಂದ ೧೦೦೦ ವರ್ಷಗಳ ಅಂತ್ಯಸಮಯದಲ್ಲಿ ಮಗಧರಾಜ್ಯದಲ್ಲಿ ಬೃಹದ್ರಥವಂಶೀತನದ ರಾಜ್ಯಭಾರವು ಕೊನೆಗೊಂಡಿದೆಯೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ ಪೂರ್ವೋಕ್ತವಾದ ವಿಷ್ಣುಪುರಾಣದ ಹೇಳಿಕೆಯಂತೆ ಪರಿಕ್ಷಿದ್ರಾಜನ ಜನನಸಮಯದಿಂದ ೧೦೫೦ ವರ್ಷಗಳ ತರುವಾಯದಲ್ಲಿ ನಂದರಾಜನು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನಾದ್ದರಿಂದ, ಇವನು ಬೃಹದ್ರಥರ ರಾಜ್ಯಭಾರಾಂತ್ಯಸಮಯದಿಂದ (೧೦೫೦ – ೧೦೦೦=)೫೦ ವರ್ಷಗಳ ತರುವಾಯದಲ್ಲಿ ರಾಜ್ಯಭಾರಾಧಿಷ್ಠಿತನಾಗಿರಬೇಕೆಂಬ ಗ್ರಹಿಕೆಗವಕಾಶವಾಗುವುದು. ಆದರೆ ನಂದರಾಜನ ಪೂರ್ವಕಾಲೀನರಾಗಿ ಬಿಂಬಿಸಾರ, ಅಜಾತಶತ್ರು ಮತ್ತು ಉದಾಯಿಭದ್ರರು ರಾಜ್ಯಭಾರಮಾಡಿರುವರೆಂಬ ನಿಶ್ಚಿತ ಐತಿಹ್ಯವಿರುವುದರಿಂದ ಮತ್ತು ಇವರೆಲ್ಲರ ಒಟ್ಟು ರಾಜ್ಯಭಾರಕಾಲವು ಕನಿಷ್ಠಮಿತಿಯಿಂದ (೩೮+೩೨+೧೬ = ೮೬ ವರ್ಷಗಳ ಅವಧಿಯುಳ್ಳದ್ದಾಗಿದೆಯಾದುದರಿಂದ ಬೃಹದ್ರಥರ ರಾಜ್ಯಭಾರಾಂತ್ಯಸಮಯ ಮತ್ತು ನಂದರಾಜನ ಅಭಿಷೇಕಸಮಯಗಳ ಮಧ್ಯೆ ವಿಷ್ಣುಪುರಾಣದ ಹೇಳಿಕೆಯಿಂದ ಸೂಚಿತವಾಗುವ, ೫೦ ವರ್ಷಗಳ ಅಂತರಕಾಲಕ್ಕಿಂತ ಹೆಚ್ಚಿನಕಾಲದ ಅಂತರವಿರಬೇಕೆಂದು ಫಲಿತವಾಗುವುದು. ಈ ಫಲಿತಾಂಶದ ಸಮರ್ಥಕವಾಗಿರುವಂತೆ ಭಾಗವತಪುರಾಣದಲ್ಲಿ ನಂದರಾಜನ ಅಭಿಷೇಕಸಮಯದ ವಿಷಯವಾಗಿ ಈ ಮುಂದಿನ ಹೇಳಿಕೆಯಿದೆ :

---

2. ಈ ೧೦೦೦ ವರ್ಷಗಳ ರಾಜ್ಯಭಾರಾವಧಿಯ ವಿಷಯವಾಗಿ ಮುಂದೆ ವಿಮರ್ಶೆಯನ್ನು ಮಂಡಿಸಲಾಗುವುದು.

ಆರಭ್ಯ ಭವತೋ ಜನ್ಮ ಯಾವನ್ನಂದಾಭಿಷೇಚನಂ ।
ಏತದ್ವರ್ಷಸಹಸ್ರಂ ತು ಶತಂಪಂಚದಶೋತ್ತರಂ ॥ ೨೬ ॥

[ನಿರ್ಣಯಸಾಗರ ಪ್ರೆಸ್-ಶ್ರೀಮದ್ಭಾಗವತ-ದ್ವಾದಶಸ್ಕಂಧ ಅಧ್ಯಾಯ ೨]

ಇದರಂತೆ ಬೃಹದ್ರಥರಾಜಮನೆತನದ ಆಳ್ವಿಕೆಯ ಅಂತ್ಯಸಮಯದಿಂದ (೧೧೧೫—೧೦೦೦=)೧೧೫ ವರ್ಷಗಳ ಸಮಯದಲ್ಲಿ ನಂದರಾಜನು ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರಬೇಕೆಂದು ಸ್ಫುಟವಾಗುವುದು.

ನಂದರಾಜನ ಅಭಿಷೇಕಸಮಯದ ವಿಷಯವಾಗಿ ಈ ಮೇಲೆ ಉಲ್ಲೇಖಿಸಲಾಗಿರುವ ಪುರಾಣೋಕ್ತಿಗಳು ಆಂಧ್ರಭೃತ್ಯರಾಜಸಂತತಿಯ ಇತಿವೃತ್ತನಿರೂಪಣಾನಂತರವರ್ತಿಯಾಗಿ ಉಕ್ತವಾಗಿವೆ. ನಂದಮನೆತನದ ರಾಜ್ಯಭಾರಾಂತ್ಯಸಮಯದಿಂದ ಸುಮಾರು ಮೂರು ಶತಮಾನಗಳ ಅನಂತರ ಕಾಲದಲ್ಲಿ ಆಂಧ್ರಭೃತ್ಯರಾಜಮನೆತನದ ಆಳ್ವಿಕೆಯು ಆರಂಭವಾಗಿದೆಯೆಂದು ಸೂಚನೆಗೊಡುವ ಆಧಾರಗಳಿವೆ. ಆದ್ದರಿಂದ ನಂದರಾಜನ ಅಭಿಷೇಕಸಮಯದ ಪೂರ್ವೋಲ್ಲಿಖಿತ ಐತಿಹ್ಯೋಕ್ತಿಗಳು ಆಂಧ್ರಭೃತ್ಯರಾಜಮನೆತನದ ರಾಜ್ಯಭಾರಾಂತ್ಯ ಸಮಯಾನಂತರದಲ್ಲಿ ರಚಿತವಾಗಿದ್ದ ಪುರಾಣಗಳಲ್ಲಿ ಸಂಯೋಜಿತವಾಗಿ ಉಳಿದು ಬಂದಿವೆಯೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ ಮೌರ್ಯಚಂದ್ರಗುಪ್ತನು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾದ ಸಮಯದ ಪೂರ್ವಭಾವಿಯಾಗಿ ನಂದಮನೆತನದ ರಾಜರು ರಾಜ್ಯಭಾರಮಾಡಿದ್ದಾರೆಂದು ಸಾಧಾರಣವಾಗಿ ಇತರ ಎಲ್ಲ ಐತಿಹ್ಯಾಧಾರಗಳಿಂದ ಪ್ರಮಾಣಿತವಾಗುವುದಾದರೂ, ಈ ಸಮಯದಲ್ಲಿ ರಾಜ್ಯಭಾರಮಾಡಿದ ಯಾವೊಬ್ಬರಾಜನನ್ನೂ ಪುರಾಣಗಳ ಇತಿವೃತ್ತದಲ್ಲಿ 'ನಂದ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿಲ್ಲ. ಇದರಿಂದ ಸಹಜವಾಗಿಯೇ ಈ 'ನಂದ' ಎಂಬ ಹೆಸರಿನ ರಾಜನು ಯಾರು ? ಎಂಬ ಪ್ರಶ್ನೆಯುದ್ಭವಿಸುವುದು. ಈ ಪ್ರಶ್ನೆಯನ್ನು ಪರಿಶೀಲಿಸಿದ ಚರಿತ್ರಕಾರರಲ್ಲಿ ಕೆಲವರು 'ನಂದ' ಎಂಬ ಈ ಹೆಸರು ಉದಾಯಿಭದ್ರನ ಅನಂತರವರ್ತಿಯಾಗಿ ಹೆಸರಿಸಲಾಗಿರುವ 'ನಂದಿವರ್ಧನ' ರಾಜನ ಸೂಚಕವಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ ಬೃಹದ್ರಥರ ಆಳ್ವಿಕೆಯ ಅಂತ್ಯ ಹಾಗೂ ಈ 'ನಂದಿವರ್ಧನ' ಎಂಬ ಹೆಸರಿನ ಮಧ್ಯವರ್ತಿಯಾಗಿ ಪುರಾಣಗಳಲ್ಲಿ ನಿರ್ದೇಶಿತವಾಗಿರುವ ರಾಜಸಂತತಿಯ ಇತಿವೃತ್ತವನ್ನು ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಉಕ್ತವಾಗಿರುವ ಕ್ರಮವನ್ನನುಸರಿಸಿ ಮುಂದಿನ ಚೌಬಂಧದಲ್ಲಿ ಸಂಕಲನಮಾಡಲಾಗಿದೆ. ಇಂತೆಯೇ ಈ ಸಮಯಕ್ಕೆ ಸಂಬಂಧಿಸಿದಂತೆ ದಾಕ್ಷಿಣಾತ್ಯ ಮತ್ತು ಔತ್ತರೇಯ ಬೌದ್ಧಮತಸಂಪ್ರದಾಯಗಳ ಇತಿವೃತ್ತಸಾಹಿತ್ಯ ಹಾಗೂ ಜೈನಸಂಪ್ರದಾಯದ ಕೃತಿಗಳಲ್ಲಿ ನಿರ್ದೇಶಿತವಾಗಿರುವ ರಾಜಸಂತತಿಯ ಇತಿವೃತ್ತವನ್ನು ಸಂಕಲನಮಾಡಿ ಮುಂದೆ ಚೌಬಂಧದಲ್ಲಿ ನಿರ್ದೇಶಿಸಲಾಗಿದೆ :

## ವಾಯುಪುರಾಣ

| ರಾಜರಹೆಸರು | ಆಳ್ವಿಕೆಯಕಾಲ |
|---|---|
| ೧) ಮುನಿಕ (ಸುತ ?) ಪ್ರದ್ಯೋತ | ೨೩ ವರ್ಷ |
| ೨) ಪಾಲಕ | ೨೪ " |
| ೩) ವಿಶಾಖಯೂಪ | ೫೦ " |
| ೪) ಅಜಕ | ೩೧ " |
| ೫) ವರ್ತಿವರ್ಧನ | ೨೦ " |
| ೬) ಶಿಶುನಾಕ | ೪೦ " |
| ೭) ಶಕವರ್ಣ | ೩೬ " |
| ೮) ಅಜಾತಶತ್ರು | ೨೫ " |
| ೯) ಕ್ಷತ್ರೌಜ | ೪೦ " |
| ೧೦) ವಿವಿಸಾರ | ೨೮ " |
| ೧೧) ದರ್ಶಕ | ೨೫ " |
| ೧೨) ಉದಾಯಿೀ | ೩೩ " |
| ೧೩) ನಂದಿವರ್ಧನ | ೪೨ " |
| ೧೪) ಮಹಾನಂದಿ | ೪೩ " |

## ಮತ್ಸ್ಯಪುರಾಣ

| ರಾಜರಹೆಸರು | ಆಳ್ವಿಕೆಯಕಾಲ |
|---|---|
| ೧) ಪುಲಕೋದ್ಭವ (ಪ್ರದ್ಯೋತ?) | ೨೩ ವರ್ಷ |
| ೨) ಪಾಲಕ | ೨೮ " |
| ೩) ವಿಶಾಖಯೂಪ | ೫೩ " |
| ೪) ಸೂರ್ಯಕ | ೨೧ " |
| ೫) ನಂದಿವರ್ಧನ [ಪ್ರ] | ೩೦ " |
| ೬) ಶಿಶುನಾಗ | ೪೦ " |
| ೭) ಕಾಕವರ್ಣ | ೨೬ " |
| ೮) ಕ್ಷೇಮಧರ್ಮ | ೩೬ " |
| ೯) ಕ್ಷೇಮಜಿತ್ | ೨೪ " |
| ೧೦) ವಿಂಧ್ಯಸೇನ | ೨೮ " |
| ೧೧) ಕಾನ್ವಾಯನ | ೯ " |

| | | |
|---|---|---|
| ೧೨) | ಭೂಮಿಮಿತ್ರ | ೧೪ ” |
| ೧೩) | ಅಜಾತಶತ್ರು | ೨೭ ” |
| ೧೪) | ವಂಶಕ | ೨೪ ” |
| ೧೫) | ಉದಾಸೀ | ೩೩ ” |
| ೧೬) | ನಂದಿವರ್ಧನ [ದ್ವಿ] | ೪೦ ” |
| ೧೭) | ಮಹಾನಂದಿ | ೪೩ ” |

## ಬ್ರಹ್ಮಾಂಡಪುರಾಣ

| | ರಾಜರಹೆಸರು | ಆಳ್ವಿಕೆಯಕಾಲ |
|---|---|---|
| ೧) | ಶುನಕ (ಸುತ?) ಪ್ರದ್ಯೋತಿ | ೨೩ ವರ್ಷ |
| ೨) | ಪಾಲಕ | ೨೪ ” |
| ೩) | ವಿಶಾಖಯೂಪ | ೫೦ ” |
| ೪) | ಅಜಕ | ೨೧ ” |
| ೫) | ನಂದಿವರ್ಧನ [ಪ್ರ] | ೨೦ ” |
| ೬) | ಶಿಶುನಾಗ | ೪೦ ” |
| ೭) | ಕಾಕವರ್ಣ | ೩೬ ” |
| ೮) | ಕ್ಷೇಮಧರ್ಮ | ೨೦ ” |
| ೯) | ಕ್ಷತ್ರೌಜ | ೪೦ ” |
| ೧೦) | ವಿಧಿಸಾರ | ೩೮ ” |
| ೧೧) | ಅಜಾತಶತ್ರು | ೩೩ ” |
| ೧೨) | ದರ್ಭಕ | ೩೫ ” |
| ೧೩) | ಉದಾಯಿ | ೩೩ ” |
| ೧೪) | ನಂದಿವರ್ಧನ [ದ್ವಿ] | ೪೦ ” |
| ೧೪) | ಮಹಾನಂದಿ | ೪೩ ” |

ವಿ. ಸೂ. : ಮೇಲ್ಕಂಡ ರಾಜಸಂತತಿಯ ನಾಮಾವಳಿಯಲ್ಲಿ 'ನಂದಿವರ್ಧನ' ಎಂಬ ಹೆಸರಿನ ಇಬ್ಬರು ರಾಜರಿದ್ದಾರೆ. ಇವರನ್ನು ಮುಂದೆ ಅನುಕ್ರಮವಾಗಿ 'ಪ್ರ' ಮತ್ತು 'ದ್ವಿ' ಎಂಬ ಸಂಜ್ಞೆಗಳ ಮೂಲಕ ಸೂಚಿಸಲಾಗುವುದು.

ಸಾಧಾರಣವಾಗಿ ಈ ಕೃತಿಯಲ್ಲಿ ನಿರ್ದೇಶಿಸಲಾಗಿರುವ ಎಲ್ಲ ವೈ. ಮ. ಸಂ. ಪುರಾಣೋಕ್ತಿಗಳಿಗೂ ಮೈಸೂರು ಅರಮನೆಯಿಂದ ಪ್ರಕಾಶಿತವಾಗಿರುವ ಪುರಾಣ ಗ್ರಂಥಗಳು ಆಧಾರವಾಗಿವೆ ಮತ್ತು ಮೇಲ್ಕಂಡ ರಾಜಸಂತತಿಯ ನಾಮಾವಲಿಯನ್ನು ಈ ಪುರಾಣಗ್ರಂಥಗಳಿಂದ ಸಂಕಲನಮಾಡಲಾಗಿದೆ.

## ದೀಪವಂಸೋ

| ರಾಜರ ಹೆಸರು | ಆಳ್ವಿಕೆಯಕಾಲ |
|---|---|
| ೧) ಬಿಂಬಿಸಾರ | ೫೨ ವರ್ಷ |
| ೨) ಅಜಾತಸತ್ತು | ೩೨ " |
| ೩) ಉದಯಭದ್ದ | ೧೬ " |
| ೪) ನಾಗದಾಸ | ೨೪ " |
| ೫) ಸುಸುನಾಗ | ೧೦ " |
| ೬) ಕಾಲಾಶೋಕ | ? |
| ೭) ಕಾಲಾಶೋಕನ ಹತ್ತು ಮಕ್ಕಳು | ೨೨ " |
| ೮) ಚಂದಗುತ್ತ | ೨೪ " |
| ೯) ಬಿಂದುಸಾರ | ? |
| ೧೦) ಅಶೋಕ | ೩೭ " |

## ಮಹಾವಂಸೋ

| | |
|---|---|
| ೧) ಬಿಂಬಿಸಾರ | ೫೨ " |
| ೨) ಅಜಾತಸತ್ತು | ೩೨ " |
| ೩) ಉದಯಭದ್ದ | ೧೬ " |
| ೪) ಅನುರುದ್ಧ ? } = | ೮ " |
| ೫) ಮುಂಡ ? } | |
| ೬) ನಾಗದಾಸಕ | ೨೪ " |
| ೭) ಸುಸುನಾಗ | ೧೮ " |
| ೮) ಕಾಲಾಶೋಕ | ೨೮ " |
| ೯) ಕಾಲಾಶೋಕನ ಹತ್ತು ಮಕ್ಕಳು | ೨೨ " |
| ೧೦) ಒಂಭತ್ತು ಜನ ನಂದರು | ೨೨ " |
| ೧೧) ಚಂದಗುತ್ತ | ೨೪ " |
| ೧೨) ಬಿಂದುಸಾರ | ೨೮ " |
| ೧೩) ಅಶೋಕ | ೩೭ " |

## ಬರ್ಮೀಇತಿವೃತ್ತ

| | |
|---|---|
| ೧) ಬಿಂಬಿಸಾರ | ? |
| ೨) ಅಜಾತಸತ್ತು | ೩೫ " |
| ೩) ಉದಯಭದ್ದ | ೧೫ " |

| | | | |
|---|---|---|---|
| ೪) | ಅನುರುದ್ಧ ? | } = ೯ | " |
| ೫) | ಮುಂಡ ? | | |
| ೬) | ನಾಗದಾಸಕ | ೪ | " |
| ೭) | ಸುಸುನಾಗ | ೩೨ | " |
| ೮) | ಕಾಲಾಶೋಕ | ೨೮ | " |
| ೯) | ಭದ್ದಸೇನ ಮತ್ತು ಎಂಟು ಜನ ಸಹೋದರರು | ೩೩ | " |
| ೧೦) | ಉಗ್ಗಸೇನನಂದ ಮತ್ತು ಎಂಟು ಜನ ಸಹೋದರರು | ೨೧ | " |
| ೧೧) | ಚಂದಗುತ್ತ | ೨೪ | " |
| ೧೨) | ಬಿಂದುಸಾರ | ೨೭ | " |
| ೧೩) | ಅಶೋಕ | ? | |

**ಅಶೋಕಾವದಾನ**

ಬಿಂಬಿಸಾರ
ಅಜಾತಶತ್ರು
ಉದಾಯಿನ್
ಮುಂಡ
ಕಾಕವರ್ಣಿನ್
ಸಹಾಲಿನ್
ತುಲಕುಚಿ
ಮಹಾಮಂಡಲ
ಪ್ರಸೇನಜಿ
ನಂದ
ಬಿಂದುಸಾರ
ಅಶೋಕ

**ಜೈನಸಂಪ್ರದಾಯ**

ಕುಣಿಕರಾಜ ಅಥವಾ ಚಿಲಾತಪುತ್ರ
(ಉತ್ತರಪುರಾಣ) [1]

ಶ್ರೇಣಿಕ
ಕೂಣಿಕ (ಕುಣಿಕ ಅಥವಾ ಕೊಣಕ)
ಉದಾಯಿಭದ್ರ
ನಂದ (9 ಜನರು)
ಚಂದ್ರಗುಪ್ತ
ಬಿಂದುಸಾರ
ಅಶೋಕ

1 ಶ್ರೀ ಜೈಜೆರ್‌ರವರು ಈ ಅಂಶವನ್ನು ಹೇಳಿಲ್ಲ.

ಈ ಕೋಷ್ಟಕದಲ್ಲಿರುವ ವಿಷಯವನ್ನು ಶ್ರೀ ಡಬ್ಲ್ಯು. ಜೈಜೆರ್‌ರವರ ಮಹಾವಂಸೋ (ಇಂಗ್ಲೀಷ್ ತುರ್ಜುಮೆ) ಯಿಂದ ಉದ್ಧರಿಸಲಾಗಿದೆ. ಈ ಕೃತಿಯ ಅ. ಟಿ. 1 ರನುಸಾರ ಟಿಬೆಟ್ಟಿನ ಸಂಪ್ರದಾಯವು ಸಿಲೋನಿನ ಸಂಪ್ರದಾಯದೊಡನೆ ಸಮಾನತೆ ಹೊಂದಿದೆ ಇದರಂತೆ ಅಜಾತಶತ್ರುವು 32 ವರ್ಷ ರಾಜ್ಯಭಾರವಮಾಡಿದನು. ಧರ್ಮಾಶೋಕನು 54 ವರ್ಷ ರಾಜ್ಯವಾಳಿದನು ; ಅಜಾತಶತ್ರುವಿನಿಂದ ಧರ್ಮಾಶೋಕನ ಪರ್ಯಂತ ಹತ್ತುತಲಾಂತರಗಳ ಗಣನೆಮಾಡಲಾಗಿದೆ.

ಪುರಾಣಗಳ ಇತಿವೃತ್ತಾನುಸಾರ ಹಿಂದಿನ ಚೌಬಂಧದಲ್ಲಿ ನಿರೂಪಿಸಲಾಗಿರುವ ರಾಜಸಂತತಿಯಲ್ಲಿ ಪ್ರದ್ಯೋತಾದಿಯಾಗಿ (ಪ್ರ.) ನಂದಿವರ್ಧನ ಅಥವಾ ವಾಯುಪುರಾದ ವರ್ತಿವರ್ಧನ ಪರ್ಯಂತದ ಹೆಸರುಗಳು ಅವಂತೀರಾಜಸಂತತಿಯ ಅರಸರ ಹೆಸರುಗಳಾಗಿವೆಯೆಂದು ಸಾಧಾರಣವಾಗಿ ಎಲ್ಲಾ ಚರಿತ್ರಕಾರರ ಅಭಿಪ್ರಾಯವಾಗಿದೆ.

(ಪ್ರ.) ನಂದಿವರ್ಧನ ಎಂಬ ಹೆಸರಿನ ಅನಂತರವರ್ತಿಯಾಗಿರುವ ಶಿಶುನಾಕ ಅಥವಾ ಶಿಶುನಾಗ ಎಂಬ ಹೆಸರಿನ ವ್ಯಕ್ತಿಯ ಐತಿಹ್ಯವಿಷಯವಾಗಿ ಚರಿತ್ರಕಾರರಲ್ಲಿ ಒಮ್ಮತವಿಲ್ಲವಾಗಿದ್ದು ಇಬ್ಬಗೆಯ ಅಭಿಪ್ರಾಯಗಳಿರುವುದು ಕಂಡುಬರುತ್ತದೆ. ಈ ವಿಷಯದಲ್ಲಿ ಮೊದಲನೆಯದಾಗಿ ಸನ್ಮಾನ್ಯ ಜಯಸ್ವಾಲ್‌ರವರ ಅಭಿಪ್ರಾಯವು ಸಂಗ್ರಹರೀತಿಯಿಂದ ಮುಂದಿನಂತಿದೆ: [ಜೆ. ಬಿ. ಒ. ಆರ್. ಯಸ್. ಗ್ರಂ. ಭಾಗ ೧–೧೯೧೫ ಪು. ಸಂ. ೬೭ ರಿಂದ ೧೧೬ ರ ವರೆವಿಗೆ]

"ಪುರಾಣಗಳಲ್ಲಿ ಹೇಳಿರುವಂತೆ ಮಹಾಭಾರತಯುದ್ಧಸಮಯಾನಂತರಕಾಲದ ಬೃಹದ್ರಥರಾಜಸಂತತಿಯ ಅರಸರ ಒಟ್ಟು ರಾಜ್ಯಭಾರಕಾಲವು ೧೦೦೦ ವರ್ಷಗಳ ಅವಧಿಯುಳ್ಳದ್ದಾಗಿರದೆ, ೬೯೭ ವರ್ಷಗಳ ಅವಧಿಯುಳ್ಳದ್ದಾಗಿದೆ. ಈ ಬೃಹದ್ರಥರಾಜಸಂತತಿಯಲ್ಲಿ ಅಂತಿಮರಾಜನಾದ ರಿಪುಂಜಯನ ತರುವಾಯ, ವಾರಣಾಸೀ ರಾಜಮನೆತನದ ಶಿಶುನಾಗನು ಮಗಧರಾಜ್ಯದಲ್ಲಿ ಅಧಿಷ್ಠಿತನಾಗಿದ್ದಾನೆ. ಮುಂದೆ ಇವನ ಸಂತತಿಯ ೧೨ (?) ಜನ ಅರಸರು ೩೬೩ ವರ್ಷಕಾಲ ರಾಜ್ಯಭಾರಮಾಡಿದ್ದಾರೆ." ಹೀಗೆ ಸನ್ಮಾನ್ಯ ಜಯಸ್ವಾಲರ ಅಭಿಪ್ರಾಯದಂತೆ, ಪುರಾಣಗಳಲ್ಲಿ ಬೃಹದ್ರಥರ ಒಟ್ಟು ರಾಜ್ಯಭಾರಕಾಲವೆಂದು ನಿರ್ದೇಶಿತವಾಗಿರುವ ೧೦೦೦ ವರ್ಷಗಳ ಅವಧಿಯಲ್ಲಿ ಶಿಶುನಾಗಸಂತತಿಯ ಒಟ್ಟು ರಾಜ್ಯಭಾರದ ೩೬೩ ವರ್ಷಕಾಲಪರಿಮಾಣದ ಭಾಗ ೩೦೩ ವರ್ಷಕಾಲಪರಿಮಾಣವು ಅಂತರ್ಗತವಾಗುವುದಲ್ಲದೆ ಇದೇ ಸಂತತಿಯ ಅರಸರು ಮುಂದೆ ೬೦ ವರ್ಷಕಾಲ ರಾಜ್ಯಭಾರಮಾಡಿದ್ದಾರೆ. ಇಷ್ಟಲ್ಲದೆ ಬಿಂಬಿಸಾರ, ಅಜಾತಶತ್ರು, ಉದಾಯಿಭದ್ರರೇ ಮೊದಲಾದ ರಾಜರೆಲ್ಲರೂ ಶಿಶುನಾಗಸಂತತಿಯ ಅರಸರೆನಿಸಿಕೊಂಡಿದ್ದಾರೆ.

ಸನ್ಮಾನ್ಯ ಜಯಸ್ವಾಲರ ಈ ಮೇಲ್ಕಂಡ ಅಭಿಪ್ರಾಯದಲ್ಲಿ ಪುರಾಣೋಕ್ತ ಐತಿಹ್ಯದೊಡನೆ ಸಂಗತವಾಗದಿರುವ ಎರಡು ಮುಖ್ಯಅಂಶಗಳಿವೆ: ಒಂದನೆಯದಾಗಿ ಸರ್ವಸಾಧಾರಣವಾಗಿ ಎಲ್ಲ ಪುರಾಣಗಳಲ್ಲಿಯೂ ಒಮ್ಮತದಿಂದ ಹೇಳಲಾಗಿರುವ ಬೃಹದ್ರಥರ ಒಟ್ಟು ರಾಜ್ಯಭಾರದ ೧೦೦೦ ವರ್ಷಕಾಲಪರಿಮಾಣವನ್ನು, ಯುಕ್ತ ಆಧಾರವಿಲ್ಲದೆ, ೬೯೭ ವರ್ಷಗಳ ಕಾಲಪರಿಮಾಣವಾಗಿ ಕುಗ್ಗಿಸಲಾಗಿರುವುದು ಸುಸಂಗತವೆನಿಸುವುದಿಲ್ಲ. ಎರಡನೆಯದಾಗಿ ಪುರಾಣೋಕ್ತವಾಗಿರುವ ಇತಿವೃತ್ತದ ಆಧಾರಾನುಸಾರ ಹಿಂದೆ ವಿವರಿಸಲಾಗಿರುವಂತೆ, ರಿಪುಂಜಯನ ಆಳ್ವಿಕೆಯೊಡನೆ ಬೃಹದ್ರಥ

ಮನೆತನದ ಆಳ್ವಿಕೆಯು ಅಂತ್ಯಗೊಂಡು ಮತ್ತೊಂದು ರಾಜಮನೆತನದ ರಾಜ್ಯಭಾರವು ಆರಂಭವಾಗಿದ್ದು ಈ ಸಮಯದಿಂದ ೫೦ ಅಥವಾ ೧೧೫ ವರ್ಷಗಳ ತರುವಾಯದಲ್ಲಿ ನಂದಮನೆತನದ ರಾಜ್ಯಭಾರವು ಆರಂಭವಾಗಿದೆಯೆಂದು ವ್ಯಕ್ತಪಡುವುದು. ಆದರೆ ಸನ್ಮಾನ್ಯ ಜಯಸ್ವಾಲರು, ಬೃಹದ್ರಥಮನೆತನದ ೬೯೭ ವರ್ಷಗಳ ರಾಜ್ಯಭಾರಾನಂತರ ಅವಿಚ್ಛಿನ್ನವಾಗಿ ३೬३ ವರ್ಷಗಳಕಾಲ ಶಿಶುನಾಗಮನೆತನದ ರಾಜ್ಯಭಾರನಡೆಯಿ ತೆಂದು ಪ್ರರೂಪಿಸಿ, ನಂದ (= ಮಹಾನಂದಿ) ಮತ್ತು ಮಹಾಪದ್ಮರು ಪರಿಕ್ಷಿತ್ತನ ಜನ್ಮಸಮಯದಿಂದ ಅನುಕ್ರಮವಾಗಿ ೧೦೧೫ ಮತ್ತು ೧೦೫೦ ವರ್ಷಗಳ ಸಮಯ ದಲ್ಲಿ ಅಭಿಷಿಕ್ತರಾಗಿರುವರೆಂದು ಅಭಿಪ್ರಾಯಪಟ್ಟಿರುವುದು ಸುಸಂಗತವೆನಿಸುವುದಿಲ್ಲ.

ಶಿಶುನಾಗಸಂತತಿಯ ಐತಿಹ್ಯವಿಷಯವಾಗಿ ಕಂಡುಬರುವ ಎರಡನೆಯ ಅಭಿ ಪ್ರಾಯ: ಸನ್ಮಾನ್ಯ ಜೈಜರ್‌ರವರು ಸಿಲೋನಿನ ಇತಿವೃತ್ತಗಳಾದ ದೀಪವಂಸೋ ಮತ್ತು ಮಹಾವಂಸೋ ಕೃತಿಗಳ ಹೇಳಿಕೆಯನ್ನಾಧರಿಸಿ ಬಿಂಬಿಸಾರ, ಅಜಾತಶತ್ರು, ಉದಾಯಿ, ಅನುರುದ್ಧ, ಮುಂಡ ಮತ್ತು ನಾಗದಾಸಕರು ಶಿಶುನಾಗನಿಂದ ಪೂರ್ವ ಕಾಲೀನ ರಾಜರಾಗಿರುವರೆಂದು ಅಭಿಪ್ರಾಯಪಟ್ಟಿರುವಲ್ಲದೆ, ಈ ಶಿಶುನಾಗ ಮತ್ತು ಇವನ ಸಂತತಿಯ ಅರಸರ ಇತಿವೃತ್ತವನ್ನು ಸ್ಥಾನಪಲ್ಲಟಗೊಳಿಸುವುದರ ಮೂಲಕ ಪುರಾಣಗಳಲ್ಲಿ ಈ ರಾಜಸಂತತಿಯ ಅರಸರನ್ನು ಬಿಂಬಿಸಾರನಿಂದ ಪೂರ್ವಕಾಲೀನ ರನ್ನಾಗಿಸಿ ನಿರ್ದೇಶಿಸಲಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. [ಮಹಾವಂಸೋ-ಆಂಗ್ಲಾನುವಾದ-ಮುನ್ನುಡಿ] ಸನ್ಮಾನ್ಯ ಜೈಜರ್‌ರವರ ಈ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ, ಸನ್ಮಾನ್ಯ ಸೀತಾನಾಥ್‌ಪ್ರಧಾನರವರು, ಪುರಾಣಗಳಲ್ಲಿ ಉದಾ ಯಿಭದ್ರನ ಅನಂತರವರ್ತಿಯಾಗಿರುವ ನಂದಿವರ್ಧನ ಎಂಬ ಹೆಸರು ನಂದವರ್ಧನನ ನಿರ್ದೇಶಕವಾಗಿರುವುದೆಂದು ಮತ್ತು ಇವನಿಗೇ 'ಶಿಶುನಾಗ' ಎಂಬ ಖ್ಯಾತಿನಾಮವಿದ್ದಿ ತೆಂದು ಅಭಿಪ್ರಾಯಪಟ್ಟಿದ್ದಾರಲ್ಲದೆ ಪುರಾಣೋಕ್ತವಾದ ಶಿಶುನಾಗನ ಐತಿಹ್ಯವು ಅಸಂ ಗತವಾಗಿದೆಯೆಂದೂ ಅಭಿಪ್ರಾಯಪಟ್ಟಿದ್ದಾರೆ. [ಕ್ರಾನಾಲಜಿ ಆಫ್ ಏನ್ಸಿಯೆಂಟ್ ಇಂಡಿಯಾ-ಚ್ಯಾಪ್ಟರ್ XX-ಪು. ಸಂ. ೨೧೧ ರಿಂದ ೨೪೭ ರವರೆವಿಗೆ] ಸನ್ಮಾನ್ಯ ರಾದ ಜೈಜರ್ ಮತ್ತು ಸೀತಾನಾಥ್‌ಪ್ರಧಾನರವರ ಈ ಅಭಿಪ್ರಾಯಗಳು ಅಸಂಗತ ವೆನಿಸುವುದಿಲ್ಲವೆಂದಾದಲ್ಲಿ ಪುರಾಣೋಕ್ತಿಯನುಸಾರ ಹಿಂದೆ ಹೇಳಿರುವಂತೆ ಬೃಹದ್ರಥ ಮನೆತನದ ರಾಜ್ಯಭಾರಾಂತ್ಯಸಮಯದಿಂದ ೧೧೫ ವರ್ಷಗಳ ತರುವಾಯದಲ್ಲಿ ನಂದ ಮನೆತನದ ರಾಜ್ಯಭಾರವು ಆರಂಭವಾಗಿದೆಯೆಂಬ ಐತಿಹ್ಯವನ್ನು ಸ್ಥಿರೀಕರಿಸಲವ ಕಾಶವಿದೆ.

ಕೌಶಾಂಬೀಶನಾದ ಉದಯನನು ಶ್ರೇಣಿಕ-ಬಿಂಬಿಸಾರನ ಕಿರಿಯಸಮಕಾಲೀನ ನಾಗಿದ್ದನೆಂದು ಮತ್ತು ಈ ಉದಯನನ ತಂದೆಯಾದ ಶತಾನೀಕನು ಶ್ರೇಣಿಕ-ಬಿಂಬಿ ಸಾರನ ಸಮವಯಸ್ಕನೂ ಸಂಬಂಧಿಯೂ ಆಗಿದ್ದನೆಂದು ಭಾಸಕವಿಯ ನಾಟಕಗಳ

ಕಥಾಯತ್ತ ಐತಿಹ್ಯ ಹಾಗೂ ಬೌದ್ಧ ಮತ್ತು ಜೈನಆಮ್ನಾಯಗಳ ಐತಿಹ್ಯಗಳಾಧಾರ ದಿಂದ ವ್ಯಕ್ತಪಡುವುದೆಂದು ಹಿಂದೆ ವಿವರಿಸಲಾಗಿದೆ. ಶತಾನೀಕನು ಪರಿಕ್ಷಿದ್ರಾಜನ ಅನುಕ್ರಮದಲ್ಲಿ ೨೨ ನೇ ರಾಜನಾಗಿದ್ದನೆಂದು ಮತ್ಸ್ಯಪುರಾಣದ ಪೌರವರಾಜಸಂತ ತಿಯ ಇತಿವೃತ್ತಾನುಸಾರ ನಿರ್ದೇಶಿತನಾಗಿದ್ದಾನೆಯಲ್ಲದೆ ಇವನ ತಂದೆಯಾದ ವಸು ದಾಮನು (=ಸಹಸ್ರಾನೀಕನು) ೨೧ ನೇ ಅರಸನಾಗಿ ನಿರ್ದೇಶಿತನಾಗಿದ್ದಾನೆ. ಇಂತೆಯೇ ಪರಿಕ್ಷಿದ್ರಾಜನ ಜನ್ಮಸಮಯದಲ್ಲಿ ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾದ ಬೃಹದ್ರಥಮನೆತನದ ಸೋಮಾಪಿಯ ಅನುಕ್ರಮದಲ್ಲಿ ಈ ಮನೆತನದ ಅಂತಿಮ ರಾಜನಾದ ರಿಪುಂಜಯನು ೨೧ ನೇ ರಾಜನಾಗಿದ್ದಂತೆ ನಿರ್ದೇಶಿತನಾಗಿದ್ದಾನೆ.[1] ಇದರಿಂದ ವಸುದಾಮ-ಸಹಸ್ರಾನೀಕ ಮತ್ತು ರಿಪುಂಜಯರು ಸಮಕಾಲೀನ ರಾಜರಾಗಿ ದ್ದಿರಬೇಕೆಂದು ವ್ಯಕ್ತವಾಗುವುದಲ್ಲಡೆ, ರಿಪುಂಜಯ ಮತ್ತು ಶ್ರೇಣಿಕ-ಬಿಂಬಿಸಾರರ ಮಧ್ಯೆ ಅತ್ಯಧಿಕವೆಂದರೆ ಒಂದು ತಲೆಮಾರಿನ ರಾಜ್ಯಭಾರಾವಧಿಯ ಅಂತರವಿರ ಬೇಕೆಂದು ಗ್ರಹಿಸಲವಕಾಶವಾಗುವುದು. ಮಗಧರಾಜ್ಯದಲ್ಲಿ ರಿಪುಂಜಯನ ಆಳ್ವಿಕೆ ಯೊಡನೆ ಬೃಹದ್ರಥಮನೆತನದ ರಾಜ್ಯಭಾರವು ಅಂತ್ಯಗೊಂಡಿತೆಂದು ಪುರಾಣಗಳ ಸುನಿಶ್ಚಿತ ಐತಿಹ್ಯವಿದೆ. ಇದರಿಂದ ರಿಪುಂಜಯನ ತರುವಾಯ ಮಗಧರಾಜ್ಯದಲ್ಲಿ ನೂತನವಾಗಿ ಬೇರೊಂದು ರಾಜಮನೆತನದ ರಾಜ್ಯಭಾರವು ಆರಂಭವಾಗಿದೆಯೆಂದು ವ್ಯಕ್ತವಾಗುವುವಲ್ಲದೆ, ಶ್ರೇಣಿಕ-ಬಿಂಬಿಸಾರನು ಈ ನೂತನ ರಾಜಮನೆತನದ ಅರಸ ನಾಗಿರಬೇಕೆಂದು ಫಲಿತವಾಗುವುದು. ಬೃ. ಕ. ಕೋಶದ ಶ್ರೇಣಿಕ ಕಥಾನಕದಲ್ಲಿ ಅಜಾತಶತ್ರುವನ್ನು 'ಕೋಣಿಕ' ಎಂದು ಹೆಸರಿಸಲಾಗಿರುವುದರಿಂದ ಮತ್ತು ಪೂರ್ವೋ ಲ್ಲಿಖಿತವಾದ ಪಟ್ಟಾವಲೀ ಸಮುಚ್ಚಯದ '................ ಕೋಣಿಕರಜ್ಜಂ ಪಾಟಲಿ ಪುರಂಪಿ................' ಎಂಬ ಉಕ್ತಿಯಾಧಾರದಿಂದ 'ಕೋಣಿಕ' ಎಂಬ ಪದವು ವಂಶಸೂಚಕವಾದ ಅಭಿಧಾನವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಇದರಿಂದ ಶ್ರೇಣಿಕ,ಬಿಂಬಿಸಾರನು 'ಕೋಣಿಕ' ವಂಶದ ಅರಸನಾಗಿರುವನೆಂದು ವ್ಯಕ್ತವಾಗು ವುದು. ಹಿಂದೆ ಉಲ್ಲೇಖಿಸಲಾಗಿರುವ ಚಿಲಾತಪುತ್ರಕಥೆ ಮತ್ತು ಶ್ರೇಣಿಕಕಥಾನಕ ಗಳಿಂದ, ಶ್ರೇಣಿಕ-ಬಿಂಬಿಸಾರನಿಂದ ಪೂರ್ವವರ್ತಿಯಾಗಿ ೧೨ ವರ್ಷಕಾಲ ಇವನ ತಂದೆಯಾದ ಉಪಶ್ರೇಣಿಕನಾಗಲೀ ಅಥವಾ ದಾಯಾದ್ಯಭ್ರಾತೃವಾದ ಚಿಲಾತಪುತ್ರ ನಾಗಲೀ ರಾಜ್ಯಭಾರಮಾಡಿರಬೇಕೆಂದು ಸೂಚಿತವಾಗುವುದು. ಹೀಗೆ ಸೂಚಿತ ವಾಗುವ ಈ ಐತಿಹ್ಯಾಂಶದ ತಥ್ಯಾತಥ್ಯದ ಪರಿಷ್ಕರಣಕ್ಕಾಗಿ ಈಗ ಚಿಲಾತಪುತ್ರ ಕಥಾ ನಕ ಮತ್ತು ಶ್ರೇಣಿಕ ಕಥಾನಕಗಳನ್ನು ಸೂಕ್ಷ್ಮರೀತಿಯಿಂದ ಪರಿಶೀಲಿಸಬೇಕಾಗಿದೆ.

---

1. ಈ 'ರಿಪುಂಜಯ' ಎಂಬ ಹೆಸರಿನ ಬದಲಾಗಿ ವಾಯು ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ 'ಅರಿಂಜಯ' ಎಂಬ ಹೆಸರಿದೆ. ಈ ಪುರಾಣಗಳಲ್ಲಿ ನಿರೂಪಿತವಾಗಿರುವ ಬೃಹದ್ರಥ, ಪೌರವ ಮತ್ತು ಇಕ್ಷ್ವಾಕುವಂಶಗಳ ರಾಜಸಂತತಿಯ ಇತಿವೃತ್ತದ ವಿಷಯ ವಾಗಿ ಮುಂದೆ ವಿಶೇಷ ವಿಮರ್ಶೆಯನ್ನು ಮಂಡಿಸಲಾಗುವುದು.

ಚಿಲಾತಪುತ್ರಕಥೆಯನ್ನು ಹೇಳುವಲ್ಲಿ ವಡ್ಡಾರಾಧನೆ ಮತ್ತು ಬೃ. ಕ. ಕೋಶಗಳ ಮಧ್ಯೆ ಅನೇಕ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಈ ವ್ಯತ್ಯಾಸಗಳೇನೆಂಬುದನ್ನು ಇಲ್ಲಿ ಆವಶ್ಯವಾಗಿ ಗಮನಿಸಬೇಕಾಗಿದೆ: [ಬೃ. ಕ. ಕೋಶದಲ್ಲಿ ಚಿಲಾತಪುತ್ರನಿಗೆ ಸಂಬಂಧಿಸಿದ ಕಥೆಯು ಶ್ರೇಣಿಕ ಕಥಾನಕ (ಸಂ. ೫೫) ಮತ್ತು 'ಚಿಲಾತಮಿತ್ರ' ಕಥಾನಕ (ಸಂ. ೧೪೦) ಗಳೆರಡರಲ್ಲಿಯೂ ವಿಭಕ್ತವಾಗಿದೆ.]

| ವಡ್ಡಾರಾಧನೆಯ ಕಥನ ಕ್ರಮ—<br>[ಸನ್ಮಾನ್ಯ ಡಿ. ಎಲ್. ನರಸಿಂಹಾಚಾರ್‌ರವರಿಂದ ಸಂಪಾದಿತವಾಗಿರುವ ಗ್ರಂಥ-ಕಥಾ ಸಂ. ೧೫-ಪು. ಸಂ. ೧೬೨] | ಬೃಹತ್ಕಥಾಕೋಶದ ಕಥನ ಕ್ರಮ—<br>[ಸನ್ಮಾನ್ಯ ಎ. ಎನ್. ಉಪಾಧ್ಯೆಯವರಿಂದ ಸಂಪಾದಿತವಾಗಿರುವ ಗ್ರಂಥ- ಕಥಾ ಸಂ. ೧೪೦-ಪು. ಸಂ. ೩೩೩] |
| --- | --- |
| ೧) ಕಥೆಯ ಹೆಸರು–'ಚಿಲಾತಪುತ್ರನ ಕಥೆ' | ೧) 'ಚಿಲಾತ ಮಿತ್ರ ಕಥಾನಕಂ' |
| ೨) ಶ್ರೇಣಿಕರಾಜನ ತಂದೆಯನ್ನು 'ಉಪಶ್ರೇಣಿಕ' ಎಂದು ಹೆಸರಿಸಿದ್ದರೂ 'ಉಪ' ಪದದ ಲೋಪವುಳ್ಳ ಪಾಠಾಂತರವಿದೆ | ೨) ಶ್ರೇಣಿಕರಾಜನ ತಂದೆಯನ್ನು 'ಪ್ರಶ್ರೇಣಿಕ' ಮತ್ತು 'ಉಪಶ್ರೇಣಿಕ' ಎಂದು ಎರಡು ರೀತಿಯಿಂದ ಹೆಸರಿಸಲಾಗಿದೆ. |
| ೩) ಉಪಶ್ರೇಣಿಕನು ದುಷ್ಟಾಶ್ವವಶನಾಗಿ ವಿಂಧ್ಯಾಟವಿಯನ್ನು ಸೇರಿದನು. | ೩) (ಶ್ರೇಣಿಕ ಕಥಾನಕ) ಶ್ರೇಣಿಕನು ದುಷ್ಟಾಶ್ವವಶನಾಗಿ ಮಹಾಟವಿಯನ್ನು ಸೇರಿದನು. |

೪) ಉಪಶ್ರೇಣಿಕನು ಆ ವಿಂಧ್ಯಾಟವಿಯಲ್ಲಿ, **ಕಾಳ** ಮತ್ತು **ಸೌಂದರಿ**ಯೆಂಬುವರ ಸುತೆಯಾದ **ಗುಣಸೌಂದರಿ**ಯೆಂಬ ಕನ್ಯೆಯನ್ನು ವಿವಾಹವಾಗಿ ನಗರಕ್ಕೆ ಕರೆತಂದು, ಈಕೆಗೆ **'ಚಿಲಾತಮಹಾದೇವಿ'** ಎಂಬ ಹೆಸರಿಟ್ಟನು. ಇವಳಲ್ಲಿ **'ಚಿಲಾತಪುತ್ರ'** ಎಂಬ ಹಿರಿಯ ಮಗನಾದನು.

೫) ಉಪಶ್ರೇಣಿಕನು ಉಜ್ಜಯಿನಿಯ ಪ್ರದ್ಯೋತನನ್ನು ತನ್ನ ವಶವರ್ತಿಮಾಡಿಕೊಳ್ಳಲಿಚ್ಛಿಸಿ ಮಾರುಗಪುರದ [ಪಠಾಂತರ-ರೋರುಗಪುರದ] ಮಹಾಸಾಮಂತನಾದ **ಉದ್ದಾಯನ**ನನ್ನು ಸೈನ್ಯಸಮೇತ ಕಳುಹಿದನು. ಪ್ರದ್ಯೋತನು ಉದ್ದಾಯನನನ್ನು ಸೆರೆಹಿಡಿಸಲಾಗಿ, ಉಪಶ್ರೇಣಿಕನು **ವಿಜಯ**ನೆಂಬುವನನ್ನು ಕಳುಹಿ ಉಪಾಯಪೂರ್ವಕ ಸೆರೆಬಿಡಿಸಿದನು.

೬) ಪ್ರದ್ಯೋತನು ಕೋಪಗೊಂಡು ಉಪಶ್ರೇಣಿಕನ ನಾಡನ್ನು ಸೂರೆಗೊಳ್ಳುತ್ತಾ ಯುದ್ಧಕ್ಕಾಗಿ ಬರುತ್ತಿದ್ದನು. ಚಿಲಾತಪುತ್ರನು ಉಪಾಯಪೂರ್ವಕ ಪ್ರದ್ಯೋತನನ್ನು ಸೆರೆಹಿಡಿದು ತಂದು ತಂದೆಗೊಪ್ಪಿಸಿ

೪) ಪ್ರಶ್ರೇಣಿಕನು ಆ ಮಹಾಟವಿಯಲ್ಲಿ **ಯಮದಂಡ** ಮತ್ತು ವಿದ್ಯುನ್ಮತಿಯೆಂಬ ದಂಪತಿಗಳ ಪುತ್ರಿ **ತಿಲಕವತಿ**ಯನ್ನು ವಿವಾಹವಾಗಿ ಸ್ವನಗರಕ್ಕೆ ಕರೆತಂದನು. ಇವಳಲ್ಲಿ 'ಚಿಲಾತ' ನೆಂಬ ಸುತನಾದನು.

೫) ಪ್ರಶ್ರೇಣಿಕರಾಜನು **ಮುದ್ರಾಯಣಕುಮಾರ**ನೆಂಬ ದೂತನನ್ನು ಉಜ್ಜಯಿನಿಗೆ ಕಳುಹಿದನು. ಪ್ರದೋತನು ಯುದ್ಧದಲ್ಲಿ ಮುದ್ರಾಯಣನನ್ನು ಬಂಧಿಸಿದನು. ಕುಂಡ ಎಂಬ ಹೆಸರಿನ ಕುಮಾರನು ದೊಡ್ಡಸೈನ್ಯಸಮೇತನಾಗಿ ಬಂದು ಮುದ್ರಾಯಣನನ್ನು ಸೆರೆಬಿಡಿಸಿ ಕರೆದೊಯ್ದನು.

೬) ಪ್ರದೋತನನ್ನು ಸೆರೆಹಿಡಿದು ತಂದೊಪ್ಪಿಸಿದ ಚಿಲಾತನಿಗೆ ಪ್ರಶ್ರೇಣಿಕನು 'ಎಲೈ ಮಗನೆ! ಈ ರಾಜಗೃಹನಗರದಲ್ಲಿ ೧೨ ವರ್ಷಕಾಲ ಸ್ವೇಚ್ಛಾನುಸಾರ ಭೋಗಸಂಸಕ್ತನಾಗಿರು' ಎಂಬ ವರವಿತ್ತು

ರಾಜಗೃಹನಗರದಲ್ಲಿ, ನಿಮ್ಮ ಅಂತಃಪುರವನ್ನೊಂದುಳಿದು ಮಿಕ್ಕೆಲ್ಲೆಡೆಯಲ್ಲಿಯೂ ನನ್ನ ಇಚ್ಛಾನುಸಾರ ೧೨ ವರ್ಷಕಾಲ ಕಾಮೋಪಭೋಗ ಸುಖಪಡೆಯಲು ತಮ್ಮ ಅನುಮತಿಯಾಗಬೇಕು' ಎಂದು ಬೇಡಿದನು. ಉಪಶ್ರೇಣಿಕನು ಅಂತೆಯೇ ಆಗಲೆಂದು ಅನುಮತಿಯಿತ್ತನು. ಆದರೆ ೧೨ ವರ್ಷಗಳ ಅನಂತರವೂ ಚಿಲಾತಪುತ್ರನ ದುರ್ನಡತೆಯು ಮುಂದುವರಿಯಲು, ಉಪಶ್ರೇಣಿಕನು ಅವನನ್ನು ನಗರದಿಂದೋಡಿಸಿ ಶ್ರೇಣಿಕನನ್ನು ಕರೆಯಿಸಿ ರಾಜಪಟ್ಟಕಟ್ಟಿ ಮುನಿದೀಕ್ಷೆಪಡೆದನು. ಚಿಲಾತಪುತ್ರನು ತನ್ನ ಮಾತಾಮಹನಾದ ಮಹಾಕಾಳನ ಬಳಿ ಹೋಗಿ ತನ್ನದೇ ಆದ ರಾಜ್ಯವನ್ನು ಕಟ್ಟಿಕೊಂಡನು. ಅಂತಿಮವಾಗಿ ಚಿಲಾತಪುತ್ರನು ಮುನಿದೀಕ್ಷೆಪಡೆದು ವ್ಯಂತರೀಕೃತವಾದ ಉಪಸರ್ಗವನ್ನು ಜಯಿಸಿ ಸ್ವರ್ಗಭಾಜಲ್ಲನಾದನು.

ಅವನಿಗೆ ತನ್ನ ಸಂಪತ್ತೆಲ್ಲವನ್ನೂ ಕೊಟ್ಟು ಮುನಿದೀಕ್ಷೆಯನ್ನು ಪಡೆದನು. (ರಾಜಗೃಹನಗರದ ಪ್ರಜೆಗಳ ಕೋರಿಕೆಯಂತೆ) ಶ್ರೇಣಿಕನು ರಾಜಗೃಹನಗರದಿಂದ ಚಿಲಾತನನ್ನೋಡಿಸಿ ರಾಜ್ಯಭಾರದಲ್ಲಿ ಅಭಿಷಿಕ್ತನಾದನು. ಚಿಲಾತನು ಮಾತಾಮಹನ ಬಳಿ ಹೋಗಿ ತನ್ನದಾದ ರಾಜ್ಯವೊಂದನ್ನು ಕಟ್ಟಿಕೊಂಡನು. ಚಿಲಾತನಿಗೆ ಭರ್ತೃಮಿತ್ರನೆಂಬ ಗೆಳೆಯನಿದ್ದನು. ಇವನು ರಾಜಗೃಹದಲ್ಲಿದ್ದ ತನ್ನ(ಸೋದರ)ಮಾವನ ಮಗಳಾದ ಸುಭದ್ರೆಯನ್ನು ವಿವಾಹವಾಗಲಿಚ್ಛಿಸಿ ೫೦೦ ಭಟರೊಡಗೂಡಿ ರಾಜಗೃಹನಗರಕ್ಕೆ ಹೋದನು. ಆದರೆ ಅಲ್ಲಿ ಇವನಿಗೆ ಕನ್ಯೆಯನ್ನು ಕೊಡಲು ನಿರಾಕರಿಸಲು, ಇವನು ಅವಳನ್ನು ಬಲಾತ್ಕಾರದಿಂದ ಅಪಹರಿಸಲು ಯತ್ನಿಸಿದನಾಗಿ ಕೋಲಾಹಲವಾಯಿತು. ಈಗ ಶಿಕ್ಷಿಸಲೋಸುಗ ಬೆನ್ನಟ್ಟಿ ಬಂದ ಶ್ರೇಣಿಕನಿಂದ ತಪ್ಪಿಸಿಕೊಳ್ಳಲೋಸುಗ ವೈಭಾರ ಪರ್ವತವನ್ನೇರಿಹೋಗಿ ಅಲ್ಲಿ ಮುನಿದೀಕ್ಷೆಪಡೆದನು. ಹೀಗೆ ಮುನಿದೀಕ್ಷೆ ಪಡೆದ **ಚಿಲಾತಪುತ್ರನು** ಧ್ಯಾನಾಸಕ್ತನಾದನು. ಇದನ್ನು ತಿಳಿದ ಶ್ರೇಣಿಕನು ಕಾಯೋತ್ಸರ್ಗದಲ್ಲಿದ್ದ **ಚಿಲಾತಮಿತ್ರನ** ಬಳಿಬಂದು ವಂದನೆ ಮಾಡಿ ಹಿಂದಿರುಗಿದನು. ಅಂತಿಮವಾಗಿ **ಚಿಲಾತಮಿತ್ರನು** ವ್ಯಂತರೀಕೃತವಾದ ಉಪಸರ್ಗವನ್ನು ಜಯಿಸಿ ಸ್ವರ್ಗಭಾಜನನಾದನು.

ಶ್ರೇಣಿಕ-ಬಿಂಬಿಸಾರನ ತಂದೆಯ ವಿಷಯವಾಗಿ ಉತ್ತರಪುರಾಣರಚನಕಾರ ರಾದ ಗುಣಭದ್ರಾಚಾರ್ಯರು ಹೇಳಿರುವ ಐತಿಹ್ಯವು ಅತ್ಯಲ್ಪವಾದರೂ, ಅದು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ. ಶ್ರೇಣಿಕನಿಗೆ ಅವನ ತಂದೆಯು ರಾಜ್ಯಭಾರ ವನ್ನು ಒಪ್ಪಿಸಿದ ಪ್ರಸಂಗವನ್ನು ನಿರೂಪಿಸುವಲ್ಲಿ ಗುಣಭದ್ರಾಚಾರ್ಯರು ಈ ಮುಂದಿ ನಂತೆ ಹೇಳಿದ್ದಾರೆ:

ಕದಾಚಿತ್ಕೇನಚಿದ್ಧೇತುನಾಯಂ ರಾಜ್ಯಂ ಪರಿತ್ಯಜನ್ |
ಭವಂತಂ ಬ್ರಾಹ್ಮಣಗ್ರಾಮಮಾದಾನೀಯ ಕುಣಿಕಕ್ಷಿತೀಟ್ ॥ ೪೨೬ ॥

ಸ್ವಂ ರಾಜ್ಯಂ ದತ್ತವಾಂಸ್ತುಭ್ಯಂ............................ |
............................................................... ॥ ೪೨೭ ॥

[ಉತ್ತರ ಪುರಾಣ–ವರ್ಧಮಾನತೀರ್ಥಂಕರ ಪುರಾಣ]

ಬೃಹತ್ಕಥಾಕೋಶ ಮತ್ತು ವಡ್ಡಾರಾಧನೆಗಳು ಏಕಮಾತ್ರ ಜೈನ ಸಂಪ್ರದಾ ಯದ ಕೃತಿಗಳಾಗಿದ್ದರೂ, ಇವುಗಳಲ್ಲಿ ಉಕ್ತವಾಗಿರುವ 'ಚಿಲಾತಪುತ್ರ' ಕಥೆಗಳ ಮಧ್ಯೆ ಅನೇಕ ವ್ಯತ್ಯಾಸಗಳು ಕಂಡುಬರುವುವಾದ್ದರಿಂದ, ಈ ಕೃತಿಗಳು ರಚಿತವಾಗುವ ಕಾಲಕ್ಕಾಗಲೇ ಪರಂಪರಾಗತವಾದ ಈ ಕಥೆಯ ಮೂಲವಸ್ತುವು ಸಂದಿಗ್ಧತಾವಶ ವಾಗಿದ್ದಿತೆಂದು ವ್ಯಕ್ತವಾಗುವುದು. ಶ್ರೇಣಿಕ-ಬಿಂಬಿಸಾರನ ತಂದೆಯನ್ನು ಬೃ. ಕ. ಕೋಶ ಮತ್ತು ವಡ್ಡಾರಾಧನೆಯ ಕಥೆಗಳಲ್ಲಿ 'ಪ್ರಶ್ರೇಣಿಕ' ಅಥವಾ 'ಉಪಶ್ರೇಣಿಕ' ಎಂದು ಹೆಸರಿಸಲಾಗಿದೆಯಾದರೆ, ಗುಣಭದ್ರಾಚಾರ್ಯರು ಉತ್ತರಪುರಾದಲ್ಲಿ 'ಕುಣಿಕ ಕ್ಷಿತೀಟ್' ಅಥವಾ 'ಕುಣಿಕ ಭೂಪ' ಎಂದು ಹೆಸರಿಸಿದ್ದಾರೆ. ಇದರಿಂದ ಈ ಕೃತಿ ಗಳು ರಚಿತವಾಗುವ ಕಾಲಕ್ಕಾಗಲೇ ಶ್ರೇಣಿಕ-ಬಿಂಬಿಸಾರನ ತಂದೆಯ ಹೆಸರು ಮೊದ ಲ್ಗೊಂಡು ಇತರ ಅನೇಕ ಐತಿಹ್ಯಾಂಶವಿಷಯಗಳು ಸಂದೇಹವಶವಾಗಿದ್ದುವೆಂದು ಅವ ಗತವಾಗುವುದು. ಗುಣಭದ್ರಾಚಾರ್ಯರು ತಮ್ಮ ಉತ್ತರಪುರಾಣಕೃತಿಯಲ್ಲಿ ಶ್ರೇಣಿ ಕ-ಬಿಂಬಿಸಾರನ ತಂದೆಯನ್ನು 'ಕುಣಿಕಕ್ಷಿತೀಟ್' ಎಂಬುದಾಗಿ ಯುಕ್ತವಾದ ಪೂರ್ವೈ ತಿಹ್ಯದ ಆಧಾರವಿಲ್ಲದೆ, ಹೆಸರಿಸಲಾರರು. 'ಕುಣಿಕಕ್ಷಿತೀಟ್' ಎಂಬ ಪದವು, ಸಾಧಾ ರಣರೀತಿಯಿಂದ 'ಕುಣಿಕ' ಎಂಬ ಹೆಸರಿನ 'ರಾಜ' ನೆಂದು ಅರ್ಥಗೊಡುವುದಾದರೂ, ಕುಣಿಕ (ಅಥವಾ ಕುಣಕ) ಎಂಬ (ಕ್ಷಿತಿ=)ನಾಡಿನ ಒಡೆಯನೆಂಬ ಅರ್ಥವಾಚಕವೂ ಆಗುವುದು. ಅರ್ಥಕೋಶದಿಂದ ತಿಳಿದುಬರುವಂತೆ 'ಕುನಕಾಃ'ಎಂಬ ಪದವು 'ಕುನಕ' ಎಂಬ ದೇಶವಾಸಿಜನಗಳ ವಾಚಕವಾಗಿದೆ. [ಸನ್ಮಾನ್ಯ ಮೋನಿಯರ್ ವಿಲಿಯಮ್ಸ್ ರವರ ಸಂಸ್ಕೃತ-ಇಂಗ್ಲೀಷ್ ಅರ್ಥಕೋಶ] ಸಂಸ್ಕೃತಭಾಷೆಯ 'ಕುನಕ' ಪದವು ಪ್ರಾಕೃತಭಾಷೆಯಲ್ಲಿ 'ಕುಣಕ' (ಅಥವಾ 'ಕುಣಅ') ಎಂದು ರೂಪಾಂತರ ಹೊಂದು ವುದು. ಆದ್ದರಿಂದ 'ಕುಣಿಕಕ್ಷಿತೀಟ್' ಎಂಬುದು ಮೂಲರೂಪದಿಂದ 'ಕುಣಕ

ದೇಶದ ರಾಜ' ಎಂಬ ಅರ್ಥವಾಚಕವಾಗಿ ಉಪಯುಕ್ತವಾಗಿದ್ದಿರಬಹುದಾದ ಸಂಭಾವ್ಯತೆಯು ವ್ಯಕ್ತವಾಗುವುದು. ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯನ ತರುವಾಯ ಮಗಧರಾಜ್ಯದಲ್ಲಿ ಬೇರೊಂದು ಮನೆತನದ ರಾಜ್ಯಭಾರವು ಆರಂಭವಾಗಿದ್ದು ಶ್ರೇಣಿಕರಾಜನ ತಂದೆಯಾಗಲೀ ಅಥವಾ ಇವನ ದಾಯಾದ್ಯಭ್ರಾತೃವಾದ ಚಿಲಾತಪುತ್ರನಾಗಲೀ ಈ ಮನೆತನದ ಪ್ರಥಮ ಅರನಾಗಿರಬೇಕೆಂಬ ಸಂಭಾವ್ಯತೆಯನ್ನು ಹಿಂದೆ ವಿವರಿಸಲಾಗಿದೆ. ಇದರಂತೆ ರಿಪುಂಜಯನ ತರುವಾಯ ಮಗಧರಾಜ್ಯವು ಕುಣಕನಾಡಿನ ಅಧಿಪತಿಯಾಗಿದ್ದ ಶ್ರೇಣಿಕನ ತಂದೆಯ ಪ್ರಭುತ್ವಕ್ಕೆ ಒಳಪಟ್ಟಿರಬೇಕೆಂದು ಗ್ರಹಿಸಲವಕಾಶವಾಗುವುದಲ್ಲದೆ 'ಕುಣಿಕ ಭೂಪ' ಎಂಬ ಹೆಸರಿನಮೂಲದಿಂದ ಇವನ ವಂಶಸ್ಥರನ್ನು 'ಕೋಣಿಕ' ರೆಂದು ಹೆಸರಿಸುವ ಪರಿಪಾಠಬಂದಿರಬೇಕೆಂದು ಗ್ರಹಿಸಬಹುದಾಗಿದೆ. ಈ ವಿಚಾರಸರಣಿಯಂತೆ ಕುಣಿಕಕ್ಷಿತೀಶನಿಗೆ ಮಗಧರಾಜ್ಯದ ಪ್ರಭುತ್ವವು ವಂಶಾನುಕ್ರಮದಿಂದ ಲಬ್ಧವಾದುದಾಗಿರಲಿಲ್ಲವೆಂದು ಫಲಿತವಾಗುವುದಲ್ಲದೆ, ಇವನಿಗೆ ಈ ರಾಜ್ಯದ ಪ್ರಭುತ್ವವು ಲಬ್ಧವಾದ ಐತಿಹ್ಯವು ಚಿಲಾತಪುತ್ರಕಥೆ ಮತ್ತು ಶ್ರೇಣಿಕ ಕಥಾನಕಗಳಲ್ಲಿ ಮೂಲತಃ ಪ್ರರೂಪಿತವಾಗಿದ್ದು, ಕಾಲಾನುಕ್ರಮದಲ್ಲಿ ಈ ಐತಿಹ್ಯವು ಮಾರ್ಪಾಡಾಗಿ ಅಸ್ತವ್ಯಸ್ತರೂಪತಳೆದು ಉಳಿದುಬಂದಿದೆಯೆಂದು ತರ್ಕಿಸಲವಕಾಶವಾಗುವುದು. ಈ ರೀತಿಯಾಗಿ ಕಾಲಾನುಕ್ರಮವಾಗಿ ಮಾರ್ಪಾಡಾಗಿರುಬಹುದಾದ ಮುಖ್ಯ ಐತಿಹ್ಯಾಂಶಗಳೇನೆಂಬುದನ್ನು ಪರಿಷ್ಕರಿಸಬೇಕಾಗಿದೆ.

ಬೃಹತ್ಕಥಾಕೋಶದ ಶ್ರೇಣಿಕಕಥಾನಕದಲ್ಲಿ ದುಷ್ಟಾಶ್ವವು ಪ್ರಶ್ರೇಣಿಕನನ್ನು 'ಕಂದುಕಕ್ಷಿತಿ' ಯಿಂದ ಮಹಾಟವಿಗೆ ಒಯ್ದಿತೆಂದು ಹೇಳಿದೆ ;

ತತಸ್ತೇನ ತುರಂಗೇಣ ಭೂಪತಿಃ ಕಂದುಕಕ್ಷಿತೇಃ |
ನೀತೋ ಮಹಾಟವೀಂ ವೇಗಾತ್ ಸಿಂಹವ್ಯಾಘ್ರಾದಿಸೇವಿತಾಂ ||

ಇಲ್ಲಿ ಕಥಾಸಂದರ್ಭದ ದೃಷ್ಟಿಯಿಂದ 'ಕಂದುಕಕ್ಷಿತೇಃ' ಎಂಬುದು ಅರ್ಥಹೀನವಾಗಿದೆ. ಬೃ. ಕ. ಕೋಶದ ಸಂಪಾದಕರಾದ ಶ್ರೀ ಎ. ಎನ್. ಉಪಾಧ್ಯೆಯವರು, ಅನುಬಂಧದ ಟಿಪ್ಪಣಿಯಲ್ಲಿ (ಪು. ಸಂ. ೩೮೨) ಈ 'ಕಂದುಕಕ್ಷಿತೇಃ' ಎಂಬ ಪದದ ಮುಂದೆ ಪ್ರಶ್ನಚಿಹ್ನೆಯನ್ನಿಟ್ಟಿದ್ದಾರಾದುದರಿಂದ, ಇವರ ದೃಷ್ಟಿಯಲ್ಲಿಯೂ ಈ ಪದ ಪ್ರಯೋಗದ ಸಾರ್ಥಕತೆಯು ಪ್ರಶ್ನಾಯತ್ತವಾಗಿದೆ. ಆದರೆ ಈ 'ಕಂದುಕ' ಪದವು ಪ್ರಶ್ರೇಣಿಕನು ದುಷ್ಟಾಶ್ವವನ್ನೇರಿ ಹೊರಟಸ್ಥಾನದ ಹೆಸರಾಗಿ ಪ್ರಯುಕ್ತವಾಗಿದ್ದಲ್ಲಿ ಅರ್ಥವತ್ತಾಗುವುದು. ಆದ್ದರಿಂದ ಮೇಲ್ಕಂಡ ಪದ್ಯದ "ಕಂದುಕಕ್ಷಿತೇಃ" ಎಂಬ ಪದವು 'ಕುಣಿಕಕ್ಷಿತೇಃ' ಎಂಬ ಮೂಲ ಪದದ ರೂಪಾಂತರವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ವಡ್ಡಾರಾಧನೆಯಲ್ಲಿ ಉಪಶ್ರೇಣಿಕನನ್ನು ದುಷ್ಟಾಶ್ವವು ವಿಂಧ್ಯಾಟವಿಗೆ ಹೊತ್ತು ತಂದಿತೆಂದುಹೇಳಿರುವುದರಿಂದ ಈ ಕುಣಕದೇಶವು ವಿಂಧ್ಯಾಟವಿಯ ಸಮೀಪವರ್ತಿಯಾಗಿರಬೇಕೆಂದು ಪರಿಭಾವಿಸಲವಕಾಶವಾಗುವುದು.

ಚಿಲಾತಪುತ್ರನು ಉಜ್ಜಯಿನಿಯ ಪ್ರದ್ಯೋತರಾಜನನ್ನು ಸೆರೆಹಿಡಿದು ತಂದೊಪ್ಪಿಸಿ ಪ್ರತಿಫಲವಾಗಿ 'ನಿಮ್ಮಂತಃಪುರಮುಳಿಯೆ ಪನ್ನೆರಡುವರ್ಷಂ ಬರೆಗಂ ಪೊಳಲ ಪೆಂಡಿರ್ಕಳೊಳೆಲ್ಲಮೆನ್ನ ಮೆಚ್ಚಿದಂತೆ ಸಯ್ದಂ ಬಾಳ್ವೆನಿದಂ ಬೇಡಿದೆನಿದನೆನಗೆ ದಯೆಗೆಯ್ದು ಸಲಿಸುವುದು' ಎಂದು ತನ್ನ ತಂದೆಯ ಬಳಿ ಒಸಗೆಯ ಬೇಡಿದನೆಂಬ ಕಥಾಂಶವು ಎರಡು ಕಾರಣಗಳಿಂದ ಅಸಂಗತವೆನಿಸಿ ಕಾಣುವುದು. ಮೊದಲನೆಯದಾಗಿ : ಕಥೆಯ ಹೇಳಿಕೆಯಂತೆ ಉಪಶ್ರೇಣಿಕನು ರಾಜಗೃಹನಗರದ ರಾಜನಾಗಿರುವನಾದ್ದರಿಂದ ಅವನ ಪ್ರಜೆಗಳೇ ಆದ ರಾಜಗೃಹನಗರದ ಪೌರರಮೇಲೆ ಅತ್ಯಾಚಾರನಡೆಸುವಂತಹ ಅಪೇಕ್ಷೆಯ ಸಲ್ಲಿಕೆಗಾಗಿ ಮಗನಾದ ಚಿಲಾತಪುತ್ರನು ಕೋರಿದನೆಂಬುದು ಅಸಂಗತವೆನಿಸುವುದಲ್ಲದೆ, ಮಗನಕೋರಿಕೆಯನ್ನು ಮನ್ನಿಸಿ, ೧೨ ವರ್ಷಕಾಲ ತನ್ನ ಕಣ್ಣೆದುರಿನಲ್ಲಿಯೇ ಪೌರರಮೇಲೆ ತನ್ನ ಮಗನಿಂದಾಗುತ್ತಿದ್ದ ಅತ್ಯಾಚಾರವನ್ನು ನಿರೋಧಿಸಲಿಲ್ಲೆಂಬುದು ಮತ್ತೂ ಅಸಂಗತವೆನಿಸುವುದು. ಎರಡನೆಯದಾಗಿ : ಚಿಲಾತಪುತ್ರನು ತನ್ನ ಇಷ್ಟಾರ್ಥದ ಕೋರಿಕೆಯಲ್ಲಿ ೧೨ ವರ್ಷಗಳ ಅವಧಿಯನ್ನು ಸೇರಿಸಿರುವುದಕ್ಕೆ ಕಾರಣವೇನೆಂಬುದು ಸ್ಪಷ್ಟವಾಗುವುದಿಲ್ಲವಾದ್ದರಿಂದ ಈ ಅಂಶವು ವಿಶೇಷರೀತಿಯಿಂದ ಅಸಂಗತವೆನಿಸಿ ಕಾಣುವುದು. ಕಥೆಯಲ್ಲಿ ಕಂಡುಬರುವ ಈ ಅಸಂಗತಾಂಶವು ಈ ಹಿಂದೆ ಹೇಳಿರುವಂತೆ, ಕುಣಕನಾಡಿನ ರಾಜನಾಗಿದ್ದ ಕುಣಕಭೂಪನಿಗೆ ಚಿಲಾತಪುತ್ರನ ಸಾಹಸದ ಕಾರಣದಿಂದ ಮಗಧರಾಜ್ಯದ ಆಧಿಪತ್ಯವು ದೊರಕಿದೆಯೆಂದು ಗ್ರಹಿಸಿದಲ್ಲಿ ನಿವಾರಿತವಾಗುವುದು. ಕಥೆಯ ಈ ಪ್ರಸಂಗವು ಪ್ರಮುಖವಾಗಿ ಎರಡುಕಾರಣಗಳಿಂದ ಕಾಲಾನುಕ್ರಮದಲ್ಲಿ ಮಾರ್ಪಾಡುಹೊಂದಿ ಉಳಿದುಬಂದಿದೆಯೆಂದು ಹೇಳಲವಕಾಶವಿದೆ: ಶ್ರೀ ವೀರತೀರ್ಥಂಕರನ ಸಮವಸರಣದ ಪ್ರಮುಖಶ್ರೋತೃವೆನಿಸಿದ ಶ್ರೇಣಿಕ-ಬಿಂಬಿಸಾರನು ಮಗಧಾಧಿಪತಿಯಾಗಿದ್ದನೆಂಬ ಸುಸ್ಥಿತಐತಿಹ್ಯಾಧಾರದಿಂದ, ವಂಶಾನುಕ್ರಮರೀತಿಯಿಂದ ಇವನ ತಂದೆಯೂ ಮಗಧರಾಜ್ಯಾಧಿಪನಾಗಿದ್ದಿರಬೇಕೆಂಬ ಕಥನಕಾರರ ಗ್ರಹಿಕೆಯು ಈ ಮೇಲೆ ವಿವರಿಸಿದಂತೆ ಕಥೆಯಲ್ಲಾಗಿರುವ ಮಾರ್ಪಾಟಿನ ಮೊದಲ ಕಾರಣವಾಗಿದೆ. ಎರಡನೆಯದಾಗಿ ಈ ಕಥೆಗೆ ಸಂಬಂಧಿಸಿದ ನಾಮಾವಲೀ ನಿಬಂಧನದಲ್ಲಿದ್ದ 'ಪ್ರದ್ಯೋತಿ' ಅಥವಾ 'ಪ್ರದ್ಯೋತ' ಎಂಬ ಹೆಸರನ್ನು ಭಾಸಕವಿ ರಚಿತ ನಾಟಕಗಳೇ ಮೊದಲಾದ ಕೃತಿಗಳಮೂಲಕ ಹೆಚ್ಚು ಪ್ರಸಿದ್ಧಿಪಡೆದ ಉಜ್ಜಯಿನಿಯ ಪ್ರದ್ಯೋತರಾಜನ ನಿರ್ದೇಶಕವಾಗಿದೆಯೆಂದು ಕಾಲಾಂತರದಲ್ಲಿ ಕಥನಕಾರರು ಗ್ರಹಿಸಿದ ಕಾರಣದಿಂದ ಕಥೆಯಲ್ಲಿ 'ಚಿಲಾತಪುತ್ರನು ಉಜ್ಜಯಿನಿಯ ಪ್ರದ್ಯೋತನನ್ನು ಸೆರೆಹಿಡಿದ' ನೆಂಬ ಮಾರ್ಪಾಡಿಗೆ ಕಾರಣವಾಗಿದೆ. ಆದರೆ, ಹಿಂದೆ ಹೇಳಿರುವಂತೆ ಕುಣಕನಾಡಿನ ರಾಜನಾಗಿದ್ದ ಕುಣಿಕಭೂಪನಿಗೆ ಮಗಧರಾಜ್ಯಾಧಿಪತ್ಯವು ಚಿಲಾತಪುತ್ರನ ಸಾಹಸಕಾರ್ಯದಿಂದ ದೊರಕಿರಬೇಕೆಂಬುದಲ್ಲದೆ, ಚಿಲಾತಪುತ್ರನು ಮಗಧರಾಜನನ್ನು ಸೆರೆಹಿಡಿದಕಾರಣದಿಂದ ಇವನಿಗೆ ಮಗಧರಾಜ್ಯಾಧಿಪತ್ಯವು ದೊರಕಿರಬೇಕೆಂದು ವ್ಯಕ್ತವಾಗುವುದು.

ಕುಣಿಕಸುತನಾದ ಚಿಲಾತಪುತ್ರನು ಮಗಧರಾಜನನ್ನು ಸೆರೆಹಿಡಿದ ಕಾರಣ ದಿಂದ ಇವನಿಗೆ ಮಗಧರಾಜ್ಯದ ಆಧಿಪತ್ಯವು ದೊರಕಿರಬೇಕೆಂಬ ಐತಿಹ್ಯಾಂಶವು ವೈ. ಮ. ಸಂ. ಪುರಾಣಗಳಲ್ಲಿ ಉಕ್ತವಾಗಿರುವ ಐತಿಹ್ಯಾಂಶದೊಡನೆ ಸಮನ್ವಿತವಾಗು ವುದು. ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯನ ಐತಿಹ್ಯವಿಷಯ ವಾಗಿ ಪುರಾಣಗಳಲ್ಲಿ ಈ ಮುಂದಿನ ಹೇಳಿಕೆಯಿದೆ :

ಮುನಿಕಃ ಸ್ವಾಮಿನಂ ಹತ್ವಾ ಪುತ್ರಂ ಸಮಭಿಷೇಕ್ಷ್ಯತಿ ।
ಮಿಷತಾಂಕ್ಷತ್ರಿಯಾಣಾಂ ಹಿ ಪ್ರದ್ಯೋತೋ ಮುನಿಕೋ ಬಲಾತ್ ॥ ೩೦೪ ॥

[ವಾಯುಪುರಾಣ–ಅ. ೩೭]

ಈ 'ಮುನಿಕ' ಎಂಬ ಹೆಸರಿನ ಬದಲಾಗಿ ಇತರ ಪುರಾಣಗಳಲ್ಲಿ 'ಶುನಕ' ಮತ್ತು 'ಪುಲಿಕ' ಎಂಬುದಾಗಿ ಹೆಸರಿಸಲಾಗಿದೆಯೆಂದು ಹಿಂದೆ ಹೇಳಲಾಗಿದೆ. ಇದರಂತೆ ರಿಪುಂ ಜಯನ ಹತ್ಯಾಕಾರಿಯ ಹೆಸರಿನ ವಿಷಯವಾಗಿ ಪುರಾಣಗಳಲ್ಲಿ ಸಂಧಿಗ್ಧತೆಯೇರ್ಪ ಟ್ಟಿರುವುದು ಸ್ಪಷ್ಟವಿದೆ. ಈ ಹೆಸರುಗಳ ಬದಲಾಗಿ 'ಕುಣಿಕ' ಎಂಬ ಹೆಸರನ್ನು ಸಂ ಯೋಜಿಸಿದಲ್ಲಿ ಪುರಾಣಗಳಲ್ಲಿ ನಿರ್ದೇಶಿತವಾಗಿರುವ ರಿಪುಂಜಯನ ಹತ್ಯಾಪ್ರಸಂಗದ ಐತಿಹ್ಯಾಂಶ ಹಾಗೂ ಈ ರಾಜನ ತರುವಾಯ ಮಗಧರಾಜ್ಯದಲ್ಲಿ ಅಭಿಷಿಕ್ತನಾದ ವ್ಯಕ್ತಿಯ ಐತಿಹ್ಯಾಂಶಗಳು ಸ್ಪಷ್ಟವಾಗಿ ಆವಿಷ್ಕೃತವಾಗುವುವು. ಪುರಾಣೋಕ್ತವಾಗಿ ರುವ ಮೇಲ್ಕಂಡ ಐತಿಹ್ಯವನ್ನು ಪೂರ್ವೋಕ್ತವಾದ ಕುಣಿಕಭೂಪ ಮತ್ತು ಚಿಲಾತ ಪುತ್ರರ ಐತಿಹ್ಯದೊಡನೆ ಸಮೀಕರಿಸಿದಲ್ಲಿ ಚಿಲಾತಪುತ್ರನು ಮಗಧರಾಜನಾದ ರಿಪುಂಜಯನನ್ನು ಸೆರೆಹಿಡಿದಿದ್ದಾನೆಂದೂ, ಇದಕ್ಕೆ ಪ್ರತಿಫಲವಾಗಿ ಚಿಲಾತಪುತ್ರನ ಕೋರಿಕೆಯಂತೆ ಕುಣಿಕನು ರಿಪುಂಜಯನನ್ನು ಕೊಂದು ತನ್ನಮಗನಾದ ಚಿಲಾತ ಪುತ್ರನಿಗೆ ಮಗಧರಾಜ್ಯಾಧಿಪತ್ಯದ ಪಟ್ಟಕಟ್ಟಿದ್ದಾನೆಂದೂ ವ್ಯಕ್ತವಾಗುವುದು. ಇಂತೆ ಯೇ ಪುರಾಣಗಳಲ್ಲಿ ಉಳಿದುಬಂದಿರುವ ಐತಿಹ್ಯದಂತೆ ರಿಪುಂಜಯನ ತರುವಾಯ ಮಗಧರಾಜ್ಯದಲ್ಲಿ ಅಭಿಷಿಕ್ತನಾದ ವ್ಯಕ್ತಿಯು ' ಪ್ರದ್ಯೋತ ' ಅಥವಾ ' ಪ್ರದ್ಯೋತಿ ' ಎಂಬ ಹೆಸರಿನವನಾಗಿದ್ದಾನಾದುದರಿಂದ ಮತ್ತು ಹಿಂದೆ ಹೇಳಿರುವಂತೆ ಚಿಲಾತಪುತ್ರ ಕಥೆಯು 'ಪ್ರದ್ಯೋತ' ಎಂಬ ಹೆಸರು ಉಜ್ಜಯಿನಿಯ ಪ್ರದ್ಯೋತರಾಜನ ನಿರ್ದೇಶಕ ವಾಗಿರಲಾರದಾದುದರಿಂದ ಕುಣಿಕರಾಜನ ಸುತನಾದ ಚಿಲಾತಪುತ್ರನಿಗೇ 'ಪ್ರದ್ಯೋತ' ಅಥವಾ 'ಪ್ರದ್ಯೋತಿ' ಎಂಬ ಮತ್ತೊಂದು ಹೆಸರಿದ್ದಿರಬೇಕೆಂದು ಗ್ರಹಿಸಲವಕಾಶ ವಾಗುವುದು. 'ಪ್ರದ್ಯೋತ' ಎಂಬ ಹೆಸರಿನ ಇಬ್ಬರು ರಾಜರ ಐತಿಹ್ಯಗಳು ಮಿಶ್ರ ವಾಗಿ ಉಜ್ಜಯಿನಿಯ ಪ್ರದ್ಯೋತರಾಜನೊಬ್ಬನ ಐತಿಹ್ಯವಾಗಿ ರೂಪುಗೊಂಡಿರುವು ದನ್ನು ಸಂಪ್ರದಾಯತ್ರಯದ ಹಲವಾರು ಕಥಾಯತ್ತವಾದ ಐತಿಹ್ಯಾಧಾರದಿಂದ ಹಿಂದೆ ಸಾಕ್ಷೀಕರಿಸಲಾಗಿದೆಯಲ್ಲದೆ, ಬೃ ಹ ತ್ಕ ಥಾ ಮ ಂ ಜ ರಿ ಯ ಹೇಳಿಕೆಯಾಧಾರದಿಂದ 'ಪ್ರದ್ಯೋತ' ಎಂಬ ಹೆಸರಿನ ರಾಜನೊಬ್ಬನು ಮಗಧರಾಜ್ಯಾಧಿಪನಾಗಿದ್ದಿರಬೇಕೆಂ

ಬುದಾಗಿ ಸೂಚಿತವಾಗುವುದೆಂದು ವಿವರಿಸಲಾಗಿದೆ. ಇದರಿಂದ ಈ ಹಿಂದೆ ಹೇಳಲಾಗಿರುವಂತೆ ಚಿಲಾತಪುತ್ರನಿಗೆ 'ಪ್ರದ್ಯೋತ' ಅಥವಾ 'ಪ್ರದ್ಯೋತಿ' ಎಂಬ ಮತ್ತೊಂದು ಹೆಸರಿದ್ದಿರಬೇಕೆಂಬುದು ಸಮರ್ಥಿತವಾಗುವುದು. ಇಷ್ಟಲ್ಲದೆ 'ಚಿಲಾತಪುತ್ರ' ಎಂಬ ಹೆಸರು 'ಚಿಲಾತೆ ಎಂಬುವಳ ಸುತ' ಎಂಬ ಸಂಜ್ಞಾರ್ಥದಿಂದ ರೂಢಿತವಾಗಿರಬೇಕೆಂದು ಚಿಲಾತಪುತ್ರಕಥೆಯ ಕಥನದಿಂದಲೇ ವ್ಯಕ್ತವಾಗುವುದು. ಹೀಗೆ ಸಂಜ್ಞಾರ್ಥದಿಂದ ರೂಢಿಗತವಾದ ಈ ಹೆಸರು ಇವನ ನಿಜವಾದ ಹೆಸಲಾಗಿರಲಾರದಾದ್ದರಿಂದ ಇವನಿಗೆ, ಈ ಹಿಂದೆ ಹೇಳಿರುವಂತೆ, 'ಪ್ರದ್ಯೋತ' ಅಥವಾ 'ಪ್ರದ್ಯೋತಿ' ಎಂಬ ಮತ್ತೊಂದು ಹೆಸರಿದ್ದಿರಬೇಕೆಂದು ಸಮರ್ಥಿತವಾಗುವುದು.

ವೃಷಭಸೇನಭಟ್ಟಾರಕ ಕಥೆಯ 'ಪ್ರದ್ಯೋತ' ಎಂಬ ಹೆಸರು ಉಜ್ಜಯಿನಿಯ ಪ್ರದ್ಯೋತ ಮಹಾಸೇನನ ನಿರ್ದೇಶಕವಾಗಿದೆಯೆಂದೂ, ಪ್ರಭಾವತೀರಾಣಿ ಮತ್ತು ಗುರುನಿಹ್ನವ ಕಥೆಗಳ 'ಪ್ರದ್ಯೋತ' ಎಂಬ ಹೆಸರುಗಳು, ಉಜ್ಜಯಿನಿಯ ಪ್ರದ್ಯೋತ ಮಹಾಸೇನನಿಂದ ಅನ್ಯನಾದ ಮತ್ತೊಬ್ಬ ವ್ಯಕ್ತಿಯ ನಿರ್ದೇಶಕಗಳಾಗಿರಬೇಕೆಂದೂ ಹಿಂದೆ ಪ್ರಮಾಣೀಕರಿಸಲಾಗಿದೆ. ಈ ಮೇಲಿನ ಸಮಾಲೋಚನೆಯಿಂದ ವ್ಯಕ್ತಗೊಂಡಿರುವಂತೆ ಚಿಲಾತಪುತ್ರನಿಗೆ 'ಪ್ರದ್ಯೋತ' ಎಂಬ ಹೆಸರಿದ್ದಿತಾದುದರಿಂದ ಪ್ರಭಾವತೀರಾಣಿ ಮತ್ತು ಗುರುನಿಹ್ನವ ಕಥೆಗಳ 'ಪ್ರದ್ಯೋತ' ಎಂಬ ಹೆಸರುಗಳು ಚಿಲಾತಪುತ್ರ-ಪ್ರದೋತನ ನಿರ್ದೇಶಕಗಳಾಗಿವೆಯೆಂದು ಗ್ರಹಿಸಲವಕಾಶವಾಗುವುದಲ್ಲದೆ, ಗುರುನಿಹ್ನವಕಥೆಯ 'ಧೃತಿಷೇಣ.' ಎಂಬ ಹೆಸರು ಕುಣಿಕರಾಜನ ಹೆಸರಾಗಿದೆಯೆಂದೂ ಗ್ರಹಿಸಲವಕಾಶವಾಗುವುದು.

ಶ್ರೇಣಿಕ-ಬಿಂಬಿಸಾರನನ್ನು ಸಾಧಾರಣವಾಗಿ ಪ್ರಾಕೃತಭಾಷಾಮೂಲದ ಕೃತಿಗಳಲ್ಲಿ 'ಸೇಣಿಯ' ಎಂಬುದಾಗಿ ಹೆಸರಿಸಿರುವುದು ಕಂಡುಬರುತ್ತದೆ. ಈ 'ಸೇಣಿಯ' ಎಂಬ ಹೆಸರು, ಇವನ ತಂದೆಯ 'ಧೃತಿಷೇಣ' ಎಂಬ ಹೆಸರಿನ ಅಂತ್ಯಪದವಾದ 'ಷೇಣ' (=ಪ್ರಾಕೃತರೂಪ 'ಸೇಣ') ಎಂಬುದರಿಂದ ರೂಪಿತವಾಗಿರಬೇಕೆಂದು ಗ್ರಹಿಸಬೇಕಾಗುವುದು. ಶ್ರೇಣಿಕ-ಬಿಂಬಿಸಾರ ಕಥಾನಕ ಮತ್ತು ಚಿಲಾತ್ರಪುತ್ರ ಕಥೆಗಳಲ್ಲಿ ಚಿಲಾತಪುತ್ರ ಮತ್ತು ಶ್ರೇಣಿಕ-ಬಿಂಬಿಸಾರರ ತಂದೆಯನ್ನು 'ಉಪಶ್ರೇಣಿಕ' ಮತ್ತು 'ಪ್ರಶ್ರೇಣಿಕ' ಎಂದು ವಿಭಿನ್ನವಾಗಿ ಹೆಸರಿಸಿದೆಯೆಂದು ಹಿಂದೆ ಹೇಳಲಾಗಿದೆ. ವ್ಯಕ್ತಿಗಳು, ನಗರ ಮತ್ತು ದೇಶಗಳನ್ನು ಹೆಸರಿಸುವಲ್ಲಿ ಬೃ. ಕ ಕೋಶದಲ್ಲಿ ಈ ಮುಂದಿನ ರೀತಿಯಾಗಿ ಹೆಸರಿಸಿರುವುದು ಕಂಡುಬರುತ್ತದೆ:

ಉಸಭೋಪಪದೋ ದಾಸೋ (=ಉಸಭದಾಸ)
ವಿನಯಾದಿ ಮತಿಃ ಪರಾ (=ವಿನಯಮತಿ)
ರಾಜೋಪಪದಂ ಗೃಹಂ (=ರಾಜಗೃಹ ನಗರ)
ಕುಂಕುಮೋಪಪದೋ ದೇಶೋ (=ಕುಂಕಮ ದೇಶ)

ಜೈನಸಂಪ್ರದಾಯದ 'ನಾಮಾವಲೀ ನಿಬಂಧನರೂಪದ ಕಥೆಗಳಲ್ಲಿಯೂ ವ್ಯಕ್ತಿಗಳೇ ಮೊದಲಾದವರನ್ನು, ಬೃ. ಕ. ಕೋಶದಲ್ಲಿ ಕಂಡುಬರುವ ಮೇಲ್ಕಂಡ ರೀತಿಯಿಂದ ಹೆಸರಿಸಿದ್ದಿರಬೇಕೆಂದು ಹೇಳಲವಕಾಶವಿದೆ; ಗುಣಭದ್ರಾಚಾರ್ಯವಿರಚಿತವಾದ ಪೂರ್ವಪುರಾಣಭಾಗದಲ್ಲಿ ವೃಷಭತೀರ್ಥಂಕರರ ಗಣಧರರ ಹೆಸರುಗಳನ್ನು, ಈ ಮೇಲ್ಕಂಡರೀತಿಯಿಂದ ನಿರ್ದೇಶಿಸಿರುವುದನ್ನು ಕಾಣಬಹುದು. ಆದ್ದರಿಂದ, ಬೃ. ಕ. ಕೋಶವೇ ಮೊದಲಾದ ಕೃತಿಗಳಲ್ಲಿಯೂ, ಕೆಲವೊಮ್ಮೆ ವ್ಯಕ್ತಿಗಳನ್ನು ಹೆಸರಿಸುವಲ್ಲಿ ಯಥಾವತ್ತಾಗಿ ನಾಮಾವಲೀ ನಿಬಂಧನದ ಮಾದರಿಯನ್ನನುಸರಿಸಲಾಗಿದೆಯೆಂದು ಗ್ರಹಿಸವಲಕಾಶವಾಗುವುದು. ಅಂತೆಯೇ ಚಿಲಾತಪುತ್ರ ಮತ್ತು ಶ್ರೇಣಿಕ ಕಥಾನಕಗಳ 'ಉಪಶ್ರೇಣಿಕ' ಎಂಬ ಹೆಸರು ಪೂರ್ಣರೂಪದ ಹೆಸರಾಗಿಲ್ಲವೆಂದು ಹೇಳಲವಕಾಶವಿದೆ: ಇಲ್ಲಿ ಮೂಲತಃ 'ಶ್ರೇಣಿಕ' ಎಂಬ ಪದವನ್ನು ಉಪಪದವಾಗಿ ಹೊಂದಿದ್ದ ಹೆಸರೊಂದಿದ್ದು ಕಾಲಾಂತರದಲ್ಲಿ ಈ ಹೆಸರಿನ ಮೊದಲ ಪದವು ಕಾರಣಾಂತರದಿಂದ ಪರಿಚ್ಯುತವಾಗಿ ಅವಶೇಷರೂಪದಲ್ಲಿ 'ಉಪಶ್ರೇಣಿಕ' ಎಂಬ ರೂಪಪಡೆದು ಉಳಿದುಕೊಂಡಿದೆ ಎಂದು ವ್ಯಕ್ತವಾಗುವುದು. 'ಸೇಣಿಯ' ಎಂಬ ಪ್ರಾಕೃತ ಪದಕ್ಕೆ 'ಶ್ರೇಣಿಕ' ಎಂಬುದು ಸಂಸ್ಕೃತದ ಸಮಾನಪದವಾಗಿದೆ. ಇದರಿಂದ, ಶ್ರೇಣಿಕನ ತಂದೆ 'ಧೃತಿ' ಪದದೊಡನೆ ಉಪಪದವಾಗಿ 'ಶ್ರೇಣಿಕ' ಪದವು ಸಂಯೋಜಿತವಾಗಿದ್ದ 'ಧೃತಿಶ್ರೇಣಿಕ' (=ಧೃತಿಸೇಣಿಯ = ಧೃತಿಷೇಣ) ಎಂಬ ಹೆಸರಿದ್ದಿರಬೇಕೆಂದು ಸ್ಫುಟವಾಗುವುದು.

ಉಪಶ್ರೇಣಿಕ ಮತ್ತು ಚಿಲಾತಪುತ್ರ - ಪ್ರದ್ಯೋತಿಗಳ ವಿಷಯವಾಗಿ ಇದುವರೆವಿಗೆ ನಡೆದ ಪರ್ಯಾಲೋಚನೆಯ ಫಲಿತಾಂಶವಾಗಿ ಬೃಹದ್ರಥರ ರಾಜ್ಯಭಾರಾಂತ್ಯ ಸಮಯದಿಂದ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರಾರಂಭಸಮಯಪರ್ಯಂತದ ಮಗಧರಾಜ್ಯದ ಐತಿಹ್ಯವು ಈ ಮುಂದಿನಂತೆ ರೂಪುಗೊಳ್ಳುವುದು :

'ಮಗಧರಾಜ್ಯಾಧಿಪನಾಗಿದ್ದ ರಿಪುಂಜಯನಿಗೆ ಸಾಮಂತರಾಜನಾಗಿದ್ದ ಧೃತಿಷೇಣನೆಂಬ ಅರಸನು ಕುಣಕದೇಶದಲ್ಲಿ ರಾಜ್ಯಾಡಳಿತ ನಡೆಸುತ್ತಿದ್ದನು. ಇವನು ರೋರುಗಪುರಾಧಿಪನಾದ ಉದ್ದಾಯನನನ್ನು ರಿಪುಂಜಯನ ಮೇಲೆ ದಂಡೆತ್ತಿಹೋಗುವಂತೆ ಪ್ರಚೋದಿಸಿದನು. ಅಂತೆಯೇ ದಂಡೆತ್ತಿಹೋದ ಉದ್ದಾಯನನನ್ನು ರಿಪುಂಜಯನು ಸೆರೆಹಿಡಿದಿಟ್ಟನು. ಆಗ ಕುಣಿಕರಾಜನು ಉಪಾಯಾಂತರದಿಂದ ಉದ್ದಾಯನನನ್ನು ಸೆರೆಯಿಂದ ಬಿಡಿಸಿದನು. ಇದರಿಂದ ಕೋಪಗೊಂಡ ರಿಪುಂಜಯನು ಕುಣಿಕರಾಜನನ್ನು ಶಿಕ್ಷಿಸಲೋಸುಗ ಕುಣಕದೇಶದಮೇಲೆ ದಂಡೆತ್ತಿಹೋದನು. ಆಗ ಕುಣಿಕರಾಜನು ರಿಪುಂಜಯನನ್ನು ಸೆರೆಹಿಡಿದು ತಂದಿತ್ತವರಿಗೆ ಅವರ ಇಚ್ಛಿತಾರ್ಥವನ್ನು ಸಲ್ಲಿಸುವುದಾಗಿ ಉದ್ಘೋಷಣೆಮಾಡಿಸಿದನು. ಅಂತೆಯೇ ಚಿಲಾತಪುತ್ರ-ಪ್ರದ್ಯೋತಿಯು ಉಪಾಯಾಂತರದಿಂದ ರಿಪುಂಜಯನನ್ನು ಸೆರೆಹಿಡಿದು ತಂದೊಪ್ಪಿಸಿ, ಪ್ರತಿಫಲವಾಗಿ ತನಗೆ ರಾಜಗೃಹದ ರಾಜ್ಯಾಡಳಿತದ ಪಟ್ಟಕಟ್ಟಬೇಕೆಂದು ಕೋರಿ

ದನು. ಅಂತೆಯೇ ಕುಣಿಕರಾಜನು ತನ್ನಸ್ವಾಮಿಯಾದ ರಿಪುಂಜಯನನ್ನು ವಧೆಮಾಡಿ, ಚಿಲಾತಪುತ್ರ-ಪ್ರದ್ಯೋತಿಗೆ ರಾಜಗೃಹದಲ್ಲಿ ರಾಜ್ಯಾಭಿಷೇಕ ಮಾಡಿದನು. [ಪ್ರಾಯಶಃ ಈ ಪ್ರಸಂಗಕ್ಕೆ ಸಂಬಂಧಿಸಿದ ರಾಜಕೀಯ ಕಾರಣದಿಂದ ಶ್ರೇಣಿಕ-ಬಿಂಬಿಸಾರನು ದೇಶ ತ್ಯಾಗಮಾಡಬೇಕಾದ ಪರಿಸ್ಥಿತಿಯುಂಟಾಗಿರಬೇಕೆಂದು ಕಂಡುಬರುವುದು.] ರಾಜ ಗೃಹನಗರದಲ್ಲಿ ಅಭಿಷಿಕ್ತನಾದ ಚಿಲಾತಪುತ್ರ-ಪ್ರದ್ಯೋತಿಯು ಪೌರಸ್ತ್ರೀಯರ ವಿಷ ಯದಲ್ಲಿ ನಡತೆಗೆಟ್ಟರೀತಿಯಿಂದ ವರ್ತಿಸಲು ಆರಂಭಿಸಿದನು. ಇವನ ಈ ದುರ್ನಡತೆ ಯಿಂದ ಪರಿತಪ್ತರಾದ ಪೌರರು ಕುಣಿಕರಾಜನ ಬಳಿ ಹೋಗಿ ದೂರಿತ್ತರು. ಕುಣಿಕ ರಾಜನು ಎಷ್ಟುಬಾರಿ ವಿವೇಕಹೇಳಿದರೂ ಗಮನಕ್ಕೆ ತಂದುಕೊಳ್ಳದೆ ತನ್ನ ಸ್ವೇಚ್ಛಾ ನುಸಾರ ದುರ್ನಡತೆಯಲ್ಲಿಯೇ ಚಿಲಾತಪುತ್ರನು ಮುಂದುವರಿದನಾದುದರಿಂದ, ಇವ ನನ್ನು ರಾಜಗೃಹನಗರದಿಂದ ಹೊರಗಟ್ಟಲು ನಿಶ್ಚಯಿಸಿದನು. ಅಂತೆಯೇ ಕುಣಿಕ ಭೂಪನು ಈ ಸಮಯದಲ್ಲಿ ಸ್ವದೇಶಭ್ರಷ್ಟನಾಗಿ ವಿನ್ಯಾತಟಪುರದಲ್ಲಿ ವಾಸಿಸುತ್ತಿದ್ದ ಶ್ರೇಣಿಕ-ಬಿಂಬಿಸಾರನನ್ನು ಕರೆಯಿಸಿಕೊಂಡು. ಚಿಲಾತಪುತ್ರನನ್ನು ರಾಜಗೃಹನಗರ ದಿಂದ ಹೊರಗಟ್ಟಿದನು. ಈ ರೀತಿಯಾಗಿ ಚಿಲಾತಪುತ್ರ-ಪ್ರದ್ಯೋತಿಯ ೧೨ ವರ್ಷ ಗಳ ಪ್ರಜಾಸಂಕಟಕಾರಿ ರಾಜ್ಯಾಡಳಿತದ ಅನಂತರ, ಕುಣಿಕರಾಜನು ಶ್ರೇಣಿಕ-ಬಿಂಬಿಸಾರನಿಗೆ ಮಗಧರಾಜ್ಯದ ಪಟ್ಟಕಟ್ಟಿ ಮುನಿದೀಕ್ಷೆಪಡೆದಿದ್ದಾನೆ.

**ಶ್ರೇಣಿಕ-ಬಿಂಬಿಸಾರ:** ಬೃಹದ್ರಥಮನೆತನದ ರಾಜ್ಯಭಾರಾಂತ್ಯಸಮಯದ ೧೨ ವರ್ಷಗಳ ತರುವಾಯದಲ್ಲಿ ಶ್ರೇಣಿಕ-ಬಿಂಬಿಸಾರನು ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ಈ ಮೇಲ್ಕಂಡ ವಿಚಾರಸರಣಿಯಿಂದ ವ್ಯಕ್ತಪಟ್ಟಿದೆ. ಭಾಗ ವತಪುರಾಣದ ಹೇಳಿಕೆಯಾಧಾರದಂತೆ ಬೃಹದ್ರಥರ ರಾಜ್ಯಭಾರಾಂತ್ಯಸಮಯದ ೧೧೩೮ ವರ್ಷಗಳ ತರುವಾಯದಲ್ಲಿ ನಂದರಾಜನು ಮಗಧರಾಜ್ಯಭಾರದಲ್ಲಿ ಅಧಿಷ್ಠಿತ ನಾಗಿರುವನೆಂದು ನಿರ್ದೇಶಿತವಾಗುವುದಾಗಿ ಹಿಂದೆ ವಿವರಿಸಲಾಗಿದೆ. ಈ ಐತಿಹ್ಯದ ತಥ್ಯವು ಅಂಶತಃ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರಕಾಲಾವಧಿಯ ನಿರ್ಣಯವನ್ನ ವಲಂಬಿಸಿದೆ.

ಪರಿಕ್ಷಿದ್ರಾಜನ ಜನನ ಮತ್ತು ನಂದರಾಜನ ಅಭಿಷೇಕಸಮಯಗಳ ಅಂತರ ಕಾಲವನ್ನು ಭಾಗವತಪುರಾಣದಲ್ಲಿ ೧೧೧೫ ವರ್ಷಗಳೆಂದು ನಿರ್ದೇಶಿಸಲಾಗಿದ್ದು ವಿಷ್ಣುಪುರಾಣದಲ್ಲಿ ಈ ಅಂತರಕಾಲವನ್ನು ೧೦೫೦ ವರ್ಷಗಳೆಂದು ನಿರ್ದೇಶಿಸ ಲಾಗಿದೆಯೆಂದು ಹಿಂದೆ ಹೇಳಲಾಗಿದೆ. ಇಂತೆಯೇ ವಾಯು, ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿಯೂ ಈ ಅಂತರ ಕಾಲವನ್ನು ೧೦೫೦ ವರ್ಷಗಳೆಂದು ನಿರ್ದೇ ಶಿಸಲಾಗಿದೆಯಾದರೂ ಈ ಅಂತರಕಾಲದಲ್ಲಿ ಅಭಿಷಿಕ್ತನಾದ ರಾಜನನ್ನು ಈ ಪುರಾಣ ಗಳಲ್ಲಿ ಅನುಕ್ರಮವಾಗಿ 'ಮಹಾದೇವ', 'ಮಹಾನಂದ' ಮತ್ತು 'ಮಹಾಪದ್ಮ' ಎಂದು ಹೆಸರಿಸಲಾಗಿದೆ. ಹೀಗೆ ಈ ಪುರಾಣಗಳಲ್ಲಿ '೧೦೫೦' ವರ್ಷಗಳ ಅಂತರ

ಕಾಲವನ್ನು ಹೇಳುವಲ್ಲಿ ಒಮ್ಮತವಿದ್ದು, ಈ ಸಮಯದಲ್ಲಿ ಅಭಿಷಿಕ್ತನಾದ ರಾಜನನ್ನು ಹೆಸರಿಸುವಲ್ಲಿ ಮಾತ್ರ ಭಿನ್ನಮತವೇರ್ಪಟ್ಟಿದೆಯಾದುದರಿಂದ, ಒಮ್ಮತದಿಂದ ಹೇಳ ಲಾಗಿರುವ ಕಾಲಕ್ಕೆ ಸಂಬಂಧಿಸಿದ ಐತಿಹ್ಯವಿಷಯವು ಪ್ರಮಾಣಬದ್ಧವಾಗಿರಬಹು ದೆಂಬ ತರ್ಕಕ್ಕೆಡೆಯಾಗುವುದು. ಇದರಿಂದ ೧೦೫೦ ವರ್ಷಗಳ ಈ ಅಂತರಕಾಲವು ಹಿಂದೆ ವಿವರಿಸಲಾಗಿರುವ ಕ್ರಮದಂತೆ ಬೃಹದ್ರಥರ ರಾಜ್ಯಭಾರಾಂತ್ಯ ಸಮಯದಿಂದ (೧೦೫೦ – ೧೦೦೦=) ೫೦ ವರ್ಷಗಳ ತರುವಾಯದಲ್ಲಿ ರಾಜನೊಬ್ಬನು ಅಭಿಷಿಕ್ತ ನಾದ ಸಮಯದ ನಿರ್ದೇಶಕವಾಗಿದೆಯೆಂದು ಸೂಚಿತವಾಗುವುದು. ಈ ಸೂಚನೆ ಯನುಗುಣವಾಗಿ ಬೃಹದ್ರಥರ ರಾಜ್ಯಭಾರಾಂತ್ಯಸಮಯದ ೧೨ ವರ್ಷಗಳ ತರು ವಾಯದಲ್ಲಿ ಅಭಿಷಿಕ್ತನಾದ ಶ್ರೇಣಿಕ-ಬಿಂಬಿಸಾರನು (೫೦ – ೧೨=) ೩೮ ವರ್ಷ ಕಾಲ ರಾಜ್ಯಭಾರಮಾಡಿರುವನೆಂದು ಮತ್ತು ಇವನ ತರುವಾಯ ಅಜಾತಶತ್ರುವು ಅಭಿಷಿಕ್ತನಾಗಿರುವನೆಂದು ಗ್ರಹಿಸಲವಕಾಶವಾಗುವುದು. ಈ ರೀತಿಯಾಗಿ ಶ್ರೇಣಿಕ-ಬಿಂಬಿಸಾರನು ೩೮ ವರ್ಷಕಾಲ ರಾಜ್ಯಭಾರಮಾಡಿರುವನೆಂಬುದು ಕೇವಲ ತರ್ಕದ ಫಲಿ ತಾಂಶವಾಗಿರದೆ ಬ್ರಹ್ಮಾಂಡಪುರಾಣದ ಹೇಳಿಕೆಯಿಂದಲೂ ಸಮರ್ಥಿತವಾಗುವುದು. ಈ ಪುರಾಣದಲ್ಲಿ ವಿಧಿಸಾರ (=ಬಿಂಬಿಸಾರ) ನು ೩೮ ವರ್ಷಕಾಲ ರಾಜ್ಯಭಾರಮಾಡಿ ರುವನೆಂದು ನಿರ್ದೇಶಿಸಲಾಗಿರುವುದನ್ನು ಗಮನಿಸಬಹುದು. ಆದರೆ ಇಷ್ಟರಿಂದಲೇ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರಕಾಲಾವಧಿಯ ಪ್ರಶ್ನೆಯು ನಿರಾಬಾಧವಾಗಿ ಬಗೆ ಹರಿಯಿತೆನ್ನುವಂತಿಲ್ಲ. ಬೌದ್ಧಆಮ್ನಾಯದ ಪ್ರಸಿದ್ಧ ಇತಿವೃತ್ತಕೃತಿಯಾದ 'ಮಹಾ ವಂಸೋ' ದಲ್ಲಿ ಬಿಂಬಿಸಾರನು ೫೨ ವರ್ಷಕಾಲ ರಾಜ್ಯಭಾರಮಾಡಿದನೆಂದು ಹೇಳ ಲಾಗಿದೆ. ಇಷ್ಟಲ್ಲದೆ ಸನ್ಮಾನ್ಯರಾದ ಜೈಜೆರ್‌ರವರು ಹಾಗೂ ಇತರ ಅನೇಕ ಇತಿ ಹಾಸಸಂಶೋಧಕವಿದ್ವಾಂಸರು, ಬಿಂಬಿಸಾರಾದಿ ಮಗಧರಾಜರ ರಾಜ್ಯಭಾರಕಾಲಾ ವಧಿಗಳ ವಿಷಯವಾಗಿ ಇತರ ಎಲ್ಲ ಆಧಾರಗಳಿಗಿಂತಲೂ ಬೌದ್ಧಆಮ್ನಾಯದ ಮಹಾ ವಂಸೋಕೃತಿಯ ಹೇಳಿಕೆಯು ಶ್ರದ್ಧಾರ್ಹವಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ ಈ ಅಭಿಪ್ರಾಯದೆದುರಿನಲ್ಲಿ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರಕಾಲಾ ವಧಿಯ ವಿಷಯವಾಗಿ ಮಹಾವಂಸೋಕೃತಿಯ ಮೇಲ್ಕಂಡ ಹೇಳಿಕೆಯನ್ನು ಕಡೆಗಣಿಸ ಲಾಗುವುದಿಲ್ಲ.

ಮಹಾವಂಸೋಕೃತಿಯಲ್ಲಿ ಬಿಂಬಿಸಾರನ ರಾಜ್ಯಭಾರಕಾಲಾವಧಿಯ ಪ್ರಸ್ತಾವ ದೊಡನೆ ಈ ಮುಂದಿನ ಐತಿಹ್ಯಾಂಶಗಳನ್ನು ಹೇಳಲಾಗಿದೆ.

'ಬಿಂಬಿಸಾರ ಮತ್ತು ಬೋಧಿಸತ್ವ ( = ಶ್ರೀ ಗೌತಮಬುದ್ಧ) ರು ಗೆಳೆಯರಾಗಿ ದ್ದರು. ಇಂತೆಯೇ ಅವರೀರ್ವರ ತಂದೆಯರೂ ಮಿತ್ರರಾಗಿದ್ದರು. ಬಿಂಬಿಸಾರ ಗಿಂತ ಐದು ವರ್ಷಗಳ ವಯೋಮಾನದಿಂದ ಹಿರಿಯನಿದ್ದ ಬೋಧಿಸತ್ವನು ತನ್ನ ೨೯ ನೇ ವಯಸ್ಸಿನಲ್ಲಿ ಗೃಹತ್ಯಾಗಮಾಡಿ ಪ್ರವ್ರಜಿತನಾದನು. ಅನಂತರ ಬೋಧಿ

ಸತ್ತನು ೬ ವರ್ಷಕಾಲ ತಪೋಧ್ಯಾನ ನಿರತನಾಗಿದ್ದು ಬೋಧಿಸಂಪನ್ನನಾದನು. ಹೀಗೆ ಬೋಧಿಸಂಪನ್ನನಾದ ಶ್ರೀ ಗೌತಮಬುದ್ಧನನ್ನು ಬಿಂಬಿಸಾರನು ಸಂದರ್ಶಿಸಿ ಧರ್ಮೋಪದೇಶಪಡೆದನು. ಈ ಸಮಯದಲ್ಲಿ ಶ್ರೀ ಗೌತಮಬುದ್ಧನು ೩೫ ವರ್ಷ ವಯೋಮಾನದವನಾಗಿದ್ದನು.

ಬಿಂಬಿಸಾರನು ೧೫ ವರ್ಷವಯೋಮಾನದವನಾಗಿರಲು ಅವನ ತಂದೆಯು ಅವನಿಗೆ ರಾಜಪಟ್ಟಕಟ್ಟಿದನು. ಇವನ ೧೬ ನೇ ವರ್ಷದ ರಾಜ್ಯಭಾರಸಮಯದಲ್ಲಿ ಶ್ರೀ ಗೌತಮಬುದ್ಧನು ಇವನಿಗೆ ಧರ್ಮೋಪದೇಶಮಾಡಿದನು. ಶ್ರೀ ಗೌತಮಬುದ್ಧನ ಸಂದರ್ಶನಪಡೆಯುವಮುನ್ನ ಬಿಂಬಿಸಾರನು ರಾಜ್ಯಾಭಿಷಿಕ್ತನಾಗಿ ೧೫ ವರ್ಷಗಳು ಕಳೆದಿದ್ದುವು. ಮುಂದೆ ಶ್ರೀ ಗೌತಮಬುದ್ಧನ ಧರ್ಮಪ್ರವರ್ತನ ಸಮಯದಲ್ಲಿ ಬಿಂಬಿ ಸಾರನು ೩೭ ವರ್ಷಕಾಲ ರಾಜ್ಯಭಾರಮಾಡಿದನು.

ಮೂರ್ಖನಾದ ಅಜಾತಶತ್ರುವು ತನ್ನ ತಂದೆಯಾದ ಬಿಂಬಿಸಾರನನ್ನು ಕೊಲೆ ಮಾಡಿ ಸಿಂಹಾಸನವನ್ನೇರಿ ೩೨ ವರ್ಷಕಾಲ ರಾಜ್ಯಭಾರಮಾಡಿದನು. ಇವನ ರಾಜ್ಯ ಭಾರದ ೮ ನೇ ವರ್ಷದಲ್ಲಿ ಶ್ರೀ ಗೌತಮಬುದ್ಧನು ನಿರ್ವಾಣಹೊಂದಿದನು. ಅಲ್ಲಿಂದ ಮುಂದೆ ಅಜಾತಶತ್ರುವು ೨೪ ವರ್ಷಕಾಲ ರಾಜ್ಯಭಾರಮಾಡಿದನು.' [ಮಹಾವಂಸೋ-ಪರಿಚ್ಛೇದ೨-ಪದ್ಯಸಂಖ್ಯೆ ೨೫ ರಿಂದ. ೩೯ ರವರೆವಿಗೆ].

ಮಹಾವಂಸೋಕೃತಿಯ ಈ ಮೇಲ್ಕಂಡ ಐತಿಹ್ಯದನುಗುಣವಾಗಿ ಬಿಂಬಿಸಾರನು ತನ್ನ ೧೫ ನೇ ವರ್ಷದ ವಯಸ್ಸಿನಲ್ಲಿ ರಾಜ್ಯಭಾರಾಧಿಷ್ಠಿತನಾಗಿದ್ದು ಮುಂದೆ ೫೨ ವರ್ಷಕಾಲ ರಾಜ್ಯಭಾರಮಾಡಿರುವನೆಂದು ವ್ಯಕ್ತವಾಗುವುದು. ಆದರೆ ಬಿಂಬಿಸಾರನು ತನ್ನ ೧೫ ನೇ ವರ್ಷದ ವಯೋಮಾನದಲ್ಲಿ ರಾಜ್ಯಭಾರಾಧಿಷ್ಠಿತನಾದನೆಂಬ ಮಹಾ ವಂಸೋಕೃತಿಯ ಮೇಲ್ಕಂಡ ಐತಿಹ್ಯಾಂಶವು ಜೈನಸಂಪ್ರದಾಯ ಚಿಲಾತಪುತ್ರಕಥೆ ಮತ್ತು ಶ್ರೇಣಿಕಕಥಾಯತ್ತವಾದ ಐತಿಹ್ಯದಿಂದ ಪ್ರತಿರೋಧಿತವಾಗುವುದು.

ಪೂರ್ವೋಲ್ಲಿಖಿತವಾದ ಚಿಲಾತಪುತ್ರಕಥೆ ಮತ್ತು ಶ್ರೇಣಿಕ ಕಥಾಯತ್ತವಾದ ಐತಿಹ್ಯದಂತೆ ಶ್ರೇಣಿಕ-ಬಿಂಬಿಸಾರನು ತನ್ನ ತಂದೆಯಿಂದ ವಿಧಿಸಲ್ಪಟ್ಟ ಶಿಕ್ಷೆಯನುಸಾರ ದೇಶಭ್ರಷ್ಟನಾಗಿ ಕನಿಷ್ಟಮಿತಿಯಿಂದ ೧೨ ವರ್ಷಕಾಲ ವೇಣಾತಡಾಗಗ್ರಾಮದಲ್ಲಿ ವಾಸಿಸಿದ್ದು ತದನಂತರ ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾಗಿದ್ದಾನೆ. ಇದರಂತೆ ಶ್ರೇಣಿಕ-ಬಿಂಬಿಸಾರನು ತಂದೆಯ ಅಪ್ಪಣೆಯನುಸಾರ ಸ್ವದೇಶತ್ಯಾಗಮಾಡಿದ ಸಮಯ ದಲ್ಲಿ ಯುವಕಾವಸ್ಥೆಯಲ್ಲಿದ್ದನೆಂದೂ ಮತ್ತು ಈ ಸಮಯದಿಂದ ೧೨ ವರ್ಷಗಳ ತರು ವಾಯ ಮಗಧರಾಜ್ಯಭಾರಾಧಿಷ್ಠಿತನಾದ ಸಮಯದಲ್ಲಿ ಇವನು ಸುಮಾರು ೨೮ ರಿಂದ ೩೦ ವರ್ಷಗಳ ಮಧ್ಯಂತರ ವಯೋಮಾನದವನಿದ್ದಿರಬೇಕೆಂದು ಗ್ರಹಿಸಲವಕಾಶವಾಗು ವುದು. ಈ ಗ್ರಹಿಕೆಯು, ಶ್ರೇಣಿಕ-ಬಿಂಬಿಸಾರನು ತನ್ನ ೧೫ ನೇ ವಯಸ್ಸಿನಲ್ಲಿ ರಾಜ್ಯ ಭಾರಾಧಿಷ್ಠಿತನಾದನೆಂಬ ಐತಿಹ್ಯವೊಂದರ ಹೊರತಾಗಿ ಮಹಾವಂಸೋಕೃತಿಯ

ಇತರ ಎಲ್ಲ ಮೇಲ್ಕಂಡ ಐತಿಹ್ಯಗಳಿಗೆ ಬಾಧಕವಾಗುವುದಿಲ್ಲವೆಂಬುದಲ್ಲದೆ, ಶ್ರೇಣಿಕ-ಬಿಂಬಿಸಾರನು ೩೮ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಈ ಹಿಂದೆ ಪುರಾಣೋಕ್ತಿಯಾಧಾರದಿಂದ ನಿರ್ಣಯಿಸಲಾಗಿರುವ ಐತಿಹ್ಯಾಂಶದ ಪೂರಕವೂ ಆಗುವುದು.

ಮಹಾವಂಸೋಕ್ತಿಯು ಹೇಳಿಕೆಯಿಂದ ಶ್ರೇಣಿಕ-ಬಿಂಬಿಸಾರನು ತನ್ನ (೧೫ + ೫೨ =) ೬೭ ನೇ ವಯಸ್ಸಿನಲ್ಲಿ ಮೃತನಾಗಿರುವನೆಂದು ಸೂಚಿತವಾಗುವುದು. ಪುರಾಣೋಕ್ತಿಯಾಧಾರದಿಂದ ನಿರ್ಣಯಿಸಲಾಗಿರುವಂತೆ ಶ್ರೇಣಿಕ-ಬಿಂಬಿಸಾರನು ೩೮ ವರ್ಷಕಾಲ ರಾಜ್ಯಭಾರಮಾಡಿದ್ದಾನೆಂದಾದರೆ ಇವನು ತನ್ನ (೬೭ – ೩೮ =) ೨೯ ನೇ ವಯಸ್ಸಿನಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಫಲಿತವಾಗುವುದು. ಈ ಫಲಿತಾಂಶವು ಪೂರ್ವೋಕ್ತವಾದ ಜೈನ ಸಂಪ್ರದಾಯದ ಐತಿಹ್ಯದೊಡನೆ ನಿರಾಬಾಧವಾಗಿ ಸಮನ್ವಿತವಾಗುವುದು. ಇಷ್ಟಲ್ಲದೆ ಶ್ರೇಣಿಕ-ಬಿಂಬಿಸಾರನಿಗಿಂತ ಶ್ರೀ ಗೌತಮಬುದ್ಧನು ೫ ವರ್ಷ ವಯೋಮಾನದಿಂದ ಹಿರಿಯನಿದ್ದನೆಂಬ ಐತಿಹ್ಯದನುಗುಣವಾಗಿ, ಶ್ರೇಣಿಕ-ಬಿಂಬಿಸಾರನು ರಾಜ್ಯಾಧಿಷ್ಠಿತನಾದ ವರ್ಷದಲ್ಲಿ ಶ್ರೀ ಗೌತಮಬುದ್ಧನು ಬೋಧಿಸಂಪನ್ನನಾಗಿರುವನೆಂದು ಮತ್ತು ಆ ಸಮಯದಿಂದ ೧ ವರ್ಷದ ತರುವಾಯ ಶ್ರೇಣಿಕ-ಬಿಂಬಿಸಾರನು ಶ್ರೀ ಗೌತಮಬುದ್ಧನ ಸಂದರ್ಶನಮಾಡಿ ಧರ್ಮೋಪದೇಶಪಡೆದಿರುವನೆಂದು ವ್ಯಕ್ತವಾಗುವುದು. ಹೀಗೆ ಈ ಮೇಲೆ ಹೇಳಲಾಗಿರುವಂತೆ ಶ್ರೇಣಿಕ-ಬಿಂಬಿಸಾರನ ಐತಿಹ್ಯವಿಷಯವಾಗಿ, ಇವನು ತನ್ನ ೧೫ ನೇ ವಯಸ್ಸಿನಲ್ಲಿ ರಾಜ್ಯಭಾರಾಧಿಷ್ಠಿತನಾದನೆಂಬ ಮಹಾವಂಸೋಕ್ತಿಯ ಐತಿಹ್ಯ ಒಂದರ ಹೊರತಾಗಿ, ಇತರ ಎಲ್ಲ ಬೌದ್ಧ, ಜೈನ ಮತ್ತು ವೈದಿಕ ಆಮ್ನಾಯಗಳ ಐತಿಹ್ಯಗಳೂ ಸಮನ್ವಿತವಾಗುವುವು.

ಶ್ರೀ ಗೌತಮಬುದ್ಧ, ಶ್ರೀ ವೀರತೀರ್ಥಂಕರ ಮತ್ತು ಶ್ರೇಣಿಕ-ಬಿಂಬಿಸಾರರು ಸಮಕಾಲೀನರಾಗಿದ್ದುದರಿಂದ ಇವರ ಜೀವತಸಂಬಂಧಿ ಐತಿಹ್ಯಾಂಶಗಳು ಪರಸ್ಪರ ಆಶ್ರಿತವಾದವುಗಳಾಗಿವೆ. ಈ ಮೂವರಲ್ಲಿ ಯಾರೊಬ್ಬರಿಗೆ ಸಂಬಂಧಿಸಿದ ಐತಿಹ್ಯಾಂಶವು ಸಂದಿಗ್ಧತಾವಶವಾದರೂ ಇತರರೀರ್ವರಿಗೆ ಸಂಬಂಧಿಸಿದ ಐತಿಹ್ಯಾಂಶಗಳು ಸಂಧಿಗ್ಧತಾವಶವಾಗಿ ಉಳಿಯುವಂತಾಗುವುವು. ಅಂತಯೇ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರಾರಂಭಸಮಯದ ವಿಚಾರವಾಗಿ ಈ ಮೇಲೆ ನಿರ್ಣಯಿಸಲಾಗಿರುವ ಅಂಶವನ್ನು ಪುನಃ ಸಂದಿಗ್ಧತಾವಶವಾಗಿಸಿ ಸಮಸ್ಯಾತ್ಮಕವಾಗುಳಿಸುವಂತಿರುವ ಬೌದ್ಧ ಆಮ್ನಾಯದ ಮತ್ತೆರಡು ಐತಿಹ್ಯಾಂಶಗಳನ್ನು ಈಗ ಗಮನಿಸಬೇಕಾಗಿದೆ.

'ದುಲ್ವ' ಕೃತಿಯಾಧಾರದಂತೆ ಶ್ರೀ ಗೌತಮಬುದ್ಧನು ಜನಿಸಿದಂದೇ ಪ್ರದ್ಯೋತನು ಜನಿಸಿದನೆಂದು ಮತ್ತು ಶ್ರೀ ಗೌತಮಬುದ್ಧನು ಬೋಧಿಸಂಪನ್ನನಾದಂದು ಪ್ರದ್ಯೋತನು ಉಜ್ಜಯಿನಿಯಲ್ಲಿ ರಾಜ್ಯಭಾರಾಧಿಷ್ಠಿತನಾದನೆಂದು. ಪಾಲಿಡಿಕ್ಸನರಿಯಲ್ಲಿ ಹೇಳಲಾಗಿರುವುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಮಹಾವಂಸೋಕ್ತಿಯು

ಹೇಳಿಕೆಯಂತೆ ಶ್ರೀ ಗೌತಮಬುದ್ಧನು ತನ್ನ ೩೪ ನೇ ವಯಸ್ಸಿನಲ್ಲಿ ಬೋಧಿಸಂಪನ್ನನಾಗಿರುವನಾದ್ದರಿಂದ, ಇದೇ ಸಮಯದಲ್ಲಿ ಪ್ರದ್ಯೋತನು ಉಜ್ಜಯಿನಿಯಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಗ್ರಹಿಸಬೇಕಾಗುವುದು. ಪ್ರದ್ಯೋತನು ೨೩ ವರ್ಷ ಕಾಲ ರಾಜ್ಯಭಾರಮಾಡಿದನೆಂದು ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಹೇಳಲಾಗಿದೆ. ಇದರಂತೆ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರವು ಅಂತ್ಯಗೊಳ್ಳುವ (೩೮ – ೨೩ =) ೧೫ ವರ್ಷಗಳ ಮುನ್ನವೇ ಪ್ರದ್ಯೋತನ ರಾಜ್ಯಭಾರವು ಅಂತ್ಯಗೊಂಡಿದೆಯೆಂದು ನಿರ್ದೇಶಿತವಾದಂತಾಗುವುದು. ಆದರೆ ಈ ನಿರ್ದೇಶನದ ವಿರುದ್ಧವಾಗಿ ಉಜ್ಜಯಿನೀ ರಾಜ್ಯಾಧಿಪನಾದ ಪ್ರದ್ಯೋತನು, ಬಿಂಬಿಸಾರನ ಸುತನಾದ ಅಜಾತಶತ್ರುವಿನ ರಾಜ್ಯಭಾರವು ಆರಂಭವಾದ ಅನಂತರವೂ ಸ್ವಲ್ಪಕಾಲ ಪರ್ಯಂತ ರಾಜ್ಯಭಾರಮಾಡುತ್ತಿದ್ದನೆಂದು ಬೌದ್ಧ ಆಮ್ನಾಯದ ಹೇಳಿಕೆಯಿಂದಲೇ ವ್ಯಕ್ತವಾಗುವುದು. ಹೀಗೆ ದುಲ್ವಕೃತಿಯ ಪ್ರದ್ಯೋತನ ಐತಿಹ್ಯವು ಉಜ್ಜಯಿನಿಯ ಪ್ರದ್ಯೋತ ರಾಜನ ಐತಿಹ್ಯದೊಡನೆ ಸಮನ್ವಿತವಾಗುವುದಿಲ್ಲವಾದ್ದರಿಂದ. ಮೂಲತಃ ಈ ಐತಿಹ್ಯವು ಹಿಂದೆ ಉಲ್ಲೇಖಿಸಿರುವ ಕಥೆಗಳಲ್ಲಾಗಿರುವಂತೆ ಮಗಧರಾಜನಾದ ಚಿಲಾತಪುತ್ರ-ಪ್ರದ್ಯೋತನ ಐತಿಹ್ಯದೊಡನೆ ಸಂಬಂಧಿತವಾಗಿರಬಹುದೆಂಬ ಪರಿಭಾವನೆಗೆಡೆ ಮಾಡುವುದು. ಚಿಲಾತಪುತ್ರಕಥೆಯ ಐತಿಹ್ಯದಂತೆ, ರಾಜಗೃಹನಗರದಿಂದ ಹೊರಗಟ್ಟಲ್ಪಟ್ಟ ಚಿಲಾತಪುತ್ರನು ತನ್ನ ಮಾತಾಮಹನ ಬಳಿ ಹೋಗಿ ತನ್ನದೇ ಆದ ರಾಜ್ಯಭಾರವನ್ನು ಕಟ್ಟಿಕೊಂಡಿದ್ದಾನೆ. ಆದ್ದರಿಂದ ಶ್ರೇಣಿಕ-ಬಿಂಬಿಸಾರನು ರಾಜಗೃಹನಗರದಲ್ಲಿ ಅಭಿಷಿಕ್ತನಾದ ವರ್ಷವೇ ಚಿಲಾತಪುತ್ರ-ಪ್ರದ್ಯೋತನು ಮಾತಾಮಹನ ಸಹಾಯದಿಂದ ರಚಿತವಾದ ತನ್ನ ಸ್ವತಂತ್ರ ರಾಜ್ಯದಲ್ಲಿ ಅಭಿಷಿಕ್ತನಾಗಿರುವನೆಂದು ಮತ್ತು ಇವನು ಅಭಿಷಿಕ್ತನಾದ ದಿನದಂದೇ ಶ್ರೀ ಗೌತಮಬುದ್ಧನು ಬೋಧಿಸಂಪನ್ನನಾಗಿರುವನೆಂದು ಗ್ರಹಿಸಲವಕಾಶವಾಗುವುದು.

ಶ್ರೀ ಗೌತಮಬುದ್ಧನು ಗೃಹತ್ಯಾಗಮಾಡಿದ ಬಳಿಕ ಅನುಕ್ರಮವಾಗಿ ಆಳಾರ ಕಾಲಾಮ ಮತ್ತು ಉದ್ದಕರಾಮಪುತ್ತರ ಬಳಿ ಧ್ಯಾನಮಾರ್ಗವನ್ನು ಅಭ್ಯಸಿಸಿ ತದನಂತರ, ಶ್ರಮಣಪಂಥದ ತತ್ವವಿಚಾರವನ್ನು ತಿಳಿಯಲೋಸುಗ, ರಾಜಗೃಹನಗರಕ್ಕೆ ಬಂದನೆಂದು ಬೌದ್ಧಆಗಮಕೋವಿದರಾದ ಸನ್ಮಾನ್ಯ ಧರ್ಮಾನಂದಕೋಸಾಂಬಿಯವರು ಹೇಳಿದ್ದಾರೆ. [ಭಗವಾನ್‌ಬುದ್ಧ-ಕನ್ನಡಾನುವಾದ-ಪು. ಸಂ. ೧೨೮-೧೩೦]. ಹೀಗೆ ರಾಜಗೃಹನಗರಕ್ಕೆ ಬಂದ ಶ್ರೀಗೌತಮಬುದ್ಧನನ್ನು ಬಿಂಬಿಸಾರನು ಸಂದರ್ಶಿಸಿ, " ನೀನು ತುಂಬು ಹರೆಯದ ತರುಣನಾಗಿರುವೆ, ಮನುಷ್ಯನ ಪ್ರಥಮ ವಯಸ್ಸಿನಲ್ಲಿಯೆಯಿರುವೆ, ಕುಲೀನಕ್ಷತ್ರಿಯರಂತೆ ನಿನ್ನ ಕಾಂತಿಯೂ ಅಂತ್ಯಂತವಾಗಿ ಹೊಳೆಯುತ್ತಿದೆ, ಆನೆಗಳ ಸಮೂಹದಿಂದೊಡಗೂಡಿ ನನ್ನ ಸೈನ್ಯಕ್ಕೆ ಶೋಭೆಯನ್ನುಂಟುಮಾಡು, ಸಂಪತ್ತನ್ನು ಕೊಡುವೆ, ಅದನ್ನು ಉಪಭೋಗಿಸು; ಈಗ ನಿನ್ನ ಜಾತಿಯಾವುದೆಂಬದನ್ನು ನನಗೆ ಹೇಳು " ಎಂದು ಪ್ರಶ್ನಿಸಿದನೆಂದು ಸುತ್ತನಿಪಾತದ ಪಬ್ಬಜ್ಜಾಸುತ್ತದಲ್ಲಿ

ವರ್ಣಿಸಿರುವುದನ್ನು ಸನ್ಮಾನ್ಯ ಧರ್ಮಾನಂದ ಕೋಸಾಂಬಿಯವರು ಉಲ್ಲೇಖಿಸಿದ್ದಾರೆ. (ಪೂರ್ವಸೂಚಿತ ಕೃತಿ : ಪು. ಸಂ. ೧೩೦-೧೩೨) ಇದರಂತೆ ಶ್ರೀ ಗೌತಮಬುದ್ಧನು, ಧ್ಯಾನಾಚರಣೆಯ ಮೂಲಕ ಬೋಧಿಸಂಪನ್ನನಾಗಿ, ಬುದ್ಧತ್ವವನ್ನು ಪಡೆಯುವ ಮುನ್ನವೇ, ರಾಜಗೃಹನಗರದಲ್ಲಿ ರಾಜನಾಗಿದ್ದ ಬಿಂಬಿಸಾರನು ಅವನ ಸಂದರ್ಶನಪಡೆ ದಿದ್ದನೆಂದು ನಿರ್ದೇಶಿತವಾಗುವುದು. ಇದರಿಂದ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರವು ೩೮ ವರ್ಷಗಳಿಗಿಂತಲೂ ಹೆಚ್ಚು ಸಮಯದ ಅವಧಿಯುಳ್ಳದ್ದಾಗಿರಬೇಕೆಂಬ ಗ್ರಹಿಕೆಗವ ಕಾಶವಾಗುವುದು. ಬಹುಪ್ರಾಚೀನಕಾಲದಲ್ಲಿ ಅಂದರೆ, ಸಾಮ್ರಾಟ್ ಅಶೋಕ ಚಕ್ರ ವರ್ತಿಯಕಾಲದಲ್ಲಿ ರಚಿತವಾಗಿರುವ ಬೌದ್ಧ ಆಗಮಗ್ರಂಥಗಳಲ್ಲಿ ಶ್ರೀ ಗೌತಮಬುದ್ಧನ ಜೀವನ್ಚರಿತ್ರೆಕ್ಕೆ ಸಂಬಂಧಿಸಿದಂತೆ ಉಕ್ತವಾಗಿರುವ ಅಂಶಗಳ ತಥ್ಯವನ್ನು ಯುಕ್ತ ಆಧಾರಗಳ ವಿನಾ ಪ್ರಶ್ನಿಸುವುದು ಅಸಮಂಜಸವೆನಿಸುವುದು. ಆದರೆ ಈ ಬೌದ್ಧ ಆಗಮಗ್ರಂಥಗಳಲ್ಲಿಯೂ ಕಾಲಾಂತರದಲ್ಲಿ ರಚಿತವಾದ ಅನೇಕ ಸುತ್ತಗಳು ಸೇರಿವೆ ಯೆಂದು ಸನ್ಮಾನ್ಯ ಧರ್ಮಾನಂದಕೋಸಾಂಬಿಯವರ ಈ ಮುಂದಿನ ಹೇಳಿಕೆಯಿಂದ ವ್ಯಕ್ತವಾಗುವುದು. 'ವಿನಯ ಪಿಟಕಕ್ಕಿಂತ ಸುತ್ತಪಿಟಕವು ಹೆಚ್ಚುಪ್ರಾಚೀನವಾಗಿದೆ ; ಆದರೂ ಆದರಲ್ಲಿ ಹಿಂದಿನಿಂದ ಕೆಲವು ಸುತ್ತಗಳನ್ನು ಸೇರಿಸಲಾಗಿದೆ...........' [ಪೂ. ಸೂ.ಕೃ. ಪು. ಸಂ. ೧೯೦] ಇನ್ನು ಪೂರ್ವೋಕ್ತ ಪಬ್ಬಜ್ಜಾಸುತ್ತವು ಒಬ್ಬ ಅಜ್ಞಾತ ಕವಿಯಿಂದ ರಚಿತವಾದುದಾಗಿದೆಯೆಂದು ಸನ್ಮಾನ್ಯ ಧರ್ಮಾನಂದಕೋಸಾಂಬಿಯವರು ಹೇಳಿದ್ದಾರಲ್ಲದೆ, ಈ ಸುತ್ತದ ಮೂರನೆಯ ಗಾಥೆಯಿಲ್ಲಿ ಹೇಳಿರುವ ವಿಷಯವು ಅಕ್ರ ಮವಿರುವುದೆಂದು ಇವರ ಅಭಿಪ್ರಾಯವು ಧ್ವನಿಗೊಂಡಿದೆ. ಇಷ್ಟಲ್ಲದೆ ಈ ಸುತ್ತದಲ್ಲಿ ಹೇಳಿರುವಂತೆ, ಬಿಂಬಿಸಾರನು ಬೋಧಿಸತ್ವನನ್ನು "ನಿನ್ನವಂಶವಾವುದು" ಎಂದು ಪ್ರಶ್ನಿಸಿರುವುದರಿಂದ ಆ ಸಮಯದಲ್ಲಿ ಬಿಂಬಿಸಾರನಿಗೆ, ಬೋಧಿಸತ್ವಗೌತಮನ ಪರಿ ಚಯವಿದ್ದಿರಲಿಲ್ಲವೆಂದು ಸೂಚಿತವಾಗುವುದು. ಆದರೆ ಮಹಾವಂಸೋಕ್ತಿಕಾರನು ಬಿಂಬಿಸಾರ ಮತ್ತು ಶ್ರೀ ಗೌತಮಬುದ್ಧರು ಆಬಾಲ್ಯ ಗೆಳೆಯರಾಗಿದ್ದರೆಂದು ಹೇಳಿರು ವನಲ್ಲದೆ, ಇವರೀರ್ವರ ತಂದೆಯರೂ ಗೆಳೆಯರಾಗಿದ್ದರೆಂದು ಹೇಳಿದ್ದಾನೆ. ಹೀಗೆ ಪಬ್ಬಜ್ಜಾಸುತ್ತದ ಮತ್ತು ಮಹಾವಂಸೋಕ್ತಿಯ ಹೇಳಿಕೆಗಳು ಪರಸ್ಪರ ವಿರೋಧಾ ತ್ಮಕವಾಗಿರುವುದು ಸ್ಪಷ್ಟವಿದೆ. ಪಬ್ಬಜ್ಜಾಸುತ್ತವು ಪ್ರಾಚೀನ ಕಾಲದಲ್ಲಿಯೇ ರಚಿತವಾಗಿರುವ ಅಂಶವು, ಪ್ರಾಚೀನ ಆಧಾರಗಳನ್ನು ಶೋಧಿಸಿ ತನ್ನ ಕೃತಿಯನ್ನು ರಚಿಸಿರುವ ಮಹಾವಂಸೋಕ್ತಿಕಾರನ ಗಮನಕ್ಕೆ ಬಂದಿಲ್ಲವೆಂದು ಹೇಳಲಾಗು ವುದಿಲ್ಲ. ಇನ್ನು ಬೋಧಿಸತ್ವ ಅವಸ್ಥೆಯಲ್ಲಿದ್ದ ಶ್ರೀ ಗೌತಮಬುದ್ಧನನ್ನು ಬಿಂಬಿ ಸಾರನು ಸಂದರ್ಶಿಸಿದ ವಿಷಯದಲ್ಲಿ ಮಹಾವಂಸೋಕ್ತಿಕಾರನು ಯಾವರೀತಿಯ ಸೂಚನೆಯನ್ನೂ ಇತ್ತಿಲ್ಲವೆಂಬುದಲ್ಲದೆ, ಪಬ್ಬಜ್ಜಾಸುತ್ತದ ಹೊರತಾಗಿ ಬೇರೆಡೆಯಲ್ಲಿ ಈ ಪ್ರಸಂಗದ ಸೂಚನೆ ಇರುವಂತೆ ಕಂಡುಬರುವುದಿಲ್ಲ. ಇದರಿಂದ ಶ್ರೀ ಗೌತಮ ಬುದ್ಧನು ಬೋಧಿಸತ್ವಾವಸ್ಥೆಯಲ್ಲಿದ್ದ ಸಮಯದಲ್ಲಿಯೇ ಬಿಂಬಿಸಾರನು ಅವನನ್ನು

ಸಂದರ್ಶಿಸಿದ್ದನೆಂಬ ಪಬ್ಬಜ್ಜಾಸುತ್ತದ ಹೇಳಿಕೆಯ ತಥ್ಯವು ಪ್ರಶ್ನಾಯತ್ತವಾಗುವುದು. ಹೀಗೆ ಶಂಕಾಸ್ಪದವಾಗಿರುವ ಪಬ್ಬಜ್ಜಾಸುತ್ತದ ಹೇಳಿಕೆಯೂ ಇತರ ಸುಸಂಗತ ಐತಿಹ್ಯಾಧಾರಗಳಿಂದ ಸಿದ್ಧವಾದಲ್ಲದೆ, ಶ್ರೇಣಿಕ-ಬಿಂಬಿಸಾರನು ೩೮ ವರ್ಷಕಾಲರಾಜ್ಯಭಾರವಮಾಡಿರುವನೆಂಬ ಪೂರ್ವಪ್ರತಿಪಾದನೆಯೂ ಬಾಧಿತವಾಗುವುದಿಲ್ಲ. ಆದರಿಂದ ಬೃಹದ್ರಥರಾಜ್ಯಭಾರಪಶ್ಚಾತ್ ೫೦ ನೇ ವರ್ಷದಲ್ಲಿ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರವು ಅಂತ್ಯಗೊಂಡಿದ್ದು ತರುವಾಯ ಇವನ ಸುತನಾದ ಅಜಾತಶತ್ರುವು ರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ಫಲಿತವಾದಂತಾಗುವುದು.

ಶ್ರೀ ಗೌತಮಬುದ್ಧನ ಪರಿನಿರ್ವಾಣವೇ ಮೊದಲಾದ ಐತಿಹ್ಯಾಂಶಗಳು ಶ್ರೇಣಿಕ-ಬಿಂಬಿಸಾರ ಮತ್ತು ಅಜಾತಶತ್ರುಗಳ ಜೀವಿತೈತಿಹ್ಯಾಂಶಗಳೊಡನೆ ಸಂಕಲಿತವಾಗಿರುವಂತೆ ಶ್ರೀ ವೀರತೀರ್ಥಂಕರನ ಜೀವಿತೈತಿಹ್ಯಾಂಶಗಳೂ ಸಂಕಲಿತವಾಗಿವೆ. ಆದ್ದರಿಂದ ಈ ಅಂಶಗಳನ್ನು ಈ ಸಂದರ್ಭದಲ್ಲಿ ಪರಿಶೀಲಿಸಬೇಕಾದ ಆವಶ್ಯಕತೆಯಿದೆ.

ಶ್ರೀ ಗೌತಮಬುದ್ಧನು ನಿರ್ವಾಣಹೊಂದುವ ಮುನ್ನವೇ ಶ್ರೀ ವೀರತೀರ್ಥಂಕರ (=ನಿಗಂಠನಾತಪುತ್ತ) ನು ನಿರ್ವಾಣ ಹೊಂದಿದನೆಂದು ಚರಿತ್ರಕಾರರು ಬೌದ್ಧಮತದ ಆಗಮೋಕ್ತಿಗಳಾಧಾರದಿಂದ ನಿರ್ಣಯಿಸಿದ್ದಾರೆ. ಆದರೆ ಇವರಿಬ್ಬರ ಪರಿನಿರ್ವಾಣ ಸಮಯಗಳ ಮಧ್ಯಂತರ ಸಮಯದ ಪ್ರಶ್ನೆಯು ಬಗೆಹರಿಯದೆ ಉಳಿದಿದೆ.

ಶ್ರೀ ವೀರತೀರ್ಥಂಕರನ ನಿರ್ವಾಣಪಶ್ಚಾತ್ ೬೦ ವರ್ಷಗಳ ತರುವಾಯದಲ್ಲಿ ನಂದನು ಮಗಧರಾಜನಾಗಿ ಅಭಿಷಿಕ್ತನಾದನೆಂದು ಜೈನ ಆಮ್ನಾಯದ ಐತಿಹ್ಯವಿದೆ. [ಪರಿಶಿಷ್ಟಪರ್ವ—ಸರ್ಗ-೬-ಪದ್ಯ-ಸಂ. ೨೪೩] ಬೃಹದ್ರಥರಾಜ್ಯಭಾರಪಶ್ಚಾತ್ ೫೦ ವರ್ಷಗಳ ತರುವಾಯದಲ್ಲಿ ಅಭಿಷಿಕ್ತನಾಗಿರುವ ಅಜಾತಶತ್ರುವಿನ ರಾಜ್ಯಭಾರಾರಂಭ ಸಮಯದಿಂದ [೧೧೫ – ೫೦=] ೬೫ ವರ್ಷಗಳ ತರುವಾಯದಲ್ಲಿ ನಂದರಾಜನು ಅಭಿಷಿಕ್ತನಾಗಿರುವನೆಂದು ಪರಿಗಣಿತವಾಗುವುದು. ಇದರಂತೆ ಶ್ರೀ ವೀರತೀರ್ಥಂಕರನು ಅಜಾತಶತ್ರುವಿನ ರಾಜ್ಯಭಾರಾರಂಭದ (೬೫—೬೦ =) ೫ ನೇ ವರ್ಷದ ತರುವಾಯದಲ್ಲಿ ನಿರ್ವಾಣಹೊಂದಿರುವನೆಂದು ಫಲಿತವಾಗುವುದು. ಶ್ರೀ ಗೌತಮಬುದ್ಧನು ಅಜಾತಶತ್ರುವಿನ ರಾಜ್ಯಭಾರದ ೮ ನೇ ವರ್ಷದಲ್ಲಿ ನಿರ್ವಾಣಹೊಂದಿರುವನೆಂಬ ಬೌದ್ಧಆಮ್ನಾಯದ ಐತಿಹ್ಯವಿದೆ. [ಮಹಾವಂಸೋ ಪರಿಚ್ಛೇದ ೨] ಇದರಂತೆ ಶ್ರೀ ವೀರತೀರ್ಥಂಕರ ಮತ್ತು ಶ್ರೀ ಗೌತಮಬುದ್ಧರ ಪರಿನಿರ್ವಾಣಸಮಯಗಳ ಮಧ್ಯೆ ಗರಿಷ್ಠಮಿತಿಯಿಂದ (೮—೫=) ೩ ವರ್ಷಗಳ ಅಂತರವಿರಬೇಕೆಂದು ಸ್ಫುಟಗೊಳ್ಳುವುದು. ಆದರೆ ಈ ಪರಿನಿರ್ವಾಣಸಮಯಗಳ ಮಧ್ಯೆ ಪೂರ್ಣ ೩ ವರ್ಷಗಳ ಅಂತರವಿರದೆ, ಎರಡುವರೆ ವರ್ಷಗಳ ಅಂತರಮಾತ್ರವಿರುವುದೆಂದು ಹೇಳಲವಕಾಶವಿದೆ : ಶ್ರೀ ವೀರತೀರ್ಥಂಕರನು ಕಾರ್ತಿಕಮಾಸದಲ್ಲಿಯೂ, ಶ್ರೀ ಗೌತಮಬುದ್ಧನು ವೈಶಾಖಮಾಸದಲ್ಲಿಯೂ ಪರಿನಿರ್ವಾಣಹೊಂದಿದರೆಂದು ಜೈನ ಮತ್ತು ಬೌದ್ಧಮತ ಸಂಪ್ರದಾಯಗಳ

ಉಕ್ತಿಗಳಾಧಾರವಿದೆ. ಕಾರ್ತಿಕ ಮತ್ತು ವೈಶಾಖಮಾಸಗಳ ಮಧ್ಯೆ ಆರುತಿಂಗಳು ಗಳ ಅಂತರವಿರುವುದರಿಂದ, ಶ್ರೀ ವೀರತೀರ್ಥಂಕರ ಮತ್ತು ಶ್ರೀ ಗೌತಮಬುದ್ಧರ ಪರಿ ನಿರ್ವಾಣಸಮಯಗಳ ಮಧ್ಯೆ ಎರಡುವರೆ ವರ್ಷಗಳ ಅಂತರವಿದೆಯೆಂದು ಫಲಿತವಾಗುವುದು.

ಶ್ರೀ ಗೌತಮಬುದ್ಧನ ಜನನ, ಬೋಧಿಲಾಭ ಮತ್ತು ನಿರ್ವಾಣ ಪ್ರಸಂಗ ಗಳೆಲ್ಲವೂ ವೈಶಾಖಮಾಸದಲ್ಲಿಯೇ ಸಂಭವಿಸಿದುವೆಂಬ ಬೌದ್ಧಮತ ಸಂಪ್ರದಾಯದ ಹೇಳಿಕೆಯಿದೆ. ಇದರಂತೆ ವೈಶಾಖಮಾಸದಲ್ಲಿ ಜನಿಸಿದ ಶ್ರೀ ಗೌತಮಬುದ್ಧನು ತನ್ನ ೮೦ ನೇ ವಯಸ್ಸಿನ ಪೂರ್ಣತೆಯ ವೈಶಾಖಮಾಸದಲ್ಲಿ ನಿರ್ವಾಣಹೊಂದಿರುವನೆಂದು ಸ್ಫುಟವಾಗುವುದು. ಇಂತೆಯೇ ಚೈತ್ರಮಾಸದಲ್ಲಿ ಜನಿಸಿದ ಶ್ರೀ ವೀರತೀರ್ಥಂಕರನು ತನ್ನ ೭೨ ನೇ ವಯೋಮಾನದಲ್ಲಿ ಕಾರ್ತಿಕಮಾಸದಲ್ಲಿ ನಿರ್ವಾಣಹೊಂದಿರುವನೆಂದು ಜೈನ ಆಗಮೋಕ್ತಿಗಳಾಧಾರದಿಂದ ನಿರ್ಣೀತವಾಗಿದೆ. ಶ್ರೀ ವೀರತೀರ್ಥಂಕರನ ನಿರ್ವಾಣಸಮಯದಲ್ಲಿ ಶ್ರೀ ಗೌತಮಬುದ್ಧನು (೮೦ ವ. – ೨ ವ. ೬ ತಿಂ.=) ಎಪ್ಪತ್ತೇಳುವರೆ ವರ್ಷ ವಯೋಮಾನದವನಾಗಿದ್ದನು. ಇದರಂತೆ ಶ್ರೀ ಗೌತಮ ಬುದ್ಧನಿಗಿಂತ ಶ್ರೀ ವೀರತೀರ್ಥಂಕರನು (೭೭ ವ. ೬ ತಿಂ. – ೭೧ ವ. ೭ ತಿಂ.=) ೫ ವರ್ಷ ೧೧ ತಿಂಗಳು (=೬ ವರ್ಷಗಳ) ವಯೋಮಾನದಿಂದ ಕಿರಿಯನಿದ್ದನೆಂದು ಫಲಿತವಾಗುವುದು. ಇಂತೆಯೇ ಹಿಂದೆ ವಿವರಿಸಲಾಗಿರುವಂತೆ ಶ್ರೀ ಗೌತಮ ಬುದ್ಧನು ತನ್ನ ೩೫ ನೇ ವಯಸ್ಸಿನಲ್ಲಿ ಬೋಧಿಸಂಪನ್ನನಾಗಿ ಧರ್ಮಪ್ರವರ್ತನೆ ಮಾಡಿ ದನಾಗಿ ಈ ಸಮಯದಲ್ಲಿ ಶ್ರೀ ವೀರತೀರ್ಥಂಕರನು (೩೫ – ೬ =) ೨೯ ವರ್ಷ ವಯೋಮಾನದವನಾಗಿದ್ದನೆಂದು ಸ್ಫುಟವಾಗುವುದು. ಶ್ರೀ ವೀರತೀರ್ಥಂಕರನು ತನ್ನ ೩೦ ನೇ ವರ್ಷದ ವಯಸ್ಸಿನಲ್ಲಿ ಪ್ರವ್ರಜ್ಯೆಕೈಗೊಂಡನೆಂಬ ಜೈನಾಗಮದ ನಿಶ್ಚಿತ ಐತಿಹ್ಯವಿದೆ. ಇದರಂತೆ, ಶ್ರೀ ವೀರತೀರ್ಥಂಕರನು ಪ್ರವ್ರಜಿತನಾಗುವ ಸಮಯಕ್ಕೆ ಶ್ರೀ ಗೌತಮಬುದ್ಧನಿಂದ ಧರ್ಮಚಕ್ರಪ್ರವರ್ತನೆಯಾಗಿ ೧ ವರ್ಷವಾದರೂ ಸಂದಿದ್ದಿ ತೆಂದು ನಿಶ್ಚಿತವಾಗುವುದು. ಇಂತೆಯೇ ಶ್ರೀ ವೀರತೀರ್ಥಂಕರನು ತನ್ನ ೪೨ ನೇ ವಯ ಸ್ಸಿನಲ್ಲಿ ಧರ್ಮಪ್ರವರ್ತನದ ಶ್ರೀವಿಹಾರವನ್ನು ಆರಂಭಿಸಿದನಾದುದರಿಂದ ಈ ಸಮ ಯಕ್ಕೆ ಶ್ರೀ ಗೌತಮನಿಂದ ಧರ್ಮಚಕ್ರಪ್ರವರ್ತನೆಯಾಗಿ ಕನಿಷ್ಟಮಿತಿಯಿಂದ ೧೩ ವರ್ಷಗಳಾದರೂ ಸಂದಿದ್ದುವೆಂದು ಸ್ಥಿರಪಡುವುದು.

ಬೌದ್ಧಮತದ ಆಗಮಗ್ರಂಥಗಳ ಮತ್ತು ದೇವಸೇನಾಚಾರ್ಯರ ಕೃತಿಯ ಹೇಳಿಕೆಗಳಾಧಾರದಿಂದ ಶ್ರೀ ಗೌತಮಬುದ್ಧನು, ಬೋಧಿಸಂಪನ್ನನಾಗುವ ಮುನ್ನ ತನ್ನ ಸಾಧಕಾವಸ್ಥೆಯಲ್ಲಿ ನಿರ್ಗ್ರಂಥಧರ್ಮಾನುಯಾಯಿಯಾಗಿ ನಗ್ನಮುನಿಯಾಗಿದ್ದ ನೆಂದು ಹಿಂದೆ ಹೇಳಲಾಗಿದೆ. ಶ್ರೀ ವೀರತೀರ್ಥಂಕರನ ಪ್ರವ್ರಜ್ಯೆಯ ಸಮಯದ ಮುನ್ನ ವೇ ಶ್ರೀ ಗೌತಮಬುದ್ಧನು ಬೋಧಿಸಂಪನ್ನನಾಗಿ(ಬುದ್ಧತ್ವವನ್ನು ಪಡೆದು)ತನ್ನ ಧರ್ಮ

ಚಕ್ರಪ್ರವರ್ತನಮಾಡಿದ್ದನಾದುರಿಂದ, ತತ್ಕಾಲಪೂರ್ವದಲ್ಲಿಯೇ ನಿರ್ಗ್ರಂಥಯತಿಗಳಲ್ಲಿ ನಗ್ನವ್ರತಾಚರಣೆಯು ನಿಯಮವಿದ್ದಿತೆಂದು ನಿಶ್ಚಿತವಾಗುವುದು. ಆದ್ದರಿಂದ ಹಿಂದಿನ ತೀರ್ಥಂಕರರ ಕಾಲದಲ್ಲಿ ಆಚರಣೆಯಲ್ಲಿಲ್ಲದಿದ್ದ ನಗ್ನವ್ರತಾಚರಣೆಯನ್ನು, ನಿರ್ಗ್ರಂಥ ಯತಿಗಳಿಗೆ ಶ್ರೀ ವೀರತೀರ್ಥಂಕರನು ವಿಧಿಸಿದನೆಂಬ ಶ್ವೇತಾಂಬರ ಜೈನ ಆಗಮಗಳ ಹೇಳಿಕೆಯು ಚರಿತ್ರೆಯ ದೃಷ್ಟಿಯಿಂದ ಸುಸಂಗತವೆನಿಸುವುದಿಲ್ಲೆಂದು ಸ್ಪಷ್ಟವಾಗು ವುದು.

ಯಜ್ಞಯಾಗಗಳೇ ಮೊದಲಾದ ಕರ್ಮಕಾಂಡದ ಧರ್ಮವೆನಿಸಿ ನಡೆಯುತ್ತಿದ್ದ ಹಿಂಸೆ ಹಾಗೂ ಬದುಕಿನ ಹೆಜ್ಜೆ ಹೆಜ್ಜೆಯಲ್ಲಿಯೂ ಹಿಂಸೆಯ ನಿವಾರಣೆಯನ್ನುಪದೇಶಿಸಿದ ನಿರ್ಗ್ರಂಥಧರ್ಮದ ಅಹಿಂಸೆಗಳೆರಡರ ಮಧ್ಯವರ್ತಿಯಾದ ಮಾರ್ಗವನ್ನು ಉಪದೇಶಿಸಿದ ಶ್ರೀ ಗೌತಮಬುದ್ಧನಧರ್ಮವು ಅತಿಶೀಘ್ರರೀತಿಯಿಂದ ಜನರಮನ್ನಣೆಪಡೆದಿದ್ದಲ್ಲಿ ಆಶ್ಚ ರ್ಯವಿಲ್ಲ. ಶ್ರೀ ಗೌತಮಬುದ್ಧನ ಧರ್ಮಪ್ರಸಾರಕಾಲದಲ್ಲಿ ಅನೇಕ ಪಾರಿವ್ರಾಜಕರು ಮತ್ತು ನಿರ್ಗ್ರಂಥಧರ್ಮಾನುಯಾಯಿಗಳು ಶ್ರೀ ಗೌತಮಬುದ್ಧನ ಧರ್ಮಾನುಯಾಯಿ ಗಳಾಗಿ ಪರಿವರ್ತಿತರಾದರೆಂದು ಬೌದ್ಧಆಗಮಗ್ರಂಥಗಳ ಹೇಳಿಕೆಗಳಿಂದ ತಿಳಿದುಬರು ವುದು. ಬೌದ್ಧಆಗಮಗ್ರಂಥಗಳ ಈ ಹೇಳಿಕೆಗಳು, ಸನ್ಮಾನ್ಯ ಧರ್ಮಾನಂದಕೋಸಾಂ ಬಿಯವರ ಅಭಿಪ್ರಾಯದಂತೆ, ಉತ್ಪ್ರೇಕ್ಷಾಯುತವಾಗಿರಬಹುದೆಂದು ಹೇಳಲವಕಾಶವಿದೆ ಯಾದರೂ ಸರ್ವಥಾ ಅಸತ್ಯವೆಂದು ಹೇಳಲಾಗುವುದಿಲ್ಲ. ಇದರಿಂದ ಶ್ರೀ ಗೌತಮ ಬುದ್ಧನ ಧರ್ಮಚಕ್ರಪ್ರವರ್ತನಾನಂತರ ನಿರ್ಗ್ರಂಥಧರ್ಮಕ್ಕೆ ಅತಿಶಯವಾಗಿ ಗ್ಲಾನಿ ಯುಂಟಾಗಿದೆಯೆಂಬುದರಲ್ಲಿ ಸಂಶಯವುಳಿಯುವುದಿಲ್ಲ. ಆದರೆ ಶ್ರೀ ವೀರತೀರ್ಥಂಕರನ ಧರ್ಮಪ್ರಸಾರದ ಶ್ರೀ ವಿಹಾರವು ಆರಂಭವಾದ ಅನಂತರ ನಿರ್ಗ್ರಂಥಧರ್ಮವು ಪುನಶ್ಚೇ ತನಗೊಂಡು ಹಲವಾರು ಶತಮಾನಗಳ ಪರ್ಯಂತ ತೇಜೋಯುತವಾಗಿ ಮುನ್ನಡೆ ಯಿತು. ನಿರ್ಗ್ರಂಥಧರ್ಮವು ತೀವ್ರತರಗ್ಲಾನಿವಶವಾದ ಸಮಯದಲ್ಲಿ, ಅದನ್ನು ಪುನಶ್ಚೇತನಗೊಳಿಸಿ ಉತ್ಥಾನಗೊಳಿಸುವ ಕಾರ್ಯವು ತೀರ್ಥಂಕರರಿಂದಾಗುವು ದೆಂದು ಹಿಂದೆ ಹೇಳಿದೆ. ಅಂತೆಯೇ ಶ್ರೀ ಗೌತಮಬುದ್ಧನ ಧರ್ಮಪ್ರವರ್ತನಾ ನಂತರ ತೀವ್ರತರಗ್ಲಾನಿವಶವಾಗಿದ್ದ ನಿರ್ಗ್ರಂಥ ಧರ್ಮವನ್ನು ಪುನರುತ್ಥಾನಗೊಳಿಸಿದ ಶ್ರೀ ವೀರನಾಥನು ನಿಗ್ರಂಥಧರ್ಮೀಯರ ತೀರ್ಥಂಕರನಾಗಿ ಸಂಪೂಜಿತನಾಗಿರುವುದ ರಲ್ಲಿ ಚಾರಿತ್ರಿಕತಥ್ಯವಿದೆಯೆಂದು ಸ್ಪಷ್ಟವಾಗುವುದು.

ಶ್ರೇಣಿಕ-ಬಿಂಬಿಸಾರನನ್ನು ಬೌದ್ಧಆಗಮಗ್ರಂಥಗಳಲ್ಲಿ ಶ್ರೀ ಗೌತಮಬುದ್ಧನ ಉಪಾಸಕನನ್ನಾಗಿಯೂ, ಜೈನಪುರಾಣಗ್ರಂಥಗಳಲ್ಲಿ ಶ್ರೀ ವೀರತೀರ್ಥಂಕರನ ಉಪಾ ಸಕನನ್ನಾಗಿಯೂ ಹೇಳಿರುವುದರ ಔಚಿತ್ಯವನ್ನು ಕುರಿತು ಚರಿತ್ರಕಾರರಲ್ಲಿ ಕೆಲವರು ತಮ್ಮದೇ ಆದ ಅರ್ಥಕಲ್ಪನೆಮಾಡಿದ್ದಾರೆ. ಆದರೆ ಶ್ರೇಣಿಕ-ಬಿಂಬಿಸಾರನ ವಿಷಯ ವಾಗಿ ಜೈನಸಂಪ್ರದಾಯದ ಕಥೆಗಳಲ್ಲಿ ಉಕ್ತವಾಗಿರುವ ಅಂಶಗಳನ್ನು ಗಮನಿಸಿದಲ್ಲ

ಯಾವರೀತಿಯ ಅರ್ಥಾಂತರಕಲ್ಪನೆಯನ್ನೂ ಮಾಡಬೇಕಾದ ಅವಶ್ಯಕತೆಯುಳಿಯುವುದಿಲ್ಲ.

ಹಿಂದೆ ಉಲ್ಲೇಖಿಸಿರುವ ಜೈನಸಂಪ್ರದಾಯದ ಕಥೆಯನುಸಾರವಾಗಿ ಶ್ರೇಣಿಕ-ಬಿಂಬಿಸಾರನು ಮಗಧರಾಜ್ಯದಲ್ಲಿ ಅಭಿಷಿಕ್ತನಾಗುವ ಪರ್ಯಂತ ಬ್ರಾಹ್ಮಣ ಅಥವಾ ಪಾರಿವ್ರಾಜಿಕ ಧರ್ಮಾನುಯಾಯಿಯಾಗಿದ್ದನೆಂದು ತಿಳಿದುಬರುವುದು. ತದನಂತರ ತೇಜಸ್ವಿಯೂ, ಓಜಸ್ವಿಯೂ, ಬಹುಜನಸಂಸ್ತುತನೂ ಆಗಿ ಪ್ರಸಿದ್ಧನಾಗಿದ್ದ ಶ್ರೀ ಗೌತಮಬುದ್ಧನನ್ನು ಸಂದರ್ಶಿಸಿ ಧರ್ಮೋಪದೇಶ ಕೇಳಿ ಅವನ ಉಪಾಸಕನಾಗಿ ಶ್ರೇಣಿಕ-ಬಿಂಬಿಸಾರನು ಪರಿವರ್ತಿತನಾಗಿದ್ದಲ್ಲಿ ಆಶ್ಚರ್ಯಪಡುವಂತಹುದೇನಿಲ್ಲ. ಶ್ರೇಣಿಕ-ಬಿಂಬಿಸಾರನು ಚೇಟಕರಾಜನ ಮಗಳಾದ ಚೇಳಿನೀದೇವಿಯನ್ನು ವಿವಾಹವಾದ ಅನಂತರ ಈ ದಂಪತಿಗಳು ಪರಸ್ಪರ ಒಬ್ಬರನ್ನೊಬ್ಬರು ತಮ್ಮತಮ್ಮ ಅಭಿಮತದ ಧರ್ಮಾನುಯಾಯಿಯನ್ನಾಗಿ ಪರಿವರ್ತಿಸಲು ಯತ್ನಿಸಿದ ಪ್ರಸಂಗಗಳು ಕಥೆಯಲ್ಲಿ ಉಕ್ತವಾಗಿವೆ. ಪೂರ್ವೋಲ್ಲಿಖಿತವಾದ ಶ್ರೇಣಿಕಕಥಾನಕದ ಸಮೀಕ್ಷಣದಿಂದ ಚೇಳಿನೀದೇವಿಯನ್ನು ವಿವಾಹನಾಗುವ ಸಮಯಕ್ಕಾಗಲೇ ಶ್ರೇಣಿಕನಿಗೆ ಸುಮಾರು ಹದಿನಾರು ಅಥವಾ ಹದಿನೇಳುವರ್ಷ ವಯೋಮಾನದ ಅಭಯಕುಮಾರನೆಂಬ ಪುತ್ರನಿದ್ದನೆಂದು ಸೂಚಿತವಾಗುವುದು. ಇದರಂತೆ ಶ್ರೇಣಿಕನು ತನ್ನ ಮುವ್ವತ್ತೈದು ಮತ್ತು ನಲವತ್ತು ವರ್ಷವಯೋಮಾನದ ಅಂತರಸಮಯದಲ್ಲಿ ಚೇಳಿನೀದೇವಿಯನ್ನು ವಿವಾಹವಾಗಿರುವನೆಂದು ಗ್ರಹಿಸಲವಕಾಶವಾಗುವುದು. ವಿವಾಹಾನಂತರ ಚೇಳಿನೀದೇವಿಯು ತನ್ನ ಪತಿಯನ್ನು ನಿರ್ಗ್ರಂಥಧರ್ಮದ ವಿಷಯದಲ್ಲಿ ಆಸಕ್ತಿಉಳ್ಳವನನ್ನಾಗಿ ಪರಿವರ್ತಿಸುವಲ್ಲಿ ಸಫಲಳಾಗಿದ್ದಾಳೆ. ಈ ಸಮಯಕ್ಕೆ ಶ್ರೀ ವೀರತೀರ್ಥಂಕರನ ಧರ್ಮಪ್ರಸಾರದ ಶ್ರೀವಿಹಾರವು ಆರಂಭವಾಯಿತಾಗಿ ಶ್ರೇಣಿಕನು ಶ್ರೀ ವೀರತೀರ್ಥಂಕರನ ಉಪಾಸಕನಾಗಿ ಪರಿವರ್ತಿತನಾಗಿದ್ದಲ್ಲಿ ಅಸಂಗತವೆನಿಸುವಂತಹುದೇನಿಲ್ಲ. ಆದ್ದರಿಂದ ಶ್ರೇಣಿಕ-ಬಿಂಬಿಸಾರನನ್ನು ಬೌದ್ಧಆಗಮಗ್ರಂಥಗಳಲ್ಲಿ ಶ್ರೀ ಗೌತಮಬುದ್ಧನ ಉಪಾಸಕನನ್ನಾಗಿಯೂ, ಜೈನ ಆಗಮಗ್ರಂಥಗಳಲ್ಲಿ ಶ್ರೀ ವೀರತೀರ್ಥಂಕರನ ಉಪಾಸಕನನ್ನಾಗಿಯೂ ಉಲ್ಲೇಖಿಸಲಾಗಿರುವುದನ್ನು ಕುರಿತು ಅರ್ಥಾಂತರ ಕಲ್ಪನೆಮಾಡಬೇಕಾದ ಅವಶ್ಯಕತೆಯುಳಿಯುವುದಿಲ್ಲ.

**ಅಜಾತಶತ್ರು-ದರ್ಶಕ :** ಶ್ರೇಣಿಕ-ಬಿಂಬಿಸಾರನ ಸುತನಾದ ಅಜಾತಶತ್ರು-ದರ್ಶಕನು ಬೃಹದ್ರಥರಾಜ್ಯಭಾರಪಶ್ಚಾತ್ ೫೦ ವರ್ಷಗಳ ತರುವಾಯದಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಹಿಂದೆ ವಿವರಿಸಲಾಗಿದೆ. ಇವನ ರಾಜ್ಯಭಾರ ಕಾಲಾವಧಿಯನ್ನು ಸಿಲೋನಿನ ದೀಪವಂಸೋ ಮತ್ತು ಮಹಾವಂಸೋಕೃತಿಗಳಲ್ಲಿ ೩೨ ವರ್ಷಗಳ ಅವಧಿಯುಳ್ಳದ್ದನ್ನಾಗಿ ನಿರ್ದೇಶಿಸಲಾಗಿದೆ. ಇಂತೆಯೇ ಸನ್ಮಾನ್ಯ ರಾಕ್‌ಹಿಲ್ ರವರ ಹೇಳಿಕೆಯ ಪ್ರಕಾರವಾಗಿಯೂ ಇವನು ೩೨ ವರ್ಷಕಾಲ ರಾಜ್ಯಭಾರಮಾಡಿದ

ನೆಂದು ನಿರ್ದೇಶಿತವಾಗಿದೆ. [ಪೂ. ಸೂ- ಜರ್ನಲ್-ಸನ್ಮಾನ್ಯ ಜಯಸ್ವಾಲ್‌ರವರ ಪ್ರಬಂಧ]. ಆದ್ದರಿಂದ ಈ ಹೇಳಿಕೆಗಳಾಧಾರದಿಂದ ಹಾಗೂ ಇವನ ಅನಂತರ ಮಗಧರಾಜ್ಯದಲ್ಲಿ ಅಭಿಷಿಕ್ತರಾದ ರಾಜರ ಅನುಕ್ರಮ ರಾಜ್ಯಭಾರಕಾಲಾವಧಿಗಳ ಸಮನ್ವಯದ ದೃಷ್ಟಿಯಿಂದ ಇವನು ೩೨ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಗ್ರಹಿಸುವುದು ಸುಸಂಗತವೆನಿಸುವುದು.

ಉದಾಯಿಭದ್ರ: ಸರ್ವಸಾಧಾರಣವಾಗಿ ಬೌದ್ಧಆಮ್ನಾಯದ ಇತಿವೃತ್ತ ಕೃತಿಗಳಲ್ಲಿ ಅಜಾತಶತ್ರುವಿನ ತರುವಾಯ ಅವನ ಸುತನಾದ ಉದಾಯಿಭದ್ರನು ರಾಜ್ಯಭಾರದಲ್ಲಿ ಅಧಿಷ್ಠಿತನಾದನೆಂದು ಹೇಳಲಾಗಿದೆ. ಜೈನಆಮ್ನಾಯದ ಕೃತಿಯಾದ ಪರಿಶಿಷ್ಟಪರ್ವದಲ್ಲಿ, ಅಜಾತಶತ್ರುವನ್ನು ಕೂಣಿಕನೆಂದು ಹೆಸರಿಸಲಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಈ ಕೂಣಿಕನ ತರುವಾಯ ಇವನ ಸುತನಾದ ಉದಾಯಿ ಭದ್ರನು ರಾಜ್ಯಭಾರದಲ್ಲಿ ಅಧಿಷ್ಠಿತನಾದುದಾಗಿ ಹೇಳಲಾಗಿದೆ. ವಾಯುಪುರಾಣದಲ್ಲಿ 'ದರ್ಶಕ' ಎಂಬ ಹೆಸರಿನ ಅನಂತರ 'ಉದಾಯಿ' ಎಂಬ ಹೆಸರಿರುವುದನ್ನು ಗಮನಿಸ ಬಹುದು. ಮತ್ಸ್ಯ ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ಅನುಕ್ರಮವಾಗಿ, 'ಅಜಾತ ಶತ್ರು' ಎಂಬ ಹೆಸರಿನ ಅನಂತರವರ್ತಿಯಾಗಿ 'ವಂಶಕ' ಮತ್ತು 'ದರ್ಭಕ' ಎಂಬ ಹೆಸರುಗಳಿದ್ದು ತದನಂತರ 'ಉದಾಯಿ' ಎಂಬ ಹೆಸರಿದೆ. ಈ ಎರಡು ಪುರಾಣಗಳಲ್ಲಿ ಈ ರೀತಿಯಾಗಿ 'ಅಜಾತಶತ್ರು' ಮತ್ತು 'ಉದಾಯಿ' ಎಂಬ ಹೆಸರುಗಳ ಮಧ್ಯವರ್ತಿ ಯಾಗಿ 'ವಂಶಕ' ಅಥವಾ 'ದರ್ಭಕ' ಎಂಬ ಹೆಸರುಗಳು ಸಂಯೋಜಿತವಾಗಿರುವುದಕ್ಕೆ ಹಿಂದೆ ವಿವರಿಸಿರುವಂತೆ, ಅಜಾತಶತ್ರುವಿನ ಜನ್ಮನಾಮವಾದ 'ದರ್ಶಕ' ಎಂಬ ಹೆಸ ರನ್ನು ಪೃಥಗ್ವ್ಯಕ್ತಿಯೊಬ್ಬನ ಹೆಸರನ್ನಾಗಿ ಕಾಲಾಂತರದಲ್ಲಿ ಪೌರಾಣಿಕ ಇತಿವೃತ್ತ ಸಂಕಲನಕಾರರು ಗ್ರಹಿಸಿದುದು ಕಾರಣವಾಗಿದೆಯೆಂದು ಹೇಳಬೇಕಾಗುವುದು. ಆದ್ದ ರಿಂದ ಬೌದ್ಧಆಮ್ನಾಯದ ಕೃತಿಗಳಲ್ಲಿ ನಿರ್ದೇಶಿತವಾಗಿರುವಂತೆ ಅಜಾತಶತ್ರುವಿನ (=ದರ್ಶಕನ) ತರುವಾಯ ಅವನ ಸುತನಾದ ಉದಾಯಿಭದ್ರನು ರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ಗ್ರಹಿಸಲವಕಾಶವಾಗುವುದು.

ಉದಾಯಿಭದ್ರನ ಐತಿಹ್ಯ ಹಾಗೂ ಇವನ ಅನಂತರವರ್ತಿಯಾಗಿ ರಾಜ್ಯ ಭಾರಾಧಿಷ್ಠಿತನಾದ ರಾಜನ ಐತಿಹ್ಯವಿಷಯವಾಗಿ ವೈದಿಕ, ಬೌದ್ಧ ಮತ್ತು ಜೈನ ಆಮ್ನಾಯತ್ರಯದ ಇತಿವೃತ್ತಕೃತಿಗಳ ಹೇಳಿಕೆಗಳು ಕೇವಲ ಒಂದೆರಡು ಅಂಶಗಳ ಹೊರತಾಗಿ ಮಿಕ್ಕೆಲ್ಲ ಅಂಶಗಳಲ್ಲಿಯೂ ಪರಸ್ಪರ ಸಮನ್ವಯವಾಗದಂತಿವೆ.

ಉದಾಯಿಯು ತನ್ನ ನಾಲ್ಕನೇವರ್ಷದ ರಾಜ್ಯಭಾರಸಮಯದಲ್ಲಿ ಗಂಗಾ ನದಿಯ ದಕ್ಷಿಣತಟದಲ್ಲಿ 'ಕುಸುಮಪುರ'ವನ್ನು ನಿರ್ಮಿಸಿದುದಾಗಿ ವಾಯು ಮೊದ ಲಾದ ಪುರಾಣಗಳಲ್ಲಿ ಹೇಳಲಾಗಿದ್ದು ಈ ಐತಿಹ್ಯಾಂಶವು, ಪರಿಶಿಷ್ಟಪರ್ವದ ಹೇಳಿಕೆ ಯಿಂದ ಸಮರ್ಥಿತವಾಗುವುದು. ಈ ಕೃತಿಯಲ್ಲಿ, ಉದಾಯಿಭದ್ರನು ನೂತನವಾಗಿ

ಪಾಟಲೀಪುತ್ರನಗರವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ ನೆಂದು ಹೇಳಲಾಗಿದೆ. ಇಂತೆಯೇ ಉದಾಯಿಭದ್ರನ ಜೀವಿತಾಂತ್ಯವಿಷಯವಾಗಿ ಪರಿಶಿಷ್ಟಪರ್ವ ಮತ್ತು ಮಹಾವಂಸೋಕೃತಿಗಳ ಹೇಳಿಕೆಗಳು ಅಂಶತಃ ಸಾದೃಶ್ಯತೆ ಯುಳ್ಳವಾಗಿವೆ. ಉದಾಯಿಭದ್ರನು ಪರರಾಜ್ಯದ ರಾಜಕುಮಾರನೊಬ್ಬನಿಂದ ಛದ್ಮನೆಯ ಪೂರ್ವಕ ಕೊಲೆಗೈಯಲ್ಪಟ್ಟನೆಂದು ಪರಿಶಿಷ್ಟಪರ್ವದಲ್ಲಿ ಹೇಳಲಾಗಿದೆ ಯಾದರೆ, ಮಹಾವಂಸೋದಲ್ಲಿ ಉದಾಯಿಭದ್ರನು ತನ್ನ ಮಗನಾದ ಅನುರುದ್ಧನಿಂದ ಕೊಲೆಗೈಯ್ಯಲ್ಪಟ್ಟನೆಂದು ಹೇಳಲಾಗಿದೆ. ಹೀಗೆ ಉದಾಯಿಭದ್ರನು ಕೊಲೆಗೈಯ್ಯ ಲ್ಪಟ್ಟ ವಿಷಯವಾಗಿ ಪರಿಶಿಷ್ಟಪರ್ವ ಮತ್ತು ಮಹಾವಂಸೋ ಕೃತಿಗಳ ಹೇಳಿ ಕೆಗಳ ಮಧ್ಯೆ ಸಾದೃಶ್ಯತೆಯಿದೆಯಾದರೂ ಕೊಲೆಗೈದ ವ್ಯಕ್ತಿಯ ಐತಿಹ್ಯವಿಷಯವಾಗಿ ಭಿನ್ನಮತವಿರುವುದು ಸ್ಪಷ್ಟವಿದೆ. ಇಂತೆಯೇ ಉದಾಯಿಭದ್ರನ ರಾಜ್ಯಭಾರದೊಡನೆ 'ಕೋಣಕ' ವಂಶದ ರಾಜ್ಯಭಾರವು ಅಂತ್ಯಗೊಂಡಿತೆಂದು ಜೈನ ಆಮ್ನಾಯದ ಪೂರ್ವೋಲ್ಲಿಖಿತವಾದ ಪಟ್ಟಾವಲೀ ಸುಮುಚ್ಚಯದ ಉಕ್ತಿ ಮತ್ತು ಪರಿಶಿಷ್ಟಪರ್ವದ ಹೇಳಿಕೆಗಳಿಂದ ಸೂಚಿತವಾಗುವುದಾದರೆ ಮಹಾವಂಸೋಕೃತಿಯ ಹೇಳಿಕೆಯಂತೆ ಉದಾಯಿಭದ್ರನ ತರುವಾಯ ಅವನ ಸಂತತಿಯ ಅನುರುದ್ಧ, ಮುಂಡ ಮತ್ತು ನಾಗ ದಾಸಕ ಎಂಬ ಹೆಸರಿನ ಮೂವರು ರಾಜರು ರಾಜ್ಯಭಾರಮಾಡಿದ್ದಾರೆ. ಇಷ್ಟು ಮಾತ್ರವಲ್ಲದೆ, ಮಹಾವಂಸೋಕೃತಿಯಲ್ಲಿ ಅಜಾತಶತ್ರುವಿನಾದಿಯಾಗಿ ನಾಗದಾಸಕನ ಪರ್ಯಂತರಾದ ಐವರು ರಾಜರನ್ನು ಪಿತೃಘಾತಕರೆಂದು ಹೇಳಲಾಗಿದೆ. ಹೀಗೆ ಈ ಕೃತಿಯ ಹೇಳಿಕೆಯಿಂದ ಉದಾಯಿಭದ್ರನು ತನ್ನ ತಂದೆಯಾದ ಅಜಾತಶತ್ರುವನ್ನು ಕೊಂದು ರಾಜ್ಯಭಾರಾಧಿಷ್ಠಿತನಾದನೆಂದು ನಿರ್ದೇಶಿತವಾಗುವುದು.

ಉದಾಯಿಭದ್ರನ ತರುವಾಯ ರಾಜ್ಯಭಾರಾಧಿಷ್ಠಿತನಾದ ರಾಜನ ಐತಿಹ್ಯ ವಿಷಯವಾಗಿ ಆಮ್ನಾಯತ್ರಯದ ಕೃತಿಗಳಲ್ಲಿರುವ ಹೇಳಿಕೆಗಳು ಪರಸ್ಪರ ಸಮನ್ವಿತ ವಾಗುವುದಿಲ್ಲೆಂಬುದಲ್ಲದೆ, ಏಕೈಕ ಆಮ್ನಾಯದವುಗಳೆನ್ನಿಸಿಕೊಂಡಿರುವ ಕೃತಿಗಳ ಹೇಳಿಕೆಗಳ ಮಧ್ಯೆಯೂ ಒಮ್ಮತವಿಲ್ಲವಾಗಿದೆ:

ವೈ. ಮ ಸಂ. ಪುರಾಣಗಳಲ್ಲಿ ಸರ್ವಸಾಧಾರಣವಾಗಿ ಉದಾಯಿಭದ್ರನ ೩೩ ವರ್ಷಗಳ ರಾಜ್ಯಭಾರಾನಂತರ 'ನಂದಿವರ್ಧನ' ಎಂಬ ಹೆಸರಿನ ರಾಜನು ರಾಜ್ಯ ಭಾರಾಧಿಷ್ಠಿತನಾದನೆಂದು ನಿರ್ದೇಶಿತವಾಗಿದೆ.

ಜೈನಆಮ್ನಾಯದ ಪರಿಶಿಷ್ಟಪರ್ವದ ಹೇಳಿಕೆಯಂತೆ ಉದಾಯಿಭದ್ರನ ತರು ವಾಯ ನಾಪಿತಸೂನುವಾದ 'ನಂದ' ನು ರಾಜ್ಯಭಾರಾಧಿಷ್ಠಿತನಾಗಿದ್ದಾನೆ.

ದಾಕ್ಷಿಣಾತ್ಯ ಬೌದ್ಧಮತಸಂಪ್ರದಾಯದ ಕೃತಿಗಳಲ್ಲೊಂದಾದ ದೀಪವಂಸೋ ದಲ್ಲಿ ಉದಾಯಿಭದ್ರನ ತರುವಾಯ 'ನಾಗದಾಸ' ನೆಂಬುವನೂ, ಇವನ ತರುವಾಯ 'ಸುಸುನಾಗ' ನೆಂಬುವನೂ ರಾಜ್ಯಭಾರಾಧಿಷ್ಠಿತರಾದರೆಂದು ಹೇಳಲಾಗಿದೆಯಾದರೆ,

ಇದೇ ಆಮ್ನಾಯದ ಮಹಾವಂಸೋ ಹಾಗೂ ಪ್ರಾಯಿಕವಾಗಿ ಈ ಕೃತಿಯ ಪ್ರತಿ ಬಿಂಬದಂತಿರುವ ಬರ್ಮಾಇತಿವೃತ್ತದಲ್ಲಿ, ಉದಾಯಿಭದ್ರನ ತರುವಾಯ ಅನುಕ್ರಮ ವಾಗಿ ಅನುರುದ್ಧ, ಮುಂಡ ಮತ್ತು ಸುಸುನಾಗ ಎಂಬುವರು ರಾಜ್ಯಭಾರಮಾಡಿದ ರೆಂದು ನಿರ್ದೇಶಿಸಲಾಗಿದೆ. ಹೀಗೆ ದೀಪವಂಸೋಕೃತಿಯ ಹೇಳಿಕೆಯನುಗುಣವಾಗಿ ಉದಾಯಿಭದ್ರ ಮತ್ತು ಸುಸುನಾಗರ ಮಧ್ಯವರ್ತಿಯಾಗಿ ನಾಗದಾಸನೆಂಬ ಒಬ್ಬನೇ ಒಬ್ಬರಾಜನು ರಾಜ್ಯಭಾರಮಾಡಿರುವನೆಂದು ನಿರ್ದೇಶಿತವಾಗುವುದಾದರೆ, ಮಹಾ ವಂಸೋ ಮತ್ತು ಬರ್ಮಾಇತಿವೃತ್ತದನುಸಾರವಾಗಿ ಉದಾಯಿಭದ್ರ ಮತ್ತು ಸುಸು ನಾಗರ ಮಧ್ಯವರ್ತಿಯಾಗಿ ಅನುರುದ್ಧ, ಮುಂಡ ಮತ್ತು ನಾಗದಾಸಕರೆಂಬ ಮೂವರು ರಾಜರು ರಾಜ್ಯಭಾರಮಾಡಿರುವರೆಂದು ನಿರ್ದೇಶಿತವಾಗುವುದು. ದಾಕ್ಷಿಣಾತ್ಯ ಬೌದ್ಧ ಮತಸಂಪ್ರದಾಯದ ಕೃತಿಗಳ ಈ ವಿಕಲ್ಪರೂಪದ ಹೇಳಿಕೆಗಳಂತೆ ಔತ್ತರೇಯ ಬೌದ್ಧ ಮತಸಂಪ್ರದಾಯದ ಕೃತಿಗಳಲ್ಲಿಯೂ ಈ ವಿಷಯವಾಗಿ ಒಮ್ಮತವಿಲ್ಲದಿದ್ದು ವಿಕಲ್ಪ ರೂಪದ ಹೇಳಿಕೆಗಳಿರುವುದನ್ನು ಗಮನಿಸಬಹುದು. 'ದಿವ್ಯಾವದಾನ' ವೆಂಬ ಕೃತಿ ಯಲ್ಲಿ ಉದಾಯಿಭದ್ರನ ತರುವಾಯ ಮುಂಡನೆಂಬ ರಾಜನೂ, ಇವನ ತರುವಾಯ ಕಾಕವರ್ಣಿ ಎಂಬ ಹೆಸರಿನ ರಾಜನೂ ರಾಜ್ಯಭಾರದಲ್ಲಿ ಅಧಿಷ್ಠಿತರಾದರೆಂದು ಹೇಳ ಲಾಗಿದೆ. ಇನ್ನು ಟಿಬೆಟ್ಟಿನ ಚರಿತ್ರಕಾರರಾದ ಸನ್ಮಾನ್ಯ ತಾರಾನಾಥರ ಕೃತಿ ಯಾಧಾರದಿಂದ ಸನ್ಮಾನ್ಯ ಜಯಸ್ವಾಲ್‌ರವರು ನಿರೂಪಿಸಿರುವ ಮಗಧರಾಜಸಂತ ತಿಯ ಚೌಬಂಧದಲ್ಲಿ ಅಜಾತಶತ್ರುವಿನ ತರುವಾಯ 'ಸುಬಾಹು' ಎಂಬುವನೂ, ಇವನ ತರುವಾಯ 'ಸುಧನು' ಎಂಬುವನೂ ರಾಜ್ಯಭಾರಮಾಡಿದಂತೆ ನಿರ್ದೇಶಿಸ ಲಾಗಿದೆ. ಇಲ್ಲಿ 'ಉದಾಯಿ' ಎಂಬ ಹೆಸರೇ ಇಲ್ಲವಾಗಿದ್ದು, ಈ ಹೆಸರಿರಬೇಕಾದ ಸ್ಥಾನದಲ್ಲಿ 'ಸುಬಾಹು' ಎಂಬ ಹೆಸರಿದೆ.

ಉದಾಯಿಭದ್ರನ ಐತಿಹ್ಯ ಹಾಗೂ ಇವನ ಅನಂತರ ರಾಜ್ಯಭಾರದಲ್ಲಿ ಅಧಿ ಷ್ಠಿತರಾದ ರಾಜರ ಐತಿಹ್ಯ ವಿಷಯವಾಗಿ ಆಮ್ನಾಯತ್ರಯದ ಇತಿವೃತ್ತಕೃತಿಗಳ ನಿರೂಪಣೆಯು ಮೇಲ್ಕಂಡಂತೆ ಪರಿಭ್ರಮಾಕಾರಕವಾಗಿರುವುದು ಸ್ಪಷ್ಟವಿದೆ. ಆದ್ದ ರಿಂದ ಈ ವಿಷಯದ ಸಂಬಂಧವಾಗಿ ಪರಿಶೀಲಿಸಿ ವಿಶ್ಲೇಷಣೆಮಾಡಬೇಕಾದ ಪ್ರಮೇ ಯವಿದೆ. ಪ್ರಕೃತ ಸಂದರ್ಭದ ವಿಷಯವಾಗಿ ಪರಿಶಿಷ್ಟಪರ್ವದಲ್ಲಿ ಈ ಮುಂದಿನ ಉದಂತವಿದೆ :

"ಚಂಪಾನಗರಿಯಲ್ಲಿ ಶ್ರೇಣಿಕಾತ್ಮಜನಾದ ಕೂಣಿಕನು ಮೃತನಾಗಲು ಆತನ ಮಗನಾದ ಉದಾಯಿಯು ದುಃಖವಶನಾಗಿ ರಾಜ್ಯಭಾರವಿಷಯದಲ್ಲಿ ಅಲಸಚಿತ್ತ ನಾದನು. ಆಗ ಮಂತ್ರಿಗಳು ಉದಾಯಿಯ ಬಳಿಸಾರಿ 'ಪಿತೃಶೋಕವಶನಾದ ನಿನ್ನ ತಂದೆ ಕೂಣಿಕನು, ರಾಜಗೃಹನಗರವನ್ನು ಬಿಟ್ಟು ಈ ಚಂಪಾನಗರವನ್ನು ರಚಿಸಿ, ರಾಜ್ಯಭಾರಮಾಡಿದನು. ಅಂತೆಯೇ ನೀನೂ ಮತ್ತೊಂದು ನಗರವನ್ನು ರಚಿಸಿ

ರಾಜ್ಯಭಾರಮಾಡು' ಎಂದು ಹೇಳಿದರು. ಅಂತೆಯೇ ಉದಾಯಿಯು ಪಾಟಲೀ ಪುತ್ರನಗರವನ್ನು ರಚಿಸಿ ಅದನ್ನು ರಾಜಧಾನಿಯಾಗಿ ಮಾಡಿಕೊಂಡು, ರಾಜ್ಯಭಾರ ಮಾಡಲಾರಂಭಿಸಿದನು. ಇಂತಿರಲು ಒಮ್ಮೆ ಪರರಾಜ್ಯದ ರಾಜನೊಬ್ಬನು ಯಾವುದೋ ರೀತಿಯ ಅಪರಾಧವೆಸಗಲು ಉದಾಯಿಯು ಅವನ ರಾಜ್ಯವನ್ನು ವಶ ಪಡಿಸಿಕೊಂಡನು. ರಾಜ್ಯಭ್ರಷ್ಟನಾದ ಆ ರಾಜನ ಮಗನು ಉಜ್ಜಯಿನಿಯನ್ನು ಸೇರಿ ಅವಂತೀಶನನ್ನು ಸೇವಿಸುತ್ತಿದ್ದನು. ಉದಾಯಿಯ ವಿಷಯದಲ್ಲಿ ಅವಂತೀಶನೂ ಸಹನೆಯಿಲ್ಲದವನಾಗಿದ್ದನು. ಇದನ್ನು ತಿಳಿದ ರಾಜಕುಮಾರನು 'ನಿನ್ನ ಅಪ್ಪಣೆ ಯಾದಲ್ಲಿ ನಾನು ಉದಾಯಿಯನ್ನು ದಮನಗೊಳಿಸುವೆನು' ಎಂದು ಅವಂತೀಶನಿಗೆ ಹೇಳಿ ಪಾಟಲೀಪುತ್ರನಗರವನ್ನು ಸೇರಿ ಉದಾಯಿಯ ಬಳಿ ಸೇವಕವೃತ್ತಿಯನ್ನು ಪಡೆದು, ತನ್ನ ಉದ್ದೇಶಿತ ಕಾರ್ಯವನ್ನು ಸಾಧಿಸಲು ಯತ್ನಶೀಲನಾಗಿದ್ದನು. ಪರ ಮಾರ್ಹತನಾದ ಉದಾಯಿಯ ರಾಜನಿವಾಸಸ್ಥಾನಗಳನ್ನು ಜೈನಮುನಿಗಳು ಯಾವ ಅಡ್ಡಿಆತಂಕಗಳಿಲ್ಲದೆ ಪ್ರವೇಶಿಸುತ್ತಿದ್ದುದನ್ನು ಕಂಡ ಆ ರಾಜಕುಮಾರನು ತಾನೂ ಜೈನ ಮುನಿದೀಕ್ಷೆಪಡೆದು ನಿರತೀಚಾರ ರೀತಿಯಿಂದ ವ್ರತಪರಿಪಾಲನೆಮಾಡುತ್ತಿದ್ದನು.

ಇಂತಿರಲು ರಾಜಕುಲದಲ್ಲಿ ನಡೆದ ಪೌಷಧ ಧರ್ಮಾಚರಣಕಾರ್ಯನಿಮಿತ್ತ ಮುನಿಗಳು ರಾಜನಿವಾಸಕ್ಕೆ ಹೋದರು. ಧರ್ಮೋಪದೇಶಾನಂತರ ಮುನಿಗಳು ಹಾಗೂ ಉದಾಯಿಯು ನಿದ್ರಾವಶರಾಗಲು ಮುನಿದೀಕ್ಷೆಪಡೆದಿದ್ದ ಆ ರಾಜ ಕುಮಾರನು ತನ್ನ ಬಳಿ ಗುಪ್ತವಾಗಿರಿಸಿಕೊಂಡಿದ್ದ ಕತ್ತರಿಯೊಂದರಿಂದ ಉದಾಯಿಯ ಕುತ್ತಿಗೆಯನ್ನು ತುಂಡರಿಸಿ ಪಲಾಯನಮಾಡಿದನು.

ಈ ಸಮಯದಲ್ಲಿ ಎಚ್ಚೆತ್ತ ಸೂರಿಗಳು ಕೊಲೆಗೀಡಾಗಿರುವ ಉದಾಯಿಯನ್ನು ಕಂಡು, ಮುನಿಸಂಘಕ್ಕೆ ಕೆಟ್ಟಹೆಸರು ಬಂದು ಧರ್ಮಗ್ಲಾನಿಗೆ ಅವಕಾಶವಾಗದಿರಲೆಂದು ಯೋಚಿಸಿ, ಅದೇ ಕತ್ತರಿಯಿಂದ ತಮ್ಮ ಕುತ್ತಿಗೆಯನ್ನು ತುಂಡರಿಸಿಕೊಂಡು ಗತ ಪ್ರಾಣರಾದರು. ಪ್ರಾತಃಕಾಲದಲ್ಲಿ ಅಂತಃಪುರಶಯ್ಯಾಪಾಲಕರು ಅಲ್ಲಿಗೆ ಬಂದು, ಆ ಭೀಕರ ದೃಶ್ಯವನ್ನು ಕಂಡು, ಸೂರಿಗಳನ್ನೂ ರಾಜನನ್ನೂ ಮುನಿವೇಶಧಾರಿಯಾದ ಶತ್ರುಒಬ್ಬನು ಕೊಂದು ಓಡಿಹೋಗಿರುವನೆಂದು ತರ್ಕಿಸಿ, ಶವಸಂಸ್ಕಾರ ಮಾಡಿದರು. ಉದಾಯಿಹಂತಕನಾದ ಆ ರಾಜಕುಮಾರನು ಉಜ್ಜಯಿನಿಯನ್ನು ಸೇರಿ ತಾನು ನಡೆಸಿದ ಕೃತ್ಯವನ್ನು ಉಜ್ಜಯಿನೀಪತಿಗೆ ತಿಳಿಸಿದನು. ಆಗ ಅವಂತೀಶನು 'ಎಲೈ ಪಾಪಿಯೇ! ಪರಿವ್ರಜ್ಯೆಯನ್ನು ಸ್ವೀಕರಿಸಿ, ಇಷ್ಟುಕಾಲ ಮುನಿಸನ್ನಿಧಿಯಲ್ಲಿದ್ದು ಧರ್ಮೋಪದೇಶವನ್ನು ಕೇಳಿಯೂ ಇಂತಹ ದುಷ್ಕಾರ್ಯವನ್ನು ನಡೆಸಿರುವ ನೀನು ನನಗೆ ಹೇಗೆತಾನೇ ಹಿತಕಾರಿಯಾಗಬಲ್ಲೆ ?' ಎಂದು ನಿರ್ಭರ್ತ್ಸನೆಮಾಡಿ ಅವನನ್ನು ನಗರದಿಂದೋಡಿಸಿದನು.

ಇತ್ತ ಅದೇ ನಗರದಲ್ಲಿ ದಿವಾಕೀರ್ತಿ ಎಂಬುವನಿಗೆ ವೇಶ್ಯಾಗರ್ಭಜನಾದ ನಂದ ನೆಂಬ ಪುತ್ರನಾದನು. ಆ ನಾಪಿತಕುಮಾರನು, ಪಾಟಲೀಪುತ್ರನಗರವು ತನ್ನ ಕರುಳಿ

ನಿಂದ ಸುತ್ತುವರಿಯಲ್ಪಟ್ಟದ್ದಂತೆ ಬೆಳಗಿನಝಾವದಲ್ಲಿ ಕನಸುಕಂಡು, ಈ ವಿಷಯವನ್ನು ತನ್ನ ಉಪಾಧ್ಯಾಯನಿಗೆ ತಿಳಿಸಿದನು. ನಂದನು ಕಂಡ ಸ್ವಪ್ನವು ಅವನ ಉತ್ತಮ ಭವಿಷ್ಯದ ಸೂಚಕವಾಗಿದೆಯೆಂದು ಪರಿಗ್ರಹಿಸಿದ ಉಪಾಧ್ಯಾಯನು, ಅವನಿಗೆ ತನ್ನ ಮಗಳನ್ನಿತ್ತುಮದುವೆಮಾಡಿ ಮೆರವಣಿಗೆಹೊರಡಿಸಿದನು. ಈ ಸಮಯದಲ್ಲಿ, ಉದಾಯಿಯು ಅಪುತ್ರನಾಗಿ ಮೃತನಾಗಿದ್ದುದರಿಂದ, ಮಂತ್ರಿಗಳು ಪಟ್ಟದಾನೆ, ಪ್ರಧಾನಾಶ್ವ, ಛತ್ರ, ಕುಂಭ ಮತ್ತು ಚಾಮರಗಳೆಂಬ ದಿವ್ಯಪಂಚಕಗಳನ್ನು ಅಭಿಷೇಕಿಸಿ, ರಾಜಕುಲದಲ್ಲಿ ಮೆರವಣಿಗೆ ನಡೆಸಿದರು. ಅನಂತರ ಆ ದಿವ್ಯಪಂಚಕಗಳು ರಾಜಕುಲದಿಂದ ಹೊರಹೊರಟವು. ಮೆರವಣಿಗೆಯಲ್ಲಿ ಬರುತ್ತಿದ್ದ ನಂದನನ್ನು ಕಂಡ ಪಟ್ಟಹಸ್ತಿಯು, ಕೂಡಲೇ ಅವನಬಳಿಸಾರಿ, ಪೂರ್ಣಕುಂಭದಿಂದ ಅಭಿಷೇಕಿಸಿ, ಅವನನ್ನೆತ್ತಿ ತನ್ನ ಬೆನ್ನಮೇಲೆಕುಳ್ಳಿರಿಸಿಕೊಂಡಿತು. ಅನಂತರ ಪುರಪ್ರಮುಖರು ನಂದನಿಗೆ ರಾಜಪಟ್ಟಕಟ್ಟಿದರು. ಶ್ರೀ ವರ್ಧಮಾನಸ್ವಾಮಿಯ ನಿರ್ವಾಣದಿನದಿಂದ ೬೦ ವರ್ಷಗಳು ಕಳೆದಿರಲು ನಂದನು ರಾಜನಾದನು. [ಅನಂತರಂ ವರ್ಧಮಾನಸ್ವಾಮಿ ನಿರ್ವಾಣವಾಸರಾತ್ । ಗತಾಯಾಂ ಷಷ್ಟಿವತ್ಸರ್ಯಾಮೇಷ ನಂದೋಽಭವನ್ನೃಪಃ ॥] ಅನಂತರ ನಂದನು ತನ್ನನ್ನು ನಾಪಿತಸೂನುವೆಂಬ ಕಾರಣದಿಂದ ಗೌರವಿಸದಿದ್ದ ಸಾಮಂತರನ್ನು ವಧೆಮಾಡಬೇಕೆಂದು ತನ್ನ ಅಂಗರಕ್ಷಕರಿಗೆ ಆಜ್ಞಾಪಿಸಿದನು. ಆದರೆ ಅವರು ಅವನ್ನಆಪ್ಪಣೆಯನ್ನು ಪಾಲಿಸಲಿಲ್ಲ. ಅಷ್ಟರಲ್ಲಿ ನಂದನ ಪುಣ್ಯಾಕೃಷ್ಟದೇವಿಯಿಂದ ಅಧಿಷ್ಠಿತರಾದ ಲೇಪ್ಯಮಯರಾದ ದ್ವಾರಪಾಲಕರು ಆ ಸಾಮಂತರಲ್ಲಿ ಕೆಲವರನ್ನು ಕೊಂದುಹಾಕಿದರು. ಇತರ ಸಾಮಂತರು ವಿನೀತರಾದರು."

ಮೇಲ್ಕಂಡ ಕಥೆಯಲ್ಲಿ ಗಮನಾರ್ಹವಾಗಿರುವ ಮುಖ್ಯ ಐತಿಹ್ಯಾಂಶಗಳು :

೧) ಕೂಣಿಕನ ( = ಅಜಾತಶತ್ರುವಿನ ) ಸುತನಾದ ಉದಾಯಿಭದ್ರನು ಪಾಟಲೀಪುತ್ರನಗರವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

೨) ಉದಾಯಿಭದ್ರನು ತನಗೆ ದ್ರೋಹವೆಸಗಿದ ಯಾರೋ ಒಬ್ಬ ರಾಜನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನು ಮತ್ತು ಆ ರಾಜ್ಯದ ರಾಜಕುಮಾರನು ಅವಂತೀರಾಜನ ಬಳಿ ಸಾರಿ ಅಲ್ಲಿ ಕೆಲದಿನವಿದ್ದು ಅಲ್ಲಿಂದ ಪಾಟಲೀಪುತ್ರನಗರಕ್ಕೆ ಬಂದು ಮುನಿವೇಷಧಾರಣೆಮಾಡಿ ಛದ್ಮಪೂರ್ವಕ ಉದಾಯಿಭದ್ರನನ್ನು ಕೊಂದು ಕಣ್ಮರೆಯಾದನು.

೩) ಉದಾಯಿಭದ್ರನಿಗೆ ಮಕ್ಕಳಾರೂ ಇರಲಿಲ್ಲವಾದುದರಿಂದ ಪುರಪ್ರಮುಖರು ಪಟ್ಟದಾನೆಯಿಂದಾದ ಕುಂಭಾಭಿಷೇಕದ ಸೂಚಿಕೆಯ ಮೇರೆಗೆ ನಾಪಿತಸೂನುವಾದ ನಂದನನ್ನು ತಮ್ಮ ರಾಜನನ್ನಾಗಿ ಮಾಡಿಕೊಂಡರು.

ಹಿಂದೆ ಹೇಳಲಾಗಿರುವಂತೆ ಉದಾಯಿಭದ್ರನು ಪಾಟಲೀಪುತ್ರನಗರವನ್ನು ನಿರ್ಮಿಸಿದ ವಿಷಯವಾಗಿ ವಾಯುಪುರಾಣದ ಹೇಳಿಕೆಯು ಈ ಕಥೆಯ ಐತಿಹ್ಯ ದೊಡನೆ ಸಹಯೋಗಹೊಂದಿರುವುದನ್ನು ಗಮನಿಸಬಹುದು. ಇಂತೆಯೇ ಉದಾಯಿ ಭದ್ರನು ಕೊಲೆಗೈಯ್ಯಲ್ಪಟ್ಟನೆಂಬ ಈ ಕಥೆಯ ಐತಿಹ್ಯವು ಬೌದ್ಧಆಮ್ನಾಯದ ಮಹಾವಂಸೋಕ್ತಿಯ ಹೇಳಿಕೆಯಿಂದ ಸಮರ್ಥಿತವಾಗುವುದಾದರೂ, ಕೊಲೆಗೈದ ವ್ಯಕ್ತಿಯ ವಿಷಯವಾಗಿ ಈ ಕಥೆಯ ಐತಿಹ್ಯದಿಂದ ಮಹಾವಂಸೋದ ಐತಿಹ್ಯವು ಭಿನ್ನರೀತಿಯದಾಗಿದೆ: ಈ ಕಥೆಯ ಹೇಳಿಕೆಯಂತೆ ಉದಾಯಿಭದ್ರನು ಪರರಾಜ್ಯದ ರಾಜಕುಮಾರನೋರ್ವನಿಂದ ಕೊಲೆಗೈಯ್ಯಲ್ಪಟ್ಟಿರುವನಾದರೆ, ಮಹಾವಂಸೋಕ್ತಿ ಯಹೇಳಿಕೆಯ ಮೇರೆಗೆ, ಉದಾಯಿಭದ್ರನು ತನ್ನ ಸುತನಾದ ಅನುರುದ್ಧನಿಂದಲೇ ಕೊಲೆಗೈಯ್ಯಲ್ಪಟ್ಟಿರುವನು. ಇಷ್ಟಲ್ಲದೆ ಮಹಾವಂಸೋಕ್ತಿಯ ಹೇಳಿಕೆಯಂತೆ ಅಜಾತಶತ್ರುವಿನಾದಿಯಾಗಿ ನಾಗದಾಸಕನ ಪರ್ಯಂತರಾದ ಐವರು ರಾಜರು ಪಿತೃ ಘಾತಕರೆನ್ನಿಸಿಕೊಂಡಿದ್ದಾರೆ. ಇದರಂತೆ ಉದಾಯಿಭದ್ರನು ತನ್ನ ತಂದೆಯಾದ ಅಜಾತ ಶತ್ರುವನ್ನು ಕೊಂದು ಸಿಂಹಾಸನಾಧಿಷ್ಠಿತನಾಗಿರುವನೆಂದು ಅಭಿಪ್ರಾಯವಾಗುವುದು. ಆದರೆ ಗರ್ಗಸಂಹಿತೆಯಲ್ಲಿ ಉದಾಯಿಭದ್ರನನ್ನು 'ಧರ್ಮಾತ್ಮಾ' ಎಂದು ನಿರ್ದೇಶಿಸ ಲಾಗಿದೆಯಾದುದರಿಂದ ಇವನು ತನ್ನ ತಂದೆಯನ್ನು ಕೊಲೆಗೈದಿರಲಾರನೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿದ್ದಾರೆ. [ಪೂ. ಸೂ. ಜರ್ನಲ್] ಅಜಾತಶತ್ರುವು ಪಿತೃಘಾತಕನಾಗಿರುವನೆಂಬ ವಿಷಯವಾಗಿ ಬೌದ್ಧ ಮತ್ತು ಜೈನ ಕಥಾಯತ್ತ ಐತಿಹ್ಯಗಳಲ್ಲಿ ಸದೃಶೋಕ್ತಿಯಿದೆಯಾದರೂ, ಉದಾಯಿಭದ್ರ ಹಾಗೂ ಇವನ ಅನಂತರಕಾಲದ ಮೂವರು ರಾಜರೂ ಪಿತೃಘಾತಕರಾಗಿದ್ದರೆಂಬ ಮಹಾ ವಂಸೋಕ್ತಿಯ ಐತಿಹ್ಯವು ಶ್ರದ್ಧಾರ್ಹವಾಗಿಲ್ಲವೆಂದು ಹೇಳಲವಕಾಶವಿದೆ. ಪೂರ್ವೋಲ್ಲಿಖಿತವಾಗಿರುವ ಪಟ್ಟಾವಲೀ ಸಮುಚ್ಚಯದ ಉಕ್ತಿಯಿಂದ ಹಾಗೂ ಪ. ಪರ್ವದ ಈ ಕಥೆಯ ಕಥಾನಾಂಶದಿಂದ ಉದಾಯಿಭದ್ರನ ಮೃತ್ಯುವಿನೊಡನೆ ಕೋಣಿಕಮನೆತನದ ರಾಜ್ಯಭಾರವು ಅಂತ್ಯಗೊಂಡಿದೆಯೆಂದು ಸೂಚಿತವಾಗುವುದು. ಇದರಿಂದ ಉದಾಯಿಭದ್ರನು ಅವನ ಮಗನಾದ ಅನುರುದ್ಧನಿಂದ ಕೊಲೆಗೈಯ್ಯಲ್ಪಟ್ಟ ನೆಂಬ ಮಹಾವಂಸೋದ ಐತಿಹ್ಯವು ಸಂದೇಹಭಾಗಿಯಾಗುವುದಲ್ಲದೆ, ಉದಾಯಿಯ ತರುವಾಯ ಅವನ ಸುತನಾದ ಅನುರುದ್ಧನು ರಾಜ್ಯಭಾರಾಧಿಷ್ಠಿತನಾದನೆಂಬ ಐತಿ ಹ್ಯಾಂಶದ ತಥ್ಯವೂ ಪ್ರಶ್ನಾಯತ್ತವಾಗುವುದು. ದಿವ್ಯಾವದಾನದಲ್ಲಿ ಉದಾಯಿ ಭದ್ರನ ತರುವಾಯ 'ಮುಂಡ' ಎಂಬ ಹೆಸರಿನ ರಾಜನು ರಾಜ್ಯಭಾರಮಾಡಿದನೆಂದು ನಿರ್ದೇಶಿಸಲಾಗಿದೆಯೆಂದು ಹಿಂದೆ ಹೇಳಲಾಗಿದೆ. ಪ್ರಕೃತ ಸಂದರ್ಭದಲ್ಲಿ ಈ 'ಮುಂಡ' ಎಂಬ ಹೆಸರು ವಿಶೇಷಾರ್ಥದ್ಯೋತಕವಾಗಿದೆ:

ಅರ್ಥಕೋಶದಲ್ಲಿ ನಿರ್ದೇಶಿತವಾಗಿರುವಂತೆ 'ಮುಂಡ' ಎಂಬ ನಾಮಪದವು 'ಬೋಳುತಲೆಯವನು', 'ಬೋಳುತಲೆ', 'ನಾಪಿತ' ಎಂಬ ಅರ್ಥಯುಕ್ತವಾಗಿದ್ದು

ಗುಣವಚನರೂಪದಲ್ಲಿ 'ನೀಚ', 'ಪತಿತ' ಎಂಬ ಅರ್ಥಯುಕ್ತವಾಗಿದೆ. ಹೀಗೆ ಯಾವರೀತಿಯ ಸುಭಗಾರ್ಥವನ್ನೂ ಹೊಂದಿರದೆ ನೈಚ್ಯಾರ್ಥಯುಕ್ತವಾದ ಈ ಪದವು ರಾಜನೊಬ್ಬನ ನಿಜವಾದ ಹೆಸರಾಗಿದ್ದಿರಬಹುದೆಂದು ನಂಬಲಾಗುವುದಿಲ್ಲ. ಆದರೆ ಕೆಲವೊಮ್ಮೆ ವ್ಯಕ್ತಿಗತ ಗುಣದೋಷವ್ಯಂಜಕಾರ್ಥಯುಕ್ತವಾದ ಹೆಸರುಗಳು ರೂಢ ವಾಗಿರುವ ನಿದರ್ಶನಗಳನೇಕವಿವೆ. ಇಂತೆಯೇ 'ಮುಂಡ' ಎಂಬ ಹೆಸರೂ ಗುಣ ದೋಷವ್ಯಂಜಕಾರ್ಥದಲ್ಲಿ ರೂಢಿಗತವಾಗಿ ಜನತೆಯಲ್ಲಿ ಪ್ರಚಾರಕ್ಕೆ ಬಂದಿರಬೇಕೆಂದು ಹೇಳಲವಕಾಶವಿದೆ.

'ಮುಂಡ' ಎಂಬ ಪದವು ಪ್ರಾಕೃತಭಾಷೆಯಲ್ಲಿ 'ಮುನಿ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವ ನಿದರ್ಶನಗಳಿವೆ: ಕ್ರಿ. ಶ. ೨ನೇ ಶತಮಾನಸಮಯದಲ್ಲಿ ವಟ್ಟಕೇರಾಚಾರ್ಯರಿಂದ ರಚಿತವಾಗಿರುವ ಮೂಲಾಚಾರದ 'ಸಂಕ್ಷೇಪತರ ಪ್ರತ್ಯಾ ಖ್ಯಾನ' ಎಂಬ ಮೂರನೆ ಅಧಿಕಾರದ ಅಂತ್ಯದಲ್ಲಿ ಮುನಿಯ ಆಚಾರವನ್ನು ಸಂಗ್ರಹ ವಾಗಿ ಈ ಮುಂದಿನಂತೆ ನಿರ್ದೇಶಿಸಿದೆ:

> ಪಂಚವಿ ಇಂದಿಯ ಮುಂಡಾ, ವಚಮುಂಡಾ, ಹತ್ಥಪಾಯಮಣಮುಂಡಾ।
> ತಣಿ ಮುಂಡೇಣ ಯ ಸಹಿಯಾ ದಸಮುಂಡಾ ವಣ್ಣಿದಾ ಸಮಯೇ ॥ ೧೨೧॥

ಮುನಿಧರ್ಮ ನಿರೂಪಣೆಯಲ್ಲಿ 'ಮುಂಡ' ಪದವು ವಿಶಿಷ್ಟರೀತಿಯಿಂದ ಬಳಕೆಗೊಂಡಿ ರುವುದು ಈ ಮೇಲಿನ ಗಾಹೆಯಿಂದ ಸ್ಪಷ್ಟವಾಗುವುದು. ಇನ್ನು ಬೃ. ಕ. ಕೋಶದ (ಕ. ಸಂ. ೪೬) ಅಸತ್ಯಭಾಷಣಕಥಾನಕದಲ್ಲಿ, ಮುನಿದೀಕ್ಷಾಧಾರಿಯಾಗಿದ್ದ ಶ್ರೀಧರ ದೇವನೆಂಬ ಮುನಿಯನ್ನು ಮಂತ್ರಿಗಳು ಕರೆತಂದು, ರಾಜಪಟ್ಟಕಟ್ಟಿದರೆಂದೂ ಮುಂಡ ಮಸ್ತಕದಲ್ಲಿ ರಾಜಪಟ್ಟಕಟ್ಟಿದುದರಿಂದ, ಇವನು ಮುಂಡಿತರಾಜನೆಂದು ಪ್ರಸಿದ್ಧನಾದ ನೆಂದೂ, ಮುಂದೆ ಇವನ ವಂಶಕ್ಕೆ 'ಮುಂಡಿತವಂಶ'ವೆಂಬ ಹೆಸರು ಬಂದಿತೆಂದೂ ಹೇಳಿದೆ.

> ರಾಜ್ಯಪಟ್ಟೋ ಯತೋ ಬದ್ಧಸ್ತಸ್ಯ ತೈರ್ಮುಂಡ ಮಸ್ತಕೇ।
> ತತೋ ಮುಂಡಿತರಾಜೋಽಯಂ ವಿಖ್ಯಾತೋ ಧರಣೀತಲೇ ॥ ೬೪॥
> ವಂಶೋಽಸ್ಯ ಮುಂಡಿತಾಭಿಖ್ಯಃ ಶ್ರೀಧರಸ್ಯವಿಲಾಸಿನಃ।
> ಸಮಸ್ತಲೋಕವಿಖ್ಯಾತಃ ಪ್ರಸಿದ್ಧಿಂ ಭುವನೇ ಗತಃ ॥ ೬೬॥

ಮುನಿಯಾಗಿದ್ದ ಶ್ರೀಧರದೇವನಿಗೆ ರಾಜ್ಯಪಟ್ಟಕಟ್ಟದ ಬಳಿಕ 'ಮುಂಡಿತರಾಜ' ನೆಂಬ ಹೆಸರು ರೂಢಿಗತವಾದಂತೆ, ಮುನಿವ್ರತಧಾರಕನಾಗಿದ್ದು ಉದಾಯಿಭದ್ರನನ್ನು ವಧೆಮಾಡಿ ರಾಜ್ಯಪಟ್ಟಪಡೆದ ವ್ಯಕ್ತಿಗೂ 'ಮುಂಡ' ಎಂಬ ಹೆಸರು ಆರೂಢವಾಗಿ ಜನರಲ್ಲಿ ಬಳಕೆಗೆ ಬಂದಿರಬಹುದಾದ ಸಾಧ್ಯತೆಯು ಪರಿಸ್ಫುಟವಾಗುವುದು. ಇದ ರಿಂದ ಉದಾಯಿಭದ್ರನ ತರುವಾಯ ಮುಂಡನು ರಾಜ್ಯಭಾರಾಧಿಷ್ಠಿತನಾದನೆಂಬ

ದಿವ್ಯಾವಧಾನದ ಐತಿಹ್ಯವು ಸುಸಂಗತವಾಗಿದೆಯೆಂದು ಫಲಿತವಾಗುವುದಲ್ಲದೆ ಮಹಾವಂಸೋಕ್ಕೃತಿಯಲ್ಲಿ ಉದಾಯಿಭದ್ರನನ್ನು ಅವನ ಮಗನಾದ ಅನುರುದ್ಧನು ಕೊಲೆಗೈದು ರಾಜ್ಯಭಾರಾಧಿಷ್ಠಿತನಾದನೆಂದು ಹೇಳಲಾಗಿರುವ ಐತಿಹ್ಯಾಂಶವು ಅಸಂಗತವಾಗಿದೆಯೆಂದೂ ವ್ಯಕ್ತವಾಗುವುದು.

ಪಾಟಲೀಪುತ್ರಪ್ರಮುಖರು ನಂದನನ್ನು ತಮ್ಮ ರಾಜನನ್ನಾಗಿ ವರಿಸಿದರೆಂಬ ಪರಿಶಿಷ್ಟಪರ್ವದ ಐತಿಹ್ಯವಿರುವುದು ವಿದಿತವಿದೆ. ಇಂತೆಯೇ ಮಹಾವಂಸೋಕ್ಕೃತಿಯಲ್ಲಿ, ಪಾಟಲೀಪುತ್ರಪ್ರಮುಖರು ಅಮಾತ್ಯಸುಸುನಾಗನನ್ನು ತಮ್ಮ ರಾಜನನ್ನಾಗಿ ವರಿಸಿದರೆಂದು ಹೇಳಲಾಗಿದೆ. ಹೀಗೆ ಪಾಟಲೀಪುತ್ರಪ್ರಮುಖರು ರಾಜ್ಯಭಾರ ನಡೆಸುವುದಕ್ಕಾಗಿ ವ್ಯಕ್ತಿಯೋರ್ವನನ್ನು ಆರಿಸಿಕೊಂಡ ಐತಿಹ್ಯಪ್ರಸಂಗವು ಏಕವ್ಯಕ್ತ್ಯಧಿಕೃತವಾಗಿದೆಯೆಂದು ಗ್ರಹಿಸಬೇಕಾಗುವುದರಿಂದ ನಂದ ಮತ್ತು ಸುಸುನಾಗ ಎಂಬ ಹೆಸರುಗಳು ಏಕವ್ಯಕ್ತಿ ನಿರ್ದೇಶಕಗಳಾಗಿವೆಯೆಂದು ಸ್ಫುಟವಾಗುವುದು.

ದೀಪವಂಸೋಕ್ಕೃತಿಯಲ್ಲಿ ಉದಾಯಿಭದ್ರ ಮತ್ತು ಸುಸುನಾಗರ ಮಧ್ಯವರ್ತಿಯಾಗಿ ನಾಗದಾಸನೆಂಬ ಒಬ್ಬ ರಾಜನು ಮಾತ್ರ ರಾಜ್ಯಭಾರಮಾಡಿರುವನೆಂದು ನಿರ್ದೇಶಿಸಲಾಗಿರುವುದು ವಿದಿತವಿದೆ. ದಿವ್ಯಾವದಾನದಲ್ಲಿ ಈ 'ಸುಸುನಾಗ' ಎಂಬ ಹೆಸರಿಗೆ ಪರಿಚ್ಯುತಿಯುಂಟಾಗಿರುವುದನ್ನು ಗುರುತಿಸಲು ಅವಕಾಶವಿದೆ. ಈ ಕೃತಿಯಲ್ಲಿ ಮುಂಡನ ತರುವಾಯ 'ಕಾಕವರ್ಣಿ' ಎಂಬ ರಾಜನು ರಾಜ್ಯಭಾರಮಾಡಿದಂತೆ ನಿರ್ದೇಶಿಸಲಾಗಿದೆ. ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ 'ಶಿಶುನಾಗ' ಎಂಬ ಹೆಸರಿನ ತರುವಾಯ 'ಕಾಕವರ್ಣ' ಎಂಬ ಹೆಸರಿರುವುದನ್ನು ಗಮನಿಸಬಹುದು. ಇಷ್ಟಲ್ಲದೆ ಬಾಣಕವಿಯು ಹರ್ಷಚರಿತ [೬ ನೇ ಉಚ್ಛ್ವಾಸ] ದಲ್ಲಿ, ಅಜಾಗರೂಕತೆಯ ಕಾರಣದಿಂದ ಮೃತ್ಯುವಶರಾದ ರಾಜರ ಐತಿಹ್ಯವನ್ನು ದೃಷ್ಟಾಂತವಾಗಿ ಉದಹರಿಸುವ ಪ್ರಸಂಗವಶವಾಗಿ 'ಕಾಕವರ್ಣಃ ಶೈಶುನಾಗಿಶ್ಚ' ಎಂದು ಕಾಕವರ್ಣನನ್ನು ಹೆಸರಿಸಿದ್ದಾನೆ. 'ಶೈಶುನಾಗಿಃ (೦ < ಗಿ)' ಎಂಬುದು ಅಪತ್ಯಾರ್ಥದಿಂದ ರೂಪಿತವಾದ ಹೆಸರಾಗಿದ್ದು ಕಾಕವರ್ಣನು ಶಿಶುನಾಗನ ಸುತನಾಗಿರುವನೆಂದೂ ಮತ್ತು ಶಿಶುನಾಗನ ಅನಂತರವರ್ತಿಯಾಗಿ ಕಾಕವರ್ಣನು ರಾಜ್ಯಭಾರನಡೆಸಿರುವನೆಂದೂ ವ್ಯಕ್ತವಾಗುವುದು. ಇಷ್ಟಲ್ಲದೆ ಈ 'ಶಿಶುನಾಗ' ಮತ್ತು 'ಕಾಕವರ್ಣ' ಎಂಬ ಹೆಸರುಗಳು ಪಾಲಿ ಮತ್ತು ಪ್ರಾಕೃತ ಭಾಷೆಗಳಲ್ಲಿ 'ಸುಸುನಾಗ' ಮತ್ತು 'ಕಾಕವರ್ಣಿ' ಎಂದು ರೂಪಾಂತರ ಹೊಂದಿವೆ. ಇದರಂತೆ ದಿವ್ಯಾವದಾನದಲ್ಲಿ 'ಕಾಕವರ್ಣಿ' ಎಂಬ ಹೆಸರಿನ ಪೂರ್ವವರ್ತಿಯಾಗಿರಬೇಕಾಗಿದ್ದ 'ಶಿಶುನಾಗ' ಎಂಬ ಹೆಸರು ಪರಿಚ್ಯುತವಾಗಿದೆಯೆಂದು ಗ್ರಹಿಸಲವಕಾಶವಾಗುವುದು.

ಉನಾಯಿಭದ್ರ ಮತ್ತು ಸುಸುನಾಗರ ಮಧ್ಯವರ್ತಿಯಾಗಿ ರಾಜ್ಯಭಾರ ಮಾಡಿದ ರಾಜರ ಐತಿಹ್ಯವನ್ನು ನಿರೂಪಿಸುವಲ್ಲಿ ಮಹಾವಂಸೋಕ್ಕೃತಿಯ ಐತಿಹ್ಯವು

ಅಸಂಗತವಾದುದಾಗಿದೆ. ಆದ್ದರಿಂದ ದೀಪವಂಸೋಕ್ತಕೃತಿಯಲ್ಲಿ ನಿರ್ದೇಶಿತವಾಗಿರುವಂತೆ ಉದಾಯಿಭದ್ರ ಮತ್ತು ಸುಸುನಾಗರ ಮಧ್ಯವರ್ತಿಯಾಗಿ ಒಬ್ಬ ರಾಜನು ಮಾತ್ರ ರಾಜ್ಯಭಾರಮಾಡಿರುವನೆಂದು ಗ್ರಹಿಸುವುದು ಸುಸಂಗತವೆನಿಸುವುದು. ದಿವ್ಯಾವದಾನದಲ್ಲಿ ಉದಾಯಿಭದ್ರನ ಅನಂತರವರ್ತಿಯಾಗಿ ನಿರ್ದೇಶಿತವಾಗಿರುವ 'ಮುಂಡ' ಎಂಬ ಹೆಸರು ಹಿಂದೆ ಹೇಳಿರುವಂತೆ, ಗುಣದೋಷವ್ಯಂಜಕಾರ್ಥದಿಂದ ರೂಢಿಗತವಾದ ಹೆಸರಾಗಿರುವುದರಿಂದ ಈ ಹೆಸರಿನ ರಾಜನಿಗೆ ಮತ್ತೊಂದು ಹೆಸರದ್ದಿರಬೇಕೆಂಬುದು ಸುಸಂಗತವೆನಿಸುವುದು. ಆದ್ದರಿಂದ ದೀಪವಂಸೋದಲ್ಲಿ ಉದಾಯಿಭದ್ರನ ಅನಂತರವರ್ತಿಯಾಗಿ ನಿರ್ದೇಶಿತವಾಗಿರುವ 'ನಾಗದಾಸ' ಎಂಬ ಹೆಸರು ಮುಂಡರಾಜನ ನಿಜವಾದ ಹೆಸರಾಗಿದೆಯೆಂದು ಗ್ರಹಿಸಲವಕಾಶವಾಗುವುದು.

ಪ. ಪರ್ವ ಕಥೆಯಲ್ಲಿ, ಮುನಿವೇಷಧಾರಿಯಾದ ವ್ಯಕ್ತಿಯೋರ್ವನು ಉದಾಯಿಭದ್ರನನ್ನು ಕೊಲೆಗೈದನೆಂಬ ಹೇಳಿಕೆಯಿದೆಯಾದರೂ, ಈ ಹಂತಕನ ಪೂರ್ವೋತ್ತರ ಐತಿಹ್ಯವಿಷಯವು ಕೇವಲ ಅಸ್ಪಷ್ಟವಾಗಿದೆ. ಇವನ ಪೂರ್ವೈತಿಹ್ಯ ವಿಷಯವನ್ನು ಹೇಮಚಂದ್ರಾಚಾರ್ಯರು ಈ ಮುಂದಿನಂತೆ ಹೇಳಿದ್ದಾರೆ.

"ಇತಶ್ಚ ರಾಜ್ಞಾ ಏಕಸ್ಯಾಗಸಿ ಕಸ್ಮಿಂಶ್ಚಿದಾಗತೇ ।
ಆಚ್ಛೇದ್ಯುದಾಯಿನಾ ರಾಜ್ಯಂ ಪ್ರಾಜ್ಯವಿಕ್ರಮವಜ್ರಿಣಾ ॥೧೮೯॥
ಆಚಿನ್ನರಾಜ್ಯೋ ರಾಜಾ ಸ ನಶ್ಯನ್ನೇವ ವ್ಯಪದ್ಯತ ।
ತತ್ಸೂನುರೇಕಸ್ತು ಪರಿಭ್ರಮನ್ನುಜ್ಜಯಿನೀಂ ಯಯೌ ॥೧೯೦॥

[ಸ್ವರ್ಗ ೬]

ಇದರಿಂದ ಉದಾಯಿಭದ್ರನನ್ನು ವಧೆಮಾಡಿದ ವ್ಯಕ್ತಿಯ ಸ್ಪಷ್ಟ ಪೂರ್ವೈತಿಹ್ಯವು ಹೇಮಚಂದ್ರಾಚಾರ್ಯರಿಗೆ ಉಪಲಬ್ಧವಿರಲಿಲ್ಲೆಂದು ವ್ಯಕ್ತವಾಗುವುದು. ಇಂತೆಯೇ ಉದಾಯಿಭದ್ರನ ಹತ್ಯಾನಂತರ, ದಿವ್ಯಪಂಚಕಗಳ ಮೂಲಕ ಪಾಟಲೀಪುತ್ರನಗರದ ಸಿಂಹಾಸನಕ್ಕೆ ಆಯ್ಕೆಯಾದನೆಂದು ಹೇಳಲಾಗಿರುವ 'ನಂದ' ನ ಪೂರ್ವೋತ್ತರ ಐತಿಹ್ಯವಿಷಯವೂ ಅಸ್ಪಷ್ಟರೀತಿಯಲ್ಲಿದೆ. ಉದಾಯಿಭದ್ರನನ್ನು ಕೊಲೆಗೈದ ವ್ಯಕ್ತಿಯು ಉಜ್ಜಯಿನಿಯ ರಾಜನ ಬಳಿಹೋಗಿ ತಾನು ನಡೆಸಿದ ಕೃತ್ಯವನ್ನು ತಿಳಿಸಿದನೆಂದೂ ಪ್ರತಿಯಾಗಿ ಉಜ್ಜಯಿನೀರಾಜನು ಇವನನ್ನು ತರ್ಜನಾಪೂರ್ವಕ ತನ್ನ ನಗರದಿಂದ ಓಡಿಸಿದನೆಂದೂ ಹೇಳಿ, ಅನಂತರ ನಂದನ ವಿಷಯವಾಗಿ ಹೇಮಚಂದ್ರಾಚಾರ್ಯರು ಈ ಮುಂದಿನಂತೆ ಹೇಳಿದ್ದಾರೆ.

ಇತಶ್ಚ ತತ್ರೈವ ಪುರೇ ದಿವಾಕೀರ್ತೇರಭೂತ್ಸುತಃ ।
ಏಕಸ್ಯ ಗುಣಿಕಾಕುಕ್ಷಿಜನ್ಮಾ ನಂದೋಭಿಧಾನತಃ ॥೨೩೧॥

ಇಲ್ಲಿ 'ಇತಶ್ಚ ತತ್ರೈವ ಪುರೇ' ಎಂಬುದು– ಸಂದರ್ಭವಶದಿಂದ ಉಜ್ಜಯಿನೀನಗರದ ನಿರ್ದೇಶಕವಾಗಿಯಾದರೂ ಆಗಬಹುದು; ಅಥವಾ ಈ ಕಥೆಯು ಪ್ರಧಾನವಾಗಿ

ಪಾಟಲೀಪುತ್ರನಗರಕ್ಕೆ ಸಂಬಂಧಿಸಿರುವುದರಿಂದ, ಪಾಟಲೀಪುತ್ರನಗರದ ನಿರ್ದೇಶಕ ವಾಗಿಯಾದರೂ ಆಗಬಹುದು. ಹೀಗೆ ಇಲ್ಲಿಯೂ ಅಸ್ಪಷ್ಟತೆಯಿರುವುದನ್ನು ಗಮನಿಸಬಹುದು.

ಉದಾಯಿಭದ್ರನನ್ನು ಕೊಲೆಗೈದ ವ್ಯಕ್ತಿಯ ಐತಿಹ್ಯಾಂಶಗಳನ್ನು ವಿಶ್ಲೇಷಣಾ ಪೂರ್ವಕವಾಗಿ ಅರಿಯಲು ಸಹಾಯಕವಾಗಿರುವ ಎರಡು ಕಥೆಗಳು ಹರಿಷೇಣಾ ಚಾರ್ಯರಚಿತವಾದ ಬೃಹತ್ಕಥಾಕೋಶದಲ್ಲಿವೆ. ಉದಾಯಿಭದ್ರ ಮತ್ತು ನಂದ ರಾಜರ ವಿಷಯವಾಗಿ ಪರಿಶಿಷ್ಟಪರ್ವದಲ್ಲಿ ಉಕ್ತವಾಗಿರುವ ಕಥನಾಂಶಗಳು ಭಿನ್ನ ಭಿನ್ನರೂಪವಾಗಿ ಬೃಹತ್ಕಥಾಕೋಶದ 'ಜಯಸೇನ ನೃಪತಿ ಕಥಾನಕ' ಮತ್ತು 'ದೇವರತಿ ನೃಪಕಥಾನಕ' ಗಳಲ್ಲಿ ಹರಿದು ಹಂಚಿಹೋಗಿರುವುದನ್ನು ಗಮನಿಸಬಹುದು. ಈ ಕಥೆಗಳು ಸಂಗ್ರಹರೂಪವಾಗಿ ಈ ಮುಂದಿನಂತಿವೆ.

'ಜಯಸೇನನೃಪತಿಕಥಾನಕಂ.' [ಕಥಾಸಂಖ್ಯೆ–೧೫೬]

"ಶ್ರಾವಸ್ತೀನಗರಿಯಲ್ಲಿ ಜಯಸೇನನೆಂಬರಾಜನು ರಾಜ್ಯಭಾರಮಾಡುತ್ತಿದ್ದನು. ಇದೇ ನಗರದಲ್ಲಿ ಶಿವಗುಪ್ತನೆಂಬ ಭಿಕ್ಷುವು ಸಂಘಸಮೇತನಾಗಿ ವಾಸಿಸುತ್ತಿದ್ದನು. ರಾಜನು ಈ ಭಿಕ್ಷುವಿನಲ್ಲಿ ಭಕ್ತ್ಯಾದರಉಳ್ಳವನಾಗಿದ್ದನು.(?) ಒಮ್ಮೆ ರಾಚಾರ್ಯ ವೃಷಭಯತಿಯು ಸಂಘಸಮೇತನಾಗಿ ವಿಹಾರಾನುಕ್ರಮದಿಂದ ಶ್ರಾವಸ್ತೀನಗರಿಗೆ ಬಂದನು. ಜಯಸೇನನು ಈ ಯತಿಯ ಬಳಿ ಧರ್ಮಶ್ರವಣಮಾಡಿ ಬೌದ್ಧಧರ್ಮ ವನ್ನು ಬಿಟ್ಟು ಶ್ರಾವಕನಾದನು. ಇದರಿಂದ ಶಿವಗುಪ್ತಭಿಕ್ಷುವು ಕೋಪಗೊಂಡವ ನಾಗಿ ಜಯಸೇನನನ್ನು ವಧೆಗೊಳಿಸುವ ಉಪಾಯವನ್ನು ಮನಸ್ಸಿನಲ್ಲಿ ಧರಿಸಿದನು. ಪ್ರಥ್ವೀಪುರನಾಯಕನಾದ ಸುಮತಿಯು ಬೌದ್ಧಧರ್ಮಪರಾಯಣನಾಗಿದ್ದನು. ಇವನು ತನ್ನ ಗುರುವಾದ ಶಿವಗುಪ್ತನಿಗೆ, 'ಜಯಸೇನನು ಈ ಬುದ್ಧಧರ್ಮವನ್ನು ಬಿಟ್ಟು, ಜಿನನ (ಧರ್ಮವ) ನ್ನು ಆಶ್ರಯಿಸಿದ್ದಾನೆ' ಎಂದು ಹೇಳಿದನು.(?) ಈ ಮಾತನ್ನು ಕೇಳಿ ಶಿವಗುಪ್ತನು 'ಸಮಸ್ತಸುಖಕಾರಣವಾದ ಬುದ್ಧಧರ್ಮವನ್ನು ಬಿಟ್ಟು, ಎಲೈ ದುರಾಚಾರನಾದ ಜಯಸೇನನೆ, ಜಿನಧರ್ಮವನ್ನು ಹೊಂದಿದ್ದೀಯೆ. ಎಲೈ ಮೂಢನೆ, ನನ್ನನ್ನು ಇಚ್ಛಿಸುವಿಯಾದರೆ ಜಿನಧರ್ಮವನ್ನು ಬಿಟ್ಟು ಸುಖವಾಂಛೆಯಿಂದ ಬುದ್ಧ ಪ್ರಣೀತವಾದ ಧರ್ಮವನ್ನು ಅಂಗೀಕರಿಸು' ಎಂದು ಲೇಖನವೊಂದನ್ನು ಜಯಸೇನ ನಲ್ಲಿಗೆ ಕಳುಹಿದನು. ಈ ಲೇಖನವನ್ನು ನೋಡಿಯೂ ಜಯಸೇನನು ಜಿನಧರ್ಮ ವನ್ನು ಬಿಟ್ಟು ಬುದ್ಧಧರ್ಮವನ್ನು ಅಂಗೀಕರಿಸಲಿಚ್ಛಿಸಲಿಲ್ಲ. ಹೀಗೆ ಜಿನಧರ್ಮಾನು ರಕ್ತನಾದ ಜಯಸೇನನಲ್ಲಿಗೆ ಸುಮತಿಯು ಅಚಲದಂಡಸಂಯುಕ್ತನಾದ (?) ಸಹಸ್ರ ಭಟನೆಂಬುವನನ್ನು ಕಳುಹಿದನು. ಶ್ರಾವಸ್ತೀನಗರಿಯಲ್ಲಿ ಆನೆ, ಕುದುರೆ, ರಥ ಕಾಲಾಳುಗಳಿಂದ ಕೂಡಿದ ಸೇನಾ ವಿಭಾಗವನ್ನು [ಸ್ಕಂಧಾವಾರೋ (?)] ವ್ಯವಸ್ಥೆ ಗೊಳಿಸಲಾಯಿತು. ಸಹಸ್ರಭಟನು ಸ್ಕಂಧಾವಾರಕ್ಕೆ ಹೇಳಿದನು 'ಸ್ಕಂಧಾವಾರವು

ನನ್ನದು, ನರಕುಂಜರನಾವನೂ ಇಲ್ಲ. ದುರಾಚಾರನಾದ ಜಯಸೇನನನ್ನು ಕೊಲ್ಲುವ ನಾರು' ಎಂದು ಹೇಳಿದನು. ಗದ್ಗದರೀತಿಯಿಂದ ಹೇಳಿದ ಅವನ ದೀನವಚನವನ್ನು ಕೇಳಿದ ಅಭಿಸಾರಕ(?) ಉಪಾಸಕನು 'ನೀವು ಭಯವನ್ನು ಬಿಟ್ಟು ಸಮಾಧಾನ ಚಿತ್ತರಾಗಿರಿ. ದುಷ್ಟಚೇತಸ್ಕನೂ ಕೃತಘ್ನನೂ ಆದ ಜಯಸೇನನನ್ನು ನಾನು ಕೊಲ್ಲು ವೆನು' ಎಂದು ಹೇಳಿದನು. ಈ ರೀತಿಯಾಗಿ ಹೇಳಿ ಅಭಿಸಾರಕನು ವೃಷಭಸೇನ ಯತಿಯ ಬಳಿ ಸಾರಿ ಕಪಟವಿನಯಪೂರ್ವಕ ಮುನಿಧರ್ಮವನ್ನು ತಳೆದನು. ಹೀಗೆ ಇವನು ತಪಸ್ವಿಯಾದುದನ್ನು ಕೇಳಿದ ಜಯಸೇನರಾಜನು ಭಕ್ತಿಪೂರ್ವಕ ವಂದಿ ಸಲು ಬಂದನು. (ಪರಿವಾರ) ಜನರೆಲ್ಲರನ್ನೂ ಜಿನಾಯತನದ ಹೊರಗೆ ನಿಲ್ಲಿಸಿ, ಜಿನನನ್ನು ಮುನಿಗಣವನ್ನು ನಮಿಸಿ(?) ಜಿನಾಲಯವನ್ನು ಪ್ರವೇಶಿಸಿದನು. ಅನಂತರ ಮಂತ್ರನಿಮಿತ್ತದಿಂದ (ಮಂತ್ರನಿಮಿತ್ತೇನ ?) ಜಿನಚೈತ್ಯಾಲಯದೊಳಗೆ ಭಕ್ತಿಸಂಪನ್ನ ರಾಜಾಚಾರ್ಯ ಅಭಿಸಾರಕನು ಪ್ರವೇಶಿಸಿದನು (?) ಜಿನಾಯತನದ ಗರ್ಭಗೃಹ ದಲ್ಲಿದ್ದ ಆ ಮೂವರು ಪ್ರೀತಮಾನಸರಾಗಿ ಸ್ವದುಃಖಸುಖಸಂಪನ್ನರಾಗಿ ಮಾತನಾಡು ತ್ತಿದ್ದರು (?) ರಾಜನು ಮಂಡಿಯೂರಿ ಆಚಾರ್ಯಪಾದಗಳಿಗೆ ಶಿರಸಾ ಅಭಿವಂದಿ ಸುತ್ತಿರಲು, ಅಭಿಸಾರಕನು ಹರಿತವಾದ ಖಡ್ಗವನ್ನು ತೆಗೆದುಕೊಂಡು (ರಾಜನ) ಕುತ್ತಿಗೆಯನ್ನು ಕತ್ತರಿಸಿ ಮರೆಯಾದನು. ಆಗ ಆಚಾರ್ಯನು ಜಿನಸಮ್ಮುಖದಲ್ಲಿ ಮೃತ ನಾದ ರಾಜನನ್ನು ಕಂಡು, ಆತ್ಮವಿಘಾತಮಾಡಿಕೊಂಡಲ್ಲದೆ ಇಂತಹ (ಇದರಿಂದಾ ಗುವ) ಉಪಪ್ಲವವು ಶಮನವಾಗುವುದಿಲ್ಲೆಂದು ಪರಿಭಾವಿಸಿ, ಕೈಯ್ಯಿಂದ ನೃಪರಕ್ತವನ್ನು ತೆಗೆದುಕೊಂಡು, ಅಲ್ಲಿಯೇಗೋಡೆಯಲ್ಲಿ 'ಈ ಕಾರ್ಯವು ನನ್ನಿಂದಾದುದಲ್ಲ, ಅಭಿಸಾ ರಕನಿಂದಾದು, ಲೋಕಾಪವಾದ ಭೀತನಾದ, ಮುನಿವೇಷವಿಧಾಯಿಯಾದ ನನ್ನಿಂದ ಉಪಪ್ಲವಶಮನಾರ್ಥವಾಗಿ ಆತ್ಮವಧೆಯು ಮಾಡಿಕೊಳ್ಳಲಾಗಿದೆ' ಎಂದು ಬರೆದು, ಪಂಚನಮಸ್ಕಾರ ಮತ್ತು ಧರ್ಮಧ್ಯಾನಪರಾಯಣನಾಗಿ, ಕತ್ತಿಯಿಂದ ತನ್ನ ಹೊಟ್ಟೆ ಯನ್ನಿರಿದುಕೊಂಡು ದಿವಂಗತನಾದನು. ಜಯಸೇನನ ಮಗನಾದ ವೀರಸೇನನು ಇವರೀರ್ವರು ಹತರಾಗಿರುವುದನ್ನು ಕಂಡು ಸರ್ವಸಂಘಕ್ಕೆ ಉಪಸರ್ಗವುಂಟುಮಾಡಿ ದನು. ಅನಂತರ ಜಿನಮಂದಿರದ ಗೋಡೆಯಮೇಲೆ ಆಚಾರ್ಯಮುನಿಯಿಂದ ಬರೆ ಯಲಾಗಿದ್ದ ವಾಕ್ಯವನ್ನೋದಿ ಪಶ್ಚಾತ್ತಾಪಪಟ್ಟು ಜಿನಧರ್ಮಪರನಾದನು."

'ದೇವರತಿನೃಪಕಥಾನಕಂ' [ಕಥಾ ಸಂ. ೮೫]

"ವಿನೀತಾದೇಶದ ಸಾಕೇತನಗರದಲ್ಲಿ ದೇವರತಿಯೆಂಬ ರಾಜನಿದ್ದನು. ಇವನು ತನ್ನ ಪ್ರಿಯಪತ್ನಿಯಾದ (-ರಕ್ತಾ-) ಮಿತ್ರವತೀ ಮಹಾದೇವಿಯಲ್ಲಿ ಅತಿಶಯವಾದ ಅನುರಕ್ತಿಯುಳ್ಳವನಾಗಿ, ಶತ್ರುಗಳು ನಗರಕ್ಕೆ ಮುತ್ತಿಗೆಹಾಕಿದ ಸಮಯದಲ್ಲಿಯೂ ರಾಜಕಾರ್ಯಪರಾಙ್ಮುಖನಾಗಿದ್ದನು. ಇದರಿಂದ ಅಸಂತುಷ್ಟರಾದ ಮಂತ್ರಿಪ್ರಮುಖರು ಇವನನ್ನು ರಾಜ್ಯದಿಂದ ಹೊರಗಟ್ಟಿ, ಇವನ ಸುತನಾದ ಜಯಸೇನನಿಗೆ ಪಟ್ಟಕಟ್ಟಿ

ದರು. ರಾಜ್ಯದಿಂದ ಹೊರದೂಡಲ್ಪಟ್ಟ ದೇವರತಿಯು ಪತ್ನೀಸಮೇತನಾಗಿ ವನಮಧ್ಯ ದಲ್ಲಿ ಮಾರ್ಗಕ್ರಮಣಮಾಡುತ್ತಿರಲು, ಪತ್ನಿಯಾದ ಮಿತ್ರವತಿಯು ಹಸಿವು, ತೃಷೆ ಗಳಿಂದ ಬಳಲಿದಳು. ಆಗ ದೇವರತಿಯು ತನ್ನ ತೊಡೆಯಿಂದ ಮಾಂಸವನ್ನೂ ಬಾಹುವಿನಿಂದ ರಕ್ತವನ್ನೂ ತೆಗೆದು ಔಷಧಸಂಯೋಗಪೂರ್ವಕ ಆಹಾರ ಪಾನೀಯ ಗಳನ್ನು ಕಲ್ಪಿಸಿ ಮಿತ್ರವತಿಗಿತ್ತನು. ಮುಂದೆ ಇವರೀರ್ವರು ವನವನ್ನು ದಾಟಿ ಯಮುನಾನದೀತೀರದಲ್ಲಿದ್ದ ಶ್ರೀಪುರವನ್ನು ಸೇರಿದರು. ಈ ನಗರದಲ್ಲಿ ಸಂಗೀತನೃತ್ಯ ಜ್ಞನಾದ ಕುಂಟನೊಬ್ಬನಿದ್ದನು. ಇವನಲ್ಲಿ ಅನುರಕ್ತಳಾದ ಮಿತ್ರವತಿಯು ತನ್ನ ಪತಿ ಯನ್ನು ಕೊಂದುಹಾಕಲು ನಿಶ್ಚಯಿಸಿದಳು. ಅನಂತರ ದೇವರತಿಯ ಹುಟ್ಟುಹಬ್ಬದ ನಿಮಿತ್ತ ಸ್ನಾನಮಾಡಿಸುವ ನೆಪದಿಂದ ಅವನನ್ನು ಯಮುನಾನದಿಗೆ ಕರೆದೊಯ್ದು ಸ್ನಾನಮಾಡಿಸಿ ಅರ್ಚನೆಯ ನೆಪದಿಂದ ಕಾಲುಗಳಿಗೆ ಹೂವಿನಹಾರವನ್ನು ಸುತ್ತಿ ನದಿಯ ಆಳವಾದ ನೀರಿನಲ್ಲಿ ತಳ್ಳಿಬಿಟ್ಟಳು. ಈ ರೀತಿಯಾಗಿ ನೀರಿನಲ್ಲಿ ತಳ್ಳಲ್ಪಟ್ಟ ರಾಜನು ನದಿಯ ಪ್ರವಾಹದಲ್ಲಿ ತೇಲುವವನಾಗಿ ಮಂಗಲಪುರವನ್ನು ಸೇರಿದನು. ಪೂರ್ವೋಕ್ತನಾದ ಶಾಂತದೇವರತಿಯು (?) ಈ ಪಟ್ಟಣದ ಬಳಿಯಿದ್ದ ದೊಡ್ಡ ಮರನೊಂದರ ತಲದಲ್ಲಿ ಕುಳಿತಿದ್ದನು. ಈ ಪಟ್ಟಣದ ಪುತ್ರವಿಹೀನನಾಗಿದ್ದ ಶ್ರೀವರ್ಧನ ರಾಜನು ಅದೇ ದಿನ ಮೃತನಾಗಿರಲು ಪುರಪ್ರಮುಖರು ರಾಜನೊಬ್ಬನ ಆಯ್ಕೆಗಾಗಿ ರಾಜಹಸ್ತಿಯನ್ನು ಸಿಂಗರಿಸಿ ಮಂಗಲದ್ರವ್ಯಸಮೇತವಾಗಿ ಸಂಚರಿಸಲು ಬಿಟ್ಟರು. ಆ ರಾಜಹಸ್ತಿಯು ದೇವರತಿಗೆ ಕುಂಭದಿಂದ ಅಭಿಷೇಕಿಸಿ ಅವನನ್ನು ಸೊಂಡಲಿನಿಂದೆತ್ತಿ ಬೆನ್ನಮೇಲೇರಿಸಿಕೊಂಡು ತಂದು ಸಿಂಹಾಸನದ ಮೇಲೆ ಕುಳ್ಳಿರಿಸಿತು. ಪುರಪ್ರಮು ಖರು ಇವನಿಗೆ ರಾಜ್ಯಭಾರವನ್ನು ಒಪ್ಪಿಸಿದರು. ದೇವರತಿಯು ಕುಂಟರಿಗೆ ಭೂರಿ ಯಾದ ದಾನವನ್ನು ಕೊಡುವವನಾಗಿ ಸ್ತ್ರೀಯರ ಮುಖದರ್ಶನಮಾಡದೆ, ದಕ್ಷರೀತಿ ಯಿಂದ ರಾಜ್ಯಪರಿಪಾಲನೆಮಾಡುತ್ತಿದ್ದನು.

ಇತ್ತ ಕುಂಟನಲ್ಲಿ ಅನುರಕ್ತಳಾದ ಮಿತ್ರವತಿಯು ಆ ಕುಂಟನೊಡನೆ ಇಚ್ಛಾನು ಸಾರ ಭೋಗಾಸಕ್ತಳಾಗಿದ್ದಳು. ಒಂದುದಿನ ದೇಶಿಕನೋರ್ವನು 'ಎಲೈ ಪತಿವ್ರತೆ ಯಾದ ದೇವಿಯೇ ! ದಿಗಂತರವ್ಯಾಪ್ತಕೀರ್ತಿಯುಳ್ಳ ಮಂಗಲಪುರದ ಸ್ವಾಮಿ ಯಾದ ಜಯಸೇನ ರಾಜನು ಅಬಲರಾದ ಕುಂಟರಿಗೆ, ಪತಿವ್ರತೆಯರಿಗೆ ಇಚ್ಛಿತಾ ಧಿಕವಾದ ಭೂರಿ ದಾನವನ್ನು ಸದಾಕಾಲದಲ್ಲಿಯೂ ಕೊಡುತ್ತಲಿರುವನು ; ಅವನ ಬಳಿ ಹೋಗು, ಅವನಿಂದ ನಿನಗೆ ಬಹುವಾದ ಸನ್ಮಾನ ಮತ್ತು ಧನವು ದೊರೆಯು ವುದು' ಎಂದು ಹೇಳಿದನು. ಅಂತೆಯೇ ಅವಳು ವೀಣೆಯೊಡನೆ ಕುಂಟನನ್ನು ಹೆಗಲ ಮೇಲೇರಿಸಿಕೊಂಡು ಮಂಗಲಪುರವನ್ನು ಸಮೀಪಿಸಿದಳು. ಅಲ್ಲಿ ಕೌತುಕಾವಿಷ್ಟರಾದ ಜನರು ಇವಳನ್ನು 'ಎಲೈ ದೇವಿಯೇ ! ಹೆಗಲಮೇಲಿರುವ ಈ ದ್ವಿಜನಾರು ?' ಎಂದು ಕೇಳಿದರು. ಅದಕ್ಕೆ ಉತ್ತರವಾಗಿ ಮಿತ್ರವತಿಯು 'ಪ್ರೀತಮಾನಸರಾದ ದೇವದ್ವಿಜ ರಿಂದ ಇವನು ನನಗೆ ಪತಿಯಾಗಿ ಕೊಡಲ್ಪಟ್ಟಿದ್ದಾನೆ. ನಾನು ಪತಿವ್ರತೆಯಾಗಿ

ವಿನಯಾಚಾರಪೂರ್ವಕ ಇವನಿಗಾಗಿ ಸಂತೋಷದಿಂದ ಇರುವೆನು' ಎಂದು ಹೇಳಿದಳು. ಇದನ್ನು ಕೇಳಿದ ಪುರಜನರು 'ಎಲೈ ಪತಿವ್ರತೆಯೇ! ನಿನಗೆ ಮಂಗಲವು ಮತ್ತು ಭಾರ್ಯಾಪುತ್ರಯುಕ್ತರಾದ ನಮಗೂ ಮಂಗಲವು' ಎಂದು ಹೇಳಿ ಅವಳನ್ನು ಗಂಧ ಪುಷ್ಪಾದಿಗಳಿಂದ ಅರ್ಚಿಸಿ, ದಾನವಿತ್ತು ಸನ್ಮಾನಿಸಿದರು. ಹೀಗೆ ಪುರಜನರಿಂದ ಸನ್ಮಾನಿತಳಾದ ಮಿತ್ರವತಿಯು ಅರಮನೆಯ ಬಾಗಿಲಬಳಿ ಬಂದುನಿಂತಳು. ದೌವ್ವಾರಿ ಕರು ಅವಳನ್ನು ರಾಜನ ಸನ್ನಿಧಾನಕ್ಕೆ ಕರೆದೊಯ್ದರು. ರಾಜನು ಸ್ತ್ರೀಯರನ್ನು ನೋಡಲಿಚ್ಛಿಸುತ್ತಿರಲಿಲ್ಲವಾಗಿ ಅವನೆದುರಿನಲ್ಲಿ ತೆರೆಯೊಂದನ್ನು ಹಾಕಲಾಗಿದ್ದಿತು. ಹೀಗೆ ತೆರೆಯಾಚೆ ಮರೆಯಾಗಿದ್ದ ರಾಜನನ್ನು ಕುರಿತು ಮಿತ್ರವತಿಯು 'ಎಲೈ ಅರಿ ಮರ್ಧನನೇ! ಈ ಆಜ್ಞಾಬಲೈಶ್ವರ್ಯಗಳೊಡನೆ ಚಿರಕಾಲ ಬಾಳು; ಧನವಸ್ತ್ರಾದಿ ಗಳನ್ನು ನನಗೆ ಕೊಡು, ನಾನು ಪತಿವ್ರತೆಯಾದ ಆ ಮಿತ್ರವತಿಯು' ಎಂದು ಹೇಳಿ ದಳು. ಆಗ ರಾಜನು ಆಶ್ಚರ್ಯಚಕಿತನಾಗಿ 'ಎಲೈ ಕುಲಟೆಯೇ! ನನ್ನ ತೊಡೆ ಮತ್ತು ತೋಳುಗಳ ಮಾಂಸವು ನಿನ್ನಿಂದ ತಿನ್ನಲ್ಪಟ್ಟಿತು. ಕೀಲಾಲ ಜಾಲವು ಕುಡಿ ಯಲ್ಪಟ್ಟಿತು, ಹಾಗೂ ಯಮುನಾ ನದೀಪ್ರವಾಹದಲ್ಲಿ ನಿನ್ನಿಂದ ನಾನು ತಳ್ಳಲ್ಪಟ್ಟೆನು, ಹೇ ಮಿತ್ರಮತಿ, ಕ್ರೂರಿಯೇ! ನಿನಗೆ ಸತೀತ್ವವು ಘಟಿಸಿದೆಯೇ?' ಎಂದು ಹೇಳಿ, ಸೇವಕನಿಂದ ತೆರೆಯನ್ನು ಸರಿಯಿಸಿ, ಕರುಣಾಯುಕ್ತನಾಗಿ ಅವರೀರ್ವರಿಗೆ ಭೂರಿ ಯಾದ ದಾನವಿತ್ತನು. ಅನಂತರ ಜಯಸೇನಕುಮಾರನಿಗೆ ರಾಜ್ಯವನ್ನು ಕೊಟ್ಟು ದಮವರ ಯತಿಗಳಬಳಿ ಮುನಿದೀಕ್ಷೆಪಡೆದು ನಾನಾ ವಿಧವಾದ ತಪಸ್ಸನ್ನು ಆಚರಿಸು ವವನಾಗಿ ದೇವರತಿ ಸಾಧುವು ಪ್ರೀತಮಾನಸನಾಗಿದ್ದನು.

|| ಇಂತು ರಕ್ತಾಸಂಗುಲ ನಿಮಿತ್ತವಾಗಿ ಯಮುನಾ ನದಿಯಲ್ಲಿ ತಳ್ಳಲ್ಪಟ್ಟ ದೇವರತಿ ನೃಪನ ಕಥಾನಕವು ||

ಮೇಲ್ಕಂಡ 'ಜಯಸೇನನೃಪತಿ ಕಥಾನಕ' ದಲ್ಲಿ ನಿರೂಪಿತವಾಗಿರುವ ಜಯ ಸೇನನ ಕೊಲೆಯ ಪ್ರಸಂಗ ಹಾಗೂ ಪರಿಶಿಷ್ಟಪರ್ವದ ಉದಂತದಲ್ಲಿ ನಿರೂಪಿತವಾಗಿ ರುವ ಉದಾಯಿಭದ್ರನ ಕೊಲೆಯ ಪ್ರಸಂಗಗಳು ಏಕೈಕ ಘಟನೆಯ ಪ್ರತಿಚಿತ್ರವಾಗಿ ರುವುದು ಸ್ಪಷ್ಟವಿದೆ. ಶ್ವೇತಾಂಬರ ಮತ್ತು ದಿಗಂಬರ ಜೈನ ಶಾಖೆಗಳ ಧಾರ್ಮಿಕಕಥೆ ಗಳು ಸಾಧಾರಣವಾಗಿ ಏಕೈಕ ಆಮ್ನಾಯದ ಮೂಲಾಧಾರದಿಂದ ಒಡಮೂಡಿದವು ಗಳಾಗಿವೆಯೆಂಬುದು ವಿದಿತವಿದೆ. ಆದ್ದರಿಂದ ಪರಿಶಿಷ್ಟಪರ್ವದ ಉದಾಯಿಭದ್ರನ ಕೊಲೆಯ ಪ್ರಸಂಗ ಹಾಗೂ ಬೃ. ಕ. ಕೋಶದ ಜಯಸೇನನೃಪತಿಯ ಕೊಲೆಯ ಪ್ರಸಂ ಗಗಳು ಮೂಲತಃ ಏಕೈಕ ಘಟನೆಯ ಪ್ರಸಂಗವಾಗಿದ್ದಿರಬೇಕೆಂದು ಭಾವಿಸಲವಕಾಶ ವಾಗುವುದು. ಆದರೆ ಪರಿಶಿಷ್ಟಪರ್ವದಲ್ಲಿ ಹಾಗೂ ಬೃ. ಕ. ಕೋಶದ ಜಯಸೇನನೃಪತಿ ಕಥಾನಕದಲ್ಲಿ ಪರಸ್ಪರ ಅಸಂಬದ್ಧವೆನಿಸಿರುವಂತೆ ಕೊಲೆಯ ಘಟನೆಗೆ ಸಂಬಂಧಿಸಿದ ವ್ಯಕ್ತಿಗಳನ್ನು ಮತ್ತು ಸ್ಥಾನಗಳನ್ನು ಬೇರೆಬೇರೆ ಹೆಸರುಗಳಿಂದ ನಿರ್ದೇಶಿಸಲಾಗಿದೆ.

ಆದ್ದರಿಂದ ಈ ಕಥೆಗಳಲ್ಲಿ ಅಂತರ್ಗತವಾಗಿರುವ ಐತಿಹಾಸಿಕ ತಥ್ಯವು ಸಂದಿಗ್ಧತಾವಶ ವಾಗಲು ಅವಕಾಶವಾಗಿದೆ. ಇಂತಿದ್ದರೂ ಜೈನಆಮ್ನಾಯದ ಧಾರ್ಮಿಕಕಥೆಗಳ ಮಧ್ಯೆ ಪರಸ್ಪರವಾಗಿ ಈ ರೀತಿಯಿಂದ ವ್ಯತ್ಯಾಸಗಳುಂಟಾಗಿರಲು ಕಾರಣವೇನೆಂಬುದರ ಬಗ್ಗೆ ಹಿಂದೆ ಉಲ್ಲೇಖಿಸಲಾಗಿರುವ ಸನ್ಮಾನ್ಯ ನಾಥೂರಾವ್‌ಪ್ರೇಮಿಯವರ ಅಭಿ ಪ್ರಾಯವು ಪ್ರಕೃತ ಸಂದರ್ಭದ ಸಂದಿಗ್ಧತೆಯನ್ನು ನಿವಾರಿಸುವಂತಹುದಾಗಿದೆ. ಜೈನಸಂಪ್ರದಾಯದ ಕಥೆಗಳೆಲ್ಲವೂ ಮೂಲತಃ ಸೂತ್ರಮಾದರಿಯ ನಾಮಾವಲೀ ನಿಬಂಧನರೂಪದಲ್ಲಿದ್ದುವೆಂದೂ ಈ ನಾಮಾವಲೀನಿಬಂಧನಗಳ ಆಧಾರದಿಂದ ಗುರು ಪರಂಪರಾಗತವಾದ ಉಪದೇಶಕ್ರಮಗಳನ್ನು ಅನುಸರಿಸಿ ಉಪದೇಶಕರು ಕಥೆಗಳನ್ನು ಪಲ್ಲವಿಸಿ ನಿರೂಪಿಸುತ್ತಿದ್ದರಾದುದರಿಂದ ಕಾಲಾನುಕ್ರಮದಲ್ಲಿ ಕಥೆಗಳ ಮೂಲಸ್ವರೂ ಪವು ಬದಲ್ಗೊಂಡು ವ್ಯತ್ಯಾಸಗಳೇರ್ಪಡಲು ಕಾರಣವಾಗಿದೆಯೆಂದು ಸನ್ಮಾನ್ಯ ನಾಥೂರಾವ್‌ಪ್ರೇಮಿಯವರು ಅಭಿಪ್ರಾಯಪಟ್ಟಿದ್ದಾರೆ. ಇದರಂತೆ, ಗುರುಪರಂ ಪರೆಯನುಕ್ರಮದಲ್ಲಿ ಸ್ಮೃತಿರೂಪವಾಗಿ ಉಳಿದುಬಂದ ನಾಮಾವಲೀರೂಪದ ಕಥಾ ನಿಬಂಧನಗಳಲ್ಲಿ ಉಪದೇಶಕರ ವಿಸ್ಮೃತಿಯೇ ಮೊದಲಾದ ಕಾರಣಗಳಿಂದ ಕಾಲಾ ನುಕ್ರಮವಾಗಿ ನ್ಯೂನಾತಿರೇಕರೂಪದ ದೋಷಗಳೇರ್ಪಟ್ಟಿವೆಯೆಂದು ವ್ಯಕ್ತವಾಗು ವುದು. ಈ ಹಿಂದೆ ಉಲ್ಲೇಖಿಸಲಾಗಿರುವ ಜಯಸೇನನೃಪತಿಕಥಾನಕವನ್ನು ಸೂಕ್ಷ್ಮ ವಾಗಿ ಗಮನಿಸಿದಲ್ಲಿ ಕಥೆಗೆ ಸಂಬಂಧಿಸಿದ ಘಟನಾವಳಿಗಳ ಪ್ರರೂಪಣೆಯಲ್ಲಿ ಅನೇಕ ವಾದ ನ್ಯೂನತೆಗಳಿರುವುದು ಗೋಚರವಾಗುವುದು. ಉದಾಹರಣೆಗಾಗಿ: ಶಿವಗುಪ್ತ ಭಿಕ್ಷು, ಪೃಥ್ವೀಪುರನಾಯಕನಾದ ಸುಮತಿ, ಸಹಸ್ರಭಟ, ಅಭಿಸಾರಕ ಉಪಾಸಕ ರನ್ನು ಕುರಿತು ಉಕ್ತವಾಗಿರುವ ಕಥಾಂಶಗಳು ಅಸಂಬದ್ಧವಾಗಿವೆ. ಹೀಗೆಯೇ ನೂತನವಾಗಿ ದೀಕ್ಷಿತನಾದ ಅಭಿಸಾರಕ ಉಪಾಸಕನನ್ನು ವಂದಿಸಲೋಸುಗ ಜಿನಾಯ ತನಕ್ಕೆ ಜಯಸೇನನು ಬಂದ ಪ್ರಸಂಗದ ನಿರೂಪಣೆಯು ಅಸಂಗತವೂ, ಅಸ್ಪಷ್ಟವೂ ಆಗಿದೆಯೆಂಬುದು ಈ ಮುಂದಿನ ಶ್ಲೋಕಗಳ ಪರಿಶೀಲನದಿಂದ ಸ್ಪಷ್ಟವಾಗುವುದು:

ಸ್ಥಾಪಯಿತ್ವಾಜನಂ ಸರ್ವಂ ಜಿನಾಯತನ-ಬಾಹ್ಯತಃ।<br>
ಜಿನಂ ಮುನಿಗಣಂ ನತ್ವಾ ಪ್ರವಿಶ್ಯಾತ್ರಜಿನಾಲಯಂ ॥<br>
ತತೋ ಮಂತ್ರನಿಮಿತ್ತೇನ ಜಿನಚೈತ್ಯಾಲಯಾಂತರೇ।<br>
ವಿವೇಶ ಭಕ್ತಿಸಂಪನ್ನೋ ರಾಜಾಚಾರ್ಯೋಭಿಸಾರಕಃ ॥

ಇಲ್ಲಿ 'ಮಂತ್ರನಿಮಿತ್ತೇನ' ಎಂಬ ಮತ್ತು 'ರಾಜಾಚಾರ್ಯೋಭಿಸಾರಕಃ' ಎಂಬ ಪದ ಪ್ರಯೋಗಗಳು ಪ್ರಕೃತ ಸಂದರ್ಭದ ದೃಷ್ಟಿಯಿಂದ ಕೇವಲ ಅರ್ಥಹೀನವಾಗಿವೆ.

ಹೀಗೆ ಬೃ. ಕ. ಕೋಶದ ಕಥೆಯಲ್ಲಿ ಕಂಡುಬರುವ ಈ ನ್ಯೂನತೆಗಳಿಗೆ ಕಾರಣ ವೇನೆಂಬುದನ್ನು ಸುಲಭವಾಗಿ ಊಹಿಸಬಹುದು. ಪೂರ್ವೋಕ್ತವಾದ ನಾಮಾವಲೀ ನಿಬಂಧನದಲ್ಲಿ ಉಪದೇಶಕರ ವಿಸ್ಮೃತಿಯೇ ಮೊದಲಾದ ಕಾರಣಗಳಿಂದ ಏರ್ಪಟ್ಟದ್ದ

ನ್ಯೂನಾತಿರೇಕಗಳಲ್ಲದೆ, ಈ ನಾಮಾವಲೀನಿಬಂಧನದ ಆಧಾರದಿಂದ ಪಲ್ಲವಿತವಾದ ಕಥೆಗಳನ್ನು ಲಿಪಿಬದ್ಧಗೊಳಿಸಿದ ಅನಂತರ ಗ್ರಂಥಗಳ ಪತ್ರಗಳು ಮತ್ತು ಪತ್ರಭಾಗ ಗಳು ತ್ರುಟಿತವಾಗಿದ್ದು ಇಂತಹ ಓಲೆಗ್ರಂಥಗಳಾಧಾರದಿಂದ ಲೇಖಕರು ಗ್ರಂಥಪ್ರತಿ ಗಳನ್ನು ರಚಿಸಿದ ಸಮಯದಲ್ಲಿಯೂ ನ್ಯೂನಾತಿರೇಕಗಳುಂಟಾಗಿರುವ ಸಂಭವವಿಲ್ಲದಿಲ್ಲ. ಬೃ. ಕ. ಕೋಶದ ಈ ಕಥೆಮಾತ್ರವಲ್ಲದೆ ಇತರ ಅನೇಕ ಕಥೆಗಳಲ್ಲಿಯೂ ಇಂತಹ ನ್ಯೂನಾತಿರೇಕಗಳಿರುವುದನ್ನು ಗಮನಿಸಬಹುದು. ಈ ಕಥೆಗಳಲ್ಲಿ ಕೆಲವೊಮ್ಮೆ ಒಂದು ಕಥೆಯ ಅಂಶವು ಮತ್ತೊಂದು ಕಥೆಯಲ್ಲಿ ಸಂಯೋಜಿತವಾಗಿರುವುದನ್ನು ಗುರುತಿಸ ಬಹುದು. ಇಂತೆಯೇ ಪೂರ್ವೋಲ್ಲಿಖಿತವಾದ 'ಜಯಸೇನ ನೃಪತಿ ಕಥಾನಕ' ಮತ್ತು 'ದೇವರತಿ ನೃಪ ಕಥಾನಕ' ಗಳಲ್ಲಿ ಅನೇಕ ರೀತಿಯ ನ್ಯೂನಾತಿರೇಕಗಳು ಏರ್ಪಟ್ಟಕಾರಣ ಮೂಲಭೂತವಾದ ಐತಿಹಾಸಿಕ ಪ್ರಸಂಗಗಳು ಅಸ್ತವ್ಯಸ್ತವಾಗಲು ಅವಕಾಶವಾಗಿದೆಯೆಂದು ಭಾವಿಸಲವಕಾಶವಿದೆ.

ಪರಿಶಿಷ್ಟಪರ್ವದ ಉದಂತದಲ್ಲಿ ಉದಾಯಿಭದ್ರನನ್ನು ಕೊಲೆಗೈದ ವ್ಯಕ್ತಿಯ ಪೂರ್ವೋತ್ತರ ಐತಹ್ಯವು ಪರಿಚ್ಯುತವಾಗಿದೆಯೆಂಬುದು ಸ್ಪಷ್ಟವಿದೆ. ಜಯಸೇನನೃಪತಿ ಕಥಾನಕದಲ್ಲಿ ಈ ಕೊಲೆಗಾರನ ಪೂರ್ವೈತಿಹ್ಯವು ಅಸ್ತವ್ಯಸ್ತರೀತಿಯಿಂದ ಅಸ್ಪಷ್ಟ ವಾಗಿ ಉಳಿದುಬಂದಿರುವುದನ್ನು ಗುರುತಿಸಬಹುದು. ಇಷ್ಟಲ್ಲದೆ ಪರಿಶಿಷ್ಟಪರ್ವದ ಉದಾಯಿಭದ್ರನ ಉದಂತ ಮತ್ತು ಬೃ. ಕ. ಕೋಶದ ಜಯಸೇನನೃಪತಿ ಕಥಾನಕ ಗಳನ್ನು ಏಕೈಕಮೂಲ ಆಮ್ನಾಯದ ನಾಮಾವಲೀನಿಬಂಧನದಾಧಾರದಿಂದ ಪಲ್ಲವಿತ ವಾದ ಕಥೆಗಳಾಧಾರದಿಂದ ರಚಿಸಲಾಗಿದೆಯಾದುದರಿಂದ, ಈ ಎರಡೂ ಕಥೆಗಳಲ್ಲಿ ನಿರ್ದೇಶಿತವಾಗಿರುವ ವ್ಯಕ್ತಿ, ದೇಶ, ನಗರಗಳ ಹೆಸರುಗಳು ಮೂಲ ಆಮ್ನಾಯದ ನಾಮಾವಲೀ ನಿಬಂಧನದಲ್ಲಿದ್ದಿರಬೇಕೆಂಬುದು ಸಂಭಾವ್ಯವೆನಿಸುವುದು. ಆದ್ದರಿಂದ ಈ ಕಥೆಗಳಲ್ಲಿ ನಿರ್ದೇಶಿತವಾಗಿರುವ ಘಟನೆಗಳು ಉದಾಯಿಭದ್ರನ ಉದಂತ ಮತ್ತು ಜಯ ಸೇನ ನೃಪತಿ ಕಥಾನಕಗಳಿಂದ ನಿರ್ದೇಶಿತವಾಗುವಂತೆ ಪಾಟಲೀಪುತ್ರನಗರ ಮತ್ತು ಶ್ರಾವಸ್ತೀನಗರಗಳೆರಡಕ್ಕೂ ಸಂಬಂಧಿತವಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗು ವುದಲ್ಲದೆ ಪಾಟಲೀಪುತ್ರನಗರಕ್ಕೆ ಸಂಬಂಧಿಸಿದಂತಿದ್ದ ಘಟನಾವಳಿಗಳು ಕಾರಣಾಂತ ರದಿಂದ ಕಾಲಾನುಕ್ರಮದಲ್ಲಿ ಪರಿಚ್ಯುತವಾದಕಾರಣ, ಈ ಘಟನಾವಳಿಗಳೆಲ್ಲವೂ ಶ್ರಾವಸ್ತೀ ನಗರದಲ್ಲಿ ಘಟಿಸಿದಂತೆ ಜಯಸೇನ ನೃಪತಿ ಕಥಾನಕದಲ್ಲಿ ಸಂಯೋಜಿಸ ಲಾಗಿದೆಯೆಂದು ಗುರುತಿಸಲವಕಾಶವಿದೆ.

ಪರಿಶಿಷ್ಟಪರ್ವದಲ್ಲಿ ಉದಾಯಿಭದ್ರನ ಕೊಲೆಯ ಹಿನ್ನೆಲೆಯಾಗಿ ಯಾವ ಘಟನೆಯು ನಡೆಯಿತೆಂದು ಹೇಳಲಾಗಿದೆಯೋ ಅದೇ ಘಟನೆಯು ಶ್ರಾವಸ್ತೀನಗರದ ಜಯಸೇನನ ಕೊಲೆಯ ಪ್ರಸಂಗದ ಹಿನ್ನೆಲೆಯ ಘಟನೆಯಾಗಿ ಬೃ. ಕ. ಕೋಶದ ಜಯಸೇನನೃಪತಿಕಥಾನಕದಲ್ಲಿ ನಿರೂಪಿತವಾಗಿದೆ.

ಪಟ್ಟಹಸ್ತಿಯು ಕುಂಭಾಭಿಷೇಕಮಾಡಿದ ನಿಮಿತ್ತದಿಂದ ನಂದನನ್ನು ಪಾಟಲೀಪುತ್ರನಗರದ ರಾಜನನ್ನಾಗಿ ಪೌರರು ವರಿಸಿದರೆಂದು ಪರಿಶಿಷ್ಟಪರ್ವದಲ್ಲಿ ಹೇಳಲಾಗಿರುವುದರ ಸದೃಶರೀತಿಯಿಂದ ಬೃ. ಕ. ಕೋಶದ ದೇವರತಿನೃಪ ಕಥಾನಕದಲ್ಲಿ ರಾಜಹಸ್ತಿಯು ಕುಂಭಾಭಿಷೇಕಮಾಡಿದ ನಿಮಿತ್ತದಿಂದ ಮಂಗಲಪುರದ ಪೌರರು ದೇವರತಿಯನ್ನು ರಾಜನನ್ನಾಗಿ ವರಿಸಿದರೆಂದು ಹೇಳಲಾಗಿದ್ದು ಅನಂತರ ಸಹಸಾ 'ದೇವರತಿ' ಎಂಬ ಹೆಸರಿನ ಬದಲಾಗಿ 'ಜಯಸೇನ' ಎಂಬ ಹೆಸರು ಪ್ರಯುಕ್ತವಾಗಿರುವುದನ್ನು ಗಮನಿಸಬಹುದು. ಹೀಗೆ ಪರಿಶಿಷ್ಟಪರ್ವದಲ್ಲಿ ಯಾವ ಎರಡು ಘಟನೆಗಳನ್ನು ಮಗಧರಾಜರಾದ ಉದಾಯಿಭದ್ರ ಮತ್ತು ನಂದರ ಐತಿಹ್ಯಸಂಬಂಧಿಯಾಗಿ ನಿರ್ದೇಶಿಸಲಾಗಿದಿಯೋ ಆ ಘಟನೆಗಳು ಬೃ. ಕ. ಕೋಶದ ಕಥೆಗಳಲ್ಲಿ 'ಜಯಸೇನ' ಎಂಬ ಹೆಸರಿನ ರಾಜನ ಐತಿಹ್ಯದೊಡನೆ ಸಂಬಂಧಿತವಾಗಿರುವುದು ಸ್ಪಷ್ಟವಿದೆ.

ಪಾಟಲೀಪುತ್ರನಗರದ ರಾಜನಾದ ಮುಂಡನು ಮೃತ್ಯುವಶಳಾದ ಭದ್ರಾ ಎಂಬ ಹೆಸರಿನ ತನ್ನ ಪ್ರಿಯಪತ್ನಿಯ ಶವಸಂಸ್ಕಾರಮಾಡದೆ ಶೋಕಾಕುಲನಾಗಿದ್ದನೆಂದೂ ಮತ್ತು ನಾರದನೆಂಬ ಥೇರನು ಅವನಿಗೆ ಬೋಧನೆಮಾಡಿ ಶವಸಂಸ್ಕಾರ ಮಾಡಿಸಿದುದಾಗಿಯೂ ಬೌದ್ಧಮತದ ಆಗಮಗ್ರಂಥವಾದ ಅಂಗುತ್ತರನಿಕಾಯದಲ್ಲಿ [೩; ೫೭–೬೩] ಹೇಳಿರುವುದಾಗಿ ಚರಿತ್ರಕಾರರು ಉಲ್ಲೇಖಿಸಿದ್ದಾರೆ. [ಹಿಂದೂ ಸಿವಿಲೈಜೇರ್ಷ-ಪು. ಸಂ. ೨೭೩]

ಮುಂಡರಾಜನ ಜೀವಿತೈತಿಹ್ಯಸಂಬಂಧಿಯಾದ ಮೇಲ್ಕಂಡ ವಿಷಯವಾವುದನ್ನೂ ಮಹಾವಂಸೋಕೃತಿಕಾರನು ಹೇಳದಿದ್ದು, ಅಜಾತಶತ್ರುವೇ ಮೊದಲಾದ ರಾಜರಂತೆ ಪಿತೃಘಾತುಕನಾದ ಈ ಮುಂಡರಾಜನು, ತನ್ನ ಮಗನಾದ ನಾಗದಾಸಕನಿಂದ ಕೊಲೆಗೈಯ್ಯಲ್ಪಟ್ಟರುವನೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಮಹಾವಂಸೋತಿಕಾರನ ಈ ಅಭಿಪ್ರಾಯವು ಶ್ರದ್ಧಾರ್ಹವಾಗಿಲ್ಲೆಂದು ಮತ್ತು 'ನಾಗದಾಸಕ' ಎಂಬ ಹೆಸರು ಮುಂಡರಾಜನ ನಿಜವಾದಹೆಸರಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಮೃತಳಾದ ತನ್ನ ಪತ್ನಿಯ ಶವಸಂಸ್ಕಾರಮಾಡದೆ ಶೋಕಾಕುಲನಾಗಿದ್ದ ಮುಂಡರಾಜನ ಪತ್ನೀವ್ಯಾಮೋಹವು ಸ್ಥೂಲರೀತಿಯಿಂದ, ದೇವರತಿಕಥಾನಕದ ದೇವರತಿಯ ಪತ್ನೀವ್ಯಾಮೋಹದೊಡನೆ ಹೋಲಿಕೆಯುಳ್ಳದ್ದಾಗಿದೆ. ಶತ್ರುರಾಜರು ನಗರಕ್ಕೆ ಮುತ್ತಿಗೆ ಹಾಕಿದ ಸಮಯದಲ್ಲಿಯೂ ಪತ್ನಿವ್ಯಾಮೋಹದಿಂದಾಗಿ ರಾಜಕಾರ್ಯದಲ್ಲಿ ನಿರಾಸಕ್ತಿ ತಳೆದಿದ್ದ ದೇವರತಿಯನ್ನು ಪೌರರು ಹೊರಗಟ್ಟಿ ಜಯಸೇನನಿಗೆ ಪಟ್ಟಕಟ್ಟಿದ 'ದೇವರತಿನೃಪ ಕಥಾನಕ' ದ ಪ್ರಸಂಗದಲ್ಲಿ, ಪ್ರಾಯಶಃ ಮುಂಡರಾಜನ ರಾಜ್ಯಭಾರವು ಅಂತ್ಯಗೊಂಡ ಐತಿಹ್ಯಾಂಶವು ಸಂಕಲಿತವಾಗಿದೆಯೆಂದು ಕಂಡುಬರುತ್ತದೆ.

ಜಯಸೇನ ನೃಪತಿ ಕಥಾನಕದಲ್ಲಿ ಜಯಸೇನರಾಜನಿಗೆ 'ವೀರಸೇನ' ಎಂಬ ಹೆಸರಿನ ಪುತ್ರನಿದ್ದನೆಂದು ಹೇಳಲಾಗಿದೆಯಾದರೆ ಇದೇ ಹೆಸರಿನ ರಾಜನೊಬ್ಬನು ನಂದ

ರಾಜನ ತರುವಾಯ ಮಗಧರಾಜ್ಯದಲ್ಲಿ ರಾಜ್ಯಭಾರವಮಾಡುತ್ತಿದ್ದನೆಂದು ಐತಿಹ್ಯಾಂತರದಿಂದ ನಿರ್ದೇಶಿತವಾಗುವುದು. ಸನ್ಮಾನ್ಯ ತಾರಾನಾಥರವರ ಕೃತಿಯಾಧಾರದಿಂದ ಸನ್ಮಾನ್ಯ ಜಯಸ್ವಾಲ್‌ರವರು ನಿರೂಪಿಸಿರುವ ಮಗಧರಾಜಸಂತತಿಯ ಚೌಬಂಧದಲ್ಲಿ 'ನಂರ್ದಿ' ಎಂಬ ರಾಜನ ತರುವಾಯ ವೀರಸೇನನ ಸುತನಾದ 'ನಂದ' ಎಂಬ ಹೆಸರಿನ ರಾಜನು ರಾಜ್ಯಭಾರಕ್ಕೆ ಬಂದಂತೆ ನಿರ್ದೇಶಿಸಲಾಗಿದೆ. ಆದರೆ ಈ 'ನಂದ' ಎಂಬ ಹೆಸರು ಮನೆತನದ ಹೆಸರಾಗಿದೆಯೆಂದು ಹೇಳಲು ಆಧಾರವಿದೆ.[1] ಇದರಿಂದ ಮಗಧರಾಜಸಂತತಿಯಲ್ಲಿ ನಂದರಾಜನ ತರುವಾಯ ವೀರಸೇನ ಎಂಬ ಹೆಸರಿನ ರಾಜನೊಬ್ಬನಿದ್ದನೆಂದು ಸೂಚಿತವಾದಂತಾಗುವುದು. ಇಷ್ಟಲ್ಲದೆ ಬೃ. ಕ. ಕೋಶದ ವ್ಯಂಜನಕಥಾನಕದಲ್ಲಿ (ಸಂ. ೨೩) ವೀರಸೇನ ಎಂಬ ಹೆಸರಿನ ಅರಸನೊಬ್ಬನು ಮಗಧರಾಜ್ಯದ ದೊರೆಯಾಗಿದ್ದನೆಂದು ಹೇಳಲಾಗಿದೆ. ಇದರಿಂದ ಶ್ರಾವಸ್ತೀನಗರದ ಜಯಸೇನನನ ಸುತನನ್ನು 'ವೀರಸೇನ' ಎಂದು ಹೆಸರಿಸಲಾಗಿರುವಲ್ಲಿಯೂ ಮಗಧರಾಜಸಂತತಿಯ ಇತಿವೃತ್ತವು ಸಂಕಲಿತವಾಗಿದೆಯೆಂದು ಗುರುತಿಸಲವಕಾಶವಾಗುವುದು.

ಪರಿಶಿಷ್ಟಪರ್ವದಲ್ಲಿ ಉಕ್ತವಾಗಿರುವ ಉದಾಯಿಭದ್ರನ ಐತಿಹ್ಯಾಂಶವು, ಈ ಮೇಲ್ಕಂಡಂತೆ, ಬೃ. ಕ. ಕೋಶದ ಜಯಸೇನನೃಪತಿ ಕಥಾನಕದ ಜಯಸೇನ ರಾಜನ ಕಥಾಂಶಗಳೊಡನೆ ಸಂಕಲಿತವಾಗಿರುವುದರಿಂದ ಮೂಲತಃ ಈ ಕಥೆಯಲ್ಲಿಯೂ ಉದಾಯಿಭದ್ರನ ಐತಿಹ್ಯವು ಉಕ್ತವಾಗಿದ್ದು ಕಾಲಾಂತರದಲ್ಲಿ ಪರಿಚ್ಯುತವಾಗಿ ಅವಶೇಷರೂಪದಿಂದ ಜಯಸೇನ ರಾಜನ ಹೆಸರಿನೊಡನೆ ಸಂಕಲಿತವಾಗಿ ಉಳಿದುಬಂದಿದೆಯೆಂದು ಗ್ರಹಿಸಲವಕಾಶವಾಗುವುದು. ಹಿಂದೆ ವಿವರಿಸಲಾಗಿರುವಂತೆ ಪರಿಶಿಷ್ಟಪರ್ವದ ಉದಾಯಿಭದ್ರನ ಉದಂತದಲ್ಲಿ ಪರಿಚ್ಯುತವಾಗಿರುವ ಉದಾಯಿಭದ್ರಮಾರಕನ ಪೂರ್ವೈತಿಹ್ಯವು ಅಸ್ತವ್ಯಸ್ತರೀತಿಯಿಂದ ಜಯಸೇನನೃಪತಿಕಥಾನಕದಲ್ಲಿ ಉಳಿದುಬಂದಿದೆ. ಇಷ್ಟಲ್ಲದೆ ಉದಾಯಿಭದ್ರನನ್ನು ಕೊಲೆಗೈದ ವ್ಯಕ್ತಿಯೇ ಅನಂತರ ಕಾಲದಲ್ಲಿ ಶ್ರಾವಸ್ತೀನಗರದ ರಾಜನನ್ನೂ ಕೊಲೆಮಾಡಿರುವನಾದ್ದರಿಂದ, ಉದಾಯಿಭದ್ರನ ಕೊಲೆಯ ಪ್ರಸಂಗದ ಘಟನೆಯು ಜಯಸೇನ ರಾಜನ ಕೊಲೆಯ ಪ್ರಸಂಗದ ಘಟನೆಯೆನಿಸಿ ಪರಿವರ್ತಿತವಾಗಿ ಉಳಿದುಬಂದಿದೆಯೆಂದು ಮತ್ತು ಶಾವಸ್ತೀನಗರದ ಮಂತ್ರಿಯೋರ್ವನು ಇವರೀರ್ವರನ್ನು ಕೊಲೆಮಾಡಿರುವನೆಂದೂ ಹೇಳಲವಕಾಶವಿದೆ.[2] ಹೀಗೆ, ಪ. ಪರ್ವದ ಉದಾಯಿಭದ್ರನ ಉದಂತ ಮತ್ತು ಬೃ. ಕ. ಕೋಶದ ಜಯ

---

1 ಈ ವಿಷಯವನ್ನು ಮುಂದೆ ನಂದರಾಜಸಂತತಿಯ ಇತಿಹಾಸ ನಿರೂಪಣಾ ಪ್ರಸಂಗದಲ್ಲಿ ನಿರೂಪಿಸಲಾಗುವುದು.

2 ಈ ಕೊಲೆಗಾರನು ಮಂತ್ರಿಯಾಗಿದ್ದಿರಬೇಕೆಂಬುದಕ್ಕೆ ಮುಂದೆ ವಿವರಣೆ ಕೊಡಲಾಗುವುದು.

ಸೇನ ನೃಪತಿ ಕಥಾನಕಗಳ ಆಧಾರದಿಂದ ಉದಾಯಿಭದ್ರನ ಕೊಲೆಯ ಪ್ರಸಂಗವು, ಮುಂದಿನಂತೆ ಪ್ರರೂಪಿತವಾಗುವುದು.

"ಪಾಟಲೀಪುತ್ರನಗರದ ರಾಜನಾದ ಉದಾಯಿಭದ್ರ ಮತ್ತು ಶ್ರಾವಸ್ತೀನಗರದ ರಾಜನ ಮಧ್ಯೆ ರಾಜಕೀಯ ವಿರಸ ಉಂಟಾಯಿತು. ಪ್ರಬಲನಾಗಿದ್ದ ಉದಾಯಿ ಭದ್ರನನ್ನು ಕೊನೆಗಾಣಿಸುವ ವಿಚಾರವಾಗಿ ಶ್ರಾವಸ್ತೀ ನಗರದ ರಾಜನು ತನ್ನ ಮಂತ್ರಿಗಳೊಡನೆ ಸಮಾಲೋಚನೆ ನಡೆಸಿದನು. ಆಗ ಮಂತ್ರಿಗಳಲ್ಲೊಬ್ಬನು ಗುಪ್ತ ರೀತಿಯಿಂದ ಈ ಕಾರ್ಯವನ್ನು ಸಾಧಿಸುವುದಾಗಿ ಭರವಸೆಯಿತ್ತನು. ಅಂತೆಯೇ ಪಾಟಲೀಪುತ್ರನಗರಕ್ಕೆ ನೆಚ್ಚಿನವರಾದ ಸಹಸ್ರಭಟರನ್ನು ಗುಪ್ತರೀತಿಯಿಂದ ಕಳುಹಿಸಿ ಅಲ್ಲಿ ತನ್ನ ಸೇನಾಪಡೆಯನ್ನು [-ಸ್ಕಂಧಾವಾರಂ-] ವ್ಯವಸ್ಥೆಗೊಳಿಸಿದನು. ತರುವಾಯ ಆ ಮಂತ್ರಿಯು ಉದಾಯಿಭದ್ರನ ಅರಮನೆಯಲ್ಲಿ ಸೇವಕವೃತ್ತಿಯನ್ನು ಪಡೆದು, ಜಿನಧರ್ಮ ಮತ್ತು ಯತಿಗಳ ವಿಷಯವಾಗಿ ಉದಾಯಿಭದ್ರನಿಗೆ ಅತಿಶಯವಾದ ಶ್ರದ್ಧೆಯಿದ್ದುದನ್ನು ಅರಿತುಕೊಂಡನು. ವೃಷಭಸೇನರೆಂಬ ಯತಿಗಳು ಸಂಘಸಮೇತರಾಗಿ ವಿಹಾರಾನುಕ್ರಮದಿಂದ ಪಾಟಲೀಪುತ್ರ ನಗರಕ್ಕೆ ಬಂದರು. ಸೇವಕವೃತ್ತಿಯಲ್ಲಿದ್ದ ಮಂತ್ರಿಯು ವೃಷಭಸೇನ ಆಚಾರ್ಯರ ಬಳಿ ಸಾರಿ ಯತಿದೀಕ್ಷಾಗ್ರಹಣೆಮಾಡಿದನು. ಪರ್ವದಿನದ ನಿಮಿತ್ತ ದೇವಗುರು ವಂದನೆಗಾಗಿ ಉದಾಯಿಭದ್ರನು ಜಿನಾಯತನಕ್ಕೆ ಬಂದನು. ಜಿನವಂದನಾನಂತರ ವೃಷಭಸೇನ ಯತಿಗಳಿಗೆ ವಂದನೆ ಮಾಡಲು ಬಾಗಿದ ಉದಾಯಿಭದ್ರನನ್ನು ನೂತನವಾಗಿ ದೀಕ್ಷಿತನಾಗಿದ್ದ (ಮಂತ್ರಿ) ಮುನಿಯು ಕೊಲೆಮಾಡಿದನು. ಈ ಘಟನೆಯ ನಿರೀಕ್ಷಣೆಯಲ್ಲಿದ್ದ (ಮಂತ್ರಿ) ಮುನಿಯ ಗುಪ್ತಸೈನಿಕರು ಆ ಕೂಡಲೇ ಕೋಲಾಹಲವುಂಟುಮಾಡಿ ನಗರವನ್ನು ಸ್ವಾಧೀನಪಡಿಸಿಕೊಂಡರು. ಅನಂತರ ಉದಾಯಿಭದ್ರಮಾರಕನಾದ (ಮಂತ್ರಿ) ಮುನಿಯು ಪಾಟಲೀಪುತ್ರನಗರದ ಸಿಂಹಾಸನದಲ್ಲಿ ಅಧಿಷ್ಠಿತನಾದನು. ಶ್ರಾವಸ್ತೀ ನಗರದ ರಾಜನಿಗೆ, ತನ್ನ ಈ ಮಂತ್ರಿಯು ಪಾಟಲೀಪುತ್ರನಗರದ ಸಿಂಹಾಸನದಲ್ಲಿ ಅಧಿಷ್ಠಿತನಾದುದು ಸಮ್ಮತವಾಗಲಿಲ್ಲ. ಇದರಿಂದ ಇವರೀರ್ವರ ಮಧ್ಯೆ ವಿರಸ ಉಂಟಾಯಿತು. ಆಗ ಮಂತ್ರಿಯು ತನ್ನ ಸ್ವಾಮಿಯಾದ ಆ ರಾಜನನ್ನೂ ವಧೆಗೊಳಿಸಿ, ತನ್ನ ಮಗನಿಗೆ ಪಟ್ಟಕಟ್ಟಿದನು"

ಉದಾಯಿಭದ್ರನ ಹಂತಕನಾದ ಮುಂಡನು ಮಗಧರಾಜನಾಗಿ ರಾಜ್ಯಭಾರ ಮಾಡಿದ ಐತಿಹ್ಯಪ್ರಸಂಗವು ಪರಿಶಿಷ್ಟಪರ್ವದಲ್ಲಿ ಪರಿಚ್ಯುತವಾಗಿದೆಯೆಂಬುದು ಸ್ಪಷ್ಟವಿದೆ. ಇಷ್ಟಲ್ಲದೆ ಉದಾಯಿಭದ್ರನ ತರುವಾಯ ಪಟ್ಟಹಸ್ತಿಕೃತವಾದ ಕುಂಭಾಭಿಷೇಕದ ನಿಮಿತ್ತದಿಂದ ಮಗಧರಾಜ್ಯದ ಪ್ರಭುತ್ವವನ್ನು ಪಡೆದ ನಂದನು ಜನ್ಮತಃ ಗಣಿಕಾಕುಕ್ಷಿ ಸಂಭೂತನಾದ ನಾಪಿತಕುಮಾರನಾಗಿದ್ದನೆಂಬ ಈ ಕೃತಿಯ ಹೇಳಿಕೆಯಲ್ಲಿ ಪ್ರಮಾದವಶವಾಗಿ ದೋಷವೇರ್ಪಟ್ಟಿದೆಯೆಂದು ಹೇಳಲವಕಾಶವಿದೆ. ಪಟ್ಟಾವಲೀಸಮುಚ್ಚಯದ

ಪೂರ್ವೋಲ್ಲಿಖಿತವಾದ ಉಕ್ತಿಯಲ್ಲಿ ಉದಾಯಭದ್ರನ ಮರಣಾನಂತರ ಕೋಣಿಕ ಮನೆತನದ (–ಮಗಧ–) ರಾಜ್ಯವು ಉಜ್ಜಯಿನಿಯ ಪಾಲಕರಾಜನ ಪ್ರಭುತ್ವಕ್ಕೊಳ ಪಟ್ಟಿತೆಂದು ನಿರ್ದೇಶಿತವಾಗಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬೇಕಾಗಿದೆ. 'ಪಾಲಕ' ಎಂಬುದು ಹಿಂದೆ ಹೇಳಿರುವಂತೆ ವಂಶಸೂಚಕವಾದ ಹೆಸರಾಗಿದೆಯಾದುದ ರಿಂದ ನಂದರಾಜನು ವಂಶಾನುಕ್ರಮದಿಂದ ಅವಂತೀರಾಜಮನೆತನದ ಅರಸನಾಗಿರ ಬೇಕೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ ನಂದರಾಜನು ಅವಂತೀರಾಜ ಮನೆತನದ ಅರಸನಾಗಿರುವನೆಂದು ಮತ್ತೂ ಒಂದು ಆಧಾರದಿಂದ ಸೂಚಿತವಾಗುವುದು.

ಶ್ರೀ ವೀರತೀರ್ಥಂಕರನ ನಿರ್ವಾಣಸಂಬಂಧಿ ಐತಿಹ್ಯದಲ್ಲಿ, ಅವಂತೀಪತಿ ಪಾಲಕ ರಾಜನ ರಾಜ್ಯಾಭಿಷೇಕ ಮತ್ತು ಶ್ರೀ ವೀರತೀರ್ಥಂಕರನ ನಿರ್ವಾಣಪ್ರಸಂಗಗಳು ಒಂದೇದಿನದಲ್ಲಿ ಸಂಘಟಿಸಿದ ಪ್ರಸಂಗಗಳೆನಿಸಿ ನಿರ್ದೇಶಿತವಾಗಿದ್ದು ಮುಂದೆ ೬೦ ವರ್ಷಕಾಲಪರ್ಯಂತ ಪಾಲಕರಾಜ್ಯಭಾರಾವಧಿಯನ್ನೂ ತದನಂತರ ನಂದರಾಜ ಮನೆತನದ ೧೫೫ ವರ್ಷಗಳ ರಾಜ್ಯಭಾರಾವಧಿಯನ್ನೂ ನಿರ್ದೇಶಿಸಿರುವುದು ವಿದಿ ತವಿದೆ.[1] ಹೀಗೆ ಶ್ರೀ ವೀರತೀರ್ಥಂಕರನ ನಿರ್ವಾಣಸಮಯದ ನಿರ್ದೇಶಕವಾದ ಈಐತಿ ಹ್ಯವು ಅವಂತೀರಾಜ್ಯದ ಅರಸುಮನೆತನದ ರಾಜ್ಯಭಾರಕಾಲದ ಐತಿಹ್ಯಾಧಾರದಿಂದ ಆರಂಭವಾಗಿರುವುದರಿಂದ ಈ ಐತಿಹ್ಯದ ಸಂಬಂಧವಾಗಿ ಪಾಲಕ ರಾಜ್ಯಭಾರಾನಂತರ ಅನುಕ್ರಮವಾಗಿ ಹೆಸರಿಸಲಾಗಿರುವ ನಂದಾದಿರಾಜಮನೆತನಗಳೆಲ್ಲವೂ ಅವಂತೀ ರಾಜ್ಯದ ಪ್ರಭುತ್ವಹೊಂದಿದ್ದಿರಬೇಕೆಂಬುದು ಸುಸಂಗತವೆನಿಸುವುದು. ಅಂತೆಯೇ ಪಾಲಕರಾಜ್ಯಭಾರದ ೬೦ ವರ್ಷಗಳ ತರುವಾಯದಲ್ಲಿ ಅವಂತೀರಾಜ್ಯವು ನಂದ ರಾಜನ ಪ್ರಭುತ್ವಕ್ಕೊಳಪಟ್ಟಿದ್ದಿರಬೇಕೆಂದು ಈ ಐತಿಹ್ಯದಿಂದ ನಿರ್ದೇಶಿತವಾಗು ವುದು. ಹೀಗೆ ಈ ಶ್ರೀ ವೀರನಿರ್ವಾಣಸಂಬಂಧಿಐತಿಹ್ಯದಿಂದ ಶ್ರೀ ವೀರ ನಿರ್ವಾಣ ಪಶ್ಚಾತ್ ೬೦ ವರ್ಷಗಳ ತರುವಾಯದಲ್ಲಿ ಅವಂತೀರಾಜ್ಯವು ನಂದರಾಜನ ಪ್ರಭುತ್ವ ಕ್ಕೊಳಪಟ್ಟಿದ್ದಿತೆಂದು ನಿರ್ದೇಶಿತವಾಗುವುದಾದರೆ, ಪರಿಶಿಷ್ಟಪರ್ವದ ಹೇಳಿಕೆಯಂತೆ ಇದೇ ಸಮಯದಲ್ಲಿ ನಂದರಾಜನಿಗೆ ಮಗಧರಾಜ್ಯದ ಪ್ರಭುತ್ವವು ಲಬ್ಧವಾಗಿದೆ.

ಈ ರೀತಿಯಾಗಿ ಈ ಎರಡು ಐತಿಹ್ಯಗಳಾಧಾರದಿಂದ ಅವಂತೀ ಮತ್ತು ಮಗಧ ರಾಜ್ಯಗಳೆರಡೂ ಏಕಕಾಲದಲ್ಲಿ ನಂದರಾಜನ ಪ್ರಭುತ್ವಕ್ಕೊಳಪಟ್ಟುವೆಂದು ಫಲಿತ ವಾದಂತಾಗುವುದು. ಆದರೆ ಈ ಫಲಿತಾಂಶವು ಸುಸಂಗತವೆನಿಸುವುದಿಲ್ಲವಾದ್ದರಿಂದ ಅನುವಂಶಿಕವಾಗಿ ಅವಂತೀ ಅಥವಾ ಮಗಧರಾಜ್ಯಗಳೆರಡರಲ್ಲೊಂದರ ಪ್ರಭುತ್ವ ಪಡೆದಿದ್ದ ನಂದರಾಜನಿಗೆ ವೀ. ನಿ. ಪ. ೬೦ ವರ್ಷಗಳ ತರುವಾಯದಲ್ಲಿ ಮತ್ತೊಂದು

---

1 ಜಂ ರಯಣಿಂ ಕಾಲಗಓ ಅರಿಹಾ ತಿತ್ಥಂಕರೋ ಮಹಾವೀರೋ। ತಂ ರಯಣಿಂ ಅವಂತಿವಈ ಅಹಿಸಿತ್ತೋ ಪಾಲಗೋ ರಾಯಾ॥ ಸಟ್ಠಿ ಪಾಲಗರಣ್ಣೋ ಪಣ ವಣ್ಣ ಸಯಂತು ಹೋಇ ಣಂದಾಣ।......................

ರಾಜ್ಯದ ಪ್ರಭುತ್ವವು ಲಬ್ಧವಾಗಿದೆಯೆಂದೂ ಮತ್ತು ಈ ರೀತಿಯಾಗಿ ಎರಡು ರಾಜ್ಯಗಳ ಪ್ರಭುತ್ವಪಡೆದು ನಂದರಾಜನು ವಿಶೇಷ ಪ್ರಸಿದ್ಧಿಪಡೆದನಾಗಿ ಮುಂದೆ ಇವನ ಹೆಸರು ಮನೆತನದ ಹೆಸರಾಗಿ ರೂಢಿಗತವಾಗಿದೆಯೆಂದೂ ಗ್ರಹಿಸಬೇಕಾಗುವುದು. ಅಂತೆಯೇ ಮಗಧರಾಜ್ಯದ ಪ್ರಭುತ್ವವು ನಂದರಾಜನಿಗೆ ಆನುವಂಶಿಕವಾಗಿ ಲಬ್ಧವಾಗಿರದೆ ನೂತನವಾಗಿ ಲಬ್ಧವಾಗಿದೆಯೆಂದು ಪರಿಶಿಷ್ಟಪರ್ವದ ಐತಿಹ್ಯದಿಂದ ಸೂಚಿತವಾಗುವುದಾದ್ದರಿಂದ ಮತ್ತು ಪಟ್ಟಾವಲೀ ಸಮುಚ್ಚಯದ ಪೂರ್ವೋಲ್ಲಿಖಿತವಾದ ಉಕ್ತಿಯಿಂದ ಶ್ರೀ ವೀರನಿರ್ವಾಣ ಪಶ್ಚಾತ್ ೬೦ ವರ್ಷಗಳ ತರುವಾಯದಲ್ಲಿ ಮಗಧ ರಾಜ್ಯವು ಅವಂತಿಯ ಪಾಲಕರಾಜಮನೆತನದ ಪ್ರಭುತ್ವಕ್ಕೊಳಪಟ್ಟಿತ್ತೆಂದು ನಿರ್ದೇಶಿತವಾಗುವುದಾದ್ದರಿಂದ, ಈ ಸಮಯದಲ್ಲಿ ಮಗಧರಾಜ್ಯದ ಸಿಂಹಾಸನದಲ್ಲಿ ಅಧಿಷ್ಠಿತನಾದ ನಂದರಾಜನು ಆನುವಂಶಿಕನಾಗಿ ಅವಂತಿಯ ಪಾಲಕರಾಜಮನೆತನದ ಅರಸನಾಗಿರುವನೆಂದು ಫಲಿತವಾಗುವುದು. ಹೀಗೆ ಈ ವಿಚಾರಸರಣಿಯಂತೆ ನಂದರಾಜನು ಆನುವಂಶಿಕವಾಗಿ ಅವಂತೀರಾಜಮನೆತನದ ಅರಸನಾಗಿರುವನೆಂದು ಫಲಿತವಾಗುವುದಾದ ಕಾರಣ, ಪರಿಶಿಷ್ಟಪರ್ವಕೃತಿಕಾರರು ಈ ನಂದರಾಜನನ್ನು ಗಣಿಕಾ ಕುಕ್ಷಿಸಂಭೂತನಾದ ನಾಪಿತಕುಮಾರನೆಂದು ನಿರ್ದೇಶಿಸಿರುವಲ್ಲಿ ಪ್ರಮಾದವಶವಾಗಿ ದೋಷವೇರ್ಪಟ್ಟಿದೆಯೆಂದು ವ್ಯಕ್ತವಾಗುವುದಲ್ಲದೆ, ಈ ರೀತಿಯಿಂದ ದೋಷವೇರ್ಪಡಲು ಈ ಮುಂದಿನ ಎರಡು ಅಂಶಗಳು ಕಾರಣವಾಗಿರಬೇಕೆಂದು ಹೇಳಲವಕಾಶವಿದೆ.

೧) ಉದಾಯಿಭದ್ರನ ತರುವಾಯ ಒಂಭತ್ತುಜನ ನಂದರಾಜರು ಅನುಕ್ರಮವಾಗಿ ರಾಜ್ಯಭಾರಮಾಡಿದರೆಂದೂ, ಹಾಗೂ ಇವರಲ್ಲಿ ಅಂತಿಮನಾದ ನವಮನಂದನನ್ನು ಚಾಣಕ್ಯ ಮತ್ತು ಮೌರ್ಯಚಂದ್ರಗುಪ್ತರು ಪರಾಜಯಗೊಳಿಸಿ ಮಗಧರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಂಡರೆಂದೂ ಪರಿಶಿಷ್ಟಪರ್ವದಲ್ಲಿ ಹೇಳಲಾಗಿದೆ. [ಸರ್ಗ ೬, ೭ ಮತ್ತು೮] ಆದರೆ ಇತರ ಐತಿಹಾಸಿಕ ಆಧಾರಗಳನುಸಾರವಾಗಿ ಮಹಾಪದ್ಮನಂದ ಮತ್ತು ಇವನ ೮ ಜನ ಸುತರು ನವನಂದರೆಂದು ನಿರ್ದೇಶಿತರಾಗಿರುವಲ್ಲದೆ, ಇವರೆಲ್ಲರನ್ನೂ ಚಾಣಕ್ಯ ಮತ್ತು ಮೌರ್ಯಚಂದ್ರಗುಪ್ತರು ವಧೆಮಾಡಿ ಮಗಧರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಂಡರೆಂದು ವ್ಯಕ್ತವಾಗುವುದು. ಇಷ್ಟಲ್ಲದೆ, ನಂದರಾಜನ ಮೊಮ್ಮಗನೂ, ಮಹಾನಂದನ ಶೂದ್ರಸ್ತ್ರೀಗರ್ಭಸಂಭೂತನೂ ಆದ ಮಹಾಪದ್ಮನನ್ನು 'ನಾಪಿತ' ನೆಂಬುದಾಗಿ ಗ್ರೀಕ್ ಇತಿಹಾಸಕಾರರು ನಿರ್ದೇಶಿಸಿರುವರೆಂದು ಚರಿತ್ರಕಾರರು ಗುರುತಿಸಿದ್ದಾರೆ. ಹೀಗೆ ಚಾಣಕ್ಯ ಮತ್ತು ಮೌರ್ಯಚಂದ್ರಗುಪ್ತರಿಂದ ವಧೆಗೊಂಡ ನವನಂದರಲ್ಲಿ ಪ್ರಥಮನಾದ ಮಹಾಪದ್ಮನ ಜೀವಿತಸಂಬಂಧಿ ಐತಿಹ್ಯಾಂಶವು ಇವನ ಅಜ್ಜನೂ ನಂದಮನೆತನದಮೂಲಪುರುಷನೂ ಆದ ನಂದರಾಜನ ಐತಿಹ್ಯದೊಡನೆ ಸಂಕಲಿತವಾಗಿ ಪರಿಶಿಷ್ಟಪರ್ವದಲ್ಲಿ ನಿರೂಪಿತವಾಗಿದೆಯೆಂದು ಸ್ಫುಟವಾಗುವುದು. ಆದ್ದರಿಂದ ಈ ಕೃತಿಯಲ್ಲಿ ನಂದರಾಜನನ್ನು 'ನಾಪಿತಕುಮಾರ' ನೆಂದು ನಿರ್ದೇಶಿಸಲಾಗಿರುವಲ್ಲಿ ಪ್ರಮಾದ ಜನ್ಯದೋಷವೇರ್ಪಟ್ಟಿದೆಯೆಂದು ವ್ಯಕ್ತವಾಗುವುದು.

೨) ನಂದರಾಜನು ಉದಾಯಿಭದ್ರಕುಮಾರಕನಾದ ಮುಂಡರಾಜನ ತರುವಾಯ ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ಹಿಂದೆ ವಿವರಿಸಲಾಗಿದೆ. ಪ್ರಾಯಶಃ ಪರಿಶಿಷ್ಟಪರ್ವದ ರಚನೆಗೆ ಯಾವ ಪ್ರಾಕೃತಭಾಷೆಯಕೃತಿಗಳು ಮೂಲಾಧಾರವಾಗಿದ್ದವೋ ಅವುಗಳಲ್ಲಿ 'ಮುಂಡ' ಎಂಬ ಹೆಸರಿಗೆ ಸಂಬಂಧಿಸಿದ ಅಸ್ಪಷ್ಟರೀತಿಯ ಐತಿಹ್ಯವಿದ್ದಿರಬೇಕು. 'ಮುಂಡ' ಎಂಬ ಪದಕ್ಕೆ 'ನಾಪಿತ' ಎಂಬ ಅರ್ಥವಿದೆಯಾದುದರಿಂದಲೂ ಮತ್ತು ಮೂಲಾಧಾರದಲ್ಲಿ ಈ ಹೆಸರಿಗೆ ಸಂಬಂಧಿಸಿದ ಅಸ್ಪಷ್ಟಐತಿಹ್ಯಾಧಾರವಿದ್ದುದರಿಂದಲೂ ಹೇಮಚಂದ್ರಾಚಾರ್ಯರು ನಂದನನ್ನು 'ನಾಪಿತಕುಮಾರ'ನೆಂದು ನಿರ್ದೇಶಿಸಿರಬಹುದಾದ ಸಂಭವವಿದೆಯೆಂದು ಹೇಳಬಹುದಾಗಿದೆ.

ದಾಕ್ಷಿಣಾತ್ಯ ಬೌದ್ಧ ಆಮ್ನಾಯದ ಕೃತಿಗಳಾದ ಮಹಾವಂಸೋ, ದೀಪವಂಸೋ ಮತ್ತು ಬರ್ಮೀಇತಿವೃತ್ತಗಳಲ್ಲಿ ಹೆಸರಿಸಲಾಗಿರುವ 'ಸುಸುನಾಗ' ಎಂಬ ಹೆಸರು ನಂದರಾಜನ ನಿರ್ದೇಶಕವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಈ ಸುಸುನಾಗನು ವೈಶಾಲೀರಾಜಮನೆತನಕ್ಕೆ ಸೇರಿದವನಾಗಿರುವನೆಂದು ಬೌದ್ಧ ಆಮ್ನಾಯದ ಪಾಲೀಸಾಹಿತ್ಯದ ಉಲ್ಲೇಖವಿರುವುದಾಗಿಯೂ ಮತ್ತು ತಾರಾನಾಥೋಕ್ತವಾದ ಆಧಾರದಂತೆ ಮಗಧರಾಜನಾದ 'ನಂದಿ' ಎಂಬುವನು ವೈಶಾಲೀಮನೆತನದ ಅರಸನಾಗಿರುವನೆಂದೂ ಸನ್ಮಾನ್ಯ ಜಯಸ್ವಾಲ್‌ರವರು ಹೇಳಿದ್ದಾರೆ. [ಪೂ. ಸೂ. ಜರ್ನಲ್] ಆದರೆ 'ವೈಶಾಲಿಃ' 'ವೈಶಾಲೇಯಃ' ಅಥವಾ ಪ್ರಾಕೃತಭಾಷಾರೂಪದ 'ವೇಸಾಲೀಯ' ಎಂಬ ಪದಗಳು 'ವಿಶಾಲಾ' ಎಂಬ ಪದದಿಂದ ನಿಷ್ಪನ್ನವಾಗುವುವಾದ್ದರಿಂದ ಮತ್ತು ಉಜ್ಜಯಿನಿಗೆ 'ವಿಶಾಲಾ' ಎಂಬ ಪ್ರಾಚೀನವಾದ ಹೆಸರಿದ್ದಿತಾದುದರಿಂದ, ಸುಸುನಾಗ ಮತ್ತು ಇವನ ಸಂತತಿಯ ಅರಸರನ್ನು 'ವೈಶಾಲೇಯ' ಅಥವಾ 'ವೇಸಾಲೀಯ' ರೆಂದು ಹೆಸರಿಸುವ ಪರಿಪಾಠ ಬಂದಿರಬೇಕೆಂದು ಹೇಳಿದಲ್ಲಿ ಅಸಂಗತವೆನಿಸುವುದಿಲ್ಲ. ಆದ್ದರಿಂದ ಬೌದ್ಧಆಮ್ನಾಯದ ಐತಿಹ್ಯಾನುಸಾರವಾಗಿಯೂ ಈ ಹಿಂದೆ ವಿವರಿಸಲಾಗಿರುವಂತೆ, ಸುಸುನಾಗ (=ನಂದಿ = ನಂದ) ನು ಆನುವಂಶಿಕವಾಗಿ ಅವಂತೀರಾಜಮನೆತನದ ಅರಸನಾಗಿರುವನೆಂದು ನಿರ್ದೇಶಿತವಾಗುವುದು.

ಪುರಾಣಗಳಲ್ಲಿ ನಿರೂಪಿತವಾಗಿರುವ ರಾಜವಂಶಚರಿತದಲ್ಲಿ, ಸರ್ವಸಾಧಾರಣನಾಗಿ ಉದಾಯಿಭದ್ರನ ತರುವಾಯ 'ನಂದಿವರ್ಧನ' ಎಂಬ ಹೆಸರಿನ ರಾಜನು ರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ನಿರ್ದೇಶಿತವಾಗಿದೆ. ಉದಾಯಿಭದ್ರ ಮತ್ತು ನಂದರಾಜನ ಮಧ್ಯವರ್ತಿಯಾಗಿ ರಾಜ್ಯಭಾರಮಾಡಿದ ಮುಂಡರಾಜನ ರಾಜ್ಯಭಾರದ ಐತಿಹ್ಯವು ಪರಿಶಿಷ್ಟಪರ್ವದಲ್ಲಿ ಪರಿಚ್ಯುತವಾಗಿರುವಂತೆ ಪುರಾಣಗಳ ಇತಿವೃತ್ತದಲ್ಲಿಯೂ ಪರಿಸ್ಖಲಿತವಾಗಿದ್ದು ಇವನ ರಾಜ್ಯಭಾರಕಾಲಾವಧಿಯು ಉದಾಯಿಭದ್ರನ ರಾಜ್ಯಭಾರಕಾಲಾವಧಿಯೊಡನೆ ಸಂಯೋಜಿತವಾಗಿ ಉಳಿದುಬಂದಿದೆಯೆಂದು ಹೇಳಲವಕಾಶವಿದೆ. ಇದರಂತೆ ಪುರಾಣಗಳ ಈ 'ನಂದಿವರ್ಧನ' ಮತ್ತು ಪರಿಶಿಷ್ಟಪರ್ವದ

'ನಂದ' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂದು ಗ್ರಹಿಸಲವಕಾಶವಾಗುವುದು.

ಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧರಾಜಸಂತತಿಯ ಇತಿವೃತ್ತದಲ್ಲಿ ಅವಂತೀರಾಜಸಂತತಿಯ ಇತಿವೃತ್ತವು ಸಂಯೋಜಿತವಾಗಿ ಉಳಿದುಬಂದಿರುವುದು ವಿದಿತವಿದೆ. ವಾಯುಪುರಾಣದ ಹೊರತಾಗಿ ಸಾಧಾರಣವಾಗಿ ಇತರ ಎಲ್ಲ ಪುರಾಣಗಳಲ್ಲಿ ನಿರೂಪಿತವಾಗಿರುವ ಈ ಅವಂತೀರಾಜಸಂತತಿಯ ಪ್ರದ್ಯೋತ, ಪಾಲಕರೇ ಮೊದಲಾದ ಅರಸರ ಅನುಕ್ರಮದಲ್ಲಿ 'ನಂದಿವರ್ಧನ' ಎಂಬ ಹೆಸರಿರುವುದನ್ನು ಗಮಸಬಹುದು.[1] ಹೀಗೆ ಅವಂತಿಯರಸರ ಅನುಕ್ರಮದಲ್ಲಿ ಒಮ್ಮೆ ಹಾಗೂ ಉದಾಯಿಭದ್ರನ ಅನಂತರವರ್ತಿಯಾಗಿ ಮತ್ತೊಮ್ಮೆ ಹೆಸರಿಸಲಾಗಿರುವ ಈ 'ನಂದಿವರ್ಧನ' ಎಂಬ ಹೆಸರುಗಳು ಪೃಥಗ್ವ್ಯಕ್ತಿಗಳ ನಿರ್ದೇಶಕವಾಗಿರದೆ ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂದು ಗ್ರಹಿಸಲವಕಾಶವಿದೆ.

ಪ್ರದ್ಯೋತರೈವರು ೫೨ ವರ್ಷಕಾಲ ರಾಜ್ಯಭಾರಮಾಡಿದುದಾಗಿ ಮತ್ಸ್ಯಪುರಾಣದಲ್ಲಿ ಹೇಳಲಾಗಿದೆ. ಇದರಿಂದ ಅವಂತಿಯರಸನಾದ ಪ್ರದ್ಯೋತಮಹಾಸೇನನ ತರುವಾಯ ಅವನ ಸಂತತಿಯ ಐವರು ರಾಜರು ಅನುಕ್ರಮವಾಗಿ ರಾಜ್ಯಭಾರ ಮಾಡಿದ ಒಟ್ಟು ರಾಜ್ಯಭಾರಕಾಲವು ೫೨ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಗ್ರಹಿಸಲವಕಾಶವಾಗುವುದಲ್ಲದೆ, ಈ ಐವರು ರಾಜರ ತರುವಾಯ ನಂದಿವರ್ಧನನು ಉಜ್ಜಯಿನಿಯ ಸಿಂಹಾಸನದಲ್ಲಿ ಅಧಿಷ್ಠಿತನಾಗಿರುವನೆಂದು ಹೇಳಲವಕಾಶವಿದೆ.[2] ಶ್ರೀ ವೀರತೀರ್ಥಂಕರನ ನಿರ್ವಾಣಸಮಯದಲ್ಲಿ, ಹಿಂದೆ ವಿವರಿಸಲಾಗಿರುವಂತೆ, ಪ್ರದ್ಯೋತಮಹಾಸೇನನ ರಾಜ್ಯಭಾರವು ಅಂತ್ಯಗೊಂಡಿದ್ದಿತಾಗಿ ಪ್ರಾದ್ಯೋತರೈವರ ರಾಜ್ಯಭಾರವು ವೀ. ನಿ. ಸಂವತ್ ೫೨ ರಲ್ಲಿ ಕೊನೆಗೊಂಡು ಮುಂದೆ ನಂದಿವರ್ಧನನ ರಾಜ್ಯಭಾರವು ಆರಂಭವಾಗಿದೆಯೆಂದು ವ್ಯಕ್ತವಾಗುವುದು. ಇಂತೆಯೇ ಅಜಾತಶತ್ರುವಿನ ೬ ನೇ ವರ್ಷದ ರಾಜ್ಯಭಾರಸಮಯದಲ್ಲಿ ಶ್ರೀ ವೀರತೀರತೀರ್ಥಂಕರನು ನಿರ್ವಾಣಹೊಂದಿರುವನೆಂದು ಹಿಂದೆ ವಿವರಿಸಲಾಗಿದೆ. ಈ ಸಮಯದಿಂದ ಮುಂದೆ

---

1 ಹಿಂದೆ ಕೊಡಲಾಗಿರುವ ಮಗಧರಾಜಸಂತತಿಯ ಅನುಕ್ರಮಣಿಕೆಯ ಚೌಬಂಧದಲ್ಲಿ ಅವಂತಿಯರಸರ ಅನುಕ್ರಮದಲ್ಲಿ ನಿರ್ದೇಶಿತವಾಗಿರುವ 'ನಂದಿವರ್ಧನ' ಎಂಬ ಹೆಸರನ್ನು '[ಪ್ರ]' ಸಂಜ್ಞೆಯಿಂದಲೂ, ಉದಾಯಿಭದ್ರ ಎಂಬ ಹೆಸರಿನ ಅನಂತರವರ್ತಿಯಾಗಿರುವ 'ನಂದಿವರ್ಧನ' ಎಂಬ ಹೆಸರನ್ನು '[ದ್ವಿ]' ಎಂಬ ಸಂಜ್ಞೆಯಿಂದಲೂ ನಿರ್ದೇಶಿಸಲಾಗಿದೆ.

2 ಈ ವಿಷಯವನ್ನು ಮುಂದೆ ಅವಂತೀರಾಜಸಂತತಿಯ ಇತಿಹಾಸನಿರೂಪಣೆಯ ಪ್ರಕರಣದಲ್ಲಿ ವಿವರಿಸಲಾಗುವುದು.

ಅಜಾತಶತ್ರು ಮತ್ತು ಉದಾಯಿಭದ್ರರ ಒಟ್ಟುರಾಜ್ಯಭಾರಾವಧಿಯ [(೩೨ – ೫= ೨೭)+೧೬=] ೪೩ ವರ್ಷಗಳ ತರುವಾಯ ಮುಂಡರಾಜನು ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುನೆಂದು ವ್ಯಕ್ತವಾಗುವುದು. ಇದರಂತೆ ವೀ. ನಿ. ಸಂ. ೪೪ ರಲ್ಲಿ ಮುಂಡರಾಜನ ರಾಜ್ಯಭಾರವು ಆರಂಭವಾಗಿದ್ದು ಮುಂದೆ ಇವನ ೯ ನೇ ವರ್ಷದ ರಾಜ್ಯಭಾರಸಮಯದಲ್ಲಿ [ಅಂದರೆ ವೀ. ನಿ. ಸಂ. ೫೩ ರಲ್ಲಿ] ನಂದಿವರ್ಧನನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಫಲಿತವಾಗುವುದು. ಈ ರೀತಿಯಾಗಿ ಪುರಾಣಗಳಲ್ಲಿ ಅವಂತಿಯರಸರ ಅನುಕ್ರಮದಲ್ಲಿ ನಿರ್ದೇಶಿತವಾಗಿರುವ [ಪ್ರ] ನಂದಿವರ್ಧನರಾಜನು ಮುಂಡರಾಜನ ಕಿರಿಯ ಸಮಕಾಲೀನನಾಗಿದ್ದನೆಂದು ವ್ಯಕ್ತಪಡುವುದಾದ ಕಾರಣ, ಈ ನಂದಿವರ್ಧನನೇ ಮುಂದೆ ೮ ವರ್ಷಗಳ ತರುವಾಯ [ವೀ. ನಿ. ಸಂ. ೬೧ ರಲ್ಲಿ] ಮಗಧರಾಜ್ಯದ ಪ್ರಭುತ್ವವನ್ನು ಪಡೆದಿರುವನೆಂದು ಗ್ರಹಿಸಲವಕಾಶವಾಗುವುದು. ಇದರಿಂದ ಪುರಾಣಗಳಲ್ಲಿ ಅವಂತಿಯರಸರ ಅನುಕ್ರಮದಲ್ಲಿ ಒಮ್ಮೆ, ಹಾಗೂ ಉದಾಯಿಭದ್ರನ ಅನಂತರವರ್ತಿಯಾಗಿ ಮತ್ತೊಮ್ಮೆ ಹೆಸರಿಸಲಾಗಿರುವ 'ನಂದಿವರ್ಧನ' ಎಂಬ ಎರಡು ಹೆಸರುಗಳೂ ಏಕವ್ಯಕ್ತಿ ನಿರ್ದೇಶಕಗಳಾಗಿವೆಯೆಂದು ವ್ಯಕ್ತಪಡುವುದಲ್ಲದೆ, ಈ ನಂದಿವರ್ಧನನು ಅವಂತೀರಾಜಮನೆತನದ ಅರಸನಾಗಿರುನೆಂದೂ ಸಮರ್ಥಿತವಾಗುವುದು. ಪುರಾಣಗಳಲ್ಲಿ ನಿರೂಪಿಸಲಾಗಿರುವ ಮಗಧರಾಜಸಂತತಿಯ ಇತಿವೃತ್ತದೊಡನೆ ಅವಂತೀರಾಜಸಂತತಿಯ ಇತಿವೃತ್ತವು ಸಂಯೋಜಿತವಾಗಿರಲು ಕಾರಣವೇನೆಂಬುದನ್ನು ಈಗ ಸುಲಭವಾಗಿ ಊಹಿಸಬಹುದಾಗಿದೆ. ಮುಂಡರಾಜನ ತರುವಾಯ ಮಗಧರಾಜ್ಯವು ಅವಂತೀರಾಜಮನೆತನದ ನಂದಿವರ್ಧನನ (=ನಂದ=ಶುಸುನಾಗನ) ಆಧಿಪತ್ಯಕ್ಕೊಳಪಟ್ಟತಾಗಿ, ಇವನ ವಂಶಾನುಕ್ರಮವನ್ನು ನಿರೂಪಿಸುವ ಪ್ರಸಂಗವಶದಿಂದ ಮಗಧರಾಜಸಂತತಿಯ ಇತಿವೃತ್ತದಮಧ್ಯವರ್ತಿಯಾಗಿ ಪ್ರದ್ಯೋತಾದಿ ಅವಂತಿಯರಸರ ಇತಿವೃತ್ತವು ಸಂಯೋಜಿತವಾಗಿದೆಯೆಂದು ಗ್ರಹಿಸಬೇಕಾಗುವುದು. ಆದರೆ ಈ ಗ್ರಹಿಕೆಗೆ ಬಾಧಕವೆನಿಸಿರುವ ಮತ್ತೊಂದು ಅಂಶವನ್ನು ಇಲ್ಲಿ ಪರಿಷ್ಕರಿಸಬೇಕಾಗುವುದು.

ಮುಂಡರಾಜನ ತರುವಾಯ ಮಗಧರಾಜ್ಯದ ಪ್ರಭುತ್ವವನ್ನು ಪಡೆದ ನಂದಿವರ್ಧನನ ವಂಶಾನುಕ್ರಮವನ್ನು ನಿರ್ದೇಶಿಸುವ ಅವಂತೀರಾಜಸಂತತಿಯ ಇತಿವೃತ್ತವು ಮುಂಡ ಮತ್ತು ನಂದಿವರ್ಧನರ ಇತಿವೃತ್ತಾಂಶಗಳ ಮಧ್ಯವರ್ತಿಯಾಗಿರಬೇಕಾದುದು ಸುಸಂಗತವೆನಿಸುವುದು. ಆದರೆ ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಈ ಅವಂತಿಯರಸರ ಇತಿವೃತ್ತವು ಬೃಹದ್ರಥರಾಜಮನೆತನದ ಇತಿವೃತ್ತಾನಂತರವರ್ತಿಯಾಗಿ ನಿರೂಪಣೆಗೊಂಡು ಉಳಿದುಬಂದಿರಲು ಕಾರಣವೇನೆಂಬುದು ಸಮಸ್ಯೆಯಾಗಿ ತೋರುವುದು. ಇಂತಿದ್ದರೂ ಈ ಸಮಸ್ಯೆಯು ಅಪರಿಹಾರ್ಯವಾದುದಾಗಿಲ್ಲವೆಂದು ಹೇಳಬಹುದಾಗಿದೆ. ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಉಳಿದುಬಂದಿರುವ ರಾಜವಂಶಚರಿತವು ಭಿನ್ನಕಾಲದ ಭಿನ್ನವ್ಯಕ್ತಿಗಳಿಂದಾದ ಸಂಕಲನವಾಗಿದೆಯೆಂದು ಮತ್ತು

ಈ ಸಂಕಲನಕಾರರಿಂದ ಪ್ರಮಾದವಶವಾಗಿ ಅನೇಕರೀತಿಯ ನ್ಯೂನಾತಿರೇಕಗಳೇರ್ಪ ಟ್ಟಿವೆಯೆಂದು ಹಿಂದೆ ವಿವರಿಸಲಾಗಿದೆ. ಇಂತೆಯೇ ಈ ಸಂದರ್ಭದ ಇತಿವೃತ್ತ ನಿರೂ ಪಣೆಯಲ್ಲಿಯೂ ಪ್ರಮಾದವಶವಾಗಿ ಪ್ರಕ್ಷೇಪ-ವಿಕ್ಷೇಪರೂಪದ ದೋಷವೇರ್ಪಟ್ಟಿದೆ ಯೆಂದು ಗುರುತಿಸಲವಕಾಶವಿದೆ.

ಮಗಧರಾಜ್ಯದಲ್ಲಿ ಬೃಹದ್ರಥರ ರಾಜ್ಯಭಾರವು ಅಂತ್ಯಗೊಂಡ ತರುವಾಯ ಕಾಲದ ಇತಿವೃತ್ತವನ್ನು ವಾಯುಪುರಾಣದಲ್ಲಿ ಈ ಮುಂದಿನಂತೆ ನಿರೂಪಿಸಲಾಗಿದೆ: [ವಾಯುಪುರಾಣ–ಅಧ್ಯಾಯ ೩೭]

ಪೂರ್ಣಂ ವರ್ಷಸಹಸ್ರಂ ವೈ ತೇಷಾಂ ರಾಜ್ಯಂ ಭವಿಷ್ಯತಿ ।
ಬೃಹದ್ರಥೇಷ್ವತೀತೇಷು ವೀತಿಹೋತ್ರೇಷು ವರ್ತಿಷು ॥೩೦೩॥
ಮುನಿಕಃ ಸ್ವಾಮಿನಂ ಹತ್ವಾ ಪುತ್ರಂ ಸಮಭಿಷೇಕ್ಷ್ಯತಿ ।
ಮಿಷತಾಂ ಕ್ಷತ್ರಿಯಾಣಾಂ ಹಿ ಪ್ರದ್ಯೋತೋ ಮುನಿಕೋ ಬಲಾತ್ ॥೩೦೪॥

ಈ ಮೇಲ್ಕಂಡ ಎರಡು ಪದ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಮೊದಲ ನೆಯ ಪದ್ಯದಲ್ಲಿ ನಿರ್ದೇಶಿತವಾಗಿರುವ ಬೃಹದ್ರಥರ ರಾಜ್ಯಭಾರಾಂತ್ಯಪ್ರಸಂಗ ಮತ್ತು ಎರಡನೆ ಪದ್ಯದಲ್ಲಿ ನಿರ್ದೇಶಿತವಾಗಿರುವ ಮುನಿಕಕೃತಸ್ವಾಮಿಹತ್ಯಾಪ್ರಸಂಗ ಗಳು ಪರಸ್ಪರ ಸಂಬಂಧಹೊಂದಿಲ್ಲದಿರುವುದು ವ್ಯಕ್ತಪಡುವುದು. ಎರಡನೇ ಪದ್ಯದಲ್ಲಿ ನಿರ್ದೇಶಿತವಾಗಿರುವ ಮುನಿಕಕೃತವಾದ ಸ್ವಾಮಿಹತ್ಯೆಯು ನಡೆಯುವ ಸಮಯಕ್ಕೆ ಬೃಹದ್ರಥರು ಅದಾಗಲೇ ಗತಕಾಲದವರೆನ್ನಿಸಿಕೊಂಡಿದ್ದರೆಂದು ಮೊದಲ ಪದ್ಯದ ಹೇಳಿಕೆಯಿಂದ ಸ್ಪಷ್ಟವಾಗುವುದು. ಇದರಿಂದ ಮುನಿಕನಿಂದ ಯಾವ ಸ್ವಾಮಿಯು ಹತನಾದನೋ ಅವನು ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯ ನಾಗಿರಲಾರನೆಂದು ನಿಶ್ಚಿತವಾಗುವುದು. ಇಷ್ಟಲ್ಲದೆ ಮೇಲ್ಕಂಡ ಮೊದಲಪದ್ಯದ 'ವೀತಿಹೋತ್ರೇಷುವರ್ತಿಷು' ಎಂಬ ಹೇಳಿಕೆಗೆ ಸಮಾನಾಂತರವಾಗಿ ಮತ್ಸ್ಯಪುರಾಣ ದಲ್ಲಿ 'ವೀತಿಹೋತ್ರೇಷ್ವವಂತಿಷು' ಎಂಬ ಹೇಳಿಕೆಯಿದೆ. ಇದರಂತೆ ಮೊದಲಪದ್ಯದ ಉತ್ತರಾರ್ಧದಿಂದ, 'ಮಗಧರಾಜ್ಯದಲ್ಲಿ ಬೃಹದ್ರಥರ ರಾಜ್ಯಭಾರವು ಅತೀತವಾಗಿರಲು ಮತ್ತು ಅವಂತಿಯಲ್ಲಿ ವೀತಿಹೋತ್ರರ ರಾಜ್ಯಭಾರವು ನಡೆದಿರಲು' ಎಂಬ ತಾತ್ಪರ್ಯಾ ರ್ಥವು ಮೂಡುವುದು. ಆದ್ದರಿಂದ ಮೇಲ್ಕಂಡ ಮೊದಲಪದ್ಯದ ಉತ್ತರಾರ್ಧವು, ಅವಂತಿಯಲ್ಲಿ ರಾಜ್ಯಭಾರಮಾಡುತ್ತಿದ್ದ ವೀತಿಹೋತ್ರಮನೆತನದ ಅರಸನೊಬ್ಬನ ಐತಿಹ್ಯಪ್ರಸಂಗಪ್ರರೂಪಣೆಯ ಪೀಠಿಕಾವಾಕ್ಯವಾಗಿದೆಯೆಂದು ಸ್ಫುಟಗೊಳ್ಳುವುದು. ಭಾಗವತಪುರಾಣದಲ್ಲಿ [ಸ್ಕಂಧ ೯, ಅಧ್ಯಾಯ ೨೩, ಪ. ಸಂ. ೨೯] ಯದುವಂಶ ವಿಷಯ ನಿರೂಪಣೆಯಪ್ರಸಂಗದಲ್ಲಿ 'ತೇಷಾಂ ಜ್ಯೇಷ್ಠೋ ವೀತಿಹೋತ್ರೋ ವೃಷ್ಣಿಃ ಪುತ್ರೋ ಮಧೋಃ ಸ್ಮೃತಃ' ಎಂಬ ಹೇಳಿಕೆಯಿದೆ. ಇದರಿಂದ ಅವಂತಿಯ ವೀತಿ ಹೋತ್ರಮನೆತನವು ಯದುವಂಶದ ಶಾಖೆಯಾಗಿದ್ದಿರಬಹುದೆಂದು ಗ್ರಹಿಸಲವಕಾಶ

ವಾಗುವುದಲ್ಲದೆ ಮಗಧರಾಜ್ಯದಲ್ಲಿ ಬೃಹದ್ರಥರು ಬಹುಪ್ರಾಚೀನಕಾಲದಿಂದ ದೀರ್ಘ ಕಾಲಪರ್ಯಂತ ರಾಜ್ಯವಾಳಿದಂತೆ, ಅವಂತಿಯಲ್ಲಿ ಯದುವಂಶದ ಶಾಖೆಯಾದ ವೀತಿ ಹೋತ್ರಮನೆತನದ ರಾಜಸಂತತಿಯು ಬಹುಪ್ರಾಚೀನಕಾಲದಿಂದಲೂ ರಾಜ್ಯವಾಳು ತ್ತಿದ್ದಿರಬೇಕೆಂದು ಮತ್ತು ಮಗಧರಾಜ್ಯದಲ್ಲಿ ಬೃಹದ್ರಥರ ರಾಜ್ಯಭಾರವು ಅಂತ್ಯ ಗೊಂಡ ತರುವಾಯವೂ ಅವಂತಿಯಲ್ಲಿ ವೀತಿಹೋತ್ರರ ರಾಜ್ಯಭಾರವು ಮುಂದುವರಿದಿ ದ್ದಿತೆಂದು ಹಾಗೂ ಪ್ರಸಿದ್ಧನಾದ ಪ್ರದ್ಯೋತಮಹಾಸೇನನು ಈ ವೀತಿಹೋತ್ರವಂಶಜ ನಾದ ಅರಸನಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಪ್ರದ್ಯೋತಮಹಾ ಸೇನನು, ಪ್ರಾಚೀನವೂ ಪ್ರಸಿದ್ಧವೂ ಮತ್ತು ಶ್ರೇಷ್ಠವೂ ಆದ ರಾಜಮನೆತನದಲ್ಲಿ ಹುಟ್ಟಿದ ಅರಸನಾಗಿದ್ದಿರಬೇಕೆಂದು ಭಾಸಕವಿಯು ಪ್ರ. ಯೌ. ನಾಟಕದ ಕಥಾ ಪ್ರಸಂಗದಿಂದ ಪರೋಕ್ಷರೀತಿಯಿಂದ ಸೂಚಿತವಾಗುವುದು. ಪ್ರದ್ಯೋತ-ಮಹಾ ಸೇನನು ತನ್ನ ಮಗಳಾದ ವಾಸವದತ್ತೆಗಾಗಿ ವರಾನ್ವೇಷಣೆಯಲ್ಲಿ ತೊಡಗಿದ್ದು, ವರ ನಲ್ಲಿರಬೇಕಾದ ಗುಣಗಳೇನೆಂಬುದನ್ನು ವಿವರಿಸುತ್ತಾ ಮೊದಲನೆಯದಾಗಿ 'ಕುಲಂ ತಾವಚ್ಛ್ಲಾಘ್ಯಂ ಪ್ರಥಮಮಭಿಕಾಂಕ್ಷೇ ಹಿ ಮನಸಾ' ಎಂದು ಹೇಳುವನು. ಪ್ರದ್ಯೋ ತ-ಮಹಾಸೇನನು ಶ್ರೇಷ್ಠರಾಜಮನೆತನದ ವ್ಯಕ್ತಿಯಾಗಿದ್ದನೆಂಬ ಐತಿಹಾಸಿಕಕಥಾ ಧಾರವಿದ್ದಲ್ಲದೆ, ಅವನಿಂದ ಭಾಸಕವಿಯು ಈ ಮಾತುಗಳನ್ನಾಡಿಸುವ ಪ್ರಸಂಗವನ್ನು ರೂಪಿಸಿರಲಾರನು. ಇಷ್ಟಲ್ಲದೆ, ಪ್ರದ್ಯೋತಮಹಾಸೇನನು ವರನಲ್ಲಿರಬೇಕಾದ ಗುಣ ಗಳ ವಿಷಯವಾಗಿ ಮೇಲ್ಕಂಡಂತೆ ತನ್ನ ಅಭಿಮತವನ್ನು ವ್ಯಕ್ತಪಡಿಸಿದ ಅನಂತರ ಕಾಂಚುಕೀಯನು 'ಮಹಾಸೇನಂ ವರ್ಜಯಿತ್ವಾ ನ ಹಿ ಇದಾನೀಮೇತೇ ಗುಣಾಃ ಕ್ವಚಿದೇಕಸ್ಥಾ ದೃಶ್ಯಂತೆ' ಎಂದು ಹೇಳುವನು. ಹೀಗೆ ಇದರಿಂದಲೂ ಪ್ರದ್ಯೋತ-ಮಹಾ ಸೇನನು ಶ್ರೇಷ್ಠರಾಜಮನೆತನದ ಅರಸನಾಗಿದ್ದನೆಂದು ಪರೋಕ್ಷರೀತಿಯಿಂದ ಸೂಚಿತ ವಾಗುವುದು. ಆದ್ದರಿಂದ ಪ್ರದ್ಯೋತ-ಮಹಾಸೇನನು ಈ ಹಿಂದೆ ಹೇಳಲಾಗಿರುವಂತೆ ಪ್ರಸಿದ್ಧವೂ ಸಂಸ್ತುತವೂ ಆದ ಯದುವಂಶದ ಶಾಖೆಯಾದ ವೀತಿಹೋತ್ರಮನೆತನದ ಅರಸನಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಮೇಲ್ಗಡೆ ಉಲ್ಲೇಖಿಸ ಲಾಗಿರುವ ಎರಡನೇ ಪದ್ಯದಲ್ಲಿ ಪ್ರದ್ಯೋತನ ರಾಜ್ಯಾಭಿಷೇಕದ ಐತಿಹ್ಯವಿಷಯವು ಸೂಚಿತವಾಗಿರುವುದನ್ನು ಗಮನಿಸಬಹುದು. ಈ 'ಪ್ರದ್ಯೋತ' ಎಂಬ ಹೆಸರು ಹಿಂದೆ ಹೇಳಲಾಗಿರುವ ಬೃಹದ್ರಥಮನೆತನದ ಅಂತಿಮ ಅರಸನಾದ ರಿಪುಂಜಯನನ್ನು ಕೊಲೆಗೈದ ಕುಣಿಕನ ಸುತನಾದ ಚಿಲಾತಪುತ್ರ-ಪ್ರದ್ಯೋತನ ಸೂಚಕವಾದುದಾಗಿಲ್ಲ ವೆಂದು ಹೇಳಲವಕಾಶವಿದೆ. ಈ ಚಿಲಾತಪುತ್ರ-ಪ್ರದ್ಯೋತನು ೧೨ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ, ಆದರೆ ಮೇಲ್ಕಂಡ ೨ನೇ ಪದ್ಯದಲ್ಲಿ ಹೆಸರಿಸಲಾಗಿರುವ ಪ್ರದ್ಯೋತನು ೨೩ ವರ್ಷಕಾಲ ರಾಜ್ಯಭಾರ ಮಾಡಿದನೆಂದು ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡಪುರಾಣತ್ರಯದಲ್ಲಿಯೂ ನಿರ್ದೇಶಿತವಾಗಿರುವುದಾದ್ದರಿಂದ ಪುರಾಣಗಳ ಈ 'ಪ್ರದ್ಯೋತ' ಎಂಬ ಹೆಸರು

ಅವಂತಿಯ ಪ್ರದ್ಯೋತ-ಮಹಾಸೇನನ ನಿರ್ದೇಶಕವಾಗಿದೆಯೆಂದು ಗ್ರಹಿಸಲವಕಾಶ ವಾಗುವುದು. ಆದ್ದರಿಂದ ಮೇಲ್ಕಂಡ ಪದ್ಯದಲ್ಲಿ ನಿರ್ದೇಶಿತವಾಗಿರುವ ಈ ಅವಂತಿ ಯರಸನಾದ ಪ್ರದ್ಯೋತ-ಮಹಾಸೇನನ ಐತಿಹ್ಯಪ್ರಸಂಗ ಹಾಗೂ ಬೃಹದ್ರಥ ರಾಜ್ಯಭಾರಾಂತ್ಯದ ಐತಿಹ್ಯಪ್ರಸಂಗಗಳು ಪರಸ್ಪರವಾಗಿ ಯಾವರೀತಿಯಿಂದಲೂ ಸಂಬಂಧಿತವಾಗಿಲ್ಲವೆಂಬುದು ವ್ಯಕ್ತವಾಗುವುದು. ಇದರಿಂದ ಹಿಂದೆ ಹೇಳಲಾಗಿರು ವಂತೆ ನಂದಿವರ್ಧನನ ವಂಶಾನುಕ್ರಮನಿರೂಪಣೆಯು ಪ್ರಸಂಗವಶವಾಗಿ ಪ್ರದ್ಯೋ ತಾದಿ ಅವಂತೀರಾಜಸಂತತಿಯ ಐತಿಹ್ಯವು ಮಗಧರಾಜಸಂತತಿಯ ಇತಿವೃತ್ತದ ಮಧ್ಯವರ್ತಿಯಾಗಿ ಸಂಯೋಜಿತವಾಗಿರಬೇಕೆಂದು ಪುನಃ ಪ್ರತಿಪಾದಿತವಾಗುವುದ ಲ್ಲದೆ ಪುರಾಣಗಳ ಮೂಲ ಐತಿಹ್ಯದಲ್ಲಿ ಮುಂಡರಾಜ ಮತ್ತು ನಂಧಿನರ್ಧನರ ಐತಿ ಹ್ಯಾಂಶಗಳ ಮಧ್ಯವರ್ತಿಯಾಗಿ ಪ್ರರೂಪಸಲಾಗಿದ್ದ ಈ ಅವಂತಿಯರಸರ ಇತಿವೃತ್ತ ವನ್ನು ಪುರಾಣೇತಿವೃತ್ತಸಂಕಲನಕಾರರು ಸ್ಥಾನಪಲ್ಲಟಗೊಳಿಸಿ ಬೃಹದ್ರಥರ ಇತಿ ವೃತ್ತಾನಂತರವರ್ತಿಸ್ಥಾನದಲ್ಲಿ ಸಂಯೋಜಿಸಿದ್ದಾರೆಂದು ಗ್ರಹಿಸಲವಕಾಶವಾಗುವುದು.

ವಾಯು ಪುರಾಣದ ಪೂರ್ವೋಲ್ಲಿಖಿತ ಪದ್ಯದಲ್ಲಿ ನಿರ್ದೇಶಿತವಾಗಿರುವ 'ಮುನಿಕ' ಎಂಬ ಹೆಸರು ಮತ್ತು ಈ ಹೆಸರಿನ ಬದಲಾಗಿ ಬ್ರಹ್ಮಾಂಡಪುರಾಣದಲ್ಲಿ ನಿರ್ದೇಶಿತವಾಗಿರುವ 'ಶುನಕ' ಎಂಬ ಹೆಸರುಗಳೊಡನೆ ಉದಾಯಿಭದ್ರಮಾರಕ ನಾದ ಮುಂಡರಾಜನ ಐತಿಹ್ಯಾಂಶವು ಸಂಕಲಿತವಾಗಿದೆಯೆಂದು ಹೇಳಲವಕಾಶವಿದೆ: ಮುನಿವ್ರತಧಾರಕನಾಗಿದ್ದು ವಂಚನೆಯಿಂದ ಉದಾಯಿಭದ್ರನನ್ನು ಕೊಲೆಗೈದು ಸಿಂಹಾಸನವನ್ನು ಆಕ್ರಮಣಮಾಡಿದ ವ್ಯಕ್ತಿಯ ಗುಣದೋಷವ್ಯಂಜಕಾರ್ಥದಿಂದ ಆರೂಢನಾದ 'ಮುಂಡ' ಎಂಬ ಹೆಸರಿನ ಸಮಾನಾರ್ಥವುಳ್ಳದ್ದಾಗಿ ವಾಯುಪುರಾಣ ದಲ್ಲಿ 'ಮುನಿಕ' (=ಕುತ್ಸಿತಮುನಿ) ಎಂಬ ಹೆಸರು ಪ್ರಯುಕ್ತವಾಗಿದೆಯೆಂದು ಗ್ರಹಿಸ ಬಹುದಾಗಿದೆ. ಮುಂಡನು ತನ್ನ ಸ್ವಾಮಿಯಾದ, ಶ್ರಾವಸ್ತೀನಗರದ ಅರಸನನ್ನು ಕೊಂದು ತನ್ನ ಮಗನಿಗೆ ಅಲ್ಲಿಯ ರಾಜಪಟ್ಟಕಟ್ಟಿರಬಹುದಾದ ಸಂಭವವಿದೆಯೆಂದು ಹಿಂದೆ ಜಯಸೇನನೃಪತಿಕಥೆಯ ವಿಮರ್ಶಾಪ್ರಸಂಗದಲ್ಲಿ ವಿವರಿಸಲಾಗಿದೆ- ಅಂತೆಯೇ ಪೂರ್ವೋಲ್ಲಿಖಿತವಾದ ೨ ನೇ ಪದ್ಯದಲ್ಲಿ ನಿರ್ದೇಶಿತವಾಗಿರುವ 'ಮುನಿಕಃ ಸ್ವಾಮಿನಂ ಹತ್ವಾ (ಸ್ವ) ಪುತ್ರಮಭಿಷೇಕ್ಷ್ಯತಿ' ಎಂಬ ಐತಿಹ್ಯಾಂಶವು ಉದಾಯಿಭದ್ರನ ಹಂತಕ ನಾದ ಮುಂಡರಾಜನ ಐತಿಹ್ಯಾಂಶವಾಗಿದೆಯೆಂದು ಗುರುತಿಸಬಹುದಾಗಿದೆ. ಆದ್ದರಿಂದ ಈ 'ಮುನಿಕ' ಎಂಬ ಹೆಸರು ಉದಾಯಿಭದ್ರಹಂತಕನಾದ ಮುಂಡರಾಜನ ನಿರ್ದೇಶಕ ವಾಗಿದೆಯೆಂದು ವ್ಯಕ್ತವಾಗುವುದು.

ಬ್ರಹ್ಮಾಂಡಪುರಾಣದಲ್ಲಿ ಮೇಲ್ಕಂಡ 'ಮುನಿಕ' ಎಂಬ ಹೆಸರಿನ ಬದಲಾಗಿ 'ಶುನಕ' ಎಂಬ ಹೆಸರು ಪ್ರಯುಕ್ತವಾಗಿದೆ. ಭಾಗವತಪುರಾಣದ 'ತಸ್ಯಾಮಾತ್ಯಸ್ತು ಶುನಕೋ ಹತ್ವಾ ಸ್ವಾಮಿನಂ........' ಎಂಬ ಹೇಳಿಕೆಯಿಂದ ಈ ಶುನಕನು ಅಮಾತ್ಯ

ನಾಗಿದ್ದನೆಂದು ಸೂಚಿತವಾಗುವುದು. ಶ್ರಾವಸ್ತೀನಗರದ ಅರಸನ ಮಂತ್ರಿಯಾಗಿದ್ದ ವ್ಯಕ್ತಿಯು (=ಮುಂಡನು) ಉದಾಯಿಭದ್ರನ ಕೊಲೆಗೈದು ಅನಂತರ ತನ್ನ ಸ್ವಾಮಿಯಾದ ಶ್ರಾವಸ್ತಿಯ ಅರಸನನ್ನೂ ಕೊಲೆಗೈದಿರುವನೆಂದು ಹಿಂದೆ ವಿವರಿಸಲಾಗಿದೆ. ಆದ್ದರಿಂದ ಈ 'ಶುನಕ' ಎಂಬ ಹೆಸರಿನೊಡನೆ ಮುಂಡನು ಮಂತ್ರಿಯಾಗಿದ್ದ ಐತಿಹ್ಯಾಂಶದ ಅವಶೇಷವು ಉಳಿದುಬಂದಿದೆಯೆಂದು ಗ್ರಹಿಸಲವಕಾಶವಾಗುವುದು. ಹೀಗೆ 'ಮುನಿಕ' ಮತ್ತು 'ಶುನಕ' ಎಂಬ ಹೆಸರುಗಳು ಉದಾಯಿಭದ್ರನ ಹಂತಕನಾದ ಮುಂಡನ ನಾಮಾಂತರಗಳಾಗಿ ಪ್ರಯುಕ್ತವಾಗಿವೆಯೆಂದು ವ್ಯಕ್ತಪಡುವುದಾದ ಕಾರಣ ಈ ಹೆಸರುಗಳು ಪುರಾಣಗಳಲ್ಲಿ ಉದಾಯಿಭದ್ರನ ಐತಿಹ್ಯಾನಂತರವರ್ತಿ ಸ್ಥಾನದಲ್ಲಿ ಇರಬೇಕಾದುದು ಸುಸಂಗತವೆನಿಸುವುದು. ಆದರೆ ಹಿಂದೆ ವಿವರಿಸಲಾಗಿರುವಂತೆ ಪುರಾಣೇತಿವೃತ್ತಸಂಕಲನಕಾರರಿಂದಾದ ಪ್ರಮಾದಜನ್ಯದೋಷವಶವಾಗಿ ಈ ಹೆಸರುಗಳೂ ಪ್ರದ್ಯೋತಾದಿ ಅವಂತಿಯರಸರ ಇತಿವೃತ್ತದೊಡನೆ ಸ್ಥಾನಪಲ್ಲಟಪೂರ್ವಕ ಬೃಹದ್ರಥರ ಇತಿವೃತ್ತಾನಂತರವರ್ತಿಸ್ಥಾನದಲ್ಲಿ ಸಂಯೋಜಿತವಾಗಿ ಉಳಿದುಬಂದಿವೆಯೆಂದು ಗ್ರಹಿಸಲವಕಾಶವಾಗುವುದು. ಪುರಾಣೇತಿವೃತ್ತಸಂಕಲನಕಾರರಿಂದಾಗಿರುವ ಈ ಪ್ರಮಾದಕ್ಕೆ, ಪ್ರಮುಖವಾಗಿ ಮೂಲ ಇತಿವೃತ್ತದಲ್ಲಿ ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯನ ಐತಿಹ್ಯದ ಅನಂತರವರ್ತಿಯಾಗಿ ನಿರ್ದೇಶಿತವಾಗಿದ್ದ ಕುಣಿಕಸೂನುವಿನ 'ಪ್ರದ್ಯೋತ' ಎಂಬ ಹೆಸರು ಹಾಗೂ ಉದಾಯಿಭದ್ರನ ಹಂತಕನಾದ ಮುನಿಕನ ಐತಿಹ್ಯದ ಅನಂತರವರ್ತಿಯಾಗಿ 'ಬೃಹದ್ರಥೇಷ್ವತೀತೇಷು ವೀತಿಹೋತ್ರೇಷ್ವವಂತಿಷು' ಎಂಬ ಪೀಠಿಕೆಯ ಪೂರ್ವಕವಾಗಿ ನಿರ್ದೇಶಿತವಾಗಿದ್ದ ಅವಂತಿಯರಸನ 'ಪ್ರದ್ಯೋತ' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂಬ, ತಪ್ಪುಗ್ರಹಿಕೆಯು ಕಾರಣವಾಗಿದೆಯೆಂದು ಕಂಡುಬರುವುದು. ಈ ರೀತಿಯಾಗಿ ಪುರಾಣಗಳ ಮೂಲ ಐತಿಹ್ಯದಲ್ಲಿ ಉದಾಯಿಭದ್ರನ ಐತಿಹ್ಯಾನಂತರವರ್ತಿಯಾಗಿ ನಿರ್ದೇಶಿತವಾಗಿದ್ದ ಮುನಿಕ (=ಮುಂಡ) ಎಂಬ ಹೆಸರು ಹಾಗೂ ಅವಂತಿಯರಸರ ಹೆಸರುಗಳೆಲ್ಲವೂ ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಸ್ಥಾನಪಲ್ಲಟಪೂರ್ವಕ ಬೃಹದ್ರಥರ ಐತಿಹ್ಯಾನಂತರವರ್ತಿಸ್ಥಾನದಲ್ಲಿ ಸಂಯೋಜಿತವಾಗಿ ಉಳಿದುಬಂದಿವೆಯೆಂದು ಫಲಿತವಾಗುವುದು. ಹೀಗೆ ಸ್ಥಾನಪಲ್ಲಟಹೊಂದಿದ ಅವಂತಿಯರಸರ ಹೆಸರುಗಳೊಡನೆ, ಮುಂಡರಾಜನ ತರುವಾಯ ಮಗಧರಾಜ್ಯದಲ್ಲಿ ಅಧಿಷ್ಠಿತನಾದ ನಂದಿವರ್ಧನನ ಹೆಸರೂ ಸೇರಿತಾಗಿ, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಈ ಹೆಸರಿನ ದ್ವಿರುಕ್ತಿಯಾಗಲು ಕಾರಣವಾಗಿದೆಯೆಂದು ಸ್ಫುಟಗೊಳ್ಳುವುದು.

ಪುರಾಣಗಳಲ್ಲಿ, ಮೇಲೆ ವಿವರಿಸಿರುವಂತೆ, ಸ್ಥಾನಪಲ್ಲಟಪೂರ್ವಕ ಪ್ರರೂಪಿತವಾಗಿರುವ ಅವಂತಿಯರಸರ ಅನುಕ್ರಮದಲ್ಲಿ ನಿರ್ದೇಶಿತವಾಗಿರುವ (ಪ್ರ) 'ನಂದಿವರ್ಧನ' ಎಂಬ ಹೆಸರಿನ ಅನಂತರವರ್ತಿಯಾಗಿ 'ಶಿಶುನಾಗ' (ಅಥವಾ 'ಶಿಶುನಾಕ') ಎಂಬ ಹೆಸರಿರುವುದನ್ನು ಗಮನಿಸಬಹುದು. ಈ 'ಶಿಶುನಾಗ ಎಂಬ ಹೆಸರು ನಂದಿವರ್ಧನನ

(=ನಂದನ) ನಾಮಾಂತರವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಪುರಾಣಗಳಲ್ಲಿ ಈ 'ಶಿಶುನಾಗ' ಎಂಬ ಹೆಸರು ನಂದಿವರ್ಧನನಿಂದನ್ಯನಾದ ವ್ಯಕ್ತಿಯೋರ್ವನ ಹೆಸರಾಗಿ ರೂಪುಗೊಂಡಿರುವುದಲ್ಲದೆ, ಅವಂತಿಯರಸರ ಹೆಸರುಗಳಂತೆ ಈ ಹೆಸರೂ ಸ್ಥಾನಪಲ್ಲಟ ಭಾಗಿಯಾಗಿದೆ. ಇಷ್ಟಲ್ಲದೆ ಈ 'ಶಿಶುನಾಗ' ಎಂಬ ಹೆಸರಿಗೆ ಸಂಬಂಧಿತವಾಗಿ ಪುರಾಣಗಳಲ್ಲಿ ಉಕ್ತವಾಗಿರುವ ಈ ಮುಂದಿನ ವಿಶೇಷ ಐತಿಹ್ಯಾಂಶವು ಪರಿಷ್ಕಾರಾರ್ಹವಾಗಿದೆ:

ಹತ್ವಾ ತೇಷಾಂ ಯಶಃ ಕೃತ್ಸ್ನಂ ಶಿಶುನಾಕೋ ಭವಿಷ್ಯತಿ |
ವಾರಾಣಸ್ಯಾಂ ಸುತಸ್ತಸ್ಯ ಸಂಪ್ರಾಪ್ಸ್ಯತಿ ಗಿರಿವ್ರಜಂ || ೩೦೯||

[ವಾಯುಪುರಾಣ–ಅ. ೩೭]

[ಈ ಪದ್ಯದಲ್ಲಿರುವ 'ಶಿಶುನಾಕ' ಎಂಬ ಹೆಸರಿನ ಬದಲಾಗಿ ಬ್ರಹ್ಮಾಂಡ ಪುರಾಣದಲ್ಲಿ 'ಶಿಶುನಾಗ' ಎಂಬ ಹೆಸರಿದೆ. ಇಂತೆಯೇ ಈ ಪದ್ಯದ ಉತ್ತರಾರ್ಧದಲ್ಲಿರುವ 'ಸುತಸ್ತಸ್ಯ' ಎಂಬುದರ ಬದಲಾಗಿ ಮತ್ಸ್ಯಪುರಾಣದಲ್ಲಿ 'ಸುತಂಸ್ಥಾಪ್ಯ' ಎಂಬ ಪಾಠವಿದೆ.]

ಮೇಲ್ಕಂಡ ಪದ್ಯದ 'ತೇಷಾಂ' ಎಂಬ ಪದವು ಶಿಶುನಾಗನ ಪೂರ್ವವರ್ತಿಗಳಾಗಿ ಹೆಸರಿಸಲಾಗಿರುವ ಪ್ರದ್ಯೋತಾದಿ [ಪ್ರ.] ನಂದಿವರ್ಧನ ಪರ್ಯಂತರಾದ ಅರಸರನ್ನು ನಿರ್ದೇಶಿಸುವುದು. ಇದರಂತೆ ಮೇಲ್ಕಂಡ ಪದ್ಯದ ಪೂರ್ವಾರ್ಧವು 'ಅವರ (=ಪೂರ್ವಜರಾದ ರಾಜರ) ಸಮಸ್ತಯಶಸ್ಸನ್ನು (ಹತ್ವಾ=) ಮರೆಗೊಳಿಸಿ ಶಿಶುನಾಕನಾಗುವನು' ಎಂಬ ಅರ್ಥಗೊಡುವುದು. ಇದರಿಂದ, ಶಿಶುನಾಗನು ತನ್ನ ಪೂರ್ವಜರೆಲ್ಲರ ಯಶಸ್ಸನ್ನು ಮರೆಗೊಳಿಸುವಂತಹ ಅತಿಶಯವಾದ ಯಶಸ್ಸನ್ನು ಹೊಂದಿದನೆಂದು ಅಭಿಪ್ರಾಯವಾಗುವುದು. ಇಷ್ಟಾದರೂ ಈ ಪದ್ಯದ ಅರ್ಥವು ಸ್ಪಷ್ಟವಿದೆಯೆಂದು ಹೇಳಲಾಗುವುದಿಲ್ಲ. ಈ ಪದ್ಯದ ಉತ್ತರಾರ್ಧದ ಅರ್ಥವು ಮತ್ತೂ ಅಸ್ಪಷ್ಟವಿದ್ದು ಸಮಸ್ಯಾತ್ಮಕವಾಗಿದೆ. ಈ ಉತ್ತರಾರ್ಧದಲ್ಲಿರುವ 'ಸುತಸ್ತಸ್ಯ' ಎಂಬುದರ ಸ್ಥಾನದಲ್ಲಿ ಮತ್ಸ್ಯಪುರಾಣದ 'ಸುತಂಸ್ಥಾಪ್ಯ' ಎಂಬುದನ್ನು ಸಮಾಯೋಜಿಸಿದಲ್ಲಿ, 'ವಾರಾಣಸಿಯಲ್ಲಿ ಮಗನನ್ನಿರಿಸಿ (ಶಿಶುನಾಗನು) ಗಿರಿವ್ರಜವನ್ನು ಸೇರಿದನು' ಎಂಬ ಅರ್ಥವಮೂಡುವುದು. ಅಂತೆಯೇ ವಾರಾಣಸೀರಾಜಮನೆತನದ ಈ ಶಿಶುನಾಗನು ಬೃಹದ್ರಥಮನೆತನದ ಅಂತಿಮರಾಜನಾದ ರಿಪುಂಜಯನ ತರುವಾಯ ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿದ್ದಾರೆ. [ಪೂ. ಸೂ. ಜರ್ನಲ್] ಇಂತಿದ್ದಲ್ಲಿ ರಿಪುಂಜಯನನ್ನು ಶಿಶುನಾಗನು ಕೊಲೆಗೈದು ಮಗಧರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದೂ ಅಂಗೀಕರಿಸಬೇಕಾಗುವುದು. ಆದರೆ ಪುರಾಣಗಳ ಐತಿಹ್ಯದಿಂದಾಗಲೀ ಅಥವಾ ಇತರ ಐತಿಹ್ಯಾಧಾರಗಳಿಂದಾಗಲೀ ರಿಪುಂಜಯನನ್ನು ಶಿಶುನಾಗನು ಕೊಲೆಗೈದನೆಂಬುದಾಗಿ ನಿರ್ದೇ

ಶಿತವಾಗುವುದಿಲ್ಲೆಂಬುದಲ್ಲದೆ, ರಿಪುಂಜಯನ ಐತಿಹ್ಯ ಮತ್ತು ಶಿಶುನಾಗನ ಐತಿಹ್ಯಗಳ ಮಧ್ಯವರ್ತಿಯಾಗಿ ಅವಂತಿಯರಸರ ಐತಿಹ್ಯವು ಸಂಯೋಜಿತವಾಗಿರುವುದರ ಕಾರಣವು ಪುನಃ ಪ್ರಶ್ನಾಯತ್ತವಾಗುವುದು. ಆದ್ದರಿಂದ ಮೇಲ್ಕಂಡ ಪದ್ಯದ ಉತ್ತರಾರ್ಧದ ಉಕ್ತಿಕ್ರಮದಲ್ಲಿಯೇ ಯಾವುದಾದರೊಂದು ರೀತಿಯಿಂದ ಅಕ್ರಮವೇರ್ಪಟ್ಟಿರಬಹುದೆಂಬ ಪರ್ಯಾಲೋಚನೆಗೆಡೆಯಾಗುವುದು. 'ಶಿಶುನಾಗ' 'ನಂದಿವರ್ಧನ' ಮತ್ತು 'ನಂದ' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂದು ಹಿಂದೆ ವಿವರಿಸಲಾಗಿದೆ. ದಿವ್ಯಪಂಚಕಗಳಲ್ಲೊಂದಾದ ಆನೆಯಿಂದಾದ ಕುಂಭಾಭಿಷೇಕದ ನಿಮಿತ್ತದಿಂದ ಪಾಟಲೀಪುತ್ರಪ್ರಮುಖರು ನಂದನನ್ನು ತಮ್ಮ ರಾಜನನ್ನಾಗಿ ವರಿಸಿದರೆಂಬ ಪರಿಶಿಷ್ಟಪರ್ವದ ಐತಿಹ್ಯವು ಈ ಸಂದರ್ಭದಲ್ಲಿ ವಿಶೇಷಾರ್ಥದ್ಯೋತಕವಾಗಿದೆ. ಮೂಲತಃ ಪುರಾಣಗಳಲ್ಲಿಯೂ 'ವಾರಣದಿಂದಾದ (=ಆನೆಯಿಂದಾದ) ಕುಂಭಾಭಿಷೇಕದ ನಿಮಿತ್ತದಿಂದ ಮಗಧರಾಜ್ಯದ ಪ್ರಭುತ್ವವನ್ನು ಪಡೆದ ನಂದಿವರ್ಧನನು 'ಶಿಶುನಾಗ' ಎಂಬ ಹೆಸರಿನಿಂದ ಪ್ರಸಿದ್ಧನಾದನು' ಎಂಬ ಐತಿಹ್ಯವಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಅಂತೆಯೇ, ಮೇಲ್ಕಂಡ ಪದ್ಯದ ಉತ್ತರಾರ್ಧವು. ಮೂಲತಃ 'ವಾರಣಶ್ಚಾಶು ತಂ ಪ್ರಾಪ್ಯ........' ಎಂದಿದ್ದುದು, ಕಾಲಾಂತರದಲ್ಲಿ, ಪೂರ್ವಾಪರ ಸಂಬಂಧವಿಲ್ಲದುದಾಗಿ ಅರ್ಥಹೀನವಾಗಿ ಕಂಡಿತಾಗಿ ಪುರಾಣೇತಿವೃತ್ತ ಸಂಕಲನಕಾರರಿಂದ 'ವಾರಾಣಸ್ಯಾಂ ಸುತಂ ಸ್ಥಾಪ್ಯ........' ಎಂಬ ಮಾರ್ಪಾಟು ಪಡೆದು ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಉಳಿದುಬಂದಿದೆಯೆಂದು ಕಂಡುಬರುವುದು. ಹೀಗೆ ಇಲ್ಲಿ ಮೂಲತಃ 'ವಾರಣ' ಎಂದಿದ್ದ ಪದವು 'ವಾರಾಣ' ಎಂದು ವ್ಯತ್ಯಸ್ತವಾಗಿದೆಯೆಂಬ ಈ ಪರ್ಯಾಲೋಚನೆಯು ಅಸಂಗತವೆನಿಸುವುದಿಲ್ಲವಾದಲ್ಲಿ, ಅವಂತೀರಾಜಮನೆತನದ ನಂದಿವರ್ಧನನು ಮಗಧರಾಜ್ಯದ ಪ್ರಭುತ್ವಪಡೆದ ತರುವಾಯ 'ಶಿಶುನಾಗ' ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವನೆಂಬ ಗ್ರಹಿಕೆಯು ಸುಸಂಗತವೆನಿಸುವುದು.

'ಶಿಶುನಾಗ' ಎಂಬ ಹೆಸರು ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಲ್ಲಿ 'ಸುಸುನಾಗ' ಎಂಬುದಾಗಿ ರೂಪಾಂತರ ಹೊಂದಿದೆಯೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿರುವುದಾಗಿ ಹಿಂದೆ ಹೇಳಲಾಗಿದೆ. ಈ ಸುಸುನಾಗನು ಮಗಧರಾಜ್ಯದ ಪ್ರಭುತ್ವಪಡೆಯುವ ಮುನ್ನ ಅಮಾತ್ಯಪದವಿಯಲ್ಲಿದ್ದನೆಂದು ಮಹಾವಂಸೋಕ್ಕೃತಿಕಾರನು ಹೇಳಿದ್ದಾನೆ. ಆದರೆ ಹಿಂದೆ ಹೇಳಲಾಗಿರುವಂತೆ, ಸುಸುನಾಗ ಮತ್ತು ಇವನ ಸುತನಾದ ಕಾಲಾಶೋಕರೀರ್ವರೂ 'ವೇಸಾಲೀಯು' ರೆನಿಸಿಕೊಂಡಿದ್ದು 'ವಿಶಾಲಾ' ಎಂಬ ಪ್ರಾಚೀನ ಹೆಸರನ್ನು ಹೊಂದಿದ್ದ ಉಜ್ಜಯಿನಿಯ ರಾಜಮನೆತನಕ್ಕೆ ಸೇರಿದವರಾಗಿರುವರೆಂದು ವ್ಯಕ್ತವಾಗುವುದಾದಕಾರಣ, ಸುಸುನಾಗನು ಅಮಾತ್ಯನಾಗಿದ್ದನೆಂಬ ಮಹಾವಂಸೋಕ್ಕೃತಿಕಾರನ ಹೇಳಿಕೆಯು ದೋಷಭಾಗಿಯಾಗಿದೆಯೆಂದು ಸ್ಫುಟವಾಗುವುದು. ಉದಾಯಿಭದ್ರ ಮತ್ತು ಸುಸುನಾಗರ ಮಧ್ಯವರ್ತಿ

ಯಾಗಿ ರಾಜ್ಯಭಾರಮಾಡಿದ ಮುಂಡರಾಜನ ಐತಿಹ್ಯವನ್ನು ಪ್ರರೂಪಿಸುವಲ್ಲಿ ಮಹಾವಂಸೋಕ್ಕೃತಿಯ ಐತಿಹ್ಯವು ದೋಷಭಾಗಿಯಾಗಿದೆ ಎಂಬುದು ಹಿಂದೆ ಸ್ಪಷ್ಟಗೊಂಡಿದೆ. ಇಂತೆಯೇ ಸುಸುನಾಗನು ಅಮಾತ್ಯನಾಗಿದ್ದನೆಂಬ ಮಹಾವಂಸೋಕ್ಕೃತಿಯ ಐತಿಹ್ಯದಲ್ಲಿ ಪ್ರಾಯಶಃ ಮುಂಡರಾಜನಿಗೆ ಸಂಬಂಧಿಸಿದ ಐತಿಹ್ಯಾಂಶವು ಅಕ್ರಮರೀತಿಯಿಂದ ಸಂಯೋಜಿತವಾಗಿದೆಯೆಂದು ಕಂಡುಬರುವುದು.

'ಶಿಶುನಾಗ' ಎಂಬ ಹೆಸರಿನ ಅನಂತರವರ್ತಿಯಾಗಿ ಪುರಾಣಗಳಲ್ಲಿ 'ಕಾಕವರ್ಣ'[1] ಎಂಬುವನನ್ನು ಹೆಸರಿಸಲಾಗಿದೆ. ಈ ಕಾಕವರ್ಣನು ಶಿಶುನಾಗನ ಸುತನಾಗಿರುವನೆಂಬುದರಲ್ಲಿ ಸಂಶಯವಿಲ್ಲ. 'ಶಿಶುನಾಗ' ಎಂಬ ಹೆಸರು ನಂದಿವರ್ಧನನ ನಾಮಾಂತರವಾಗಿದೆಯೆಂದು ಪ್ರತಿಪಾದಿಸಿರುವುದರನುಗುಣವಾಗಿ ಪುರಾಣಗಳಲ್ಲಿ[ದ್ವಿ] ನಂದಿವರ್ಧನ ಎಂಬ ಹೆಸರಿನ ಅನಂತರವರ್ತಿಯಾಗಿ ನಿರ್ದೇಶಿತವಾಗಿರುವ 'ಮಹಾನಂದಿ' ಎಂಬ ಹೆಸರು ಕಾಕವರ್ಣನ ನಿಜವಾದ ಹೆಸರಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಲ್ಲಿ ಸುಸುನಾಗನ ಅನಂತರವರ್ತಿಯಾಗಿ ನಿರ್ದೇಶಿಸಲಾಗಿರುವ 'ಕಾಲಾಶೋಕ' ಎಂಬ ಹೆಸರು ಮಹಾನಂದಿ-ಕಾಕವರ್ಣನ ನಾಮಾಂತರವಾಗಿದೆಯೆಂದು ವ್ಯಕ್ತವಾಗುವುದು. ಹೀಗೆ ಮಹಾನಂದಿಯ ನಾಮಾಂತರವಾದ 'ಕಾಕವರ್ಣ' ಎಂಬ ಹೆಸರು ಪೃಥಗ್ವ್ಯಕ್ತಿಯ ಹೆಸರಾಗಿ ರೂಪುಗೊಂಡು ಪುರಾಣಗಳಲ್ಲಿ ಸ್ಥಾನಪಲ್ಲಟಭಾಗಿಯಾಗಿದೆಯೆಂದು ಸ್ಫುಟವಾಗುವುದು. ಇಂತೆಯೇ ಪುರಾಣಗಳಲ್ಲಿ 'ಕಾಕವರ್ಣ' ಎಂಬ ಹೆಸರಿನ ಅನಂತರದಲ್ಲಿ ನಿರ್ದೇಶಿತವಾಗಿರುವ ಕ್ಷೇಮಧರ್ಮ ಮತ್ತು ಕ್ಷತ್ರೌಜ ಎಂಬ ಹೆಸರುಗಳು ಕಾಕವರ್ಣ-ಮಹಾನಂದ-ಕಾಲಾಶೋಕನ ಒಂಭತ್ತು ಜನಸುತರಲ್ಲೀರ್ವರ ಹೆಸರುಗಳಾಗಿದ್ದು ಇವುಗಳೂ ಸ್ಥಾನಪಲ್ಲಟಭಾಗಿಯಾಗಿವೆಯೆಂದು ಗ್ರಹಿಸಬೇಕಾಗುವುದು. ಹೀಗೆ ಉದಾಯಿಭದ್ರನ ಅನಂತರವರ್ತಿಯಾಗಿ ಅನುಕ್ರಮವಾಗಿ ರಾಜ್ಯಭಾರಮಾಡಿದ ಮುಂಡ (=ಮುನಿಕ), ನಂದಿವರ್ಧನ (=ನಂದ=ಶಿಶುನಾಗ), ಕಾಕವರ್ಣ (=ಮಹಾನಂದ = ಕಾಲಾಶೋಕ), ಕ್ಷೇಮಧರ್ಮ ಮತ್ತು ಕ್ಷೇಮಜಿತ್ ಹಾಗೂ ನಂದಿವರ್ಧನನ ವಂಶಾನುಕ್ರಮವನ್ನು ನಿರ್ದೇಶಿಸುವ ಪ್ರಸಂಗವಶವಾಗಿ, ಮುನಿಕನ ಐತಿಹ್ಯಾನಂತರವರ್ತಿಯಾಗಿ ಹೆಸರಿಸಲಾಗಿದ್ದ ಪ್ರದ್ಯೋತಾದಿ ಅವಂತಿಯರಸರುಗಳ ಹೆಸರುಗಳು ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಸ್ಥಾನಪಲ್ಲಟಪೂರ್ವಕ ಬೃಹದ್ರಥರ ರಾಜ್ಯಭಾರಾಂತ್ಯ ಐತಿಹ್ಯಾನಂತರವರ್ತಿಯಾಗಿ ಮತ್ತು ಉದಾಯಿಭದ್ರನ ಪಿತಾಮಹನಾದ ಬಿಂಬಿಸಾರನ ರಾಜ್ಯಭಾರಾರಂಭ ಐತಿಹ್ಯದ ಪೂರ್ವವರ್ತಿಯಾಗಿ ಸಂಯೋಜಿತವಾಗಿ ಉಳಿದುಬಂದಿವೆಯೆಂದು ಸ್ಪಷ್ಟಗೊಂಡಿದೆ. ಆದ್ದರಿಂದ ಪುರಾಣಗಳಲ್ಲಿ ಮೇಲ್ಕಂಡಂತೆ

---

1 ವಾಯುಪುರಾಣ-'ಶಕವರ್ಣ'

ಅಕ್ರಮರೀತಿಯಿಂದ ಬೃಹದ್ರಥರ ಇತಿವೃತ್ತಾನಂತರವರ್ತಿಯಾಗಿ ನಿರ್ದೇಶಿಸಲಾಗಿರುವ ಹೆಸರುಗಳನ್ನು ಉದಾಯಿಭದ್ರನ ಐತಿಹ್ಯಾನಂತರವರ್ತಿಯಾಗಿ ನಿರ್ದೇಶಿಸುವ ಮೂಲಕ ಸಕ್ರಮಗೊಳಿಸಿದಲ್ಲಿ ಪುರಾಣಗಳ ಮೂಲರೂಪದ ಇತಿವೃತ್ತದನುಸಾರವಾಗಿಯೂ ಮಗಧರಾಜ್ಯದಲ್ಲಿ ಬೃಹದ್ರಥರ ರಾಜ್ಯಭಾರವು ಅಂತ್ಯಗೊಂಡ ಅನಂತರದ ಬಹುಸಮೀಪವರ್ತಿಸಮಯದಲ್ಲಿಯೇ ಬಿಂಬಿಸಾರನ ರಾಜ್ಯಭಾರವು ಆರಂಭವಾಗಿರಬೇಕೆಂದು ಸ್ಫುಟಗೊಳ್ಳುವುದು.

ಬೃಹದ್ರಥರ ಅನಂತರ ಚಿಲಾತಪುತ್ರ-ಪ್ರದ್ಯೋತಿಯು ೧೨ ವರ್ಷಕಾಲವೂ ಶ್ರೇಣಿಕಬಿಂಬಿಸಾರನು ೩೮ ವರ್ಷಕಾಲವೂ ಅನುಕ್ರಮವಾಗಿ ರಾಜ್ಯಭಾರಮಾಡಿರುವರೆಂದು ಹಿಂದೆ ಪ್ರತಿಪಾದಿಸಲಾಗಿದೆ. ಬಿಂಬಿಸಾರನ ತರುವಾಯ ಅಜಾತಶತ್ರುವು ೩೨ ವರ್ಷಕಾಲ ರಾಜ್ಯಭಾರಮಾಡಿರುವನೆಂದು ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಾದ ದೀಪವಂಸೋ ಮತ್ತು ಮಹಾವಂಸೋಕೃತಿಗಳಲ್ಲಿ ನಿರ್ದೇಶಿತವಾಗಿದ್ದು ಈ ಅಂಶವು ಔತ್ತರೇಯಬೌದ್ಧಆಮ್ನಾಯದ ಟಿಬೆಟ್ಟಿನ ಇತಿವೃತ್ತದ ಹೇಳಿಕೆಯಿಂದಲೂ ಸಮರ್ಥಿತವಾಗುವುದು. [ಸನ್ಮಾನ್ಯ ಜೈಜೆರ್‌ರವರ ಮಹಾವಂಸೋ ಆಂಗ್ಲಾನುವಾದದ ಮುನ್ನುಡಿ-ಟೇಬಲ್ ಆಫ್ ಇಂಡಿಯನ್ ಕಿಂಗ್ಸ್]. ಅಜಾತಶತ್ರುವಿನ ತರುವಾಯ ಉದಾಯಿಭದ್ರನು ೧೬ ವರ್ಷಕಾಲ ರಾಜ್ಯಭಾರಮಾಡಿದುದಾಗಿ ಬೌದ್ಧಆಮ್ನಾಯದ ಮೇಲ್ಕಂಡ ಕೃತಿಗಳಲ್ಲಿ ನಿರ್ದೇಶಿಸಲಾಗಿದೆಯಾದರೆ ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡಪುರಾಣಗಳು ಮೂರರಲ್ಲಿಯೂ ಇವನ ರಾಜ್ಯಭಾರಕಾಲಾವಧಿಯನ್ನು ೩೩ ವರ್ಷಗಳೆಂದು ನಿರ್ದೇಶಿಸಲಾಗಿದೆ. ಆದರೆ ಉದಾಯಿಭದ್ರನ ಅನಂತರವರ್ತಿಯಾಗಿ ರಾಜ್ಯಭಾರಮಾಡಿದ ಮುನಿಕ-ಮುಂಡನ ರಾಜ್ಯಭಾರಸಂಬಂಧಿಐತಿಹ್ಯವು, ಹಿಂದೆ ವಿವರಿಸಲಾಗಿರುವಂತೆ, ಪುರಾಣಗಳಲ್ಲಿ ಸ್ಥಾನಪಲ್ಲಟಪೂರ್ವಕ ಪರಿಸ್ಖಲಿತವಾಗಿದೆಯಾದ ಕಾರಣ, ಇವನ ರಾಜ್ಯಭಾರಕಾಲಾವಧಿಯು ಉದಾಯಿಭದ್ರನ ರಾಜ್ಯಭಾರಕಾಲಾವಧಿಯೊಡನೆ ಸಂಯೋಜಿತವಾಗಿ ಉಳಿದುಬಂದಿದೆಯೆಂದು ಗ್ರಹಿಸಲವಕಾಶವಾಗುವುದು. ಇದರಂತೆ, ಉದಾಯಿಭದ್ರನು ೧೬ ವರ್ಷಕಾಲವೂ ಮುನಿಕ-ಮುಂಡನು (೩೩ – ೧೬ =)೧೭ ವರ್ಷಕಾಲವೂ ರಾಜ್ಯಭಾರಮಾಡಿರುವರೆಂದು ಸ್ಫುಟಗೊಳ್ಳುವುದು. ಹೀಗೆ, ಬೃಹದ್ರಥರ ಅನಂತರ ಚಿಲಾತಪುತ್ರ-ಪ್ರದ್ಯೋತಿ, ಶ್ರೇಣಿಕ-ಬಿಂಬಿಸಾರ, ಅಜಾತಶತ್ರು (=ದರ್ಶಕ = ಕೂಣಿಕ=ಕೋಣಕ), ಉದಾಯಿಭದ್ರ ಮತ್ತು ಮುಂಡ ( = ಮುನಿಕ=ನಾಗದಾಸಕ)ರ ಒಟ್ಟು ರಾಜ್ಯಭಾರಕಾಲವು(೧೨+೩೮+೩೨ + ೧೬+೧೭ =) ೧೧೫ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಫಲಿತವಾಗುವುದು. ಮುಂಡರಾಜನ ತರುವಾಯ ನಂದರಾಜನು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಇದರಂತೆ ಬೃಹದ್ರಥರ ರಾಜ್ಯಭಾರಾಂತ್ಯಸಮಯದಿಂದ ೧೧೫ ವರ್ಷಗಳ ತರುವಾಯದಲ್ಲಿ ನಂದರಾಜನ ರಾಜ್ಯಾಭಿಷೇಕ ನಡೆದಿದೆಯೆಂದು, ಹಿಂದೆ ಹೇಳಲಾಗಿರುವಂತೆ, ಭಾಗವತಪುರಾಣದ ಹೇಳಿಕೆ

ಯಿಂದ ಸೂಚಿತವಾಗಿರುವ ಐತಿಹ್ಯಾಂಶದ ತಥ್ಯವು ಇಲ್ಲಿ ಸ್ಫುಟಗೊಂಡಿರುವುದಲ್ಲದೆ, ಶ್ರೀ ವೀರತೀರ್ಥಂಕರನ ನಿರ್ವಾಣಪಶ್ಚಾತ್ ೬೦ ವರ್ಷಗಳ ತರುವಾಯದಲ್ಲಿ ನಂದ ರಾಜನು ಮಗಧರಾಜ್ಯದ ಸಿಂಹಾಸನದಲ್ಲಿ ಅಧಿಷ್ಠಿತನಾದನೆಂಬ ಪರಿಶಿಷ್ಟಪರ್ವದ ಹೇಳಿಕೆಯ ತಥ್ಯವೂ ಅಭಿವ್ಯಕ್ತವಾಗಿದೆ.

## ಅವಂತೀರಾಜಸಂತತಿ

ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿದ ದಿನದಂದು ಅವಂತೀರಾಜ್ಯದಲ್ಲಿ ಪಾಲಕರಾಯನು ಅಭಿಷಿಕ್ತನಾಗಿ ಮುಂದೆ ೬೦ ವರ್ಷಕಾಲ ರಾಜ್ಯಭಾರನಡೆಸಿದ ನೆಂದು ಶ್ರೀವೀರನಿರ್ವಾಣಸಮಯಸಂಬಂಧಿ ಐತಿಹ್ಯದಿಂದ ನಿರ್ದೇಶಿತವಾಗುವುದಾ ದರೆ, ವೈ. ಮ. ಸಂ. ಪುರಾಣಗಳಲ್ಲಿ ಪ್ರದ್ಯೋತನ ತರುವಾಯ ರಾಜ್ಯಭಾರ ದಲ್ಲಿ ಅಧಿಷ್ಠಿತನಾದ ಪಾಲಕರಾಜನು ೨೪ (ಅಥವಾ ೨೮) ವರ್ಷಕಾಲ ರಾಜ್ಯವಾಳಿದ ನೆಂದು ನಿರ್ದೇಶಿಸಲಾಗಿದೆ. ಹೀಗೆ ಪಾಲಕರಾಜನ ರಾಜ್ಯಭಾರಕಾಲವನ್ನು ನಿರ್ದೇ ಸುವಲ್ಲಿ ಶ್ರೀ ವೀರನಿರ್ವಾಣಸಮಯಸಂಬಂಧಿ ಐತಿಹ್ಯ ಹಾಗೂ ವೈ. ಮ. ಸಂ. ಪುರಾ ಣಗಳ ಐತಿಹ್ಯಗಳ ಮಧ್ಯೆ ಭಿನ್ನಮತವಿರುವುದು ಸ್ಪಷ್ಟವಿದೆ. ಆದ್ದರಿಂದ ಈ ಐತಿ ಹ್ಯಾಂಶವನ್ನು ಪರಿಷ್ಕರಿಸಬೇಕಾದ ಅವಶ್ಯಕತೆಯಿದೆ.

ಶ್ವೇತಾಂಬರ ಜೈನ ಆಮ್ನಾಯದ 'ತಿತ್ಥೋಗಾಲೀ ಪಇನ್ನಯ' ಮತ್ತು 'ತೀರ್ಥೋದ್ಧಾರಪ್ರಕರಣ' ಹಾಗೂ ದಿಗಂಬರ ಜೈನ ಆಮ್ನಾಯದ 'ತಿಲೋಯ ಪಣ್ಣತ್ತಿ' ಕೃತಿಗಳಲ್ಲಿ, ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿದ ದಿನದ ಸೂಚಕ ವಾದ ಐತಿಹ್ಯವನ್ನು ಈ ಮುಂದಿನಂತೆ ಹೇಳಲಾಗಿದೆ:

*ಜಂ ರಯಣಿಂ ಸಿದ್ಧಿಗಓ ಅರಹಾ ತಿತ್ಥಂಕರೋ ಮಹಾವೀರೋ ।
ತಂ ರಯಣಿಮವಂತೀಏ ಅಭಿಸಿತ್ತೋ ಪಾಲಓ ರಾಯಾ ॥

[ತಿತ್ಥೋಗಾಲೀಪಇನ್ನಯ]

*ಜಂ ರಯಣಿಂ ಕಾಲಗಓ ಅರಿಹಾ ತಿತ್ಥಂಕರೋ ಮಹಾವೀರೋ ।
ತಂ ರಯಣಿಮವಂತಿವಈ ಅಭಿಸಿತ್ತೊ ಪಾಲಓ ರಾಯಾ ॥

[ತೀರ್ಥೋದ್ಧಾರ ಪ್ರಕರಣ]

ಜಕ್ಕಾಲೇ ವೀರಜಿಣೋ ಣಿಸ್ಸೇಯಸಸಂಪಯಂ ಸಮಾವಣ್ಣೋ ।
ತಕ್ಕಾಲೇ ಅಭಿಸಿತ್ತೋ ಪಾಲಯಣಾಮೋ ಅವಂತಿಸುದೋ ॥ ೫೦೫ ॥

[ತಿಲೋಯ ಪಣ್ಣತ್ತಿ–ಚಉತ್ಥೋ ಮಹಾಧಿಯಾರೋ]

---

* ಈ ಎರಡು ಗಾಹೆಗಳನ್ನು ಕಸಾಯಪಾಹುಡ – ಭಾಗ-೧ – ಮುನ್ನುಡಿ – ಪು. ಸಂ. ೫೧-೫೨ ರಿಂದ ಉದ್ಧರಿಸಲಾಗಿದೆ.

ಮೇಲ್ಕಂಡ ಗಾಹೆಗಳಲ್ಲದೆ ಹಿಂದೆ ಉಲ್ಲೇಖಿಸಲಾಗಿರುವ ಪಟ್ಟಾವಲೀಸಮುಚ್ಚ ಯದ 'ಸಿರಿಜಿಣಣಿವ್ವಾಣಗಮಣರಯಣೀಯೇ ಉಜ್ಜೇಣೀಯೇ ಚಂಡಪಜ್ಜೋ ಅಮರಣೆ ಪಾಲಓ ರಾಜಾ ಅಹಿಸಿತ್ತೋ........' ಎಂಬ ಹೇಳಿಕೆಯನ್ನೂ ಇಲ್ಲಿ ಗಮ ನಿಸಬೇಕಾದ ಪ್ರಮೇಯವಿದೆ.

ಈ ಎಲ್ಲ ಹೇಳಿಕೆಗಳಿಂದ' ಶ್ರೀ ವೀರತೀರ್ಥಂಕರನು ನಿರ್ವಾಣಕ್ಕೆ ಸಂದ ದಿನ ದಂದು ಪಾಲಕರಾಜನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾದನೆಂದು ನಿರ್ದಿಷ್ಟ ವಾಗುವುದು. ಆದರೆ ಈ ಪಾಲಕರಾಜನಾರು ? ಎಂಬುದು ವಿಚಾರಾರ್ಹವಾದ ಪ್ರಶ್ನೆಯಾಗಿದೆ.

ಭಾಸಕವಿಯ ಪ್ರ. ಯೌ. ನಾಟಕದ [ಅಂಕ ೩-ಶ್ಲೋ. ಸಂ. ೧೩] ಹೇಳಿಕೆ ಯಿಂದ, ಅವಂತೀರಾಜ್ಯಾಧಿಪನಾದ ಪ್ರದ್ಯೋತ-ಮಹಾಸೇನನಿಗೆ ಗೋಪಾಲಕನೆಂಬ ಜ್ಯೇಷ್ಠಪುತ್ರನೂ ಮತ್ತು ಇವನಿಂದ ಕಿರಿಯನಾದ ಪಾಲಕನೆಂಬ ಮತ್ತೊಬ್ಬ ಮಗನೂ ಇದ್ದರೆಂದು ತಿಳಿದುಬರುವುದು. ಇದರಿಂದ ತಿರ್ಥೋದ್ಧಾರಪ್ರಕರಣವೇ ಮೊದಲಾದ ಕೃತಿಗಳ ಮೇಲ್ಗಂಡ ಗಾಹೆಗಳಲ್ಲಿ ನಿರ್ದೇಶಿತವಾಗಿರುವ 'ಪಾಲಕ' ಎಂಬ ಹೆಸರು ಪ್ರದ್ಯೋತಮಹಾಸೇನನ ಕಿರಿಯಸುತನ ಸೂಚಕವಾಗಿರಬೇಕೆಂದು ಗ್ರಹಿಸಬೇಕಾ ಗುವುದು. ಆದರೆ ಈ ಗ್ರಹಿಕೆಗೆ ಬಾಧಕವೆನಿಸುವ ಅಂಶಗಳು ಕೆಲವಿವೆಯಾದುದರಿಂದ ಇವುಗಳನ್ನೂ ಪರಿಶೀಲಿಸಬೇಕಾದ ಆವಶ್ಯಕತೆಯಿದೆ.

ಹಿಂದೆ ಉಲ್ಲೇಖಿಸಲಾಗಿರುವ 'ವೃಷಭಸೇನ ಭಟ್ಟಾರಕ' ಕಥೆಯಲ್ಲಿ ಪ್ರದ್ಯೋ ತನ ತರುವಾಯ ಅವನ ಜ್ಯೇಷ್ಠಸುತನಾದ ವಸುಪಾಲನು ರಾಜ್ಯಭಾರದಲ್ಲಿ ಅಧಿಷ್ಠಿತ ನಾದನೆಂದು ಹೇಳಲಾಗಿದ್ದು ಈ 'ವಸುಪಾಲ' ಎಂಬ ಹೆಸರು ಭಾಸಕವಿಯ ಪ್ರ. ಯೌ. ನಾಟಕದ ಪ್ರದ್ಯೋತನ ಜ್ಯೇಷ್ಠಸುತನಾದ ಗೋಪಾಲಕನ ನಿರ್ದೇಶಕ ವಾಗಿದೆಯೆಂದು ವಿವರಿಸಲಾಗಿದೆ. ಇಷ್ಟಲ್ಲದೆ ಪ್ರದ್ಯೋತನ ತರುವಾಯ ಅಭಿಷಿಕ್ತ ನಾದ ರಾಜನನ್ನು ಪುರಾಣಗಳ ಗ್ರಂಥಾಂತರಗಳಲ್ಲಿ 'ಗೋಪಾಲಕ' ಎಂದು ಹೆಸರಿಸಿರು ವುದಾಗಿ ಚರಿತ್ರಕಾರರ ಹೇಳಿಕೆಯಿಂದ ವಿದಿತವಾಗುವುದು. [ಹಿಂದೂ ಸಿವಿಲೈಜೇಷನ್ ಪು. ಸ. ೨೭೫] ಇದರಿಂದ ಪ್ರದ್ಯೋತನ ತರುವಾಯ ಅವನ ಜ್ಯೇಷ್ಠಸುತನಾದ ಗೋಪಾಲಕನು ರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಗ್ರಹಿಸಲವಕಾಶವಾಗು ವುದು.

ಸಾಧಾರಣವಾಗಿ ಪುರಾಣಗಳಲ್ಲಿ ಪಾಲಕನನ್ನು ಪ್ರದ್ಯೋತನ ಉತ್ತರಾಧಿ ಕಾರಿಯನ್ನಾಗಿ ಹೆಸರಿಸಿದೆಯಾದರೂ, ಇವನ ರಾಜ್ಯಭಾರಕಾಲವನ್ನು ಹೇಳುವಲ್ಲಿ ಮತಭೇಧವಿರುವುದು ಕಂಡುಬರುತ್ತದೆ. ವಾಯು ಮತ್ತು ಬ್ರಹ್ಮಾಂಡಪುರಾಣ ಗಳಲ್ಲಿ ಈ ಪಾಲಕನ ರಾಜ್ಯಭಾರಕಾಲವನ್ನು ೨೪ ವರ್ಷಗಳೆಂದು ನಿರ್ದೇಶಿಸಿದೆ

ಯಾದರೆ, ಮತ್ಸ್ಯಪುರಾಣದಲ್ಲಿ ೫೮ ವರ್ಷಗಳೆಂದು ನಿರ್ದೇಶಿಸಿದೆ. ಹೀಗೆ ಇವನ ರಾಜ್ಯಭಾರಕಾಲವನ್ನು ನಿರ್ದೇಶಿಸುವಲ್ಲಿ ನಾಲ್ಕು ವರ್ಷಗಳ ಅವಧಿಯಿಂದ ಮತಭೇದ ಕ್ಕೆಡೆಯಾಗಿರುವುದು, ಪ್ರಕೃತಸಂದರ್ಭದ ದೃಷ್ಟಿಯಿಂದ ಗಮನಾರ್ಹವಾದ ಅಂಶ ವಾಗಿದೆ. ಬೌದ್ಧಆಗಮಗ್ರಂಥ [ಅಂಗುತ್ತರನಿಕಾಯ-] ದ ಆಧಾರದಿಂದ, ಶ್ರೀ ಗೌತಮ ಬುದ್ಧನ ನಿರ್ವಾಣಾನಂತರದ ಸ್ವಲ್ಪಸಮಯದಲ್ಲಿ, ಶೂರಸೇನದೇಶದ ಮಥುರಾ ನಗರದಲ್ಲಿ 'ಅವಂತಿಪುತ್ರ' ಎಂಬ ಹೆಸರಿನ ವ್ಯಕ್ತಿಯು ರಾಜನಾಗಿದ್ದನೆಂದು 'ಭಗ ವಾನ್ ಬುದ್ಧ' ಕೃತಿಯಲ್ಲಿ [ಪು. ಸಂ. ೪೯] ಹೇಳಿದೆ. ಅವಂತೀರಾಜಮನೆತನದ ವ್ಯಕ್ತಿಗಳನ್ನು ಅನ್ಯರಾಜ್ಯಪ್ರದೇಶಗಳಲ್ಲಿ ಸಾಧಾರಣವಾಗಿ 'ಅವಂತಿಪುತ್ರ' 'ಅವಂತಿ ಸುತ', 'ಅವಂತಿಕಾಪುತ್ರಿ' ಎಂದು ಮುಂತಾಗಿ ನಿರ್ದೇಶಿಸುವ ರೂಢಿಯಿದ್ದಿತೆಂದು ಹೇಳ ಲವಕಾಶವಿದೆ: ಉದಾಹರಣೆಯಾಗಿ, ಪ್ರದ್ಯೋತರಾಜನಸುತೆಯಾದ ವಾಸವದತ್ತೆಯು ತನ್ನ ಪತಿಯಾದ ಉದಯನನ ಹಿತಸಾಧನೆಗಾಗಿ ಅಜ್ಞಾತರೂಪದಿಂದ ಮಗಧರಾಜ್ಯ ದಲ್ಲಿ ಪದ್ಮಾವತಿಯ ಬಳಿಯಿದ್ದ ಸಮಯದಲ್ಲಿ 'ಅವಂತಿಕಾಪುತ್ರಿ' ಎಂಬ ಹೆಸರನ್ನು ಹೊಂದಿದ್ದಳೆಂದು ಬೃ. ಕ. ಮಂಜರಿಯಲ್ಲಿ ಹೇಳಲಾಗಿದೆ. [ತೃ. ಲಂ. ಶ್ಲೋ. ಸಂ. ೮೩] ಇದರಂತೆ ಮಥುರಾನಗರದಲ್ಲಿ ರಾಜ್ಯಭಾರಮಾಡುತ್ತಿದ್ದ 'ಅವಂತಿಪುತ್ರ' ನೆಂಬು ವನು ಅವಂತೀರಾಜಮನೆತನದವ್ಯಕ್ತಿಯಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಪ್ರದ್ಯೋತಮಹಾಸೇನನ ಜ್ಯೇಷ್ಠಸುತನಾದ ಗೋಪಾಲಕನನ್ನೇ ಇಲ್ಲಿ 'ಅವಂತಿಪುತ್ರ' ನೆಂದು ನಿರ್ದೇಶಿಸಲಾಗಿದೆಯೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿ ದ್ದಾರೆ. ಸನ್ಮಾನ್ಯ ಸೀತಾನಾಥ್‌ಪ್ರಧಾನರವರು ಕಥಾಸರಿತ್ಸಾಗರದ (III, ೬೦, ೬೧, ೬೨, ೬೩) ಹೇಳಿಕೆಯಾಧಾರದಿಂದ, ಗೋಪಾಲಕನ ಸಹೋದರನಾದ ಪಾಲಕ ನಿಗೆ ರಾಜ್ಯಭಾರವನ್ನುವಹಿಸಿ, ತನ್ನ ಸಹೋದರಿಯಾದ ವಾಸವದತ್ತೆಯ ಪ್ರೀತಿವಶ ನಾಗಿ, ಕೋಶಾಂಬೀನಗರಕ್ಕೆ ಹೋಗಿ ವಾಸಿಸಲಾರಂಭಿಸಿದನೆಂದೂ, ಅನಂತರ ವಾಸ ವದತ್ತೆಯ ಪತಿಯಾದ ಉದಯನನು ಮೃತನಾದ ಬಳಿಕ, ಅಸಿತಗಿರಿಯ ಬಳಿಯಿದ್ದ ಕಾಶ್ಯಪಮಹರ್ಷ್ಯಾಶ್ರಮಕ್ಕೆಹೋಗಿ ವಾಸಿಸಲಾರಂಭಿಸಿದನೆಂದೂ ಹೇಳಿದ್ದಾರೆ. [ಕ್ರಾನಾ ಲಜಿ ಆಫ್ ಏನ್ಸಿಯೆಂಟ್ ಇಂಡಿಯಾ ಪು. ಸಂ. ೨೩೨-೨೩೭].

ವತ್ಸರಾಜ್ಯಾಧಿಪ ಉದಯನನ ರಾಜ್ಯವನ್ನು ಆರುಣಿಯೆಂಬುವನು ಅಪಹರಿ ಸಿರಲಾಗಿ, ಉದಯನನು ಪದ್ಮಾವತಿಯನ್ನು ವಿವಾಹವಾಗುವುದರ ಮೂಲಕ ಮಗಧ ರಾಜನಾದ ದರ್ಶಕನ ಸಹಾಯಪಡೆದು, ತನ್ನ ರಾಜ್ಯವನ್ನು ಪುನಃಸ್ವಾಯತ್ತೆಗೊಳಿಸಿ ಕೊಂಡ ಐತಿಹ್ಯವು ಭಾಸಕವಿಯ ಸ್ವಪ್ನವಾಸವದತ್ತ ನಾಟಕದ ಕಥಾಭಾಗವಾಗಿರು ವುದು ವಿದಿತವಿದೆ. ಹೀಗೆ ವತ್ಸರಾಜನು ತನ್ನ ರಾಜ್ಯವನ್ನು ಪುನಃಸ್ವಾಯತ್ತೆಗೊಳಿಸಿ ಕೊಂಡ ಅನಂತರ, ಪದ್ಮಾವತಿಯ ಸಹೋದರನಾದ ಸಿಂಹವರ್ಮ ಮತ್ತು ವಾಸವ ದತ್ತೆಯ ಸಹೋದರನಾದ ಗೋಪಾಲಕರೀರ್ವರ ಸಹಕಾರದೊಡನೆ ದಿಗ್ವಿಜಯಮಾಡಿ ದನೆಂದು ಬೃ. ಕ. ಮಂಜರಿಯ ಕಥೆಯಿಂದ ತಿಳಿದುಬರುವುದು. ಇಲ್ಲಿ ಉದಯನನ

ಈ ದಿಗ್ವಿಜಯದ ವರ್ಣನೆಯು ಉತ್ಪ್ರೇಕ್ಷಾಯುತವಾಗಿರಬಹುದು. ಆದರೆ, ಹಿಂದೆ ಇವನ ರಾಜ್ಯವನ್ನು ಅಪಹರಿಸಿದ್ದ ಆರುಣಿಯ ಪಕ್ಷವಹಿಸುವುದರ ಮೂಲಕ ವಿರೋಧಿಗಳಾಗಿ ಉಳಿದಿದ್ದ ಇತರ ರಾಜರಮೇಲೆ ಉದಯನನು ಯುದ್ಧಮಾಡಬೇಕಾದ ಪ್ರಸಂಗವು ಒದಗಿಬಂದಿದ್ದಲ್ಲಿ ಆಶ್ಚರ್ಯವಿಲ್ಲ. ಉದಯನನ ಈ ಯುದ್ಧಕಾರ್ಯದಲ್ಲಿ ಪ್ರದ್ಯೋತಮಹಾಸೇನ ಮತ್ತು ದರ್ಶಕರೀರ್ವರೂ ಸಹಭಾಗಿಗಳಾಗಿದ್ದುದರಿಂದ, ಯುದ್ಧಫಲವಾಗಿ ಕೈವಶವಾದ ರಾಜ್ಯಗಳನ್ನು ಈ ಮೂವರೂ ತಮ್ಮತಮ್ಮಲ್ಲಿ ವಿಭಾಗಮಾಡಿಕೊಂಡಿದ್ದಾರೆ. ಹೀಗೆ ಈ ವಿಭಾಗದ ಫಲವಾಗಿ ಪ್ರದ್ಯೋತಮಹಾಸೇನನಿಗೆ ಶೂರಸೇನರಾಜ್ಯವು ದೊರಕಿದ್ದು, ಇಲ್ಲಿಯ ರಾಜ್ಯಾಡಳಿತದ ನಿರ್ವಹಣಾಕಾರ್ಯದಲ್ಲಿ ಗೋಪಾಲಕನು ನಿಯೋಜಿತನಾಗಿರಬೇಕೆಂದು ಗ್ರಹಿಸಲಕಾಶವಿದೆಯಲ್ಲದೆ, ಅವಂತೀರಾಜಮನೆತನದ ವ್ಯಕ್ತಿಯಾದ ಇವನನ್ನು ಇಲ್ಲಿ 'ಅವಂತಿಪುತ್ರ' ಅಥವಾ 'ಅವಂತೀಸುತ' ,ಎಂಬ ಹೆಸರಿನಿಂದ ನಿರ್ದೇಶಿಸುವ ಪರಿಪಾಠ ಉಂಟಾಗಿರಬೇಕೆಂದು ವ್ಯಕ್ತವಾಗುವುದು. ಪರಂಪರಾಗತವಾದ ಸಂಪ್ರದಾಯಾನುಸಾರವಾಗಿ ಜ್ಯೇಷ್ಠಸುತನು ರಾಜ್ಯಭಾರದ ಹಕ್ಕುದಾರನೆನಿಸುವನಾದ್ದರಿಂದ ಗೋಪಾಲಕನು ತನ್ನ ತಂದೆಯ ಮರಣಾನಂತರ ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರಬೇಕೆಂಬುದು ಸಮಂಜಸವೆನಿಸುವುದು. ಇಷ್ಟಲ್ಲದೆ, ಹಿಂದೆ ಹೇಳಿರುವಂತೆ, ಪಾಲಕನ ರಾಜ್ಯಭಾರಕಾಲಾವಧಿಯನ್ನು ನಿರ್ದೇಶಿಸುವಲ್ಲಿ ಮತ್ಸ್ಯ ಹಾಗೂ ವಾಯು ಮತ್ತು ಬ್ರಹ್ಮಾಂಡಪುರಾಣಗಳ ಹೇಳಿಕೆಗಳ ಮಧ್ಯೆ ನಾಲ್ಕು ವರ್ಷಗಳ ಅಂತರವಿದೆಯಾದುದರಿಂದ, ಪ್ರದ್ಯೋತ-ಮಹಾಸೇನನ ತರುವಾಯ ಗೋಪಾಲಕನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿದ್ದು ನಾಲ್ಕು ವರ್ಷಗಳ ಅನಂತರ ತನ್ನ ತಮ್ಮನಾದ ಪಾಲಕನಿಗೆ ಉಜ್ಜಯಿನಿಯ ರಾಜ್ಯಾಡಳಿತವನ್ನು ವಹಿಸಿ, ಶೂರಸೇನರಾಜ್ಯದ ನಿರ್ವಹಣೆಗಾಗಿ ತಾನು ಮಥುರಾನಗರದಲ್ಲಿ ವಾಸಿಸಿದನೆಂದು ಗ್ರಹಿಸಲವಕಾಶವಾಗುವುದು. ಹೀಗೆ ಈ ವಿಚಾರಸರಣಿಯಂತೆ, ಗೋಪಾಲಕನು ಶ್ರೀ ವೀರನಿರ್ವಾಣದಂದು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಸ್ಫುಟಗೊಳ್ಳುವುದಲ್ಲದೆ, ಶ್ರೀ ಗೌತಮಬುದ್ಧನ ನಿರ್ವಾಣಾನಂತರದ ಸ್ವಲ್ಪ ಸಮಯದಲ್ಲಿ ಮಥುರೆಯಲ್ಲಿ ರಾಜ್ಯಭಾರಮಾಡುತ್ತಿದ್ದನೆಂದು ಬೌದ್ಧಆಗಮಗ್ರಂಥದಲ್ಲಿ ನಿರ್ದೇಶಿಸಲಾಗಿರುವ 'ಅವಂತಿಪುತ್ರ' ಎಂಬ ಹೆಸರು ಗೋಪಾಲಕನ ನಾಮಾಂತರವಾಗಿದೆಯೆಂದು ವ್ಯಕ್ತವಾಗುವುದು. ಗೋಪಾಲಕನಿಂದ ಉಜ್ಜಯಿನಿಯ ರಾಜ್ಯಾಡಳಿತದಲ್ಲಿ ನಿಯೋಜಿತನಾದ ಪಾಲಕನು ಮುಂದೆ ೨೪ ವರ್ಷಪರ್ಯಂತ ರಾಜ್ಯಭಾರ ಮಾಡಿದ್ದಾನೆ. ಪ್ರಾಯಶಃ ಪ್ರಾರಂಭದಲ್ಲಿ ಪಾಲಕನು ತನ್ನ ಅಣ್ಣನಾದ ಗೋಪಾಲಕನ ಅಧೀನನಾಗಿದ್ದು ಕಾಲಕ್ರಮದಲ್ಲಿ ತನ್ನ ಸ್ವತಂತ್ರತೆಯನ್ನು ಸಾಧಿಸಿಕೊಂಡಿದ್ದಾನೆಂದು ಕಂಡುಬರುವುದು. ಇದರಿಂದ, ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ನಿರ್ದೇಶಿತವಾಗಿರುವ ೨೪ ವರ್ಷಗಳ ರಾಜ್ಯಭಾರಕಾಲವು ಪಾಲಕನ ರಾಜ್ಯಭಾರಕಾಲವಾಗಿದೆಯೆಂದೂ ಮತ್ತು ಮತ್ಸ್ಯಪುರಾಣದಲ್ಲಿ ನಿರ್ದೇಶಿತವಾಗಿರುವ ೨೮

ವರ್ಷಗಳ ರಾಜ್ಯಭಾರಕಾಲವು ಗೋಪಾಲಕ ಮತ್ತು ಪಾಲಕರೀರ್ವರ (೪+೨೪=೨೮ ವರ್ಷ) ಒಟ್ಟು ರಾಜ್ಯಭಾರಕಾಲವಾಗಿದೆಯೆಂದೂ ಗ್ರಹಿಸಲವಕಾಶವಾಗುವುದು.

ಪ್ರದ್ಯೋತಮಹಾಸೇನನ ಜ್ಯೇಷ್ಠಸುತನಾದ ಗೋಪಾಲಕನು ಅವಂತೀರಾಜ್ಯದಲ್ಲಿ ಶ್ರೀ ವೀರನಿರ್ವಾಣದಂದು ಅಭಿಷಿಕ್ತನಾದನೆಂದೂ ಈ ಗೋಪಾಲಕನನ್ನು 'ಅವಂತಿಪುತ್ರ' ನೆಂದು ಹೆಸರಿಸುವ ಪರಿಪಾಠವಿದ್ದಿತೆಂದೂ ಮೇಲ್ಕಂಡ ವಿಚಾರಧಾರೆಯಿಂದ ವ್ಯಕ್ತಪಟ್ಟಂತಾಗಿದೆ. ಶ್ರೀ ವೀರತೀರ್ಥಂಕರನ ನಿರ್ವಾಣ ದಿನದಂದು 'ಪಾಲಕನಾಮ ಅವಂತಿಸುತ' ನು [ಪಾಲಯಣಾಮೋ ಅವಂತಿಸುದೋ] ಅಭಿಷಿಕ್ತನಾದನೆಂದು ಅಭಿಪ್ರಾಯಗೊಡುವ ತಿಲೋಯಪಣ್ಣತ್ತಿಕೃತಿಯ ಗಾಹೆಯನ್ನು ಹಿಂದೆ ಉಲ್ಲೇಖಿಸಿದೆ. 'ಸುತ' ಮತ್ತು 'ಪುತ್ರ' ಎಂಬ ಪದಗಳು ಏಕಾರ್ಥವಾಚಕಗಳಾಗಿರುವುದರಿಂದ 'ಅವಂತಿಸುತ' ಮತ್ತು 'ಅವಂತಿಪುತ್ರ' ಎಂಬ ಹೆಸರುಗಳು ಏಕವ್ಯಕ್ತಿನಿರ್ದೇಶಕಗಳಾಗಿವೆಯೆಂದು ಗ್ರಹಿಸಲವಕಾಶವಿದೆ. ಇದರಂತೆ 'ಪಾಲಯಣಾಮೋ ಅವಂತಿಸುದೋ' ಎಂಬ ಪದಬಂಧದಲ್ಲಿರುವ 'ಅವಂತಿಸುದೋ' ಪದವು ಶ್ರೀ ವೀರನಿರ್ವಾಣದಂದು ಅಭಿಷಿಕ್ತನಾದ ವ್ಯಕ್ತಿಯ (ಗೋಪಾಲಕನ) ನಾಮಾಂತರವಾಗಿದೆಯೆಂದು ಫಲಿತವಾಗುವುದು. ಹೀಗೆ ಈ 'ಅವಂತಿಸುದೋ' ಎಂಬುದು ಶ್ರೀ ವೀರನಿರ್ವಾಣದಂದು ಅಭಿಷಿಕ್ತನಾದ ವ್ಯಕ್ತಿಯ ಹೆಸರಾಗಿದೆಯೆಂದಾದಲ್ಲಿ, ಈ ಪದದೊಡನೆ ಸಂಕಲಿತವಾಗಿ ಪ್ರಯುಕ್ತವಾಗಿರುವ 'ಪಾಲಯಣಾಮೋ' ಎಂಬ ಪದದ ಅರ್ಥವು ಪ್ರಶ್ನಾಯತ್ತವಾಗುವುದು. ಆದರೆ, ಇಲ್ಲಿ ಮೂಲತಃ 'ಪಾಲಯರಾಓ' ಎಂದಿದ್ದ ಪದವು ಲೇಖನಾದಿ ಪ್ರಮಾದವಶದಿಂದ ಸ್ಖಾಲಿತ್ಯವಶವಾಗಿ 'ಪಾಲಯಣಾಮೋ' ಎಂಬ ರೂಪತಳೆದಿದೆಯೆಂದು ಹೇಳಲವಕಾಶವಿದೆ. ತಿತ್ಥೋಗಾಲೀ ಪಇನ್ನಯ ಮತ್ತು ತೀರ್ಥೋದ್ಧಾರ ಪ್ರಕರಣಗಳಲ್ಲಿ 'ಪಾಲಓರಾಯಾ' ಎಂಬ ಪದಪ್ರಯೋಗವಿರುವುದನ್ನು ಗಮನಿಸಬಹುದು. ಈ 'ಪಾಲಓ ರಾಯಾ' ಎಂಬ ಹೆಸರು ಮೂಲತಃ ಗೋತ್ರನಾಮರೂಪದಿಂದ ಪ್ರಯುಕ್ತವಾಗಿರಬೇಕೆಂದು ಕಂಡುಬರುವುದು. ಶ್ರೀ ವೀರತೀರ್ಥಂಕರನ ನಿರ್ವಾಣದಂದು 'ಪಾಲಕನಾಮ ಅವಂತಿಸುತನು ಅಭಿಷಿಕ್ತನಾದನು' ಎಂಬರ್ಥದ ಪೂರ್ವೋಕ್ತಗಾಹೆಯ ಅನಂತರ 'ಪಾಲಕರಜ್ಜಂ ಸಟ್ಠಿಂ' [–'ಪಾಲಕರಾಜ್ಯಭಾರವು ೬೦ ವರ್ಷ'] ಎಂಬ ಉಕ್ತಿಯಿದೆ. ಈ ಉಕ್ತಿಯನ್ನು 'ಪಾಲಕ ಎಂಬ ಹೆಸರಿನರಾಜನು ೬೦ ವರ್ಷ ರಾಜ್ಯಭಾರಮಾಡಿರುವನು' ಎಂಬುದಾಗಿ ಅರ್ಥವಿಸಿರುವಂತೆ ಕಂಡುಬರುತ್ತದೆ. ಆದರೆ ಇಲ್ಲಿ 'ಪಾಲಕ' ಎಂಬ ಹೆಸರನ್ನು ಗೋತ್ರನಾಮವನ್ನಾಗಿ ಗ್ರಹಿಸಿ, 'ಪಾಲಕಮನೆತನದ ರಾಜರ ರಾಜ್ಯಭಾರಕಾಲವು ೬೦ ವರ್ಷ' ಎಂಬ ಅರ್ಥಗ್ರಹಣೆಮಾಡಿದಲ್ಲಿ, ವೈ. ಮ. ಸಂ. ಪುರಾಣೋಕ್ತವಾಗಿರುವ ಇತಿವೃತ್ತಾಧಾರದಿಂದ, ಪ್ರದ್ಯೋತಮಹಾಸೇನನಾದಿಯಾಗಿ, ನಂದರಾಜನು ಮಗಧರಾಜ್ಯದಲ್ಲಿ ಅಭಿಷಿಕ್ತನಾದ ಸಮಯಪರ್ಯಂತದ ಅವಂತೀರಾಜಸಂತತಿಯ ಇತಿಹಾಸವನ್ನು ಸ್ಫುಟಗೊಳಿಸಲು ಶಕ್ಯವಾಗುವುದು.

ಪುರಾಣಗಳಲ್ಲಿ ಅವಂತೀರಾಜಸಂತತಿಯ ಇತಿವೃತ್ತವು ಮಗಧರಾಜಸಂತತಿಯ ಇತಿವೃತ್ತದೊಡನೆ ಸಂಮಿಶ್ರವಾಗಿದ್ದು ಸಂದಿಗ್ಧತಾವಶವಾಗಿರುವುದು ವಿದಿತವಿದೆ. ಬೃಹದ್ರಥರ ಐತಿಹ್ಯಾನಂತರವರ್ತಿಯಾಗಿ ವಾಯುಪುರಾಣದಲ್ಲಿ ಮುನಿಕನ ಐತಿಹ್ಯಾಂಶವನ್ನು ನಿರೂಪಿಸಿ ತರುವಾಯ ಅವಂತಿಯರಸರ ಐತಿಹ್ಯವನ್ನು ನಿರೂಪಿಸಲಾಗಿರುವುದನ್ನು ಹಿಂದೆ ವಿವರಿಸಲಾಗಿದೆ. ಇಂತೆಯೇ ಮತ್ಸ್ಯಪುರಾಣದಲ್ಲಿ ಬೃಹದ್ರಥರ ಐತಿಹ್ಯಾನಂತರವರ್ತಿಯಾಗಿ ಪ್ರರೂಪಿತವಾಗಿರುವ ಐತಿಹ್ಯಾಂಶವು ಈ ಮುಂದಿನಂತಿದೆ:

ಪೂರ್ಣಂ ವರ್ಷಸಹಸ್ರಂ ತು ತೇಷಾಂ ರಾಜ್ಯಂ ಭವಿಷ್ಯತಿ |
ಜಯತಾಂ ಕ್ಷತ್ರಿಯಾಣಾಂ ಚ ಬಾಲಕಃ ಪುಲಕೋ ಭವೇತ್ ‖ ೩೦ ‖

[ಅಧ್ಯಾಯ ೨೭೧]

ಬೃಹದ್ರಥೇಷ್ವತೀತೇಷು ವೀತಿಹೋತ್ರೇಷ್ವವಂತಿಷು |
ಪುಲಕಃ ಸ್ವಾಮಿನಂ ಹತ್ವಾ ಸ್ವಪುತ್ರಮಭಿಷೇಕ್ಷ್ಯತಿ ‖ ೧ ‖

[ಅಧ್ಯಾಯ ೨೭೨]

ಮೇಲ್ಕಂಡ ಮೊದಲ ಪದ್ಯದ ಪೂರ್ವಾರ್ಧದಿಂದ 'ಅವರ (ಬೃಹದ್ರಥರ) ರಾಜ್ಯಭಾರವು ಪೂರ್ಣ ಒಂದು ಸಹಸ್ರವರ್ಷ ಆಗಲಿರುವುದು' ಎಂದು ಅರ್ಥವಾಗುವುದು. ಈ ಪದ್ಯದ ಉತ್ತರಾರ್ಧದಿಂದ ಸಮುಚಿತವೂ ಸ್ಪಷ್ಟವೂ ಆದ ಯಾವ ಅರ್ಥವೂ ಮೂಡುವುದಿಲ್ಲ. ಮೇಲ್ಕಂಡ ಎರಡನೆಯ ಪದ್ಯ ಹಾಗೂ ಹಿಂದೆ ಉಲ್ಲೇಖಿಸಲಾಗಿರುವ ವಾಯುಪುರಾಣದ ಪದ್ಯಗಳು ಸಮಾನಾರ್ಥವುಳ್ಳವಾಗಿವೆ. ಆದರೆ ವಾಯುಪುರಾಣದ ಆ ಪದ್ಯದಲ್ಲಿ ನಿರ್ದೇಶಿತವಾಗಿರುವ 'ಮುನಿಕ' ಎಂಬ ಹೆಸರಿನ ಬದಲಾಗಿ ಮತ್ಸ್ಯಪುರಾಣದ ಮೇಲ್ಕಂಡ ಪದ್ಯದಲ್ಲಿ 'ಶುನಕ' ಎಂಬ ಹೆಸರು ಪ್ರಯುಕ್ತವಾಗಿದೆ. ಈ ಪದ್ಯಗತವಾದ ಐತಿಹ್ಯಾಂಶವು ಉದಾಯಿಭದ್ರನ ಹಂತಕನಾದ ಮುಂಡನ (=ಮುನಿಕನ) ತರುವಾಯ ಮಗಧರಾಜ್ಯದ ಪ್ರಭುತ್ವಪಡೆದ ನಂದಿವರ್ಧನನ ವಂಶಾನುಕ್ರಮವನ್ನು ಪ್ರರೂಪಿಸುವ ಪ್ರಸಂಗವಶವಾಗಿ ನಿರೂಪಿಸಲಾಗಿದ್ದ ಅವಂತಿಯರಸರ ಐತಿಹ್ಯದ ಪೀಠಿಕೆಯಾಗಿದ್ದಿರಬೇಕೆಂದು ಹಿಂದೆ ಸ್ಪಷ್ಟಪಡಿಸಲಾಗಿದೆ. ಅಂತೆಯೇ ಮೇಲ್ಕಂಡ ಮೊದಲ ಪದ್ಯದ ಉತ್ತರಾರ್ಧವಲ್ಲಿಯೂ ಅವಂತಿಯರಸರ ಐತಿಹ್ಯಸಂಬಂಧಿಯಾದ ಅಂಶವು ನಿರ್ದೇಶಿತವಾಗಿರಬೇಕೆಂದು ಗ್ರಹಿಸಲವಕಾಶವಿದೆ.

ಪ್ರದ್ಯೋತ-ಮಹಾಸೇನನ ತಂದೆಯನ್ನು 'ಜಯಸೇನ' ಎಂಬ ಹೆಸರಿನಿಂದ ಬೃಹತ್ಕಥಾಮಂಜರಿಯಲ್ಲಿ ನಿರ್ದೇಶಿಸಿದೆ. [ದ್ವಿತೀಯಗುಚ್ಛ-ಶ್ಲೋ. ೨೪] ಪುರಾಣಗಳಲ್ಲಿಯೂ ಪ್ರದ್ಯೋತಮಹಾಸೇನನ ತಂದೆಯ ಹೆಸರನ್ನು ಹೇಳಿದ್ದಿರಬೇಕು. ಆದರೆ ಈ ಹೆಸರು 'ಮುನಿಕ' ಮತ್ತು 'ಕುಣಿಕ' ಎಂಬ ಹೆಸರುಗಳ ಸಂಸರ್ಗದಿಂದ, ಪ್ರಭ್ರಂಶವಾಗಿ ಪುಲಕ (ಅಥವಾ ಪುಣಕ) ಎಂಬ ರೂಪವನ್ನು ತಳೆದಿದೆಯೆಂದು ಕಂಡುಬರುವುದು. ಮತ್ಸ್ಯಪುರಾಣದ ಪೂರ್ವೋಲ್ಲಿಖಿತವಾದ ಮೊದಲನೆಯ ಶ್ಲೋಕದ ಉತ್ತ

ರಾರ್ಥವು ಅರ್ಥದೃಷ್ಟಿಯಿಂದ ಅಸಮಂಜಸವಾಗಿರುವುದೆಂದು ಹಿಂದೆ ಹೇಳಿದೆ. 'ಜಯ-ತಾಂ ಕ್ಷತ್ರಿಯಾಣಾಂ ಚ ಬಾಲಕಃ ಪುಲಕೋ ಭವೇತ್' ಎಂದು ಪ್ರಭ್ರಂಶರೂಪದಲ್ಲಿರುವ ಈ ಶ್ಲೋಕಾರ್ಧದ 'ಜಯತಾಂ' ಎಂಬ ಪದವು ಪ್ರಾಯಶಃ 'ಜಯಸೇನ' ಎಂಬುದರ ಪ್ರಭ್ರಂಶಾವಶೇಷವಾಗಿಯೂ ಹಾಗೂ 'ಬಾಲಕಃ ಪುಲಕೋ ಭವೇತ್' ಎಂಬುದರ 'ಬಾಲಕ' ಪದವು 'ಪಾಲಕ' ಎಂಬುದರ ಪ್ರಭ್ರಂಶರೂಪವಾಗಿಯೂ ಇರಬೇಕೆಂದು ಕಂಡುಬರುವುದು. ಪ್ರದ್ಯೋತನಿಗೆ 'ಮಹಾಸೇನ' ಎಂಬುದು ಖ್ಯಾತಿನಾಮವಾಗಿದ್ದಂತೆ, ಇವನ ತಂದೆಯಾದ 'ಪಾಲಕ'ನಿಗೆ 'ಜಯಸೇನ' ಎಂಬುದು ಖ್ಯಾತಿನಾಮವಾಗಿದ್ದಿರಬೇಕೆಂದು ಗ್ರಹಿಸಲವಕಾಶವಿದೆ. ಪೂರ್ವೋಲ್ಲಿಖಿತವಾಗಿರುವ ಶ್ರೀವೀರನಿರ್ವಾಣಸಮಯದ ಐತಿಹ್ಯನಿರೂಪಕವಾದ ಗಾಹೆಗಳಲ್ಲಿ ನಿರ್ದೇಶಿತವಾಗಿರುವ 'ಪಾಲಕ' ಎಂಬ ಹೆಸರು ಮೂಲತಃ ಗೋತ್ರನಾಮರೂಪದಿಂದ ಪ್ರಯುಕ್ತವಾಗಿರಬೇಕೆಂದು ಹಿಂದೆ ಹೇಳಲಾಗಿದೆ. 'ಪಾಲಕ' ಎಂಬ ಪ್ರದ್ಯೋತ-ಮಹಾಸೇನನ ತಂದೆಯ ಹೆಸರಿನ ಮೂಲದಿಂದ ಪೂರ್ವೋಲ್ಲಿಖಿತವಾದ ಗಾಹೆಗಳಲ್ಲಿ ಪ್ರಯುಕ್ತವಾಗಿರುವ 'ಪಾಲಕ' ಎಂಬ ಗೋತ್ರನಾಮವು ರೂಪಿತವಾಗಿದೆಯೆಂದು ಸ್ಫುಟಗೊಳ್ಳುವುದು. ಇಷ್ಟಲ್ಲದೆ ಭಾರತೀಯರಲ್ಲಿ, ಮೃತರಾದ ಪೂರ್ವಜರ ಹೆಸರುಗಳಿಂದ ಮಕ್ಕಳಿಗೆ ನಾಮಕರಣಮಾಡುವ ಪರಂಪರಾಗತವಾದ ರೂಢಿಯಿರುವುದಾದ್ದರಿಂದ, ಪ್ರದ್ಯೋತ-ಮಹಾಸೇನನು 'ಪಾಲಕ' ಎಂಬ ತನ್ನ ತಂದೆಯ ಹೆಸರಿನಿಂದ ತನ್ನ ಕಿರಿಯಸುತನಿಗೆ ನಾಮಕರಣಮಾಡಿರುವನೆಂದು ಗ್ರಹಿಸಲವಕಾಶವಾಗುವುದು. ಆದ್ದರಿಂದ ಪೂರ್ವೋಲ್ಲಿಖಿತವಾಗಿರುವ ಗಾಹೆಗಳಲ್ಲಿ ನಿರ್ದೇಶಿತವಾಗಿರುವ 'ಪಾಲಕ' ಎಂಬ ಹೆಸರು ಪ್ರದ್ಯೋತಮಹಾಸೇನನ ಕಿರಿಯಸುತನ ಸೂಚಕವಾಗಿರದೆ, ಪ್ರದ್ಯೋತನ ತರುವಾಯ ೬೦ ವರ್ಷಕಾಲ ರಾಜ್ಯಭಾರಮಾಡಿದ ಅರಸರೆಲ್ಲರ ನಿರ್ದೇಶಕವಾಗಿರುವ ಗೋತ್ರನಾಮವಾಗಿದೆಯೆಂದು ಸ್ಫುಟಗೊಳ್ಳುವುದು.

ಶ್ರೇಣಿಕ-ಬಿಂಬಿಸಾರನ ೩೦ ನೇ ವರ್ಷದ ರಾಜ್ಯಭಾರಸಮಯದಲ್ಲಿ ಪ್ರದ್ಯೋತಮಹಾಸೇನನು ಅವಂತಿಯಲ್ಲಿ ರಾಜ್ಯಾಭಿಷಿಕ್ತನಾಗಿರುವನೆಂದು ಸದ್ಯ ಉಪಲಬ್ಧವಿರುವ ಐತಿಹ್ಯಾಧಾರದಿಂದ ವ್ಯಕ್ತಪಡುವುದು. ಇದರಂತೆ ಮಗಧರಾಜ್ಯದಲ್ಲಿ ಬೃಹದ್ರಥರ ರಾಜ್ಯಭಾರವು ಕೊನೆಗೊಂಡ ೩೧ ವರ್ಷಗಳ ತರುವಾಯದಲ್ಲಿ ಪ್ರದ್ಯೋತಮಹಾಸೇನನು ಅವಂತೀರಾಜ್ಯದಲ್ಲಿ ಅಭಿಷಿಕ್ತನಾಗಿರುವನೆಂದೂ ಮತ್ತು ಪುರಾಣೋಕ್ತಿಯಿಂದ ನಿರ್ದೇಶಿತವಾಗುವಂತೆ ಇವನು ೨೩ ವರ್ಷಕಾಲ ರಾಜ್ಯಭಾರಮಾಡಿರುವನೆಂದೂ ನಿಶ್ಚಿತವಾಗುವುದು. ಈ ಪ್ರದ್ಯೋತಮಹಾಸೇನನ ರಾಜ್ಯಭಾರಾನಂತರ ಇವನ ಜ್ಯೇಷ್ಠಸುತನಾದ ಗೋಪಾಲಕನು ಅಭಿಷಿಕ್ತನಾದನೆಂದು ಮತ್ತು ಇದೇ ದಿನದಲ್ಲಿ ಶ್ರೀವೀರತೀರ್ಥಂಕರನು ನಿರ್ವಾಣಕ್ಕೆ ಸಂದನೆಂದು ಹಿಂದೆ ಪ್ರತಿಪಾದಿಸಲಾಗಿದೆ.

ಶ್ರೀ ವೀರತೀರ್ಥಂಕರನ ನಿರ್ವಾಣಸಮಯದಿಂದ ಮುಂದೆ ನಾಲ್ಕು ವರ್ಷಗಳ ಕಾಲಪರ್ಯಂತ ಗೋಪಾಲಕನೂ, ತದನಂತರ ೨೪ ವರ್ಷಗಳ ಕಾಲಪರ್ಯಂತ

ಪಾಲಕನೂ ರಾಜ್ಯಭಾರಮಾಡಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಪಾಲಕನ ಅನಂತರ ರಾಜ್ಯಭಾರದಲ್ಲಿ ಅಧಿಷ್ಠಿತರಾದ ರಾಜರ ಐತಿಹ್ಯವಿಷಯವು ಶಂಕಾತೀತ ವಾಗಿ ನಿಶ್ಚಿತವಿದೆಯೆಂದು ಹೇಳುವಂತಿಲ್ಲ. ಪುರಾಣಗಳಲ್ಲಿ ನಿರ್ದೇಶಿತವಾಗಿರುವಂತೆ ಪಾಲಕನ ತರುವಾಯ 'ವಿಶಾಖಯೂಪ' ಎಂಬುವನು ರಾಜ್ಯಭಾರಾಧಿಷ್ಠಿತನಾಗಿದ್ದಾನೆ. ಇವನು ೫೦ ವರ್ಷಕಾಲ ರಾಜ್ಯಭಾರನಡೆಸಿದನೆಂದು ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ಹೇಳಲಾಗಿದೆಯಾದರೆ ೫೩ ವರ್ಷಕಾಲ ರಾಜ್ಯಭಾರನಡೆಸಿದನೆಂದು ಮತ್ಸ್ಯಪುರಾಣದಲ್ಲಿ ನಿರ್ದೇಶಿಸಲಾಗಿದೆ. ಈ ವಿಶಾಖಯೂಪನ ಅನಂತರ ರಾಜ್ಯಭಾರದಲ್ಲಿ ಅಧಿಷ್ಠಿತನಾದ ವ್ಯಕ್ತಿಯನ್ನು ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ 'ಅಜಕ' ಎಂದೂ, ಮತ್ಸ್ಯಪುರಾಣದಲ್ಲಿ 'ಸೂರ್ಯಕ' ಎಂದೂ ಮತ್ತು ವಿಷ್ಣು ಮೊದಲಾದ ಇತರ ಪುರಾಣಗಳಲ್ಲಿ 'ಜನಕ', 'ರಾಜಕ', 'ಹರ್ಷಕ' ಎಂದೂ ವಿಭಿನ್ನ ರೀತಿಯಿಂದ ಹೆಸರಿಸಲಾಗಿದೆ. ಇಂತೆಯೇ ಅಜಕನ ಅನಂತರ ರಾಜ್ಯಭಾರದಲ್ಲಿ ಅಧಿಷ್ಠಿತನಾದ ರಾಜನನ್ನು ವಾಯುಪುರಾಣದಲ್ಲಿ 'ವರ್ತಿವರ್ಧನ' ಎಂದು ಹೆಸರಿಸಿದೆಯಾದರೆ ಇತರ ಪುರಾಣಗಳಲ್ಲಿ 'ನಂದಿವರ್ಧನ' ಎಂದು ಹೆಸರಿಸಲಾಗಿದೆ. ಇಷ್ಟಲ್ಲದೆ ಈ ವರ್ತಿವರ್ಧನನ ಅಥವಾ ನಂದಿವರ್ಧನನ ಐತಿಹ್ಯಾನಂತರವರ್ತಿಯಾಗಿ ವಾಯು, ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿ ಉಕ್ತವಾಗಿರುವ ಈ ಮುಂದಿನ ಐತಿಹ್ಯಾಂಶವು ಪ್ರಕೃತ ಸಂದರ್ಭದ ದೃಷ್ಟಿಯಿಂದ ಅವಶ್ಯಗಮನಾರ್ಹವಾಗಿದೆ.

ಅಷ್ಟಾತ್ರಿಂಶಚ್ಛತಂ ಭಾವ್ಯಾಃ ಪ್ರಾದ್ಯೋತಾಃ ಪಂಚ ತೇ ಸುತಾಃ ।
[ವಾಯುಪುರಾಣ]

ಅಷ್ಟತ್ರಿಂಶಚ್ಛತಂ ಭಾವ್ಯಾಃ ಪ್ರಾದ್ಯೋತಾಃ ಪಂಚ ತೇ ನೃಪಾಃ ।
[ಬ್ರಹ್ಮಾಂಡಪುರಾಣ]

ದ್ವಿಪಂಚಾಶತ್ತತೋ ಭುಕ್ತ್ವಾ ಪ್ರನಷ್ಟಾಃ ಪಂಚ ತೇ ನೃಪಾಃ ।
[ಮತ್ಸ್ಯಪುರಾಣ]

ಪುರಾಣತ್ರಯದ ಮೇಲ್ಕಂಡ ಐತಿಹ್ಯೋಕ್ತಿಗಳಲ್ಲಿ ಕಂಡುಬರುವ ಈ ಮುಂದಿದ ಮೂರು ಮುಖ್ಯಾಂಶಗಳು ಗಮನಾರ್ಹವಾಗಿವೆ :

೧) ವಾಯುಪುರಾಣದ ಐತಿಹ್ಯದಂತೆ ಪ್ರದ್ಯೋತನ ತರುವಾಯ ಅವನ ಸುತರಾದ ಪಂಚಪ್ರಾದ್ಯೋತರು ಅನುಕ್ರಮವಾಗಿ ರಾಜ್ಯಭಾರಮಾಡಿದ್ದಾರೆ.

೨) ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿ 'ಸುತರು' ಎಂದು ಹೇಳಿರದೆ 'ನೃಪರು' ಎಂದು ಹೇಳಲಾಗಿದೆಯಾದುದರಿಂದ ಪ್ರದ್ಯೋತನ ವಂಶಜರಾದ ಪಂಚಪ್ರಾದ್ಯೋತರು ರಾಜ್ಯಭಾರಮಾಡಿರುವರೆಂದು ಗ್ರಹಿಸಲವಕಾಶವಿದೆ.

೩) ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ಪ್ರದ್ಯೋತನ ತರುವಾಯ ರಾಜ್ಯಭಾರಮಾಡಿದ ಐವರು ಪ್ರಾದ್ಯೋತರ ಒಟ್ಟು ರಾಜ್ಯಭಾರಕಾಲಾವಧಿಯನು

೧೩೮ ವರ್ಷಗಳೆಂದು ನಿರ್ದೇಶಿಸಲಾಗಿದೆಯಾದರೆ, ಮತ್ಸ್ಯಪುರಾಣದಲ್ಲಿ ೫೩ ವರ್ಷ ಗಳೆಂದು ನಿರ್ದೇಶಿಸಲಾಗಿದೆ.

ಪ್ರದ್ಯೋತನ ತರುವಾಯ ಅವನ ವಂಶಜರಾದ ಐವರು ರಾಜರು ೫೩ ವರ್ಷ ಕಾಲ ಅಥವಾ ೧೩೮ ವರ್ಷಕಾಲ ರಾಜ್ಯಭಾರವಮಾಡಿರುವರೆಂದು ಮೇಲ್ಕಂಡ ಐತಿಹ್ಯ ದಿಂದ ನಿರ್ದೇಶಿತವಾಗುವುದು. ಆದರೆ ಪ್ರದ್ಯೋತನ ಅನಂತರ ಅನುಕ್ರಮವಾಗಿ ಪಾಲಕ, ವಿಶಾಖಯೂಪ, ಅಜಕ (=ಸೂರ್ಯಕ=ರಾಜಕ = ಹರ್ಷಕ) ಮತ್ತು ನಂದಿ ವರ್ಧನ (=ವರ್ತಿವರ್ಧನ) ಎಂಬ ಹೆಸರಿನ ನಾಲ್ವರು ರಾಜರುಗಳನ್ನು ಮಾತ್ರ ನಿರ್ದೇಶಿಸಲಾಗಿದೆಯಾದುದರಿಂದ ಪಂಚಪ್ರದೋತರಲ್ಲಿ ಪರಿಗಣಿತನಾಗಬೇಕಾಗುವ ಮತ್ತೊಬ್ಬ ರಾಜನಾರು ? ಎಂಬ ಪ್ರಶ್ನೆಗವಕಾಶವಾಗಿದೆ. ಇಷ್ಟಲ್ಲದೆ ಮೃಚ್ಛಕಟಿಕ ನಾಟಕದ ಕಥಾಯತ್ತ ಐತಿಹ್ಯದನುಗುಣವಾಗಿ ಪಾಲಕರಾಜನ ತರುವಾಯ ಆರ್ಯ ಕನು (=ಅಜಕನು) ರಾಜ್ಯಭಾರಾಧಿಷ್ಠಿತನಾಗಿರುವನೆಂದು ಸೂಚಿತವಾಗುವುದಾದ ಕಾರಣ, ಪುರಾಣಗಳಲ್ಲಿ ಪಾಲಕನ ಅನಂತರವರ್ತಿಯಾಗಿ ನಿರ್ದೇಶಿತನಾಗಿರುವ ವಿಶಾಖಯೂಪನ ಐತಿಹ್ಯವು ಸಂದಿಗ್ಧತಾವಶವಾಗುವುದು. ಹೀಗೆ ಪುರಾಣಗಳಲ್ಲಿ ನಿರೂಪಿತವಾಗಿರುವಂತೆ, ಪ್ರದ್ಯೋತನ ಅನಂತರ ಅನುಕ್ರಮವಾಗಿ ರಾಜ್ಯಭಾರ ಮಾಡಿದ ಪಂಚಪ್ರದ್ಯೋತರ ಐತಿಹ್ಯವು ಸಂದಿಗ್ಧತಾವಶವಾಗಿದ್ದು ಶಂಕಾಸ್ಪದವಾಗಿ ರುವುದು ಸ್ಪಷ್ಟವಿದೆ. ಆದ್ದರಿಂದ ಈ ಐತಿಹ್ಯಾಂಶವನ್ನು ಪರಿಷ್ಕಾರಗೊಳಿಸಬೇಕಾದ ಅವಶ್ಯಕತೆಯಿದೆ.

ಪಾಲಕರಾಜನನ್ನು ಶರ್ವಿಲಕನೆಂಬುವನು ವಧೆಗೈದು ತನ್ನ ಮಿತ್ರನಾದ ಆರ್ಯ ಕನಿಗೆ ರಾಜಪಟ್ಟಕಟ್ಟಿದನೆಂಬ ಕಥಾಯತ್ತವಾದ ಐತಿಹ್ಯಾಂಶವು ಮೃಚ್ಛಕಟಿಕನಾಟಕ ದಲ್ಲಿದೆ. ಇಷ್ಟಲ್ಲದೆ, ಪಾಲಕನು ಆರ್ಯಕನಿಂದಲೇ ಹತನಾದನೆಂಬ ಹೇಳಿಕೆಯೂ ಈ ನಾಟಕದಲ್ಲಿದೆ. ಶೂದ್ರಕಕವಿಯು ತನ್ನ ಕಾಲದಲ್ಲಿ ಉಪಲಬ್ಧವಿದ್ದ ಅವಂತೀ ರಾಜ್ಯದ ಇತಿವೃತ್ತಕಥಾಧಾರದಿಂದ ಪಾಲಕರಾಜನಿಗೆ ಸಂಬಂಧಿಸಿದ ಐತಿಹ್ಯಾಂಶ ವನ್ನು ಈ ನಾಟಕದಲ್ಲಿ ಅಳವಡಿಸಿಕೊಂಡಿರುವನೆಂದು ಕಂಡುಬರುವುದು. ಆದ್ದರಿಂದ ಈ ನಾಟಕವು ರಚಿತವಾದ ಕಾಲದಲ್ಲಿ ಅವಂತೀರಾಜ್ಯದ ಐತಿಹಾಸಿಕ ವಿಷಯವಾಗಿ, ಆರ್ಯಕನು ಪಾಲಕರಾಜನನ್ನು ಕೊಂದು ರಾಜ್ಯಭಾರಾಧಿಷ್ಠಿತನಾದನೆಂಬ ಕಥನಾ ಧಾರವಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಆದರೆ ಪುರಾಣಗಳಲ್ಲಿ ಪಾಲಕನ ಅನಂತರವರ್ತಿಯಾಗಿ ವಿಶಾಖಯೂಪನನ್ನೂ ತದನಂತರ ಅಜಕನನ್ನೂ ಹೆಸರಿಸಲಾ ಗಿರುವುದು ವಿದಿತವಿದೆ. ಈ 'ಅಜಕ' ಎಂಬ ಹೆಸರು 'ಆರ್ಯಕ' ಎಂಬುದರ ಪ್ರಾಕೃತ ರೂಪವಾಗಿದೆಯೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಪುರಾಣಗಳ ಹೇಳಿಕೆಯಂತೆ ಆರ್ಯಕನು (=ಅಜಕನು) ಪಂಚಪ್ರದ್ಯೋತ ರಲ್ಲೊಬ್ಬನಾಗಿ ಪರಿಗಣಿತನಾಗಿರುವುದರಿಂದಲೂ ಮತ್ತು ಮೃಚ್ಛಕಟಿಕನಾಟಕದಲ್ಲಿ

ಇವನನ್ನು 'ಗೋಪಾಲದಾರಕ' ನೆಂದು ನಿರ್ದೇಶಿಸಿರುವುದರಿಂದಲೂ, ಇವನು ಪ್ರದ್ಯೋತನ ಜ್ಯೇಷ್ಠಸುತನಾದ ಗೋಪಾಲಕನ ಸುತನಾಗಿರಬೇಕೆಂದು ಮತ್ತು ಪಾಲಕರಾಜನ ತರುವಾಯ ಅವಂತೀರಾಜ್ಯಭಾರದಲ್ಲಿ ಅಧಿಷ್ಠಿತನಾಗಿರಬೇಕೆಂದೂ ಪರಿಭಾವಿಸಲವಕಾಶವಾಗುವುದು. ಪಾಲಕನ ವಧೆಯು ಪ್ರಾಯಶಃ ರಾಜಕೀಯದ ಹಿನ್ನಲೆಯಲ್ಲಿ ಘಟಿಸಿದ ಐತಿಹ್ಯಾಂಶವಾಗಿದೆ. ಪ್ರದ್ಯೋತಮಹಾಸೇನನ ತರುವಾಯ ಅವನ ಜ್ಯೇಷ್ಠಸುತನಾದ ಗೋಪಾಲಕನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿ ನಾಲ್ಕು ವರ್ಷಪರ್ಯಂತ ಉಜ್ಜಯಿನಿಯಲ್ಲಿ ರಾಜ್ಯಭಾರಮಾಡುತ್ತಿದ್ದು ತದನಂತರ ತನ್ನ ತಮ್ಮನಾದ ಪಾಲಕನನ್ನು ಉಜ್ಜಯಿನಿರಾಜ್ಯಭಾರದಲ್ಲಿ ನಿಯೋಜಿಸಿ ತಾನು ಮಥುರಾನಗರಕ್ಕೆ ಹೋಗಿ ರಾಜ್ಯಭಾರಮಾಡಲುಪಕ್ರಮಿಸಿದನೆಂದು ಹಿಂದೆ ಪ್ರತಿಪಾದಿಸಿದೆ. ಹೀಗೆ ಉಜ್ಜಯಿನೀರಾಜ್ಯಾಡಳಿತದಲ್ಲಿ ನಿಯೋಜಿತನಾದ ಪಾಲಕನು ತನ್ನ ಅಣ್ಣನ ಅಧೀನನಾಗಿದ್ದು ರಾಜ್ಯಾಡಳಿತವನ್ನು ನಡೆಸುತ್ತಿದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಆದರೆ ಕಾಲಕ್ರಮದಲ್ಲಿ ಪಾಲಕನು ಪ್ರಾಯಶಃ ಸ್ವತಂತ್ರರಾಜನಾಗಲು ಯತ್ನಿಸಿದ್ದಾನೆ, ಆಗ ಗೋಪಾಲಕನು ಉಜ್ಜಯಿನೀರಾಜ್ಯಾಡಳಿತವನ್ನು ಪುನಃಸ್ವಾಯತ್ತೀಗೊಳಿಸಿಕೊಳ್ಳುವ ಸಲುವಾಗಿ ತನ್ನ ಮಗನಾದ ಆರ್ಯಕನನ್ನು ಕಳುಹಿದ್ದಾನೆ. ಪಾಲಕನು ಆರ್ಯಕನನ್ನು ಸೆರೆಹಿಡಿದಿಟ್ಟಕಾರಣ, ಅವನ ಪಕ್ಷದವರು ಪಾಲಕನನ್ನು ಕೊಂದು, ಆರ್ಯಕನಿಗೆ ಉಜ್ಜಯಿನಿಯ ರಾಜಪಟ್ಟಕಟ್ಟಿದ್ದಾರೆಂದು ಕಂಡುಬರುವುದು. ಇದರಂತೆ ಪ್ರದ್ಯೋತಮಹಾಸೇನನ ಅನಂತರ ಅನುಕ್ರಮವಾಗಿ ಗೋಪಾಲಕ, ಪಾಲಕ ಮತ್ತು ಆರ್ಯಕರೆಂಬುವರು ರಾಜ್ಯಭಾರನಡೆಸಿರುವರೆಂದು ಸ್ಫುಟಗೊಳ್ಳುವುದು. ಇದರಿಂದ ಪಾಲಕನ ಅನಂತರ ವಿಶಾಖಯೂಪನೆಂಬುವನು ಅಭಿಷಿಕ್ತನಾದನೆಂಬ ಪುರಾಣಗಳ ಐತಿಹ್ಯಾಂಶವು ಸುಸಂಗತವಾಗಿದೆಯೆಂದು ಹೇಳಲಾಗುವುದಿಲ್ಲ. ಆದರೆ ಎಲ್ಲ ಪುರಾಣಗಳಲ್ಲಿಯೂ ವಿಶಾಖಯೂಪನೆಂಬುವನನ್ನು ಹೆಸರಿಸಲಾಗಿದೆಯಾದುದರಿಂದ ಈ ಹೆಸರಿನ ರಾಜನೊಬ್ಬನಿದ್ದಿರಬೇಕೆಂಬುದು ಸಂಭಾವ್ಯವೆನಿಸುವುದು. ಇಷ್ಟಲ್ಲದೆ ಬೃ. ಕ. ಕೋಶದ ಕಥೆಯೊಂದರಲ್ಲಿ ವಿಶಾಖಭೂಪನೆಂಬುವನು ಪಾಟಲೀಪುತ್ರನಗರದ ರಾಜನಾಗಿದ್ದನೆಂಬ ಕಥನವಿದೆಯಾದ್ದರಿಂದ ಈ ರಾಜನ ಐತಿಹ್ಯವಿಷಯವನ್ನು ಮುಂದೆ ಪರಿಷ್ಕರಿಸಲಾಗುವುದು. ಪ್ರದ್ಯೋತನ ತರುವಾಯ ಅವನ ಜ್ಯೇಷ್ಠಸುತನಾದ ಗೋಪಾಲಕನು ೪ ವರ್ಷಕಾಲವೂ, ಅನಂತರ ಇವನ ತಮ್ಮನಾದ ಪಾಲಕನು ೨೪ ವರ್ಷಕಾಲವೂ ರಾಜ್ಯಭಾರಮಾಡಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಪಾಲಕನ ಅನಂತರ ಆರ್ಯಕನು ರಾಜ್ಯಭಾರಾಧಿಷ್ಠಿತನಾಗಿರುವನೆಂದು ಮೃಚ್ಛಕಟಿಕ ನಾಟಕದ ಕಥಾಯತ್ತ ಐತಿಹ್ಯದಿಂದ ಸೂಚಿತವಾಗುವುದಾದ್ದರಿಂದ ಪ್ರದ್ಯೋತನ ಅನಂತರ ಅನುಕ್ರಮವಾಗಿ ರಾಜ್ಯವಾಳಿದ ಪಂಚಪ್ರಾದ್ಯೋತರಲ್ಲಿ, ಗೋಪಾಲಕ, ಪಾಲಕ ಮತ್ತು ಆರ್ಯಕರು ಮೊದಲ ಮೂವರಾಗಿರುವನೆಂದು ಸ್ಫುಟಗೊಳ್ಳುವುದು.

'ವಿಶಾಖಯೂಪ' ಎಂಬ ಹೆಸರಿನ ಅನಂತರವರ್ತಿಯಾಗಿ ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ 'ಅಜಕ' ಎಂಬುದಾಗಿಯೂ ಮತ್ಸ್ಯ ಮತ್ತು ಇತರ ಪುರಾಣಗಳಲ್ಲಿ 'ಸೂರ್ಯಕ' ಎಂದು ಮುಂತಾಗಿಯೂ ಹೆಸರಿಸಲಾಗಿದೆಯೆಂದು ಹಿಂದೆ ಹೇಳಲಾಗಿದೆ. ಈ 'ಸೂರ್ಯಕ' ಮುಂತಾದ ಹೆಸರುಗಳೆಲ್ಲವೂ ಅಜಕನ (=ಆರ್ಯಕನ) ನಾಮಾಂತರಗಳಾಗಿರದೆ, ಇವುಗಳಲ್ಲಿ ಒಂದಾದರೂ ಇವನ ಅನಂತರ ವರ್ತಿಯಾಗಿ ರಾಜ್ಯವಾಳಿದ ರಾಜನ ಹೆಸರಾಗಿರಬೇಕೆಂದು ಗ್ರಹಿಸಬೇಕಾಗುವುದಲ್ಲದೆ, 'ಅಜಕ' ಮತ್ತು 'ಸೂರ್ಯಕ' ಎಂಬ ಹೆಸರುಗಳ ಅನಂತರವರ್ತಿಯಾಗಿ ವಾಯು ಪುರಾಣದಲ್ಲಿ ನಿರ್ದೇಶಿಸಲಾಗಿರುವ 'ವರ್ತಿವರ್ಧನ' ಎಂಬ ಹೆಸರು ಹಾಗೂ ಮತ್ಸ್ಯಾದಿ ಇತರ ಪುರಾಣಗಳಲ್ಲಿ ನಿರ್ದೇಶಿಸಲಾಗಿರುವ 'ನಂದಿವರ್ಧನ' ಎಂಬ ಹೆಸರುಗಳೂ ಭಿನ್ನ ವ್ಯಕ್ತಿ ನಿರ್ದೇಶಕಗಳಾಗಿವೆಯೆಂದು ಗ್ರಹಿಸಬೇಕಾದ ಆವಶ್ಯಕತೆಯಿದೆ. ಮಗಧ ರಾಜ್ಯದಲ್ಲಿ ಮುಂಡನ (=ಮುನಿಕನ) ೧೦ ನೇ ವರ್ಷದ ರಾಜ್ಯಭಾರವು ನಡೆದಿದ್ದ ಸಮಯದಲ್ಲಿ, ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾದ ನಂದಿವರ್ಧನನಿಗೆ ೮ ವರ್ಷ ಗಳ ತರುವಾಯ ಮಗಧರಾಜ್ಯದ ಪ್ರಭುತ್ವವು ಲಬ್ಧವಾದಕಾರಣ ಇವನ ಹೆಸರು ಪುರಾ ಣಗಳಲ್ಲಿ ದ್ವಿರಾವೃತ್ತಿಪೂರ್ವಕ ನಿರ್ದೇಶಿತವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಕ್ರಿ. ಪೂ. ೫೭ ನೇ ವರ್ಷದ ತರುವಾಯದಲ್ಲಿ ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವ ನಂದಿವರ್ಧನನನ್ನು, ಮತ್ಸ್ಯಪುರಾಣದ ಹೇಳಿಕೆಯಿಂದ ನಿರ್ದೇ ಶಿತವಾಗುವಂತೆ, ಪ್ರದ್ಯೋತನ ತರುವಾಯ ಒಟ್ಟು ೫೨ ವರ್ಷಕಾಲ ರಾಜ್ಯವಾಳಿದ ಪಂಚಪ್ರದ್ಯೋತರಲ್ಲಿ ಒಬ್ಬನನ್ನಾಗಿ ಪರಿಗಣನೆಮಾಡಲವಕಾಶವಾಗುವುದಿಲ್ಲ. ಆದ್ದ ರಿಂದ ವಾಯುಪುರಾಣದಲ್ಲಿ, ನಿರ್ದೇಶಿಸಲಾಗಿರುವ 'ವರ್ತಿವರ್ಧನ' ಎಂಬುವನು ಪಂಚಪ್ರದ್ಯೋತರಲ್ಲಿ ಅಂತಿಮನಾದ ರಾಜನಾಗಿರುವನೆಂದು ಗ್ರಹಿಸಬೇಕಾಗುವುದು. ಇಂತೆಯೇ 'ಅಜಕ' ಎಂಬ ಹೆಸರಿನ ಬದಲಾಗಿ ಮತ್ಸ್ಯ ಮೊದಲಾದ ಪುರಾಣಗಳಲ್ಲಿ ನಿರ್ದೇಶಿತವಾಗಿರುವ 'ಸೂರ್ಯಕ' ಮುಂತಾದ ಹೆಸರುಗಳಲ್ಲಾವುದಾದರೊಂದು ಹೆಸರು ಪಂಚಪ್ರಾದ್ಯೋತರಲ್ಲಿ ನಾಲ್ಕನೆಯ ಪ್ರಾದ್ಯೋತನ ಹೆಸರಾಗಿದೆಯೆಂದುಗ್ರಹಿಸ ಬೇಕಾಗುವುದು. ವಾಯುಪುರಾಣನಿರ್ದೇಶಿತವಾಗಿರುವ 'ವರ್ತಿವರ್ಧನ' ಎಂಬ ಹೆಸರು 'ಅವಂತಿವರ್ಧನ' ಎಂದಾಗಿರಬೇಕೆಂದು, ಕಥಾಸರಿತ್ಸಾಗರದ ಕಥೆಯಾಧಾರದಿಂದ, ಸನ್ಮಾನ್ಯ ಸೀತಾನಾಥ್‌ಪ್ರಧಾನರವರು ಗುರುತಿಸಿದ್ದಾರೆ. [ಪೂ. ಸೂ. ಕೃತಿ-ಪು. ಸ. ೨೩೨-೨೩೮] ಹೀಗೆ ಪ್ರದ್ಯೋತನ ಅನಂತರ ಗೋಪಾಲಕ, ಪಾಲಕ, ಆರ್ಯಕ, ಸೂರ್ಯಕ (?) ಮತ್ತು ಅವಂತಿವರ್ಧನರೆಂಬ ಐವರು ಪ್ರಾದ್ಯೋತರು ಅನುಕ್ರಮ ವಾಗಿ ರಾಜ್ಯವಾಳಿರುವರೆಂದೂ ಮತ್ತು ಇವರೆಲ್ಲರ ಒಟ್ಟು ರಾಜ್ಯಭಾರಕಾಲವು ೫೨ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದೂ ಸ್ಫುಟಗೊಳ್ಳುವುದು. ವಾಯು ಮೊದ ಲಾದ ಪುರಾಣಗಳಲ್ಲಿ ನಿರ್ದೇಶಿತನಾಗಿರುವ ಈ ಪಂಚಪ್ರಾದ್ಯೋತರ ಒಟ್ಟು ರಾಜ್ಯ

ಭಾರಕಾಲದ ೧೩೮ ವರ್ಷಗಳ ಅವಧಿಯು ಪ್ರಕೃತ ಸಂದರ್ಭದೊಡನೆ ಸಮಾಯುಕ್ತ ವಾಗದಿರುವುದರಿಂದ ಇದರ ವಿಷಯವಾಗಿ ಮುಂದೆ ವಿವರಣೆಕೊಡಲಾಗುವುದು.

ಪ್ರದ್ಯೋತನ ಕಿರಿಯ ಕುಮಾರನ ವಿಷಯವಾಗಿ ಬಾಣಕವಿಯ ಹರ್ಷಚರಿತ ದಲ್ಲಿ ಉಕ್ತವಾಗಿರುವ ಈ ಮುಂದಿನ ಐತಿಹ್ಯಾಂಶವನ್ನು ಪ್ರಕೃತಸಂದರ್ಭದಲ್ಲಿ ಗಮ ನಿಸಬೇಕಾದ ಆವಶ್ಯಕತೆಯಿದೆ.

'ಮಹಾಕಾಲಮಹೇ ಚ ಮಹಾಮಾಂಸವಿಕ್ರಯವಾದವಾತೂಲಂ ವೇತಾಲ. ಸ್ತಾಲಜಂಘೋ ಜಘಾನ ಜಘನ್ಯಜಂ ಪ್ರದ್ಯೋತಸ್ಯ ಪೌಣಕಿಂ ಕುಮಾರಂ ಕುಮಾರ ಸೇನಂ' [ಹರ್ಷಚರಿತಂ ಉಚ್ಛ್ವಾಸ ೬]

ಈ ವಾಕ್ಯದಲ್ಲಿ ಪ್ರಯುಕ್ತವಾಗಿರುವ 'ಮಹಾಕಾಲಮಹೇ ಚ' ಎಂಬುದರಿಂದ ಕುಮಾರಸೇನನ ಹತ್ಯಾಪ್ರಸಂಗದ ಘಟನೆಯು, ಉಜ್ಜಯಿನಿಯಲ್ಲಿ ಆಚರಿತವಾದ ಮಹಾಕಾಲೇಶ್ವರನ ಉತ್ಸವದ ಸಂದರ್ಭದಲ್ಲಿ ನಡೆದಿರಬೇಕೆಂದು ಸೂಚಿತವಾಗುವುದು.

'ಕುಮಾರಸೇನ' ಎಂಬ ಹೆಸರಿನೊಡನೆ 'ಪೌಣಕಿಂ' ಎಂಬ ಗೋತ್ರನಾಮವು ವಿಶೇಷಣರೂಪದಲ್ಲಿ ಪ್ರಯುಕ್ತವಾಗಿದೆಯಾದುದರಿಂದ, ಕುಮಾರಸೇನನು 'ಪುಣಕ' ಎಂಬುವನ ವಂಶಜನಾಗಿರುವನೆಂದು ಸೂಚಿತವಾಗುವುದು. ಇಂತೆಯೇ 'ಜಘನ್ಯಜಂ ಪ್ರದ್ಯೋತಸ್ಯಕುಮಾರಂ' ಎಂಬುದರಿಂದ ಈ ಕುಮಾರಸೇನನು ಪ್ರದ್ಯೋತನ ಕಿರಿಯ ಸುತನಾಗಿದ್ದಿರಬೇಕೆಂದು ನಿರ್ದೇಶಿತವಾಗುವುದು.

ಪುರಾಣಗಳಲ್ಲಿ ಪ್ರದ್ಯೋತಾದಿ ಅವಂತಿಯರಸರ ಇತಿವೃತ್ತವು ಮಗಧರಾಜ ಸಂತಿಯ ಇತಿವೃತ್ತದೊಡನೆ ಸಂಕಲಿತವಾಗಿದ್ದು ಪ್ರದ್ಯೋತನ ತಂದೆಯನ್ನು 'ಮುನಿಕ', 'ಶುನಕ' ಮತ್ತು 'ಪುಲಕ' ಎಂದು ವಿಭಿನ್ನರೀತಿಯಿಂದ ಹೆಸರಿಸಲಾಗಿರು ವುದು ವಿದಿತವಿದೆ. ಹರ್ಷಚರಿತದ ಮೇಲ್ಕಂಡ ವಾಕ್ಯದಲ್ಲಿ ಪ್ರಯುಕ್ತವಾಗಿರುವ 'ಪೌಣಕಿಂ' ಎಂಬ ಗೋತ್ರನಾಮದ ಮೂಲರೂಪವಾದ 'ಪುಣಕ' ಎಂಬ ಹೆಸರು ಮತ್ಸ್ಯಪುರಾಣದ 'ಪುಲಕ' ಎಂಬ ಹೆಸರಿನೊಡನೆ ಸಾದೃಶ್ಯತೆಹೊಂದಿರುವುದಲ್ಲದೆ, ಚಿಲಾತಪುತ್ರ-ಪ್ರದ್ಯೋತನ ತಂದೆಯ 'ಕುಣಕ' ಎಂಬ ಹೆಸರಿನೊಡನೆಯೂ ಸಾದೃಶ್ಯ ತೆಹೊಂದಿದೆ. ಇದರಿಂದ ಬಾಣಕವಿಯ ಕಾಲಕ್ಕಾಗಲೇ ಪುರಾಣಗಳಲ್ಲಿ ಅವಂತಿ ಯರಸರ ಇತಿವೃತ್ತವು ಮಗಧರಾಜಸಂತತಿಯ ಇತಿವೃತ್ತದೊಡನೆ ಸಂಕಲಿತವಾಗಿದ್ದು ಪ್ರದ್ಯೋತ-ಮಹಾಸೇನನ ತಂದೆಯ ಹೆಸರು ರೂಪಾಂತರಹೊಂದಿದ್ದಿತೆಂದು ಗ್ರಹಿಸ ಲವಕಾಶವಾಗುವುದು. ಇಂತೆಯೇ ಪಂಚಪ್ರಾದ್ಯೋತರು ಪ್ರದ್ಯೋತನ ಸುತರಾಗಿದ್ದ ರೆಂದು ನಿರ್ದೇಶಿಸಲಾಗಿದ್ದ ವಾಯುಪುರಾಣದ ಐತಿಹ್ಯಾಧಾರದಿಂದ ಬಾಣಕವಿಯು ಕುಮಾರಸೇನನನ್ನು ಪ್ರದ್ಯೋತನ ಕಿರಿಯ ಸುತನನ್ನಾಗಿ ನಿರ್ದೇಶಿಸಿರುವನೆಂದು ಗ್ರಹಿ ಸಲವಕಾಶವಿದೆ. ಪ್ರದ್ಯೋತನಿಗೆ 'ಮಹಾಸೇನ' ಎಂಬುದು ಖ್ಯಾತಿನಾಮವಾಗಿದ್ದಂತೆ

ಪಂಚಪ್ರಾದ್ಯೋತರಲ್ಲಿ ಕೊನೆಯವನಾದ ಅವಂತಿವರ್ಧನನಿಗೆ 'ಕುಮಾರಸೇನ' ಎಂಬುದು ಖ್ಯಾತಿನಾಮವಾಗಿದ್ದಿರಬೇಕೆಂದು ಗ್ರಹಿಸಬೇಕಾಗುವುದು.

ಪ್ರಾದ್ಯೋತರೈವರಲ್ಲಿ ಮೊದಲಿಗರೀರ್ವರಾದ ಗೋಪಾಲಕ ಮತ್ತು ಪಾಲಕರ ಒಟ್ಟು ರಾಜ್ಯಭಾರಕಾಲವು (೪ + ೨೪ =) ೨೮ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಹಿಂದೆ ಪ್ರತಿಪಾದಿಸಲಾಗಿದೆ. ಮತ್ಸ್ಯಪುರಾಣದ ಹೇಳಿಕೆಯಾಧಾರದಂತೆ ಪಂಚಪ್ರಾದ್ಯೋತರ ಒಟ್ಟು ರಾಜ್ಯಭಾರಕಾಲವು ೫೨ ವರ್ಷಗಳ ಅವಧಿಯುಳ್ಳದ್ದಾಗಿರುವುದರಿಂದ, ಈ ಐವರಲ್ಲಿ ಕೊನೆಯ ಮೂವರಾದ ಆರ್ಯಕ, ಸೂರ್ಯಕ ಮತ್ತು ಅವಂತಿವರ್ಧನರು ಒಟ್ಟು (೫೨ – ೨೮=) ೨೪ ವರ್ಷಕಾಲ ರಾಜ್ಯಭಾರಮಾಡಿರುವರೆಂದು ಸ್ಫುಟಗೊಳ್ಳುವುದು.

ಗೋಪಾಲಕ ಮತ್ತು ಪಾಲಕರೀರ್ವರ ಒಟ್ಟು ರಾಜ್ಯಭಾರಕಾಲವು ೨೮ ವರ್ಷಗಳ ಅವಧಿಯುಳ್ಳದ್ದಾಗಿರುವುದರಿಂದ ಮತ್ತು ಹಿಂದೆ ಪ್ರತಿಪಾದಿಸಲಾಗಿರುವಂತೆ, ಶ್ರೀ ವೀರತೀರ್ಥಂಕರನ ನಿರ್ವಾಣದಿನದಂದು ಗೋಪಾಲಕನ ರಾಜ್ಯಭಾರವು ಆರಂಭವಾಗಿರುವುದಾದ್ದರಿಂದ, ವೀ. ನಿ. ಪ. ೨೮ ನೇ ವರ್ಷದ ಅಂತ್ಯಸಮಯದಲ್ಲಿ ಪಾಲಕನ ರಾಜ್ಯಭಾರವು ಅಂತ್ಯಗೊಂಡು ಅನಂತರ ಆರ್ಯಕನ ರಾಜ್ಯಭಾರವು ಆರಂಭವಾಗಿದೆಯೆಂದು ಫಲಿತವಾಗುವುದು. ಇಂತೆಯೇ ಮಗಧರಾಜ್ಯದಲ್ಲಿ ಅಜಾತಶತ್ರುವಿನ ರಾಜ್ಯಭಾರವು ವೀ. ನಿ. ಪ. (೩೨ – ೫=) ೨೭ ನೇ ವರ್ಷದ ಅಂತ್ಯಸಮಯದಲ್ಲಿ ಕೊನೆಗೊಂಡಿದ್ದು ಅನಂತರ ಉದಾಯಿಭದ್ರನ ರಾಜ್ಯಭಾರವು ಆರಂಭವಾಗಿದೆಯಾಗಿ, ಈ ಉದಾಯಿಭದ್ರನ ರಾಜ್ಯಭಾರವು ಆರಂಭವಾದ ೧ ವರ್ಷದ ತರುವಾಯ ಅವಂತಿಯಲ್ಲಿ ಆರ್ಯಕನ ರಾಜ್ಯಭಾರವು ಆರಂಭವಾಗಿದೆಯೆಂದು ಸ್ಫುಟಗೊಳ್ಳುವುದು.

ಆರ್ಯಕನು ( =ಅಜಕನು ) ೩೧ ವರ್ಷಕಾಲ ರಾಜ್ಯಭಾರಮಾಡಿದನೆಂದು ವಾಯುಪುರಾಣದಲ್ಲಿ ನಿರ್ದೇಶಿತವಾಗಿದೆಯಾದರೆ, ಬ್ರಹ್ಮಾಂಡಪುರಾಣದಲ್ಲಿ ೨೧ ವರ್ಷಕಾಲ ರಾಜ್ಯಭಾರಮಾಡಿದನೆಂದು ನಿರ್ದೇಶಿತವಾಗಿದೆ. ಇಂತೆಯೇ ಮತ್ಸ್ಯಪುರಾಣದಲ್ಲಿ, ಸೂರ್ಯಕನು ೨೧ ವರ್ಷಕಾಲ ರಾಜ್ಯಭಾರಮಾಡಿದನೆಂದು ನಿರ್ದೇಶಿತವಾಗಿದೆ. ಹಿಂದೆ ಹೇಳಲಾಗಿರುವಂತೆ ಪಂಚಪ್ರಾದ್ಯೋತರಲ್ಲಿ ಕೊನೆಯ ಮೂವರಾದ ಆರ್ಯಕ, ಸೂರ್ಯಕ ಮತ್ತು ಅವಂತಿವರ್ಧನರ ಒಟ್ಟು ರಾಜ್ಯಭಾರಕಾಲವು ೨೪ ವರ್ಷಕಾಲಮಾತ್ರವಾಗಿರಬೇಕಾದುದರಿಂದ, ಆರ್ಯಕನು ೨೧ ವರ್ಷಕಾಲ ರಾಜ್ಯಭಾರಮಾಡಿರುವನೆಂದೂ ಮತ್ತು ಇವನ ಅನಂತರ ಸೂರ್ಯಕ ಮತ್ತು ಅವಂತಿವರ್ಧನರೀರ್ವರು ಒಟ್ಟು ೩ ವರ್ಷಕಾಲಮಾತ್ರ ರಾಜ್ಯಭಾರಮಾಡಿರುವರೆಂದೂ ಗ್ರಹಿಸಲವಕಾಶವಾಗುವುದು.

ಅವಂತಿವರ್ಧನನ ರಾಜ್ಯಭಾರವು ವೀ. ನಿ. ಪ. ೫೨ ನೇ ವರ್ಷದ ಅಂತ್ಯಸಮಯದಲ್ಲಿ ಕೊನೆಗೊಂಡಿದ್ದು, ಅನಂತರ ನಂದಿವರ್ಧನನ ರಾಜ್ಯಭಾರವು ಆರಂಭ

ವಾಗಿದೆ. ಹೀಗೆ ನಂದಿವರ್ಧನನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾದ ಸಮಯ ದಲ್ಲಿ ಮಗಧರಾಜ್ಯದಲ್ಲಿ ಮುನಿಕ-ಮುಂಡನ ೧೦ ನೇ ವರ್ಷದ ರಾಜ್ಯಭಾರವು ನಡೆ ದಿದ್ದಿತು. ಈ ಸಮಯದಿಂದ ಮುಂದೆ ೮ ವರ್ಷಗಳ ತರುವಾಯ ವೀ. ನಿ. ಪ. ೬೧ ನೇ ವರ್ಷದಲ್ಲಿ, ಹಿಂದೆ ಹೇಳಲಾಗಿರುವಂತೆ, ಮಗಧರಾಜ್ಯವು ನಂದಿವರ್ಧನನ (=ನಂದನ= ಶಿಶುನಾಗನ) ಆಧಿಪತ್ಯಕ್ಕೊಳಪಟ್ಟಿದೆ. ಅಂತೆಯೇ ಇಲ್ಲಿಂದ ಮುಂದೆ ವೀ. ನಿ. ಪ. ೬೧ ನೇ ವರ್ಷದಾರಭ್ಯ ಮಗಧರಾಜ್ಯದ ಇತಿಹಾಸದಲ್ಲಿ ನಂದರಾಜಸಂತತಿಯ ರಾಜ್ಯ ಭಾರದ ಅಧ್ಯಾಯವು ಆರಂಭವಾಗುವುದು.

## ನಂದರಾಜ ಸಂತತಿ

ಶ್ರೀ ವೀರತೀರ್ಥಂಕರನ ನಿರ್ವಾಣಪಶ್ಚಾತ್ ೫೩ ನೇ ವರ್ಷದಲ್ಲಿ ಅವಂತೀ ರಾಜನಾಗಿ ಅಭಿಷಿಕ್ತನಾದ ನಂದರಾಜನು ೮ ವರ್ಷಗಳ ತರುವಾಯ ವೀ. ನಿ. ಪ. ೬೧ ರಲ್ಲಿ ಮಗಧರಾಜ್ಯದ ದೊರೆಯಾಗಿ ಅಭಿಷಿಕ್ತನಾದನೆಂದು ಮತ್ತು ಇವನನ್ನು ಪುರಾಣಗಳಲ್ಲಿ 'ನಂದಿವರ್ಧನ' ಎಂಬ ಹೆಸರಿನಿಂದಲೂ. ದಾಕ್ಷಿಣಾತ್ಯ ಬೌದ್ಧ ಆಮ್ನಾ ಯದ ಕೃತಿಗಳಲ್ಲಿ 'ಸುಸುನಾಗ' ಎಂಬ ಹೆಸರಿನಿಂದಲೂ ನಿರ್ದೇಶಿಸಲಾಗಿದೆಯೆಂದು ಇದುವರೆವಿಗೆ ನಡೆದ ವಿಚಾರಧಾರೆಯಿಂದ ವ್ಯಕ್ತಪಟ್ಟಂತಾಗಿದೆ. ಈ ನಂದರಾಜನು ಅವಂತೀರಾಜ್ಯದಲ್ಲಿ ಅಭಿಷಿಕ್ತನಾದ ವೀ. ನಿ. ಪ. ೫೩ ನೇ ವರ್ಷದಾರಭ್ಯ ಇವನ ಹೆಸರಿನಲ್ಲಿ ಶಕೆಯೊಂದರ ಗಣನೆಯು ಪ್ರಚಲಿತವಾಗಿದ್ದು ಈ ಶಕೆಯು, ವಿಕ್ರಮ ಮತ್ತು ಶಾಲಿವಾಹನ ಶಕೆಗಳು ಪ್ರಚಲಿತವಾಗಿ ಪ್ರಚುರಗೊಂಡ ಅನಂತರ, ಕಾಲಾನು ಕ್ರಮದಲ್ಲಿ ಮರೆಗೊಂಡಿದೆಯೆಂದು ಸೂಚನೆಗೊಡುವ ಆಧಾರಗಳಿವೆ. ಈ ವಿಷಯದ ವಿಮರ್ಶೆಯನ್ನು ಇತಿಹಾಸಜ್ಞರ ಪರಿಶೀಲನಾರ್ಥವಾಗಿ ಇಲ್ಲಿ ಮಂಡಿಸಲಾಗುವುದು.

'ನಂದರಾಜನ ಸಮಯದಾರಭ್ಯ ಕಲಿಯು ವೃದ್ಧಿಹೊಂದಿತು' ಎಂದು ಭಾಗವತ ಮತ್ತು ವಿಷ್ಣುಪುರಾಣಗಳಲ್ಲಿ ಹೇಳಲಾಗಿದೆ.[1] ಸಾಧಾರಣವಾಗಿ ಕಲಿಕಾಲದಲ್ಲಿ ದಿನ ಗಳೆದಂತೆಲ್ಲಾ (ಕಲಿ=) ದುರಾಚಾರವು ಹೆಚ್ಚುತ್ತಾ ನಡೆಯುವುದೆಂಬ ಪರಂಪರಾನು ಗತವಾದ ನಂಬುಗೆಯು ಭಾರತೀಯರಲ್ಲಿರುವುದು ಕಂಡುಬರುತ್ತದೆ. ಇದರಂತೆ ದ್ವಾಪರಯುಗವು ಕೊನೆಗೊಂಡು ಕಲಿಯುಗವು ಆರಂಭವಾದಂದಿನಿಂದಲೂ ಕಲಿಯು ವೃದ್ಧಿಯಾಗುತ್ತಾ ನಡೆದಿದೆಯೆಂಬ ಅಭಿಮತವು ಸಹಜವೆನಿಸುವುದು. ಆದರೆ

---

1 ತದಾ ನಂದಾತ್ ಪ್ರಭೃತ್ಯೇಷ ಕಲಿರ್ವೃದ್ಧಿಂ ಗಮಿಷ್ಯತಿ_ಭಾಗವತ. ಪು. ಸ್ಕಂ ೧೨-ಅ. ೨-ಪ.ಸಂ.-೩೨ ; ತದಾನಂದಾತ್ ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ- ವಿಷ್ಣುಪು. ಅಂಶ ೪-ಅಧ್ಯಾಯ ೨೪.

ಮೇಲ್ಕಂಡ ಪುರಾಣೋಕ್ತಿಯನುಸಾರವಾಗಿ ನಂದರಾಜನ ಸಮಯದಾರಭ್ಯ ಕಲಿಯು ವೃದ್ಧಿಯಾಯಿತೆಂದು ನಿರ್ದೇಶಿತವಾಗುವುದು. ಇದರಿಂದ ನಂದರಾಜನ ಸಮಯ ದಾರಭ್ಯ ಕಲಿವೃದ್ಧಿಯಾಯಿತೆಂದು ಗುರುತಿಸುವಂತಹ ಯಾವುದಾದರೊಂದು ಪ್ರಮುಖ ಪ್ರಸಂಗವು ನಂದರಾಜನ ಕಾಲದಲ್ಲಿ ಘಟಿತವಾಗಿರಬೇಕೆಂದು ಗ್ರಹಿಸಲವಕಾಶವಾಗು ವುದು.

ಕಲಿಯುಗದ ಆರಂಭದ ವಿಷಯವಾಗಿ ಬ್ರಹ್ಮಾಂಡಪುರಾಣ ಮತ್ತು ಭಾಗವತ ಪುರಾಣಗಳಲ್ಲಿ ಈ ಮುಂದಿನಂತೆ ಹೇಳಲಾಗಿದೆ:

ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾ ದಿನೇ ।
ಪ್ರತಿಪನ್ನಃ ಕಲಿಯುಗಸ್ತಸ್ಯ ಸಂಖ್ಯಾಂ ನಿಬೋಧತ ॥೨೪೧॥

[ಬ್ರಹ್ಮಾಂಡ ಪು- ಅ. ೭೪]

ಯಸ್ಮಿನ್‌ಕೃಷ್ಣೋ ದಿವಂ ಯಾತಃ ತಸ್ಮಿನ್ನೇವ ತದಾಹನಿ ।
ಪತಿಪನ್ನಂ ಕಲಿಯುಗಮಿತಿ ಪ್ರಾಹುಃ ಪುರಾವಿದಃ ॥೩೩॥

[ಭಾಗವತ ಪು-ಸಂ.೧೨-ಅ. ೨]

ಶ್ರೀ ಕೃಷ್ಣನು ಪರಂಧಾಮಹೊಂದಿದಂದು ಕಲಿಯುಗವು ಆರಂಭವಾಯಿತೆಂದು ಮೇಲ್ಕಂಡ ಪುರಾಣೋಕ್ತಿಯಿಂದ ನಿರ್ದೇಶಿತವಾಗುವುದು. ಇಷ್ಟಲ್ಲದೆ, ಶ್ರೀ ಕೃಷ್ಣನು ದಿವಂಗತನಾದ ವಿಷಯವನ್ನು ತಿಳಿದ ಪಾಂಡವರು ಪರಿಕ್ಷಿದ್ರಾಜನಿಗೆ ರಾಜ್ಯಭಾರ ವನ್ನು ವಹಿಸಿ ಸ್ವರ್ಗಾಭಿಮುಖರಾದರೆಂದು ಭಾಗವತಪುರಾಣದಲ್ಲಿ ಹೇಳಲಾಗಿದೆ. [ಸ್ಕಂ. ೧೧-ಅ. ೩೧-ಪು. ಸಂ. ೨೬]

ಇದರಿಂದ ಯುಧಿಷ್ಠಿರನ ರಾಜ್ಯಭಾರದ ಅಂತ್ಯ ಹಾಗೂ ಪರಿಕ್ಷಿದ್ರಾಜನ ರಾಜ್ಯಭಾರದ ಆರಂಭಪ್ರಸಂಗಗಳು ಕಲಿಯುಗದ ಆರಂಭದಲ್ಲಾದುವೆಂದು ಸೂಚಿ ತವಾಗುವುದು. ಹೀಗೆ ಯುಧಿಷ್ಠಿರನ ರಾಜ್ಯಭಾರಾಂತ್ಯಸಮಯವು ಕಲಿಯುಗದ ಆರಂಭಸಮಯವೆನಿಸುವುದರಿಂದ, ಈಗ ಪ್ರಚಲಿತವಿರುವ ಕಲಿಶಕೆಯನ್ನೇ ಯುಧಿಷ್ಠಿರ ಶಕೆಯೆಂದು ನಿರ್ದೇಶಿಸುವ ವಾಡಿಕೆಯಿದ್ದಿತೆಂದು ಕಂಡುಬರುವುದು. ಸದ್ಯ ಬಳಕೆ ಯಲ್ಲಿರುವ ಪಂಚಾಂಗಗಳು ಹಾಗೂ ಕ್ರಿ. ಶ. ೬೩೪-೫ ರಲ್ಲಿ ರಚಿತವಾಗಿರುವ ಐಹೊಳೆ ಶಾಸನದ ಆಧಾರಗಳಿಂದ ಕಲಿಶಕೆಯು ಕ್ರಿ. ಪೂ. ೩೧೦೦-೧ ರಲ್ಲಿ ಆರಂಭವಾಗಿದೆ ಯೆಂದು ನಿರ್ಧರಿಸಲಾಗಿದೆ. ಹೀಗೆ ಶ್ರೀ ಕೃಷ್ಣನು ಪರಂಧಾಮವನ್ನೈದಿದ ಮತ್ತು ಪಂಚಪಾಂಡವರು ಮಹಾಪ್ರಸ್ಥಾನ ಕೈಗೊಂಡಸಮಯದಲ್ಲಿ ಆರಂಭವಾದ ಕಲಿಯು, ಈ ಹಿಂದೆ ಹೇಳಿರುವಂತೆ, ನಂದರಾಜನ ಕಾಲದಲ್ಲಿ 'ಗತಿವೃದ್ಧಿ' ಹೊಂದಿತೆಂದು ಪುರಾ ಣಗಳಲ್ಲಿ ಉಕ್ತವಾಗಿರುವುದಕ್ಕೆ ವಿಶೇಷಾರ್ಥವಿದೆಯೆಂದು ಗ್ರಹಿಸಲವಕಾಶವಾಗು ವುದು.

ಯುಧಿಷ್ಠಿರನ ರಾಜ್ಯಭಾರಸಮಯದ ವಿಷಯವಾಗಿ ಬೃಹತ್ಸಂಹಿತೆಯ ಸಪ್ತರ್ಷಿಚಾರಪ್ರಕರಣದಲ್ಲಿ ವರಾಹಮಿಹಿರಾಚಾರ್ಯರು ಉಲ್ಲೇಖಿಸಿರುವ ಈ ಮುಂದಿನ ವೃದ್ಧಗರ್ಗಮತ ಮತ್ತು ಈ ವಿಷಯದ ವ್ಯಾಖ್ಯಾನಗಳು ಪ್ರಕೃತಸಂದರ್ಭದಲ್ಲಿ ಅವಶ್ಯ ಗಮನಾರ್ಹವಾಗಿವೆ.

ತೇಷಾಂ ಮುನೀನಾಂ ಚಾರಮಹಂ ವೃದ್ಧಗರ್ಗಮತಾತ್ ಕಥಯಿಷ್ಯೇ—

ವ್ಯಾಖ್ಯಾನ–ವೃದ್ಧಗರ್ಗೋನಾಮ ಮಹಾಮುನಿಸ್ತನ್ಮತಾತ್ತತ್ಕೃತಾಚ್ಛಾಸ್ತ್ರಾದಿತಿ। ಅಥುನ್ಯೈತೇಷಾಂ ಚಾರನಕ್ಷತ್ರಾನಯನಮಾಹ।

(೧) ಆಸನ್ ಮಘಾಸು ಮುನಯಃ ಶಾಸತಿ ಪೃಥ್ವೀಂ ಯುಧಿಷ್ಠಿರೇ ನೃಪತೌ।
ಷಡ್ದ್ವಿಕಪಂಚದ್ವಿಯುತಃ ಶಕಕಾಲಸ್ತಸ್ಯ ರಾಜ್ಞಶ್ಚ ॥

ವಾಖ್ಯಾನ–ಮುನಯೋ ಮರೀಚ್ಯಾದಯಃ ಸಪ್ತರ್ಷಯೋ ಯುಧಿಷ್ಠಿರೇ ನೃಪತೌ ರಾಜನಿ ಪೃಥ್ವೀಂ ಮಹೀಂ ಶಾಸತಿ ಪರಿಪಾಲಯತಿ ಮಘಾಸು ಮಘಾನಕ್ಷತ್ರೇಷು ಆಸನ್ನಧ್ಯತಿಷ್ಠನ್ ।

ತಥಾಚ ವೃದ್ಧಗರ್ಗಃ।

(೨) ಕಲಿದ್ವಾಪರಸಂಧೌತು ಸ್ಥಿತಾಸ್ತೇ ಪಿತೃದೈವತಂ ।
ಮುನಯೋ ಧರ್ಮನಿರತಾಃ ಪ್ರಜಾನಾಂ ಪಾಲನೇ ರತಾಃ ॥

ತಸ್ಯ ಚ ಯುಧಿಷ್ಠಿರಸ್ಯ ರಾಜ್ಞಃ ಷಡ್ದ್ವಿಕಪಂಚದ್ವಿಯುತಃ ಶಕಕಾಲೋ ಗತಃ। ಸಹಸ್ರದ್ವಯೇನ ಪಂಚಭಿಃ ಶತೈಃ ಷಡ್ವಿಂಶತ್ಯಧಿಕೈಃ (೨೫೨೬) ಶಕನೃಪಕಾಲೋ ಯುಕ್ತಃ ಕಾರ್ಯಃ। ಏವಂ ಕೃತೇ ಯುದ್ಭವತಿ ತಾವದ್ವರ್ಷವೃಂದಂ ವರ್ತಮಾನಕಾಲಂ ಯಾವದ್ಗತಂ। ತಸ್ಯ ಚ ಶತೇನ ಭಾಗಮಾಹೃತ್ಯ ಯದವಾಪ್ಯತೆ ತಾನಿ ನಕ್ಷತ್ರಾಣಿ ಮಘಾದೀನಿ ಭುಕ್ತಾನಿ ಯಚ್ಛೇಷಂ ತಾನಿ ವರ್ಷಾಣಿ ಭುಜ್ಯಮಾನೇ ನಕ್ಷತ್ರೇ ತೇಷಾಂ ಪ್ರವಿಷ್ಟಾನಾಂ ಗತಾನಿ। ತಾನಿ ಚ ಶತಾದ್ವಿಶೋಧ್ಯ ಯದವಶಿಷ್ಯತೆ ತಾವಂತ್ಯೇವ ತಸ್ಮಿನ್ನಕ್ಷತ್ರೇ ಸ್ಥಿತಾನೀತಿ। ಲಬ್ಧನಕ್ಷತ್ರಾಣಾಮಪಿ ಸಪ್ತವಿಂಶತ್ಯಾ ಭಾಗಮಪಹೃತ್ಯಾವಶೇಷಾಂಕಸಮಂ ಮಘಾದಿ ನಕ್ಷತ್ರಂ ಭುಕ್ತಮಿತಿ ವಾಚ್ಯಂ॥

[ಬೃಹತ್ಸಂಹಿತಾ-ಸವಿವೃತಿ-ವಿಜಯನಗರಂ ಸ್ಯಾನ್ಸ್ಕ್ರಿಟ್‌ಸೀರೀಸ್ ಗ್ರಂ. ಭಾಗ ೧೦ ; ಅ. ೧೩–ಪು. ಸಂ. ೨೮೦]

ವರಾಹಮಿಹಿರಾಚಾರ್ಯರು ಸಪ್ತರ್ಷಿಚಾರಾನಯನದ ನಿರೂಪಣಾರ್ಥವಾಗಿ ವೃದ್ಧಗರ್ಗಮುನಿಗಳ ಅಭಿಮತವಾದ 'ಆಸನ್ ಮಘಾಸು........' ಎಂಬ ಶ್ಲೋಕವನ್ನು

ಉಲ್ಲೇಖಿಸಿದ್ದಾರೆ. ಈ ಶ್ಲೋಕದ ಅಂತರ್ಗತಾರ್ಥವನ್ನು ವಿವರಿಸುವುದು ಮೇಲ್ಕಂಡ ವ್ಯಾಖ್ಯಾನದ ಉದ್ದೇಶವಾಗಿದೆ. ಸಪ್ತರ್ಷಿಗಳು ಅಶ್ವಿನ್ಯಾದಿ ೨೭ ನಕ್ಷತ್ರಗಳಲ್ಲಿ ಪ್ರತಿಯೊಂದರಲ್ಲಿಯೂ ಅನುಕ್ರಮವಾಗಿ ಶತವರ್ಷಕ್ರಮದಿಂದ ಅಧಿಷ್ಠಿತರಾಗಿರುವರು.[1] ಈ ರೀತಿಯಾಗಿ ೨೭ ನಕ್ಷತ್ರಗಳಲ್ಲಿ ಇವರ ಅಧಿಷ್ಠಾನವು ಪೂರ್ಣವಾಗಲು (೧೦೦ × ೨೭=) ೨೭೦೦ ವರ್ಷಗಳು ಸಲ್ಲುವುವು. ಅಪೇಕ್ಷಿತವಾದ ಯಾವುದಾದರೊಂದು ಕಾಲದಲ್ಲಿ ಸಪ್ತರ್ಷಿಗಳು ಯಾವ ನಕ್ಷತ್ರದಲ್ಲಿ ಅಧಿಷ್ಠಿತರಾಗಿರುವರು ಎಂಬಿವೇ ಮುಂತಾದ ಅಂಶಗಳನ್ನು ಕಂಡುಕೊಳ್ಳುವ ವಿಧಾನವನ್ನು ಮೇಲ್ಕಂಡ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ಈ ವ್ಯಾಖ್ಯಾನದ ಅರ್ಥವು ಮುಂದಿನಂತಿದೆ.

ಯುಧಿಷ್ಠಿರನು ಭೂಮಿಯನ್ನಾಳುತ್ತಿರಲು ಮರೀಚ್ಯಾದಿ ಸಪ್ತರ್ಷಿಗಳು ಮಘಾ-ನಕ್ಷತ್ರದಲ್ಲಿ ಅಧಿಷ್ಠಿತರಾಗಿದ್ದರು.

ಅಂತೆಯೇ ವೃದ್ಧಗರ್ಗ (ರು ಮುಂದಿನಂತೆ ಹೇಳಿದ್ದಾರೆ :)

ಧರ್ಮನಿರತರೂ ಪ್ರಜಾಪಾಲನರತರೂ ಆದ ಆ ಮುನಿಗಳು ಕಲಿದ್ವಾಪರ ಸಂಧಿಕಾಲದಲ್ಲಿ (ಪಿತೃದೈವತ=) ಮಘಾನಕ್ಷತ್ರದಲ್ಲಿ ಅಧಿಷ್ಠಿತರಾಗಿದ್ದರು.

ಆ ಯುಧಿಷ್ಠಿರರಾಜನ ಷಡ್ದ್ವಿಕಪಂಚದ್ವಿಯುತವಾದ ಶಕಕಾಲವು ಗತ(ವೆನಿಸುವುದು) ಐದುನೂರಇಪ್ಪತ್ತಾರರ ಆಧಿಕ್ಯದಿಂದ ಕೂಡಿರುವ ಎರಡುಸಾವಿರದೊಡನೆ (೨೫೨೬ ರೊಡನೆ) ಶಕನೃಪಕಾಲವು ಯುಕ್ತವಾದುದಾಗಿ ಮಾಡಬೇಕು. ಹೀಗೆ ಮಾಡಲು ಎಷ್ಟು ಆಗುವುದೋ ಅಷ್ಟು ವರ್ಷವೃಂದವು ವರ್ತಮಾನಕಾಲಪರ್ಯಂತ ಗತವೆನಿಸುವುದು. ನೂರರಿಂದ ಅದರ ಭಾಗಮಾಡಿ (ದರೆ) ಎಷ್ಟು ಲಬ್ಧವೆನಿಸುವುದೋ ಅದು ಭುಕ್ತವಾದ ಮಘಾದಿನಕ್ಷತ್ರಗಳ (ಸೂಚಕವಾಗುವುದು); ಎಷ್ಟು ಶೇಷವೆನಿಸುವುದೋ ಅಷ್ಟುವರ್ಷಗಳು ಭುಜ್ಯಮಾನವಾದ ನಕ್ಷತ್ರದಲ್ಲಿ ಪ್ರವಿಷ್ಟರಾದ ಅವರ ಗತ (ವರ್ಷಗಳೆನಿಸುವುವು). ನೂರರಿಂದ ಅವುಗಳನ್ನು ಕಳೆದು ಯಾವುದು ಉಳಿಯುವುದೋ ಅಷ್ಟುಮಾತ್ರ ಆ ನಕ್ಷತ್ರದಲ್ಲಿ ಅವರು ಮುಂದೆ ಅಧಿಷ್ಠಿತರಾಗಿರಬೇಕಾಗಿ ಉಳಿದಿರುವ ವರ್ಷಗಳು. ಲಬ್ಧವಾಗಿ ಬಂದ ನಕ್ಷತ್ರಗಳನ್ನು ೨೭ ರಿಂದ ಭಾಗಿಸಿ ಅವಶೇಷಾಂಕಸಮವಾಗಿ ಮಘಾದಿ ನಕ್ಷತ್ರವು ಭುಕ್ತವಾಗಿದೆಯೆಂದು ಹೇಳಬೇಕು.[2]

---

1 ಸಪ್ತವಿಂಶತಿಪರ್ಯಂತೇ ಕೃತ್ಸ್ನೇ ನಕ್ಷತ್ರಮಂಡಲೇ ।
ಸಪ್ತರ್ಷಯಸ್ತು ತಿಷ್ಠಂತಿ ಪರ್ಯಾಯೇಣ ಶತಂ ಶತಂ ।। ೩೧ ।।

ಬ್ರಹ್ಮಾಂಡ ಪುರಾಣ—ಅ. ೭೪

2 ಈ ವಿಷಯವನ್ನು ಉದಾಹರಣಪೂರ್ವಕ ಮುಂದೆ ವಿವರಿಸಲಾಗುವುದು.

ಅಪೇಕ್ಷಿತವಾದ ಯಾವುದಾದರೊಂದು ಕಾಲದಲ್ಲಿ ಸಪ್ತರ್ಷಿಗಳು ಯಾವನಕ್ಷತ್ರ ದಲ್ಲಿ ಅಧಿಷ್ಠಿತರಾಗಿರುವರು ಎಂಬುದನ್ನು ಕಂಡುಕೊಳ್ಳುವ ಕ್ರಮುವನ್ನು ಮೇಲ್ಕಂಡ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆಯಾದರೂ, ಪ್ರಮುಖವಾದ ಈ ಮುಂದಿನ ಎರಡು ಅಂಶಗಳನ್ನು ಸ್ಪಷ್ಟಗೊಳಿಸಿಲ್ಲವಾಗಿ, ವ್ಯಾಖ್ಯಾನವು ಅಸ್ಪಷ್ಟವೆನಿಸಿ ಉಳಿಯುವಂತಾಗಿ ದೆಯೆಂಬುದಲ್ಲದೆ ಅರ್ಥವೈಪರೀತ್ಯರೂಪದ ದೋಷಭಾಗಿಯೂ ಆಗಿದೆಯೆಂದು ಹೇಳ ಲವಕಾಶವಿದೆ.

೧) ನಮ್ಮ ದೇಶದಲ್ಲಿ ನಾಲ್ಕಾರು ಶಕೆಗಳು ಪ್ರಚಲಿತವಿದ್ದುವೆಂದು ಜ್ಯೋತಿಷ ಗ್ರಂಥಗಳ ಹೇಳಿಕೆಗಳಿಂದ ವ್ಯಕ್ತಪಡುವುದು. ಆದ್ದರಿಂದ ಮೇಲ್ಕಂಡ ['ಆಸನ್ಮ. ಘಾಸು.......' ಎಂಬ] (೧ನೇ) ಶ್ಲೋಕದಲ್ಲಿ ನಿರ್ದೇಶಿತವಾಗಿರುವ ಶಕಕಾಲವು ವಿಕ್ರಮ ಶಕೆಯೇ? ಶಾಲಿವಾಹನ ಶಕೆಯೇ? ಅಥವಾ ಮತ್ತಾವುದಾದರೊಂದು ಶಕೆಯೇ? ಎಂಬುದು ಸ್ಪಷ್ಟವಾಗದ ಹೊರತು ಶ್ಲೋಕದ ಉದ್ದಿಷ್ಟವಿಷಯವಾದ ಸಪ್ತರ್ಷಿಚಾರಾನಯನದ ನಿರ್ಣಯಕ್ರಮುವು ಸ್ಪಷ್ಟವಾಗುವುದಿಲ್ಲ. ಈ ವಿಷಯ ವಾಗಿ ಮೇಲ್ಕಂಡ ವ್ಯಾಖ್ಯಾನದಲ್ಲಿ ಯಾವರೀತಿಯ ವಿವರಣೆಯೂ ಇಲ್ಲವಾಗಿದೆ. ಆದರೆ ಇದೇ ಕೃತಿಯಲ್ಲಿ ಮತ್ತೊಂದೆಡೆ[1] ಪ್ರಯುಕ್ತವಾಗಿರುವ 'ಶಕೇಂದ್ರಕಾಲಾತ್' ಎಂಬುದನ್ನು ವಿಕ್ರಮಶಕೆಯ ನಿರ್ದೇಶಕವನ್ನಾಗಿ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ ಯಾದುದರಿಂದ ಬೃಹತ್ಸಂಹಿತೆಯಲ್ಲಿ 'ಶಕ' ಪದದಿಂದ ನಿರ್ದೇಶಿತವಾಗಿರುವ ಎಲ್ಲ ಕಾಲಗಳನ್ನೂ ವಿಕ್ರಮಶಕೆಯ ನಿರ್ದೇಶಕಗಳನ್ನಾಗಿ ವ್ಯಾಖ್ಯಾನಕಾರನು ಪರಿಗಣಿಸಿ ರುವನೆಂದು ಗ್ರಹಿಸಲವಕಾಶವಾಗುವುದು. ಇದರಂತೆ, ಯುಧಿಷ್ಠಿರನಕಾಲ ಮತ್ತು ವಿಕ್ರಮಶಕೆಯ ಆರಂಭ ಕಾಲಗಳ ಮಧ್ಯವರ್ತಿಯಾಗಿ, ವ್ಯಾಖ್ಯಾನಕಾರನ ಅಭಿಮತ ದಂತೆ ೨೫೨೬ ವರ್ಷಗಳ ಅಂತರವಿರುವುದೆಂದು ನಿರ್ದೇಶಿತವಾದಂತಾಗುವುದು. ಆದರೆ ಯುಧಿಷ್ಠಿರನಕಾಲ ಮತ್ತು ವಿಕ್ರಮಶಕೆಯ ಆರಂಭಕಾಲಗಳ ಮಧ್ಯವರ್ತಿ ಯಾಗಿ ೩೦೮೩-೪ ವರ್ಷಗಳ ಅಂತರವಿರುವುದೆಂದು ನಿರ್ದೇಶಿಸುವ ಸುಸ್ಪಷ್ಟವೂ ಖಚಿ ತವೂ ಆದ ಮತ್ತೊಂದು ಆಧಾರವಿದೆ. ಐಹೊಳೆ ಶಾಸನದಲ್ಲಿ, ಭಾರತಯುದ್ಧಾನಂತರ ಸಮುಯದಲ್ಲಿ ಆರಂಭವಾದ ಕಲಿಕಾಲ[2] ಮತ್ತು ಶಕರಾಜರ[3] ಕಾಲಗಳ ಗಣನೆಗಳ ಪೂರ್ವಕ ಜಿನಾಯತನವು ನಿರ್ಮಿತವಾದ ಸಮುಯವನ್ನು ನಿರ್ದೇಶಿಸಲಾಗಿರುವುದು ವಿದಿತವಿದೆ. ಭಾರತಯುದ್ಧವು ಅಂತ್ಯಗೊಂಡ ತರುವಾಯ ಯುಧಿಷ್ಠಿರನ ರಾಜ್ಯ ಭಾರವು ಆರಂಭವಾಗಿದೆಯೆಂಬುದು ನಿಶ್ಚಿತವಿದೆ. ಇಂತೆಯೇ ಹಿಂದೆ ಹೇಳಲಾಗಿರು ವಂತೆ ಕಲಿಕಾಲವು ಯುಧಿಷ್ಠಿರನ ರಾಜ್ಯಭಾರಾಂತ್ಯಸಮುಯದಲ್ಲಿ ಆರಂಭವಾಗಿದೆ

---

1 ಅಧ್ಯಾಯ ೮ ; ಶ್ಲೋ. ಸಂ. ೨೦.

2 ಭಾರತದಾಹವಾದಿತಃ ಕಲೌಕಾಲೇ.

3 ಶಾಕಾನಾಮಪಿಭೂಭುಜಾಂ.

ಯೆಂದು ಪುರಾಣೋಕ್ತಿಗಳಿಂದ ನಿರ್ದೇಶಿತವಾಗುವುದು. ಐಹೊಳೆಶಾಸನದಲ್ಲಿ ನಿರ್ದೇಶಿತವಾಗಿರುವ ಕಲಿಕಾಲವು ಯುಧಿಷ್ಠಿರನ ರಾಜ್ಯಭಾರಾಂತ್ಯಸಮಯದಿಂದ ಆರಂಭವಾಗಿದೆಯೆಂದು ಫಲಿತವಾಗುವುದಾದ್ದರಿಂದ, ಯುಧಿಷ್ಠಿರನ ರಾಜ್ಯಭಾರಕಾಲ ಮತ್ತು ಈ ಶಾಸನದಲ್ಲಿ ನಿರ್ದೇಶಿತವಾಗಿರುವ ಶಕಕಾಲದ ಆರಂಭಸಮಯಗಳ ಮಧ್ಯವರ್ತಿಯಾಗಿ ೩೧೭೯ ವರ್ಷಗಳ ಅಂತರವಿರುವುದಾಗಿ ವ್ಯಕ್ತಪಡುವುದು. ಈ ಶಾಸನದಲ್ಲಿ ಪ್ರಯುಕ್ತವಾಗಿರುವ 'ಶಕ' ಪದವು ಶಾಲಿವಾಹನಶಕೆಯ ಸೂಚಕವಾಗಿದೆಯೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಇದರಂತೆ ಯುಧಿಷ್ಠಿರನ ರಾಜ್ಯಭಾರಾಂತ್ಯ ಸಮಯ ಮತ್ತು ಶಾಲಿವಾಹನಶಕೆಯ ಆರಂಭಸಮಯಗಳ ಮಧ್ಯವರ್ತಿಯಾಗಿ ೩೧೭೯ ವರ್ಷಗಳ ಅಂತರವಿರುವುದಾಗಿ ವ್ಯಕ್ತವಾಗುವುದು.

ವಿಕ್ರಮ ಶಕೆಯು ಆರಂಭವಾದ ೧೩೫ ವರ್ಷಗಳ ತರುವಾಯದ ಸಮಯದಲ್ಲಿ ಶಾಲಿವಾಹನಶಕೆಯು ಆರಂಭವಾಗಿದೆಯೆಂಬ ಐತಿಹ್ಯೋಕ್ತಿಗಳಿವೆ.[1] ಇದರಂತೆ ಕಲಿಶಕೆಯ ಆರಂಭ ಮತ್ತು ವಿಕ್ರಮಶಕೆಯ ಆರಂಭಸಮಯಗಳ ಮಧ್ಯವರ್ತಿಯಾಗಿ (೩೧೭೯–೧೩೫=) ೩೦೪೪ ವರ್ಷಗಳ ಅಂತರವಿದೆಯೆಂದು ಸ್ಫುಟಗೊಳ್ಳುವುದು. ಆದ್ದರಿಂದ ಪೂರ್ವೋಲ್ಲಿಖಿತವಾದ ಬೃಹತ್ಸಂಹಿತೆಯ (೧ ನೇ) ಶ್ಲೋಕದಲ್ಲಿ, ಯುಧಿಷ್ಠಿರನ ರಾಜ್ಯಭಾರಕಾಲದಿಂದ ೨೫೨೬ ವರ್ಷಗಳ ತರುವಾಯದಲ್ಲಿ ಆರಂಭವಾಗಿರುವಂತೆ ನಿರ್ದೇಶಿಸಲಾಗಿರುವ ಶಕಕಾಲವು ವಿಕ್ರಮಶಕೆಯಾಗಿರಲಾರದೆಂದು ಫಲಿತವಾಗುವುದು. ಇಂತೆಯೇ ಪೂರ್ವೋಲ್ಲಿಖಿತವಾದ ಬೃಹತ್ಸಂಹಿತೆಯ (೧ ನೇ) ಶ್ಲೋಕದಲ್ಲಿ ನಿರ್ದೇಶಿತವಾಗಿರುವ ಶಕಕಾಲವು ವಿಕ್ರಮಶಕೆಯಾಗಿರಲಾರದೆಂದು ಮತ್ತೂ ಒಂದು ಆಧಾರದಿಂದ ನಿರ್ದೇಶಿತವಾಗುವುದು. ಬೃಹತ್ಸಂಹಿತೆಯ ಕರ್ತೃಗಳಾದ ವರಾಹಮಿಹಿರಾಚಾರ್ಯರು ಸಪ್ತರ್ಷಿಚಾರಾನಯನನಿರೂಪಕವಾದ ಪೂರ್ವೋಲ್ಲಿಖಿತ (೧ ನೇ) ಶ್ಲೋಕವನ್ನು ವೃದ್ಧಗರ್ಗಾಚಾರ್ಯರ ಮತವೆಂದು ಉಲ್ಲೇಖಿಸಿರುವುದು ಸ್ಪಷ್ಟವಿದೆ. ಗರ್ಗ ಎಂಬ ಹೆಸರಿನ ಆಚಾರ್ಯರೊಬ್ಬರು ಕ್ರಿ. ಪೂ. ೧೪೫ ರಲ್ಲಿ ಜೀವಿಸಿದ್ದರೆಂದು ತಜ್ಞರು ಅಭಿಪ್ರಾಯಪಟ್ಟಿರುವುದಾಗಿ ಸನ್ಮಾನ್ಯ ವೈದ್ಯರವರು ಹೇಳಿದ್ದಾರೆಯಲ್ಲದೆ ವೃದ್ಧಗರ್ಗಮುನಿಯು ಕ್ರಿ. ಪೂ. ೫ ನೇ ಶತಮಾನಕಾಲದಲ್ಲಿ ಜೀವಿಸಿದ್ದಿರಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ.[2] ಹೀಗೆ ಕನಿಷ್ಠಮಿತಿಯಿಂದ ಕ್ರಿ. ಪೂ. ೨ ನೇ ಶತಮಾನ ಕಾಲದಲ್ಲಿ ಜೀವಿಸಿದ್ದರೆಂದು ನಿರ್ಣಯಿಸಲಾಗಿರುವ ಗರ್ಗ ಆಚಾರ್ಯರ ಮತವೆನಿಸಿ ಉಲ್ಲಿಖಿತವಾಗಿರುವ ಶಕಕಾಲವು, ಕ್ರಿ. ಪೂ. ೧ ನೇ ಶತಮಾನದಲ್ಲಿ ಆರಂಭವಾಗಿದೆ

---

1 'ಪಟ್ಟಾವಲೀ ಅಫ್ ದಿ ತಪಾಗಚ್ಛ'–ಇಂಡಿಯನ್ ಆಂಟಿಕ್ವೆರಿ–ವಾಲ್ಯೂಂ XI–ಪು. ಸಂ. ೨೫೧.

2 'ದಿ ಮಹಾಭಾರತ ಎ ಕ್ರಿಟಿಸಿಜಂ'–ಪು. ಸಂ. ೧೭–ವಿ. ಸೂ. ಈ ಕೃತಿಯ ಪು. ಸಂ. ೬೮ ರಲ್ಲಿ ಬೃ. ಸಂಹಿತೆಯ ಪೂರ್ವೋಲ್ಲಿಖಿತ (೧ ನೇ) ಶ್ಲೋಕದಲ್ಲಿ ನಿರ್ದೇಶಿತವಾಗಿರುವ ಶಕಕಾಲದ ವಿಷಯವಾಗಿ ಮಂಡಿಸಲಾಗಿರುವ ಅಭಿಪ್ರಾಯವನ್ನೂ ಗಮನಿಸಬಹುದು.

ಯೆಂದುನಿರ್ಣಯಿಸಲಾಗಿರುವ ವಿಕ್ರಮಶಕೆಯ ನಿರ್ದೇಶಕವಾಗಲಾರದೆಂದು ನಿಶ್ಚಿತ ವಾಗುವುದು. ಆದ್ದರಿಂದ ಮೇಲ್ಕಂಡ (೧ ನೇ) ಶ್ಲೋಕದಲ್ಲಿ ನಿರ್ದೇಶಿತವಾಗಿರುವ ಶಕ ಕಾಲವು ಯಾವುದಾಗಿದೆಯೆಂಬುದನ್ನು ಖಚಿತವಾಗಿ ಗುರುತಿಸಿದಲ್ಲದೆ, ಈ ಶ್ಲೋಕ ವನ್ನು ಸುಸಂಗತರೀತಿಯಿಂದ ಅರ್ಥವಿಸಲಾಗುವುದಿಲ್ಲ.

೨) ಯುಧಿಷ್ಠಿರನ ರಾಜ್ಯಭಾರಕಾಲದಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿ ಅಧಿಷ್ಠಿತರಾಗಿದ್ದರೆಂದು ಹೇಳಿ, ೨೫೨೬ ವರ್ಷಗಳನ್ನು ಶಕಕಾಲದೊಡನೆ ಸಂಯೋಜ ಸಿದಲ್ಲಿ ವರ್ತಮಾನಕಾಲಪರ್ಯಂತ ಆಗುವ ಗತಕಾಲವು ಸ್ಫುಟವಾಗುವುದೆಂದು ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ಇದರಂತೆ ಯುಧಿಷ್ಠಿರನ ಕಾಲ ಮತ್ತು ಶಕಕಾಲ ಗಳ ಮಧ್ಯವರ್ತಿಯಾಗಿ ೨೫೨೬ ವರ್ಷಗಳ ಅಂತರವಿರುವುದಾಗಿ ನಿರ್ದೇಶಿತವಾಗು ವುದು. ಆದರೆ ಸಪ್ತರ್ಷಿಗಳು ಪ್ರತಿಯೊಂದು ನಕ್ಷತ್ರದಲ್ಲಿಯೂ ಶತವರ್ಷಕಾಲ ಅಧಿ ಷ್ಠಿತರಾಗಿರುವರಾದ್ದರಿಂದ, ಇವರು ಯುಧಿಷ್ಠಿರನ ರಾಜ್ಯಭಾರದ ಆರಂಭಕಾಲಕ್ಕಾ ಗಲೇ ಮಘಾನಕ್ಷತ್ರವನ್ನು ಪ್ರವೇಶಿಸಿದ್ದರೆ? ಹಾಗೆ ಪ್ರವೇಶಿಸಿದ್ದಲ್ಲಿ ಆ ಸಮಯಕ್ಕೆ ಎಷ್ಟು ವರ್ಷಗಳು ಗತವಾಗಿದ್ದುವು? ಯುಧಿಷ್ಠಿರನ ರಾಜ್ಯಭಾರದ ಅಂತ್ಯಸಮಯ ದಲ್ಲಿಯೂ ಮಘಾನಕ್ಷತ್ರದಲ್ಲಿಯೇ ಅಧಿಷ್ಠಿತರಾಗಿದ್ದರೆ? ಯುಧಿಷ್ಠಿರನ ರಾಜ್ಯ ಭಾರಾರಂಭಸಮಯದೊಡನೆ ಮೇಲ್ಕಂಡ ೨೫೨೬ ಸಂಖ್ಯೆಯನ್ನು ಸಂಯೋಜಿಸಬೇಕೆ ಅಥವಾ ಅವನ ರಾಜ್ಯಭಾರಾಂತ್ಯಸಮಯದೊಡನೆಯೆ? ಎಂಬ ಪ್ರಶ್ನೆಗಳು ಬಗೆಹರಿ ಯದೆ ಯಾವುದಾದರೊಂದು ದತ್ತಕಾಲಾಪೇಕ್ಷೆಯಿಂದ ಸಪ್ತರ್ಷಿಚಾರವನ್ನು ನಿಸ್ಸಂದಿ ಗ್ಧವಾಗಿ ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಹೀಗೆ ದತ್ತಕಾಲಾಪೇಕ್ಷೆಯಿಂದ ಸಪ್ತರ್ಷಿಚಾರವನ್ನು ನಿರ್ಣಯಿಸಲು ಅತ್ಯಾವಶ್ಯಕವೆನಿಸಿವ ಈ ಅಂಶವನ್ನು ಕುರಿತು ವ್ಯಾಖ್ಯಾನದಲ್ಲಿಯೂ ವಿವರಣೆಯಿಲ್ಲವಾಗಿದೆಯಾದುದರಿಂದ ಶ್ಲೋಕದ ಉದ್ದಿಷ್ಟಾ ರ್ಥವು ಸಂದಿಗ್ಧತಾವಶವಾಗಿ ಉಳಿಯುವಂತಾಗಿದೆ.

ಈ ಮೇಲ್ಕಂಡಂತೆ ಬೃಹತ್ಸಂಹಿತೆಯ ಪೂರ್ವೋಲ್ಲಿಖಿತವಾದ (೧ನೇ) ಶ್ಲೋಕದ ಉದ್ದಿಷ್ಟಾರ್ಥವು ಸಂದಿಗ್ಧತಾವಶವಾಗಿರುವಂತೆ ಕಂಡುಬರುವುದಾದರೂ ಯಾವುದಾದ ರೊಂದು ದತ್ತಕಾಲಾಪೇಕ್ಷೆಯಿಂದ ಸಪ್ತರ್ಷಿಚಾರವನ್ನು ನಿರ್ಣಯಿಸುವ ಕ್ರಮವು ಈ ಶ್ಲೋಕದಲ್ಲಿ ನಿರ್ದೇಶಿತವಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಅಂತೆಯೇ ಯುಧಿ ಷ್ಠಿರನ ಕಾಲವನ್ನು ಖಚಿತವಾಗಿ ನಿರ್ದೇಶಿಸುವ ಅಂಶವಾಗಲೀ ಅಥವಾ ಇವನ ಕಾಲ ದಲ್ಲಿ ಮಘಾನಕ್ಷತ್ರಾಧಿಷ್ಠಿತರಾಗಿದ್ದ ಸಪ್ತರ್ಷಿಗಳು ಷಡ್‌ದ್ವಿಕಪಂಚದ್ವಿಯುತವಾದ (= ೨೫೨೬ ವರ್ಷಗಳ ಅನಂತರದ) ಶಕಕಾಲದಲ್ಲಿ ಯಾವನಕ್ಷತ್ರದಲ್ಲಿ ಅಧಿಷ್ಠಿತ ರಾಗಿದ್ದರೆಂಬುದಾಗಲಿ ನಿರ್ದೇಶಿತವಾಗದೆ ದತ್ತಕಾಲವೊಂದರ ಅಪೇಕ್ಷೆಯಿಂದ ಸಪ್ತ ರ್ಷಿಚಾರವನ್ನು ನಿರ್ಣಯಿಸಲಾಗುವುದಿಲ್ಲವಾದ್ದರಿಂದ ಈ ಅಂಶವು ಈ ಶ್ಲೋಕದಲ್ಲಿ ನಿರ್ದೇಶಿತವಾಗಿರಲೇಬೇಕೆಂದು ಗ್ರಹಿಸಲವಕಾಶವಾಗುವುದು. ಈ ಶ್ಲೋಕದ

ನಾಲ್ಕನೇ ಪಾದದಲ್ಲಿರುವ 'ತಸ್ಯರಾಜ್ಞಶ್ಚ' ಎಂಬುದನ್ನು ವ್ಯಾಖ್ಯಾನದಲ್ಲಿ ಯುಧಿಷ್ಠಿರ ನೃಪತಿಯ ನಿರ್ದೇಶಕವಾಗಿ ಅನ್ವಯಗೊಳಿಸಲಾಗಿದೆ. ಆದರೆ ಈ ಅನ್ವಯದನು ಸಾರವಾಗಿ 'ತಸ್ಯರಾಜ್ಞಶ್ಚ' ಎಂಬುದರ ಅಂತ್ಯದಲ್ಲಿರುವ 'ಚ' ಕಾರವು ಸಮುಚಿತ ರೀತಿಯಿಂದ ಅರ್ಥಯುಕ್ತವಾಗುವುದಿಲ್ಲ. ಇಂತಲ್ಲದೆ, ಈ 'ತಸ್ಯರಾಜ್ಞಶ್ಚ' ಎಂಬುದನ್ನು 'ಶಕ' ಪದದೊಡನೆ ಅನ್ವಯಗೊಳಿಸಿದಲ್ಲಿ 'ಚ' ಕಾರವು ಸಮುಚಿತರೀತಿಯಿಂದ ಅರ್ಥಯುಕ್ತವಾಗುವುದಲ್ಲದೆ ಶ್ಲೋಕದ ಉದ್ದಿಷ್ಟಾರ್ಥವು ಸುಸಂಗತವಾಗಿ ಪರಿಸ್ಫುಟವಾಗುವುದು. ಇದರಂತೆ ಈ ಶ್ಲೋಕದ ಅನ್ವಯಕ್ರಮವು ಮುಂದಿನಂತಾಗುವುದು:

"ಯುಧಿಷ್ಠಿರೇ ನೃಪತೌ ಶಾಸತಿ (ಸತಿ) ಮುನಯಃ ಮಘಾಸು ಆಸ್ಸ |
ಷಡ್‌ದ್ವಿಕಪಂಚದ್ವಿಯುತಃ ಶಕಕಾಲಃ (ಭವತಿ) | ತಸ್ಯ (=ಶಕಸ್ಯ) ರಾಜ್ಞಃ (ಕಾಲೇ) ಚ ಮುನಯಃ ಮಘಾಸು ಆಸ್ಸ ||"

ಅರ್ಥ : ಯುಧಿಷ್ಠಿರನ ರಾಜ್ಯಭಾರಸಮಯದಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರಾಧಿಷ್ಠಿತರಾಗಿದ್ದರು. (ಈ ಸಮಯದಿಂದ) ಷಡ್‌ದ್ವಿಕಪಂಚದ್ವಿಯುತವಾದುದು ಶಕಕಾಲವಾಗುವುದು. ಆ (ಶಕ) ರಾಜನ (ಕಾಲದಲ್ಲಿಯೂ) ಕೂಡ ಸಪ್ತರ್ಷಿಗಳು ಮಘಾನಕ್ಷತ್ರಾಧಿಷ್ಠಿತರಾಗಿದ್ದರು.

ಈ ಅರ್ಥಕ್ರಮದಂತೆ, ಯುಧಿಷ್ಠಿರನ ರಾಜ್ಯಭಾರಕಾಲದಲ್ಲಿ ಮಘಾನಕ್ಷತ್ರಾಧಿಷ್ಠಿತರಾಗಿದ್ದ ಸಪ್ತರ್ಷಿಗಳು ಮುಂದೆ ಮಘಾನಕ್ಷತ್ರಾನಂತರವರ್ತಿಗಳಾದ ಪುಬ್ಬೆ ಮೊದಲಾಗಿ ಆಶ್ರೇಷೆನಕ್ಷತ್ರಪರ್ಯಂತದ ಎಲ್ಲಾ ೨೭ ನಕ್ಷತ್ರಗಳಲ್ಲಿಯೂ ಅನುಕ್ರಮವಾಗಿ ಶತವರ್ಷಕ್ರಮದಿಂದ ಅಧಿಷ್ಠಿತರಾಗಿದ್ದು ಶಕರಾಜನಕಾಲದಲ್ಲಿ ಪುನಃ ಮಘಾನಕ್ಷತ್ರವನ್ನು ಪ್ರವೇಶಿಸಿ ಅದರಲ್ಲಿ ಅಧಿಷ್ಠಿತರಾಗಿದ್ದರೆಂದು ಫಲಿತವಾಗುವುದು. ಯುಧಿಷ್ಠಿರನ ರಾಜ್ಯಭಾರಕಾಲದಲ್ಲಿ ಮಘಾನಕ್ಷತ್ರಾಧಿಷ್ಠಿತರಾಗಿದ್ದ ಸಪ್ತರ್ಷಿಗಳು, ಮುಂದೆ ೨೭ ನಕ್ಷತ್ರಗಳಲ್ಲಿ ಪ್ರತಿಯೊಂದರಲ್ಲಿಯೂ ನೂರು ನೂರು ವರ್ಷಾವಧಿಕ್ರಮದಲ್ಲಿ ಅಧಿಷ್ಠಿತರಾಗಿದ್ದು, ತದನಂತರ ಮರಳಿ ಎರಡನೆಯಬಾರಿಗೆ ಶಕರಾಜನಕಾಲದಲ್ಲಿ ಮಘಾನಕ್ಷತ್ರಾಧಿಷ್ಠಿತರಾಗಿರುವರಾದ್ದರಿಂದ, ಯುಧಿಷ್ಠಿರನ ಕಾಲ ಹಾಗೂ ಶಕರಾಜನ ಕಾಲಗಳ ಮಧ್ಯೆ ಕನಿಷ್ಠಮಿತಿಯಿಂದ (೧೦೦ × ೨೭=) ೨೭೦೦ ವರ್ಷಗಳ ಮತ್ತು ಗರಿಷ್ಠಮಿತಿಯಿಂದ (೧೦೦ × ೨೭=) ೨೭೦೦ ವರ್ಷಗಳ ಅಂತರವಿರಬೇಕೆಂದು ನಿರ್ದೇಶಿತವಾಗುವುದು. ಆದ್ದರಿಂದ ಈ ಅಂತರಕಾಲವನ್ನು ಪೂರ್ವೋಲ್ಲಿಖಿತವಾದ (೧ ನೇ) ಶ್ಲೋಕದಲ್ಲಿ 'ಷಡ್‌ದ್ವಿಕಪಂಚದ್ವಿಯುತಃ' ಎಂಬ ಅಂಕ ಸಮುಚ್ಚಯದಿಂದ ನಿರ್ದೇಶಿಸಲಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಈ ಅಂಕಸಮುಚ್ಚಯವನ್ನು ಪೂರ್ವೋಲ್ಲಿಖಿತವಾದ ವ್ಯಾಖ್ಯಾನದಲ್ಲಿ '೨೫೨೬' ಎಂಬ ಸಂಖ್ಯಾವಾಚಕವನ್ನಾಗಿ ಅರ್ಥವಿಸಲಾಗಿದೆ. 'ಅಂಕಾನಾಂ ವಾಮತೋ ಗತಿಃ' ಎಂಬ ನಿಯಮಾನುಸಾರವಾಗಿ 'ಷಡ್‌ದ್ವಿಕಪಂಚದ್ವಿ' ಎಂಬ ಅಂಕಸಮುಚ್ಚಯವು '೨೫೨೬' ಎಂಬ ಸಂಖ್ಯಾ

ವಾಚಕವಾಗುವುದೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ಅಂಕಸಮುಚ್ಚಯದಲ್ಲಿ ಮೊದಲಿನ 'ಷಡ್‌ದ್ವಿ' ಎಂಬ ಅಂಕದ್ವಯವು 'ಕ' ಪ್ರತ್ಯಯಾಂತವಾಗಿ ('ಷಡ್‌ದ್ವಿಕಃ' ಎಂಬುದಾಗಿ) ಪ್ರಯುಕ್ತವಾಗಿದೆಯಾಗಿ ಈ 'ಕ' ಪ್ರತ್ಯಯವು ವಿಶಿಷ್ಟಾರ್ಥಸೂಚಕ ವಾಗಿ ಸಂಯೋಜಿತವಾಗಿದೆಯೆಂದು ಗ್ರಹಿಸಲಕಾಶವಿದೆ. 'ಕ' ಪ್ರತ್ಯಯಾಂತ್ಯವಾದ ಸಂಖ್ಯೆಯು ವಿಶಿಷ್ಟಾರ್ಥಯುಕ್ತವಾಗಿಯೇ ಇರುವುದೆಂಬ ನಿಯಮವು ಕಂಡುಬರು ವುದಿಲ್ಲವಾದರೂ ಕೆಲವೊಮ್ಮೆ ಈ ಮುಂದಿನಂತೆ ವಿಶಿಷ್ಟಾರ್ಥಯುಕ್ತಗಳಾಗಿ ಪ್ರಯುಕ್ತ ವಾಗಿರುವುದು ಕಂಡಬರುತ್ತದೆ.

೧) 'ಕ' ಪ್ರತ್ಯಯಾಂತ್ಯವಾದ ಸಂಖ್ಯೆಯು ಗುಣಕಾರ್ಥಯುಕ್ತವಾಗಿ ರುವುದು ಕಂಡುಬರುತ್ತದೆ. ಅಂತೆಯೇ 'ಷಡ್‌ದ್ವಿಕ' ಎಂಬುದು (೬ × ೨=) '೧೨' ಎಂಬ ಸಂಖ್ಯಾವಾಚಕವಾಗಬಹುದು.

೨) 'ಸಂಖ್ಯಾಯಾ: ಸಂಜ್ಞಾಸ-ಘಸೂತ್ರಾಧ್ಯಯನೇಷು' [ಅಷ್ಟಾ ಧ್ಯಾಯಿ–೫-೧-೫೮] ಎಂಬ ಸೂತ್ರದ ನಿಯಮಾನುಸಾರ 'ಕ' ಪ್ರತ್ಯಯಾಂತ್ಯ ವಾದ ಸಂಖ್ಯೆಗಳು 'ಸಂಘ' ಅಂದರೆ ಸಮುಚ್ಚಯಾರ್ಥದ ವಾಚಕಗಳಾಗು ವುವು. ಉದಾಹರಣೆಗಾಗಿ ಅಷ್ಟಕ, ದಶಕ ಮತ್ತು ಶತಕ ಎಂಬ ಸಂಖ್ಯೆಗಳು ಅನುಕ್ರಮವಾಗಿ ಎಂಟು, ಹತ್ತು ಮತ್ತು ಒಂದುನೂರು ಎಂಬ ಸಂಖ್ಯೆಗಳ ಸಮುಚ್ಚಯಾರ್ಥವಾಚಕಗಳಾಗುವುವು.

ಈ ರೀತಿಯಾಗಿ ಮೇಲ್ಕಂಡ ಎರಡನೆಯ ವಿಶಿಷ್ಟಾರ್ಥದನುಸಾರವಾಗಿ 'ಕ' ಪ್ರತ್ಯಯಾಂತವಾದ 'ಷಡ್‌ದ್ವಿ' ಎಂಬ ಅಂಕದ್ವಯವು ಸಮುಚ್ಚಯಾರ್ಥವಾಚಕ ವಾಗಿ ಪ್ರಯುಕ್ತವಾಗಿರಬಹುದೆಂದು ಗ್ರಹಿಸಲವಕಾಶವಾಗುವುದು. ಇದರಂತೆ 'ಷಡ್ ದ್ವಿಕ' ಎಂಬ ಅಂಕದ್ವಯವನ್ನು 'ಅಂಕಾನಾಂ ವಾಮತೋ ಗತಿಃ' ಎಂಬ ನಿಯಮಾನು ಸಾರ ಸಂಖ್ಯೆಯನ್ನಾಗಿ ಪರಿವರ್ತಿಸಿದಲ್ಲಿ 'ಷಡ್ವಿಂಶತಿಕ' (ಷಡ್ವಿಂಷತಿ = ೨೬) ಎಂಬ ಸಮುಚ್ಚಯಾರ್ಥದ ಸಂಖ್ಯೆಯಾಗಿ ರೂಪಿತವಾಗುವುದು. ಈ ಸಂಖ್ಯಾಸಮುಚ್ಚ ಯವು 'ಪಂಚದ್ವಿ' ಎಂಬ ಅಂಕದ್ವಯದಿಂದ ನಿಷ್ಪನ್ನವಾಗುವ '೨೫' ಎಂಬ ಸಂಖ್ಯೆ ಯಿಂದ ಸಂಯುತವಾದಲ್ಲಿ ಫಲಿತಾಂಶವಾಗಿ '೨೬೨೫' ಎಂಬ ಸಂಖ್ಯೆಯು ಲಬ್ಧವಾಗು ವುದು. ಇದರಂತೆ, ಪೂರ್ವೋಲ್ಲಿಖಿತವಾದ (೧ ನೇ) ಶ್ಲೋಕದಲ್ಲಿ ಯುಧಿಷ್ಠಿರನಕಾಲ ಮತ್ತು ಶಕರಾಜನ ಕಾಲಗಳ ಮಧ್ಯವರ್ತಿಯಾಗಿ ೨೬೨೫ ವರ್ಷಗಳ ಅಂತರಕಾಲವು ನಿರ್ದೇಶಿತವಾಗಿದೆಯೆಂದು ಅಧಿಗತವಾಗುವುದು.

ಪೂರ್ವೋಲ್ಲಿಖಿತವಾದ ವ್ಯಾಖ್ಯಾನದಲ್ಲಿ ವೃದ್ಧಗರ್ಗಮುನಿಮತವೆಂದು ಉಲ್ಲೇ ಖಿಸಲಾಗಿರುವ (೨ ನೇ) ಶ್ಲೋಕದಲ್ಲಿ ಕಲಿ ಮತ್ತು ದ್ವಾಪರಯುಗಗಳ ಸಂಧಿಕಾಲ ದಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರಾಧಿಷ್ಠಿತರಾಗಿದ್ದರೆಂದು ಹೇಳಲಾಗಿರುವುದನ್ನು

ಗಮನಿಸಬಹುದು. ಹಿಂದೆ ಉಲ್ಲೇಖಿಸಲಾಗಿರುವ ಪುರಾಣೋಕ್ತಿಯಾಧಾರದಿಂದ ಯುಧಿಷ್ಠಿರನ ರಾಜ್ಯಭಾರವು ಅಂತ್ಯಗೊಂಡು ಪರಿಕ್ಷಿದ್ರಾಜನ ರಾಜ್ಯಭಾರವು ಆರಂಭವಾದ ಸಮಯವು ಕಲಿ ಮತ್ತು ದ್ವಾಪರಯುಗಗಳ ಸಂಧಿಕಾಲವಾಗಿದೆಯೆಂದು ಗುರುತಿಸಬಹುದಾಗಿದೆ. ಇಷ್ಟಲ್ಲದೆ ಪರಿಕ್ಷಿದ್ರಾಜನ ಕಾಲದಲ್ಲಿಯೂ ಸಪ್ತರ್ಷಿಗಳು ಮಘಾನಕ್ಷತ್ರಾಧಿಷ್ಠಿತರಾಗಿದ್ದರೆಂದು ಪುರಾಣಗಳ ಹೇಳಿಕೆಯಿಂದ ನಿರ್ದೇಶಿತವಾಗುವುದು.[1] ಈ ಕಾರಣಗಳಿಂದ ಪೂರ್ವೋಲ್ಲಿಖಿತ (ವೃದ್ಧಗರ್ಗಮತ) ವಾದ ೧ ನೇ ಶ್ಲೋಕದಲ್ಲಿ ನಿರ್ದೇಶಿತವಾಗಿರುವ 'ಷಡ್ದ್ವಿಕಪಂಚದ್ವಿಯುತ' ವರ್ಷವೃಂದವು ಯುಧಿಷ್ಠಿರನ ರಾಜ್ಯಭಾರಾಂತ್ಯಸಮಯ (=ಕಲಿಯುಗದ ಆರಂಭಸಮಯ) ಮತ್ತು ಶಕಕಾಲದ ಆರಂಭಸಮಯಗಳ ಮಧ್ಯವರ್ತಿ ಅಂತರಕಾಲದ ನಿರ್ದೇಶಕವಾಗಿರುವುದೆಂದು ಗ್ರಹಿಸಲವಕಾಶವಾಗುವುದು. ಐಹೊಳೆಶಾಸನ ಹಾಗೂ ಸದ್ಯ ಪ್ರಚಲಿತವಿರುವ ಪಂಚಾಂಗಗಳ ನಿರ್ದೇಶನಾನುಸಾರವಾಗಿ ಕಲಿಯುಗವು ಕ್ರಿ. ಪೂ. ೩೧೦೦-೧ ರಲ್ಲಿ ಆರಂಭವಾಗಿದೆಯೆಂದು ವಿದ್ವಜ್ಜನರಿಂದ ನಿರ್ಣೀತವಾಗಿರುವುದು ವಿದಿತವಿದೆ.[2] ಇದರಿಂದ ಬೃಹತ್ಸಂಹಿತೆಯ ಪೂರ್ವೋಲ್ಲಿಖಿತವಾದ ೧ ನೇ ಶ್ಲೋಕದಲ್ಲಿ ನಿರ್ದೇಶಿತವಾಗಿರುವ ಶಕಕಾಲವು ಕ್ರಿ. ಪೂ. (೩೧೦೦—೨೬೨೫)=೪೭೫ ರಲ್ಲಿ ಆರಂಭವಾಗಿದೆಯೆಂದು ಫಲಿತವಾಗುವುದು. ಈ ಫಲಿತಾಂಶದಂತೆ, ಯುಧಿಷ್ಠಿರನ ರಾಜ್ಯಭಾರಾಂತ್ಯಸಮಯ ಅಥವಾ ಕಲಿಯುಗದ ಆರಂಭಸಮಯಕ್ಕೆ ಸಪ್ತರ್ಷಿಗಳು ಮಘಾನಕ್ಷತ್ರವನ್ನು ಪ್ರವೇಶಿಸಿ ೭೫ ವರ್ಷಗಳು ಗತಿಸಿದ್ದುವೆಂದೂ, ಮುಂದೆ ಅವರು ಪರಿಕ್ಷಿದ್ರಾಜನ ರಾಜ್ಯಭಾರ ಕಾಲದಲ್ಲಿ ೨೫ ವರ್ಷಕಾಲ ಅದೇ ನಕ್ಷತ್ರದಲ್ಲಿ ಅಧಿಷ್ಠಿತರಾಗಿದ್ದರೆಂದೂ, ತದನಂತರ ಅವರು ಪುಷ್ಯೆಯಾದಿ ಆಶ್ರೇಷೆನಕ್ಷತ್ರಪರ್ಯಂತದ ೨೬ ನಕ್ಷತ್ರಗಳಲ್ಲಿ ಅನುಕ್ರಮವಾಗಿ ಶತವರ್ಷಕ್ರಮದಿಂದ ಅಧಿಷ್ಠಿತರಾಗಿದ್ದು, ಕ್ರಿ. ಪೂ. ೪೭೫ ರಲ್ಲಿ ಪುನಃ ಮಘಾನಕ್ಷತ್ರವನ್ನು ಪ್ರವೇಶಿಸಿದರೆಂದು ಸ್ಫುಟಗೊಳ್ಳುವುದು.

ನಂದ (=ನಂದಿವರ್ಧನ) ನು ಶ್ರೀ ವೀರನಿರ್ವಾಣಪಶ್ಚಾತ್ ೫೨ ವರ್ಷಗಳ ತರುವಾಯದಲ್ಲಿ ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾದನೆಂದು ಹಿಂದೆ ಪ್ರತಿಪಾದಿಸ

---

1 ತೇ ತು ಪಾರಿಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ ॥ ೧೦೬ ॥
ವಿಷ್ಣುಪುರಾಣ—ಅ. ೨೪ ; ವಾಯು, ಬ್ರಹ್ಮಾಂಡ ಮತ್ತು ಭಾಗವತ ಪುರಾಣಗಳಲ್ಲಿಯೂ ಇದೇ ಅರ್ಥದ ಹೇಳಿಕೆಗಳಿವೆ.

2 'ಐಹೊಳೆಶಾಸನದಲ್ಲಿ ಭಾರತಯುದ್ಧದಿಂದೀಚಿನ ಕಲಿಯಲ್ಲಿ ೩೭೩೫ ವರ್ಷಗಳು ಹಾಗೂ ಶಕಕಾಲದ ೫೫೬ ವರ್ಷಗಳು ಕಳೆದಿರಲು' ಎಂದು ಹೇಳಲಾಗಿರುವುದರ ಆಧಾರದಿಂದ ಮತ್ತು ಶಾಲಿವಾಹನಶಕೆಯು ಕ್ರಿ. ಶ. ೭೮ ನೇ ವರ್ಷದ ಮಾರ್ಚಿ-ಏಪ್ರಿಲ್ ಮಾಹೆಯಲ್ಲಿ ಆರಂಭವಾಗಿದೆಯಾದ್ದರಿಂದ ಕಲಿಶಕೆಯು ಕ್ರಿ. ಪೂ. [೩೭೩೫—(೫೫೬+೭೮)=] ೩೧೦೦ ರಲ್ಲಿ ಆರಂಭವಾಗಿದೆಯೆಂದು ಪರಿಗಣಿತವಾಗುವುದು.

ಲಾಗಿದೆ. ಶ್ರೀ ವೀರನಿರ್ವಾಣಪಶ್ಚಾತ್ [೬೦೫ ವರ್ಷ ಮತ್ತು ೫ ತಿಂಗಳು=] ೬೦೬ ನೇ ವರ್ಷದಲ್ಲಿ ಯಾವ ಒಂದು ಶಕಕಾಲವು ಆರಂಭವಾಯಿತೆಂದು ದಿಗಂಬರ ಜೈನ ಆಮ್ನಾಯದ ಕೃತಿಗಳಲ್ಲಿ ನಿರ್ದೇಶಿತವಾಗಿರುವುದೋ ಅದು ಶಾಲಿವಾಹನಶಕೆಯಾಗಿದೆ ಯೆಂದು ವಿದ್ವಜ್ಜನರು ಅಭಿಪ್ರಾಯಪಟ್ಟಿದ್ದಾರೆ.[1] ಇದರಂತೆ ಶಾಲಿವಾಹನಶಕ ಪೂರ್ವ ೬೦೬ ನೇ ವರ್ಷದ ಕಾರ್ತಿಕಮಾಸದಾದಿಯಲ್ಲಿ ಅರ್ಥಾತ್ ಕ್ರಿ. ಪೂ. (೫೨೬ ವರ್ಷ ೨ ತಿಂಗಳು =) ೫೨೮ ನೇ ಇಸವಿ ನವಂಬರ್ ಮಾಹೆಯಾರಂಭಸಮಯದಲ್ಲಿ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿರುವನೆಂದು ಫಲಿತವಾಗುವುದು. ಅಂತೆಯೇ ಈ ಪರಿಗಣನೆಯಂತೆ ನಂದರಾಜನು ಕ್ರಿ. ಪೂ. (೫೨೮ – ೫೩[2] =) ೪೭೫ ರಲ್ಲಿ ಅವಂತೀರಾಜ್ಯಾಧೀಶನಾಗಿ ಅಭಿಷಿಕ್ತನಾಗಿರುವನೆಂದು ಸ್ಫುಟಗೊಳ್ಳುವುದು. ಹೀಗೆ ನಂದರಾಜನ ರಾಜ್ಯಾಭಿಷೇಕವು ನಡೆದಿರುವ ಈ ವರ್ಷದಲ್ಲಿಯೇ, ಹಿಂದೆ ಪ್ರತಿಪಾದಿಸ ಲಾಗಿರುವಂತೆ, ಸಪ್ತರ್ಷಿಗಳು ಮಘಾನಕ್ಷತ್ರವನ್ನು ಪ್ರವೇಶಿಸಿದ್ದಾರೆಂಬುದು ಪ್ರಸಕ್ತ ಪ್ರಸಂಗದ ದೃಷ್ಟಿಯಿಂದ ಗಮನಾರ್ಹವಾದ ಅಂಶವಾಗಿದೆ. 'ನಂದರಾಜನ ಸಮಯ ದಾರಭ್ಯ ಕಲಿಯ ಗತಿವೃದ್ಧಿಯಾಗುವುದು' ಎಂಬರ್ಥದ ಹೇಳಿಕೆಯು ಪುರಾಣಗಳಲ್ಲಿ ಇದೆಯೆಂದು ಹಿಂದೆ ಉಲ್ಲೇಖಿಸಲಾಗಿದೆ. ಕಲಿಯುಗದ ಆರಂಭಸಮಯದಲ್ಲಿ ಮಘಾನಕ್ಷತ್ರಾಧಿಷ್ಠಿತರಾಗಿದ್ದ ಸಪ್ತರ್ಷಿಗಳು ನಂದರಾಜನ ರಾಜ್ಯಾಭಿಷೇಕವು ನಡೆದ (ಕ್ರಿ. ಪೂ. ೪೭೫ ನೇ) ವರ್ಷದಲ್ಲಿ ಪುನಃ ಅದೇ ನಕ್ಷತ್ರದಲ್ಲಿ ಅಧಿಷ್ಠಿತರಾದುದರಿಂದ ಈ ಸಮಯದಾರಭ್ಯ ಕಲಿಯಗತಿವೃದ್ಧಿಯಾಯಿತೆಂಬ ಪರಿಗಣನೆಯಾಗಿದೆಯೆಂದು ವ್ಯಕ್ತ ವಾಗುವುದು. ಇದರಿಂದ ನಂದರಾಜನ ರಾಜ್ಯಭಾರಾಂಭಸಮಯವನ್ನೇ ಬೃಹತ್ಸಂ ಹಿತೆಯ ಪೂರ್ವೋಲ್ಲಿಖಿತವಾದ (೧ ನೇ) ಶ್ಲೋಕದಲ್ಲಿ 'ಶಕಕಾಲ' ವೆಂಬುದಾಗಿ

---

1 ಈ ವಿಷಯವನ್ನು ಕುರಿತು ಮುಂದೆ ವಿಶೇಷ ವಿವರಣೆ ಮಂಡಿಸಲಾಗುವುದು.

2 ಶ್ರೀ ವೀರನಿರ್ವಾಣಸಮಯವನ್ನು ಸ್ಥೂಲದೃಷ್ಟಿಯಿಂದ 'ಕ್ರಿ. ಪೂ. ೫೨೭' ಎಂದು ಗಣನೆಮಾಡಿದಲ್ಲಿ, ನಂದರಾಜನು ಅಭಿಷಿಕ್ತನಾಗುವ ಸಮಯಕ್ಕೆ ಗತವರ್ಷಗಳೆ ನ್ನಿಸಿಕೊಳ್ಳುವ ಪಂಚಪ್ರಾದ್ಯೋತರ ಆಳ್ವಿಕೆಯ ಒಟ್ಟುಕಾಲ ೫೨ ವರ್ಷಗಳನ್ನು ಕಳೆಯ ಬೇಕಾಗುವುದು. ಅಂತೆಯೇ ನಂದರಾಜನು ಕ್ರಿ. ಪೂ. (೫೨೭ – ೫೨ =) ೪೭೫ ರಲ್ಲಿ ಅಭಿಷಿಕ್ತನಾಗಿರುವನೆಂದು ಪರಿಗಣಿತವಾಗುವುದು. ಇಂತಲ್ಲದೆ ಶ್ರೀ ವೀರನಿರ್ವಾಣವು ಯಥಾವತ್ತಾಗಿ ಕ್ರಿ. ಪೂ. ೫೨೮ ನೇ ಇಸವಿಯಲ್ಲಾಗಿದೆಯೆಂಬ ಗಣನೆಯಾಧಾರದಿಂದ ಇತರ ಕಾಲಮಾನಗಳನ್ನು ನಿರ್ಣಯಿಸುವ ಸಂದರ್ಭಗಳಲ್ಲಿ ಗತವರ್ಷಗಳನ್ನು ಕಳೆಯದೆ ಆ ಸಮಯಕ್ಕೆ ಸಲ್ಲುವ ಒಟ್ಟು ವರ್ಷಗಳನ್ನು ಕಳೆಯಬೇಕಾಗುವುದು. ಉದಾಹರಣೆ ಗಾಗಿ ನಂದರಾಜನು ಶ್ರೀ ವೀರನಿರ್ವಾಣಸಮಯದಿಂದ ೫೩ ನೇ ವರ್ಷದಲ್ಲಿ ಅಭಿಷಿಕ್ತ ನಾಗಿರುವನಾದ್ದರಿಂದ, ಇವನ ರಾಜ್ಯಾಭಿಷೇಕವು ಕ್ರಿ. ಪೂ. (೫೨೮ – ೫೩ =) ೪೭೫ ರಲ್ಲಾಗಿದೆಯೆಂದು ಪರಿಗಣಿತವಾಗುವುದು.

ನಿರ್ದೇಶಿಸಲಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ, ಈ ಶ್ಲೋಕದ ಆಧಾರದಿಂದ ಯಾವುದಾದರೊಂದು ದತ್ತಕಾಲಾಪೇಕ್ಷೆಯಿಂದ ಸಪ್ತರ್ಷಿಚಾರಾನಯನವನ್ನು ಈಗ ಸುಲಭವಾಗಿ ನಿರ್ಣಯಿಸಬಹುದಾಗಿದೆ. ಅಂತೆಯೇ ವರ್ತಮಾನ ಕಾಲಾಪೇಕ್ಷೆಯಿಂದ ಸಪ್ತರ್ಷಿಚಾರಾನಯನವು ಮುಂದಿನಂತಾಗುವುದು.

ಕ್ರಿ. ಪೂ. ೪೭೫ ರಿಂದ ವರ್ತಮಾನಕಾಲದ ಗತವರ್ಷಪರ್ಯಂತ (೪೭೫ + ೧೯೬೮=) ೨೪೪೩ ವರ್ಷಗಳಾಗುವುವು. ಈ ಸಂಖ್ಯೆಯನ್ನು ೧೦೦ ರಿಂದ ಭಾಗಿಸಿದಲ್ಲಿ ಭಾಗಲಬ್ಧವು ಭುಕ್ತನಕ್ಷತ್ರಗಳ ಸಂಖ್ಯೆಯಾಗಿಯೂ, ಶೇಷವು, ವರ್ತಮಾನ ಕಾಲದಲ್ಲಿ ಸಪ್ತರ್ಷಿಗಳು ಅಧಿಷ್ಠಿತರಾಗಿರುವ ನಕ್ಷತ್ರದಲ್ಲಿ ಕ್ರಿ. ಶ. ೧೯೬೮ ನೇ ಇಸವಿಯುವರೆವಿಗೆ ಭುಕ್ತವೆನಿಸುವ ವರ್ಷಗಳ ಸಂಖ್ಯೆಯಾಗಿಯೂ ಇರುವುದು. (೨೪೪೩ ÷ ೧೦೦= ಭಾಗಲಬ್ಧ ೨೪, ಶೇಷ ಶೇಷ ೪೩.) ಕ್ರಿ. ಪೂ. ೪೭೫ ರಲ್ಲಿ ಸಪ್ತರ್ಷಿಗಳು ಮಘಾನಕ್ಷತ್ರವನ್ನು ಪ್ರವೇಶಿಸಿದರಾದುದರಿಂದ ಈ ನಕ್ಷತ್ರದಾದಿಯಾಗಿ ಆದ್ರಾ ನಕ್ಷತ್ರಪರ್ಯಂತದ ೨೪ ನಕ್ಷತ್ರಗಳು ಭುಕ್ತವರ್ಷಗಳೆನಿಸುಕೊಳ್ಳುವುವು. ವರ್ತಮಾನಸಮಯದಲ್ಲಿ ಸಪ್ತರ್ಷಿಗಳು ಆದ್ರಾನಕ್ಷತ್ರಾನಂತರವರ್ತಿಯಾದ ಪುನರ್ವಸು ನಕ್ಷತ್ರಡಲ್ಲಿ ಅಧಿಷ್ಠಿತರಾಗಿದ್ದು, ೧೯೬೮ ನೇ ಇಸವಿಯಪರ್ಯಂತ ೪೪ ವರ್ಷಗಳು ಭುಕ್ತವೆನಿಸಿ, ಪ್ರವರ್ತಮಾನವಾದ ೧೯೬೯ ನೇ ಇಸವಿಯಲ್ಲಿ ೪೫ ನೇ ವರ್ಷವು ಭುಜ್ಯಮಾನವರ್ಷವಾಗಿ ನಡೆದಿದೆಯೆಂದು ಫಲಿತವಾಗುವುದಲ್ಲದೆ ಮುಂದೆ (೧೦೦ − ೪೪=) ೫೬ ವರ್ಷಕಾಲ ಅರ್ಥಾತ್, ಕ್ರಿ. ಶ. ೨೦೨೫ ನೇ ವರ್ಷದ ಪರ್ಯಂತ ಸಪ್ತರ್ಷಿಗಳು ಇದೇ ನಕ್ಷತ್ರದಲ್ಲಿ ಅಧಿಷ್ಠಿತರಾಗಿರುವರು. ತದನಂತರ ಪುಷ್ಯ ಮತ್ತು ಆಶ್ರೇಷನಕ್ಷತ್ರಗಳಲ್ಲಿ ಶತವರ್ಷಕ್ರಮದಿಂದ ಒಟ್ಟು ೨೦೦ ವರ್ಷಗಳು ಅತೀತವಾದ ತರುವಾಯ ಕ್ರಿ. ಶ. ೨೨೨೬ ರಲ್ಲಿ ಪುನಃ ಇವರು ಮಘಾನಕ್ಷತ್ರವನ್ನು ಪ್ರವೇಶಿಸುವರು.

ಬೃ. ಸಂಹಿತೆಯ ಪೂರ್ವೋಲ್ಲಿಖಿತಶ್ಲೋಕನಿರ್ದೇಶಿತವಾದ ಶಕಕಾಲದೊಡನೆ ನಂದರಾಜನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾದಸಮಯವು ಸಮಾಯುಕ್ತವಾಗುವುದೆಂದು ಮೇಲ್ಕಂಡ ವಿಚಾರಸರಣಿಯಿಂದ ವ್ಯಕ್ತಗೊಂಡಂತಾಗಿದೆ. ಆದರೆ ಇಲ್ಲಿ ಮತ್ತೊಂದು ಪ್ರಶ್ನೆಯುದ್ಭವಿಸುವುದು. ನಂದರಾಜನ ರಾಜ್ಯಾಭಿಷೇಕಸಮಯದಾಧಾರದಿಂದ ಪ್ರಚಲಿತವಾಯಿತೆನ್ನಲಾಗುವ ಈ ಕಾಲಗಣನೆಯನ್ನು ಬೃ. ಸಂಹಿತೆಯ ಪೂರ್ವೋಲ್ಲಿಖಿತಶ್ಲೋಕದಲ್ಲಿ 'ಶಕಕಾಲ' ವೆಂದು ಹೆಸರಿಸಿದೆಯೆಂದಾದರೆ, ವಿಕ್ರಮ ಮತ್ತು ಶಾಲಿವಾಹನರಂತೆ ನಂದರಾಜನನ್ನೂ ಶಕನೃಪನೆಂದು ಹೆಸರಿಸುವ ಪರಿಪಾಠವಿದ್ದಿತೇ ಎಂಬ ಪ್ರಶ್ನೆಯುದ್ಭವಿಸುವುದು. ಈ ಪ್ರಶ್ನೆಗೆ ಉತ್ತರವೆನಿಸುವ ವಿಸ್ಪಷ್ಟವಾದ ಪ್ರಾಚೀನೋಲ್ಲೇಖರೂಪದ ಆಧಾರಗಳಿಲ್ಲವೆಂಬುದು ನಿಜ. ಆದರೆ ವಿಕಲಿತ ರೀತಿಯಿಂದ ಅಸ್ಪಷ್ಟರೂಪದಲ್ಲಿ ಉಪಲಬ್ಧವಿರುವ ಪ್ರಾಚೀನೋಲ್ಲೇಖಗಳನ್ನು ಸಂಕಲನಮಾಡುವುದರಮೂಲಕ ಈ ಪ್ರಶ್ನೆಯನ್ನು ಬಗೆಹರಿಸಲವಕಾಶವಿದೆ.

ಶ್ರೀವೀರನಿರ್ವಾಣಸಮಯದಿಂದ ೬೦ ವರ್ಷಗಳು ಕಳೆದಿರಲು ನಂದನು ಮಗಧರಾಜ್ಯದ ಸಿಂಹಾಸನದಲ್ಲಿ ಅಧಿಷ್ಠಿತನಾದನೆಂದು ಪರಿಶಿಷ್ಟಪರ್ವದ ಹೇಳಿಕೆಯಿರುವುದು ತಿಳಿದ ವಿಷಯವಾಗಿದೆ. ಇಂತೆಯೇ ಇತರ ಶ್ವೇತಾಂಬರಜೈನಸಂಪ್ರದಾಯದ 'ಪಟ್ಟಾವಲಿ' ಎಂಬ ಹೆಸರಿನ ಇತಿವೃತ್ತರೂಪದ ಕೃತಿಗಳಲ್ಲಿ ಶ್ರೀ ವೀರನಿರ್ವಾಣಪಶ್ಚಾತ್ ೬೦ ವರ್ಷಗಳಪರ್ಯಂತ ಪಾಲಕರಾಜ್ಯಭಾರವಿದ್ದಿತೆಂದೂ ತದನಂತರ ೧೫೫ (ಅಥವಾ ೧೫೦) ವರ್ಷಕಾಲ ನಂದವಂಶಜರಾಜರು ರಾಜ್ಯಭಾರ ಮಾಡಿದರೆಂದೂ ನಿರ್ದೇಶಿಸಲಾಗಿದೆ.

ಸಟ್ಠೀ ಪಾಲಗರಣ್ಣೋ ಪಣಪಣ್ಣಸಯಂ ತು ಹೋದಿ ಣಂದಾಣಂ ||

[ತೀರ್ಥೋದ್ಧಾರ ಪ್ರಕರಣ]

ಪಾಲಗರಣ್ಣೋ ಸಟ್ಠಿ ಪುಣ ಪಣ್ಣಸಯಂ ವಿಯಾಣ ಣಂದಾಣಂ ||

[ತಿತ್ಥೋಗಾಲೀಪಇನ್ನಯ]

ಇದೇ ವಿಷಯವಾಗಿ ದಿಗಂಬರ-ಜೈನ ಆಮ್ನಾಯದ ಕೃತಿಗಳಲ್ಲಿ, ಶ್ರೀ ವೀರನಿರ್ವಾಣಸಮಯದಿಂದ ೬೦ ವರ್ಷಗಳ ಪರ್ಯಂತ ಪಾಲಕರಾಜ್ಯಭಾರವಿದ್ದಿತೆಂದು ಹೇಳಿ, ತದನಂತರ ೧೫೫ ವರ್ಷಕಾಲ 'ವಿಜಯ' ವಂಶಜರಾದ ರಾಜರು ರಾಜ್ಯಭಾರಮಾಡಿದರೆಂಬ ಹೇಳಿಕೆಯಿದೆ.

ಪಾಲಕರಜ್ಜಂ ಸಟ್ಠಿಂ ಇಗಿಸಯ ಪಣವಣ್ಣ ವಿಜಯವಂಸಭವಾ |

[ತಿಲೋಯಪಣ್ಣತ್ತಿ]

ಷಷ್ಟಿರ್ವರ್ಷಾಣಿ ತದ್ರಾಜ್ಯಂ ತತೋ ವಿಜಯಭೂಭುಜಾಂ |
ಶತಂ ಚ ಪಂಚ ಪಂಚಾಶದ್ವರ್ಷಾಣಿ ತದುದೀರಿತಂ ||

[ಹರಿವಂಶಪುರಾಣಂ]

ಹೀಗೆ ಶ್ವೇತಾಂಬರ ಜೈನ ಆಮ್ನಾಯದ ಕೃತಿಗಳಲ್ಲಿ ಕಂಡುಬರುವ 'ನಂದ' ಎಂಬ ಹೆಸರಿನ ಸ್ಥಾನದಲ್ಲಿ ದಿಗಂಬರ ಜೈನ ಆಮ್ನಾಯದ ಕೃತಿಗಳಲ್ಲಿ 'ವಿಜಯ' ಎಂಬ ಹೆಸರು ಪ್ರಯುಕ್ತ ವಾಗಿದೆಯಾದುದರಿಂದ, ನಂದರಾಜನನ್ನು 'ವಿಜಯ' ನೆಂದು ಹೆಸರಿಸುವ ಪರಿಪಾಠವೂ ಇದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು.

ಕನ್ನಡಸಾಹಿತ್ಯದ ಪ್ರಸಿದ್ಧ ಪ್ರಾಚೀನ ಗದ್ಯಕೃತಿಯೆನಿಸಿದ ವಡ್ಡಾರಾಧನೆಯ ಚಾಣಾಕ್ಯರಿಸಿಯ ಕಥೆಯಲ್ಲಿ ಪ್ರಸಂಗವಶದಿಂದ ನಂದರಾಜಸಂತತಿಯನ್ನು ಈ ಮುಂದಿನಂತೆ ಹೆಸರಿಸಲಾಗಿದೆ :

"........ನಂದಮಹಾರಾಜಂ ವಿಜಯನಂದನಂ ಸುನಂದನಂ ನಂದಿವರ್ಧನಂ ನಂದನಂ ಶ್ರೀನಂದನಂ ಪದ್ಮಂ ಮಹಾಪದ್ಮನೆಂದಿಂತು ಒಂಬತ್ತು ತಲೆವರೆಗಂ ಕ್ರಮಾಗತಂ........"

ಇನ್ನು ಪಾಠಾಂತರದನುಗುಣವಾಗಿ ಮೇಲಿನ 'ನಂದಮಹಾರಾಜಂ ವಿಜಯ ನಂದನಂ' ಎಂಬುದರ ಸ್ಥಾನದಲ್ಲಿ 'ನಂದಮಹಾರಾಜ ವಿಜಯನಂದಂ' ಎಂಬ ಹೆಸರಿದೆ. [ವಡ್ಡಾರಾಧನೆ-ಪು. ಸಂ. ೧೮೫-ಸಂಪಾದಕರು-ಶ್ರೀ ಡಿ. ಎಲ್. ನರಸಿಂಹಾಚಾರ್, ಎಂ. ಎ.]

ವಡ್ಡಾರಾಧನೆಯ ಮೇಲ್ಕಂಡ ವಾಕ್ಯದಲ್ಲಿ ಕಂಡುಬರುವಂತೆ ನಂದರಾಜನಾದಿಯಾಗಿ ಮಹಾಪದ್ಮನ ಪರ್ಯಂತ ಒಂಭತ್ತು ರಾಜರೆಂದು ಗಣನೆಮಾಡಲಾಗಿದೆಯಾದರೂ, ಎಂಟುಜನರ ಹೆಸರುಗಳು ಮಾತ್ರವಿರುವುದು ಸ್ಪಷ್ಟವಿದೆ. ಇದರಿಂದ ಮೇಲ್ಕಂಡ ನಾಮಾವಲಿಯು ಅಪೂರ್ಣವಿದೆಯೆಂದು ವ್ಯಕ್ತವಾಗುವುದು. ಇಷ್ಟಲ್ಲದೆ ನಂದರಾಜಸಂತತಿಯಲ್ಲಿ ಮಹಾನಂದ ಮತ್ತು ಧನನಂದ ಎಂಬ ಹೆಸರಿನ ಮತ್ತಿರ್ವರಾದರೂ ಇದ್ದಿರಬೇಕೆಂದು ಇತರ ಆಧಾರಗಳಿಂದ ನಿರ್ದೇಶಿತವಾಗುವುದು. ಆದರೆ ಮೇಲ್ಕಂಡ ನಾಮಾವಲಿಯಲ್ಲಿ ಈ ಇರ್ವರ ಹೆಸರುಗಳಿಲ್ಲದಿರುವುದು ಪ್ರತ್ಯಕ್ಷವಿದೆ. ಹೀಗೆ ಪ್ರಭ್ರಂಶರೂಪದಲ್ಲಿರುವ ಮೇಲ್ಕಂಡ ನಾಮಾವಲಿಯಲ್ಲಿ, ಪಾಠಾಂತರದಿಂದ ಸೂಚಿತವಾಗುವಂತೆ, 'ನಂದಮಹಾರಾಜವಿಜಯನಂದ(ನ)ಂ' ಎಂಬುದು ಏಕವ್ಯಕ್ತಿ ನಿರ್ದೇಶಕವಾದ ಹೆಸರಾಗಿದೆಯೆಂದೂ ಮತ್ತು ಇದು ನಂದರಾಜಸಂತತಿಯ ಮೂಲ ಪುರುಷನ ಹೆಸರಾಗಿದೆಯೆಂದೂ ಗ್ರಹಿಸಲವಕಾಶವಾಗುವುದು.

ನಂದರಾಜನನ್ನು 'ವಿಜಯನಂದ (ನ)' ಎಂಬ ಹೆಸರಿನಿಂದ ನಿರ್ದೇಶಿಸುವ ಪರಿಪಾಠವಿದ್ದಿತೆಂದು ಈ ಮೇಲಿನ ವಿಚಾರಸರಣಿಯಿಂದ ವ್ಯಕ್ತಪಟ್ಟಂತಾಗಿದೆ. ಇನ್ನು ವಿಜಯಾಭಿನಂದನ ಎಂಬುವನು ನಮ್ಮ ದೇಶದ ಪ್ರಾಚೀನ ಶಕಕಾರರಲ್ಲೊಬ್ಬನಾಗಿ ಪರಿಗಣಿತನಾಗಿರುವನೆಂದು ಈ ಮುಂದಿನ ಶ್ಲೋಕದ ಹೇಳಿಕೆಯಿಂದ ವ್ಯಕ್ತವಾಗುವುದು :

> ಯುಧಿಷ್ಠಿರೋ ವಿಕ್ರಮಶಾಲಿವಾಹನೋ ನರಾಧಿನಾಥೋ ವಿಜಯಾಭಿ-
> ನಂದನಃ।
> ಇಮೇ ತು ನಾಗಾರ್ಜುನಮೇದಿನೀವಿಭುರ್ಬಲೀಕ್ರಮಾತ್ ಷಟ್‌ಶಕ-
> ಕಾರಕಾ ಕಲೌ॥

ಸನ್ಮಾನ್ಯರಾದ ಶ್ರೀ ರಾಜಬಲಿಪಾಂಡೆ, ಎಂ. ಎ., ಡಿ. ಲಿಟ್. ರವರ 'ವಿಕ್ರಮಾದಿತ್ಯ ಆಫ್ ಉಜ್ಜಯಿನೀ' ಎಂಬ ಕೃತಿಯ (ಪು. ಸಂ. ೧೦೩ – ಅ. ಟಿ. ೩ ರ) ಲ್ಲಿ ಈ ಶ್ಲೋಕವು ಉಲ್ಲಿಖಿತವಾಗಿದೆ. ಆದರೆ ಇಲ್ಲಿ ಈ ಶ್ಲೋಕವನ್ನು ಯಾವ ಮೂಲಕೃತಿಯಿಂದ ಉದ್ಧರಿಸಲಾಗಿದೆಯೆಂಬುದರ ಸೂಚನೆಯಿಲ್ಲವಾಗಿದೆ. ಇಂತಿದ್ದರೂ ಈ ಶ್ಲೋಕವು ಸ್ವಲ್ಪ ಪಾಠಭೇದಗಳೊಡನೆ ಮತ್ತೊಂದೆಡೆ ಉಲ್ಲಿಖಿತವಾಗಿದ್ದು ಇದರ ಆಕರವನ್ನು 'ಜ್ಯೋತಿರ್ಮಯೂಖ' ವೆಂದುನಿರ್ದೇಶಿಸಲಾಗಿದೆ. [ಸಾಂಗಲಿ, ಶ್ರೀ ದಿಗಂಬರ ಜೈನ ಸ್ಯಾದ್ವಾದ ಗ್ರಂಥಮಾಲಾ-ಚತುರ್ಥಪುಷ್ಪ-ಸ್ವಸ್ತಿಶ್ರೀ ಕುಲಭೂಷಣ

ಸ್ವಾಮಿಯವರಿಂದ ರಚಿತವಾಗಿರುವ 'ಶ್ರೀ ಮಹಾವೀರನಿರ್ವಾಣ ಕಾಲನಿರ್ಣಯ' ಕೃತಿ, ಪು. ಸಂ. ೧೪]

ಇಲ್ಲಿ ಉಲ್ಲಿಖಿತವಾಗಿರುವಂತೆ, ಪಾಠಭೇದಯುಕ್ತವಾದ ಮೇಲ್ಕಂಡ ಶ್ಲೋಕವು ಈ ಮುಂದಿನಂತಿದೆ :

ಯುಧಿಷ್ಠಿರೋ ವಿಕ್ರಮಶಾಲಿವಾಹನೌ ತತೋಽನೃಪಃ ಸ್ಯಾದ್ವಿಜಯಾಭಿ-
ನಂದನಃ|
ತತಸ್ತು ನಾಗಾರ್ಜುನಭೂಪತಿಃ ಕಲೌ ಕಲ್ಕೀ ಷಡೇತೇ ಶಕಕಾರಕಾಃ
ಸ್ಮೃತಾಃ ||೧೪||

ಈ ಶ್ಲೋಕದಲ್ಲಿ ಹೇಳಿರುವಂತೆ, ಯುಧಿಷ್ಠಿರ, ವಿಕ್ರಮ, ಶಾಲಿವಾಹನ, ವಿಜಯಾಭಿನದಂನ, ನಾಗಾರ್ಜುನ ಮತ್ತು ಕಲ್ಕಿ ಎಂಬ ಆರು ಜನ ರಾಜರು ಶಕಕಾರಕರು (ಅರ್ಥಾತ್ ಶಕೆಗಳ ಪ್ರವರ್ತಕರು) ಎಂದು ಸ್ಮೃತರಾಗಿದ್ದಾರೆ. 'ಶಕಕಾರಕಾಃ' ಎಂಬ ಸಂಯುಕ್ತಪದದ 'ಶಕ' ಪದವು ಇಸವಿ, (=ಸಂವತ್ = ಶಕೆ) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆಯೆಂಬುದು ಸ್ಪಷ್ಟವಿದೆ. ಆದರೆ ಈ ರೀತಿಯಾಗಿ 'ಶಕ' ಪದವು 'ಇಸವಿ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರ ಹಿನ್ನೆಲೆಯನ್ನು ಕುರಿತು ಪರ್ಯಾಲೋಚಿಸಬೇಕಾದ ಅವಶ್ಯಕತೆಯಿದೆ. 'ಶಕ' ಪದವು ಪ್ರಾಚೀನಕಾಲದಲ್ಲಿ ನಮ್ಮ ದೇಶದಮೇಲೆ ಧಾಳಿಯಿಟ್ಟ ವಿದೇಶೀಯ ಜನಾಂಗ ಒಂದರ ನಿರ್ದೇಶಕವಾಗಿದೆಯೆಂಬುದು ವಿದಿತವಿದೆ. ನಮ್ಮ ದೇಶದ ಉತ್ತರ ಸೀಮೆಯ ಅನೇಕ ಪ್ರದೇಶಗಳನ್ನು ಆಕ್ರಮಣಮಾಡಿ, ಇಲ್ಲಿ ತಮ್ಮ ಸ್ವಾಸ್ಥ್ಯಗಳನ್ನು ಕಲ್ಪಿಸಿಕೊಂಡು ಪ್ರಬಲರಾಗಿದ್ದ ಶಕರನ್ನು ಪರಾಜಯಗೊಳಿಸಿ ದಮನಮಾಡಿದ ದೇಶೀಯರಾಜರನ್ನು ಶಕೇಂದ್ರ ಶಕನೃಪ, ಶಕರಾಜ ಎಂಬುದಾಗಿ ಹೆಸರಿಸುವ ಪರಿಪಾಠಬಂದಿತಲ್ಲದೆ, ಈ ಶಕವಿಜಯಿಗಳಾದ ರಾಜರ ಜನನ, ರಾಜ್ಯಾಭಿಷೇಕ ಅಥವಾ ಮೃತ್ಯುಸಮಯಗಳಾಧಾರದಿಂದ ಪ್ರವರ್ತಿತವಾದ ಕಾಲಗಣನಾಪದ್ಧತಿಗೆ 'ಶಕ' ಕಾಲವೆಂದು ಹೆಸರಿಸುವ ಪರಿಪಾಠ ಬಂದು, ಅಂತಿಮವಾಗಿ 'ಶಕ' ಪದವು 'ಇಸವಿ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ಕಂಡುಬರುವುದು.

ಈ ಮೇಲೆ ಉಲ್ಲೇಖಿಸಿರುವ ಶ್ಲೋಕದಲ್ಲಿ ಯುಧಿಷ್ಠಿರನನ್ನೂ ಶಕಕಾರರಲ್ಲೊಬ್ಬನನ್ನಾಗಿ ಹೆಸರಿಸಲಾಗಿರುವುದರಿಂದ ಇವನ ಜೀವಿತಕಾಲದಾಧಾರದಿಂದ ಶಕೆಯೊಂದು ಪ್ರವರ್ತಿತವಾದಂತೆ ಪರಿಗಣನೆಮಾಡಲಾಗಿದೆಯೆಂದು ಗ್ರಹಿಸಬಹುದಲ್ಲದೆ, ಮತ್ತಾವ ವಿಶೇಷಾರ್ಥಯುಕ್ತವಾಗಿದೆಯೆಂದು ಹೇಳಲಾಗುವುದಿಲ್ಲ. ಈ ಯುಧಿಷ್ಠಿರ ಶಕೆಯನ್ನೇ ಪರ್ಯಾಯವಾಗಿ ಕಲಿಶಕೆಯೆಂದು ಹೆಸರಿಸಲಾಗಿದೆಯೆಂದು ಹಿಂದೆ ಹೇಳಿದೆ. ಮೇಲ್ಕಂಡ ಶ್ಲೋಕದಲ್ಲಿ ಹೆಸರಿಸಲಾಗಿರುವ ವಿಕ್ರಮ ಮತ್ತು ಶಾಲಿವಾಹನರ ಶಕೆಗಳು ಇಂದಿಗೂ ನಾಮಮಾತ್ರದಿಂದ ಪ್ರಚಲಿತವಿವೆಯೆಂದು ಹೇಳಬೇಕಾಗು

ವುದು. ಹೀಗೆ ಇಂದಿಗೂ ಪ್ರಚಲಿತವಿರುವ ಈ ಶಕೆಗಳನ್ನಧಿಕರಿಸಿದ ವಿಕ್ರಮ ಮತ್ತು ಶಾಲಿವಾಹನರ ಇತಿಹಾಸದ ತಥ್ಯಾತಥ್ಯವು ಇದುವರೆವಿಗೂ ಪ್ರಶ್ನವಶವಾಗಿ ಉಳಿದಿದೆ. ಇಂತಿರುವಲ್ಲಿ ಯಾವ ಸಾಕ್ಷ್ಯಾಧಾರಗಳೂ ಇಲ್ಲದಂತಾಗಿರುವ, ಇತರ ಮೂರು ಶಕೆಗಳ ಪ್ರವರ್ತಕರೆಂದು ಮೇಲ್ಕಂಡ ಶ್ಲೋಕದಲ್ಲಿ ನಿರ್ದೇಶಿತರಾಗಿರುವ ವಿಜಯಾಭಿನಂದನ, ನಾಗಾರ್ಜುನ ಮತ್ತು ಕಲ್ಕಿ ಎಂಬುವರು ಐತಿಹಾಸಿಕವ್ಯಕ್ತಿಗಳಾಗಿರಬಹುದೆಂದು ಹೇಳುವುದೂ ಹಾಸ್ಯಾಸ್ಪದವಾಗಿ ತೋರುವುದು. ಇಷ್ಟಾದರೂ ತಜ್ಞರ ಅವಗಾಹನೆಗಾಗಿ ಈ ವಿಷಯದ ಕೆಲವಂಶವನ್ನು ಕುರಿತು ವಿಚಾರಮಂಡನೆ ಮಾಡುವುದು ಅಸಂಗತವೆನಿಸಲಾರದು.

ಬೃಹತ್ಸಂಹಿತೆಯಲ್ಲಿ ಗರ್ಗಾಚಾರ್ಯರ ಹೆಸರಿನಿಂದ ಉಲ್ಲಿಖಿತವಾಗಿರುವ 'ಆರ್ಸಮಘಾಸು............' ಎಂಬ ಶ್ಲೋಕದಲ್ಲಿ ನಿರ್ದೇಶಿತವಾಗಿರುವ 'ಶಕಕಾಲ' ವು ನಂದರಾಜನ ರಾಜ್ಯಾಭಿಷೇಕಸಮಯದೊಡನೆ ತಾಳೆಗೂಡುವುದೆಂದು ಮತ್ತು ಈ ನಂದರಾಜನನ್ನು 'ವಿಜಯನಂದ(ನ)' ಎಂಬುದಾಗಿ ಹೆಸರಿಸುವ ಪರಿಪಾಠವಿದ್ದಿತೆಂದು ಹಿಂದೆ ನಿರೂಪಿಸಿಯಾಗಿದೆ. ಈ ಆಧಾರದಿಂದ, ಈ ಮೇಲಿನ ಶ್ಲೋಕದಲ್ಲಿ ಆರು ಜನ ಶಕಕಾರಕರ ಹೆಸರುಗಳಲ್ಲೊಂದಾಗಿ ಹೇಳಲಾಗಿರುವ 'ವಿಜಯಾಭಿನಂದನ' ಎಂಬ ಹೆಸರು ನಂದರಾಜನ ನಿರ್ದೇಶಕವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಆದರೆ ಮೇಲ್ಕಂಡ ಶ್ಲೋಕದಲ್ಲಿ ಉಕ್ತವಾಗಿರುವ ಕ್ರಮದಂತೆ, ವಿಜಯಾಭಿನಂದನನೆಂಬುವನು ಶಾಲಿವಾಹನನ ತರುವಾಯಕಾಲದವನಾಗಿರುವಂತೆ ನಿರ್ದೇಶಿತವಾಗಿರುವುದರಿಂದ, ಈ ವಿಜಯಾಭಿನಂದನ ಎಂಬ ಹೆಸರನ್ನು ನಂದರಾಜನ ನಿರ್ದೇಶಕವೆಂದು ಗ್ರಹಿಸಲು ಆತಂಕವೆನಿಸುವುದು. ಇಷ್ಟಾದರೂ ಇಲ್ಲಿ ಪರ್ಯಾಲೋಚಿಸಬಹುದಾದ ಅಂಶವಿದೆ. ಈಗ ನಮ್ಮ ದೇಶದಲ್ಲಿ ಬಳಕೆಯಲ್ಲಿರುವ ದೇಶೀಯ ಶಕೆಗಳಲ್ಲಿ ಕಲಿಶಕೆಯೊಂದನ್ನು ಬಿಟ್ಟಲ್ಲಿ ವಿಕ್ರಮ ಮತ್ತು ಶಾಲಿವಾಹನಶಕೆಗಳೇ ಅತ್ಯಂತ ಪ್ರಾಚೀನವಾದ ಶಕೆಗಳೆನಿಸಿವೆ. ಈ ವಿಕ್ರಮ ಮತ್ತು ಶಾಲಿವಾಹನ ಶಕೆಗಳು ಪ್ರವರ್ತಿತವಾಗಿ ಜನಸಾಮಾನ್ಯತೆಯಲ್ಲಿ ವಿಶೇಷರೀತಿಯಿಂದ ಬಳಕೆಗೊಂಡ ಅನಂತರ, ಇವುಗಳಂತೆಯೇ ಬಳಕೆಯಲ್ಲಿದ್ದ ಇತರ ಶಕೆಗಳು ಕಾಲಾನುಕ್ರಮದಲ್ಲಿ ನಿರುಪಯುಕ್ತವೆನಿಸಿಕೊಂಡು ನಾಮಮಾತ್ರದಿಂದ ಉಳಿದುಕೊಳ್ಳುವಂತಾದುವು. ಹೀಗೆ ನಾಮಮಾತ್ರದಿಂದ ಪ್ರಾಚೀನಗ್ರಂಥಗಳಲ್ಲಿ ನಿರ್ದೇಶಿತವಾಗಿದ್ದ ವಿಜಯಾಭಿನಂದನ, ನಾಗಾರ್ಜುನ ಮತ್ತು ಕಲ್ಕಿ ಶಕೆಗಳನ್ನು ಜ್ಯೋತಿರ್ಮಯೂಖ ಕೃತಿಕಾರನು, ತನ್ನ ಕಾಲದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದ ವಿಕ್ರಮ ಮತ್ತು ಶಾಲಿವಾಹನಶಕೆಗಳಿಂದ ಅರ್ವಾಚೀನವಾದುವೆಂದು ಗ್ರಹಿಸಿ, ಅಂತೆಯೇ ಮೇಲ್ಕಂಡ ಶ್ಲೋಕದಲ್ಲಿ ನಿರೂಪಿಸಿರುವನೆಂದು ಕಂಡುಬರುವುದು. ಈ ಕೃತಿಕಾರನು ಪ್ರಾಚೀನ ಕೃತಿಗಳಾಧಾರದಿಂದ ಆರು ಜನ ಶಕಕಾರರ ಹೆಸರುಗಳನ್ನು ಸಂಕಲನಮಾಡಿ ಮೇಲ್ಕಂಡ ಶ್ಲೋಕದಲ್ಲಿ ನಿರ್ದೇಶಿಸಿರುವನೆಂದು 'ಶಕಕಾರಕಾಃ ಸ್ಮೃತಾಃ' ಎಂಬ ಪದಪ್ರಯೋಗದಿಂದ ವ್ಯಕ್ತವಾಗುವುದು. ಆದ್ದರಿಂದ ಈ

ಶ್ಲೋಕದಲ್ಲಿ ನಿರ್ದೇಶಿತವಾಗಿರುವ 'ವಿಜಯಾಭಿನಂದನ' ಎಂಬ ಹೆಸರು, ಹಿಂದೆ ಹೇಳ ಲಾಗಿರುವಂತೆ, 'ವಿಜಯನಂದ(ನ)' ಎಂಬ ಹೆಸರನ್ನು ಹೊಂದಿದ್ದ ನಂದರಾಜನ ನಿರ್ದೇಶಕವಾಗಿದೆಯೆಂದು ಗ್ರಹಿಸಲವಕಾಶವಾಗುವುದು.

ಬೃಹತ್ಸಂಹಿತೆಯ ವ್ಯಾಖ್ಯಾನಕಾರನ ಹೇಳಿಕೆಯಂತೆ ಭಾರತೀಯ ಶಕೆಗಳು ಶಕಜನರನ್ನು ಪರಾಜಯಗೊಳಿಸಿದ ರಾಜರ ರಾಜ್ಯಭಾರಕಾಲದ ಪರಿಗಣನೆಯಾಧಾರ ದಿಂದ ಪ್ರವರ್ತಿತವಾಗಿವೆಯೆಂದು ಅಭಿಪ್ರಾಯವಾಗುವುದು. ಇದರಂತೆ ನಂದರಾಜನ ರಾಜ್ಯಭಾರಕಾಲದಾಧಾರದಿಂದ ಶಕೆಯೊಂದು ಪ್ರವರ್ತಿತವಾಗಿದ್ದು, ಇದನ್ನು 'ಶಕ (ನೃಪ) ಕಾಲ' ವೆಂದು ನಿರ್ದೇಶಿಸಲಾಗಿದೆಯಂದು ಹೇಳುವುದಾದರೆ, ಈ ನಂದ ರಾಜನೂ 'ಶಕ' ರೆಂಬ ವಿದೇಶೀ ಆಕ್ರಮಣಕಾರರ ವಿಜೇತೃವಾಗಿರಬೇಕೆಂಬ ಅಭಿ ಪ್ರಾಯಕ್ಕೆಡೆಯಾಗುವುದು. ಆದರೆ ಕ್ರಿ. ಪೂ. ೧ ನೇ ಶತಮಾನಕಾಲದಲ್ಲಿ ಶಕ ಜನರು ಭಾರತದೇಶದಮೇಲೆ ಪ್ರಪ್ರಥಮವಾಗಿ ಧಾಳಿಯಿಟ್ಟರೆಂಬುದಾಗಿ ಸಾಧಾರಣ ವಾಗಿ ಚರಿತ್ರಕಾರರೆಲ್ಲರೂ ಅಭಿಪ್ರಾಯಪಟ್ಟಿರುವರೆಂದು ಮತ್ತು ಈ 'ಶಕ' ಜನರು ಸಿಥಿಯ ಜನಾಂಗ ಮೂಲದವರಾಗಿರುವರೆಂದು ತಿಳಿದುಬರುವುದು. [ಪೂರ್ವೋಕ್ತ ಕೃತಿ 'ವಿಕ್ರಮ ಆಫ್ ಉಜ್ಜಯಿನೀ–ಪು. ಸಂ. ೪೬-೪೭.] ಇದರಿಂದ ಕ್ರಿ. ಪೂ. ೫ ನೇ ಶತಮಾನಕಾಲದಲ್ಲಿ ರಾಜ್ಯಭಾರನಡೆಸಿದ ನಂದರಾಜನಿಗೆ ಶಕೇಂದ್ರ ಅಥವಾ ಶಕನೃಪ ಎಂಬ ಹೆಸರು ಸಲ್ಲುವುದಾದರೂ ಹೇಗೆಂಬ ಪ್ರಶ್ನೆಯುದ್ಭವಿಸುವುದು. ಆದರೆ ಶಕ ಪದವು ಮೂಲತಃ ಪಾರಸೀಕಜನರ ಸೂಚಕವಾಗಿ ಪ್ರಯುಕ್ತವಾಗಿದ್ದಿತೆಂದು ಹೇಳ ಲವಕಾಶವಿದೆ. ಇಷ್ಟಲ್ಲದೆ, ಕ್ರಿ. ಪೂ. ೬ ನೇ ಶತಮಾನದ ಆದಿಭಾಗದಲ್ಲಿ ಭಾರತ ದೇಶದ ಉತ್ತರಸೀಮೆಯ ಪ್ರದೇಶವು ಪಾರಸೀಕರ ಆಕ್ರಮಣಕ್ಕೊಳಪಟ್ಟಿದ್ದು, ಕ್ರಿ. ಪೂ. ೫ ನೇ ಶತಮಾನಕಾಲದಲ್ಲಿ ನಂದರಾಜನು ಈ ಪಾರಸೀಕರನ್ನು ಪರಾಜಯ ಗೊಳಿಸಿದನೆಂದು ಸನ್ಮಾನ್ಯ ಶ್ರೀ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿದ್ದಾರೆ. ಇದ ರಂತೆ, ನಂದರಾಜನನ್ನು ಶಕನೃಪನೆಂದು ಹೆಸರಿಸಿರುವುದರ ಔಚಿತ್ಯವು ಸ್ಫುಟವಾಗು ವುದು. 'ಶಕ' ಎಂಬ ಹೆಸರು ಮೂಲತಃ ಪಾರಸೀಕರ ಸೂಚಕವಾಗಿದ್ದಿರಬೇಕೆಂದು ಕಾಲಕಾಚಾರ್ಯ ಕಥೆಯ ಸೂಕ್ಷ್ಮಪರಿಶೀಲನದಿಂದ ವ್ಯಕ್ತವಾಗುವುದು. ಈ ಕಥೆಯು ಮುಂದಿನಂತಿದೆ:

"ಯಥಾ ಕಾಲಿಕಾಚಾರ್ಯೋ ಗರ್ದಭಿಲ್ಲರಾಜಾನಂ ಶಾಸಿತವಾ೯ ।
ಕಥಾನಕಂ ಚೇತ್ಥಂ ।

ಉಜ್ಜೇಣೀ ಣಾಮ ಣಗರೀ………ಏವಂ ಭಾವೇಉ ಸೋ ಕಾಲಗಜ್ಜೋ ಪಾರಸ-ಕುಲಂ ಗತೋ ತತ್ಥ ಏಗೋ ಸಾಹಿತ್ತಿ ರಾಯಾ ಭಣತಿ, ತಂ ಸಮಲ್ಲೀಣೋ ಣಿಮಿ-ತ್ತಾದಿಏಹಿಂ ಹಿಯಂ ಆಉಟ್ಟೇತಿ, ಅನ್ನಯಾ ತಸ್ಸ ಸಾಹಾಣುಸಾಹಿಣಾ ಪರಮ-ಸಾಮಿಣಾ ಕಪ್ಪಿ ವಿ ಕಾರಣೆ ಭಟ್ಮೇಣ ಕಟ್ಮಾರಿಗಾ ಸದ್ದೇಉಂ ಪೇಸಿಯಾ ಸೀಸಂ

ಬಿಂದಾಹಿತ್ತಿ। ........ಏಹಿ ಹಿಂದುಗದೇಸಂ ವಚ್ಚಾಮೋ। ........ತೇ ಛನ್ನ-
ವೋಪಿ ಸುರಟ್ಠಮಾಗಯಾ ಕಾಲೋಯು ಣವ ಪಾಉಸೋ ವಟ್ಟಇ। ತಾಹಿಸೇ
ಕಾಲೇ ಣ ತೀರಇ ಗಂತುಂ ತತ್ಥ ಮಂಡಲಾಇಂ ಕಯಾ ವಿ ವಿಭತ್ತಿಊಣಂ ಜಂ
ಕಾಲಗಜ್ಜೋ ಸಮಲ್ಲೀಣೋ ಸೋ ತತ್ಥ ರಾಯಾ ಠವಿತೋ, ತಾಹೆ ಸಗವಂಸೋ
ಉಪ್ಪಣ್ಣೋ[1]'

ಈ ಕಥಾನಕದ ಪ್ರಕಾರವಾಗಿ ಕಾಲಕಾಚಾರ್ಯರು, ಉಜ್ಜಯಿನಿಯ ಅಧಿಪತಿ ಯಾಗಿದ್ದ ಗರ್ದಭಿಲ್ಲರಾಜನನ್ನು ದಂಡಿಸುವ ಉದ್ದೇಶವುಳ್ಳವರಾಗಿ ಪಾರಸಕುಲಕ್ಕೆ ಹೋದರು. ಅಲ್ಲಿ ಸಾಹಿ (=ಶಾಹಿ) ಎಂಬ ಅರಸನಿದ್ದನು. ಒಂದುದಿನ, ಈ ಸಾಹಿ ರಾಜನ ಪ್ರಭುವಾದ ಸಾಹಾಣುಸಾಹಿಯು, ಕಾರಣಾಂತರದಿಂದ ಕೋಪಗೊಂಡವ ನಾಗಿ ತಲೆಯನ್ನೊಪ್ಪಿಸಬೇಕೆಂದು ಸಾಹಿಗೆ ಆಜ್ಞಾಪತ್ರ ಕಳುಹಿದನು. [ಇದೇ ರೀತಿಯಾಗಿ ಇತರ ೯೫ ಜನ ಸಾಹಿಗಳಿಗೂ ಆಜ್ಞಾಪತ್ರಕಳುಹಿದ್ದನು.] ಈ ಸಂದರ್ಭದಲ್ಲಿ ಕಾಲಕಾಚಾರ್ಯರು ಹಿಂದುಗದೇಶಕ್ಕೆ ಹೋಗೋಣವೆಂದು ಸಾಹಿಗೆ ಹೇಳಿದರು. ಆಗ ಆ ೯೬ ಜನ ಸಾಹಿಗಳು ಸುರಾಷ್ಟ್ರಕ್ಕೆ ಬಂದರು. ಮಳೆಗಾಲ ವಾರಂಭವಾದುದರಿಂದ ಅಲ್ಲಿಂದ ಮುಂದುವರಿಯಲಾಗಲಿಲ್ಲ. ಅಲ್ಲಿ ಮಂಡಲಗಳನು ರಚಿಸಲಾಯಿತು. ...........ಸಾಹಿಯು ರಾಜನಾಗಿ ಅಧಿಷ್ಠಿತನಾದನು. ಅವ ನಿಂದ ಸಗ (=ಶಕ) ವಂಶವು ಉತ್ಪನ್ನವಾಯಿತು. [ಇಲ್ಲಿಂದ ಮುಂದೆ ಈ ಶಕರ ಸಹಾಯದಿಂದ ಕಾಲಕಾಚಾರ್ಯರು ಗರ್ದಭಿಲ್ಲನನ್ನು ದಂಡಿಸಿದ ಕಥಾಂಶವು ಉಕ್ತ ವಾಗಿದೆ.]

ಕಾಲಕಾಚಾರ್ಯರು ಶಕರ ಸಹಾಯದಿಂದ ಗರ್ದಭಿಲ್ಲನನ್ನು ದಂಡಿಸಿದುದಾಗಿ ಕಥೆಯಲ್ಲಿ ಹೇಳಲಾಗಿದೆ. ಈ ಶಕಕುಲವು ಪಾರಸಕುಲದ ಶಾಹಿರಾಜನಿಂದ ಉತ್ಪನ್ನ ವಾಯಿತೆಂದು ಕಥೆಯ ಹೇಳಿಕೆಯಿಂದಲೇ ತಿಳಿದುಬರುವುದು. ಇದರಿಂದ ಕಾಲಕಾ ಚಾರ್ಯರು ಗರ್ದಭಿಲ್ಲನನ್ನು ದಂಡಿಸುವ ಸಲುವಾಗಿ ಉಜ್ಜಯಿನಿಗೆ ಸ್ವಯಂ ಶಾಹಿ ರಾಜನನ್ನೇ ಕರೆತಂದಿರದೆ, ಸುರಾಷ್ಟ್ರದೇಶದಲ್ಲಿ ಅಧಿಷ್ಠಿತನಾದ ಈ ಶಾಹಿರಾಜನಿಂದ ಉತ್ಪನ್ನವಾದ ಶಕಕುಲದ ಅರಸನನ್ನು ಕರೆತಂದಿರಬೇಕೆಂದು ವ್ಯಕ್ತವಾಗುವುದು. ಇದರಂತೆ ಶಾಹಿರಾಜನು ಸುರಾಷ್ಟ್ರಕ್ಕೆ ಬಂದು ಅಧಿಷ್ಠಿತನಾದ ಪ್ರಸಂಗ ಮತ್ತು ಅವನ ವಂಶಜನಾದ ಶಕನ ಸಹಾಯಪಡೆದು ಕಾಲಕಾಚಾರ್ಯರು ಗರ್ದಭಿಲ್ಲನನ್ನು ದಂಡಿಸಿದ ಪ್ರಸಂಗಗಳ ಮಧ್ಯೆ ದೀರ್ಘಕಾಲದ ಅಂತರವಿರಬೇಕೆಂಬುದು ಸುಸಂಗತವೆನಿಸುವುದು. ಆದ್ದರಿಂದ ಮೂಲತಃ ಈ ಕಥೆಯ ಪೂರ್ವಭಾಗದಲ್ಲಿ ಶಕವಂಶದ ಉತ್ಪತ್ತಿವಿಷಯ ವಾಗಿ ಪೀಠಿಕೆಯರೂಪದಲ್ಲಿ ಪಾರಸಕುಲದಶಾಹಿಯು ಸುರಾಷ್ಟ್ರಕ್ಕೆ ಬಂದು ರಾಜ

---

1 ಅಭಿಧಾನರಾಜೇಂದ್ರಕೋಶ–ಗ್ರಂ. ಭಾಗ ೧–ಪು. ಸಂ. ೫೮೩ ರಲ್ಲಿ–ಚೂರ್ಣಿ ಸಹಿತ ನಿಶೀಥಸೂತ್ರದ ಹತ್ತನೇ ಉದ್ದೇಶದಿಂದ ಉಲ್ಲೇಖಿಸಲಾಗಿದೆ.

ನಾಗಿ ಅಧಿಷ್ಠಿತನಾದ ಮತ್ತು ಅವನಿಂದ ಶಕಕುಲವು ಉತ್ಪನ್ನವಾದ ಕಥಾಂಶವು ಉಕ್ತವಾಗಿದ್ದು, ತದನಂತರ ಕಾಲಕಾಚಾರ್ಯರು ಈ ಶಾಹಿಯವಂಶಜನಾದ ಶಕರಾಜನ ಸಹಾಯಪಡೆದು ಗರ್ದಭಿಲ್ಲನನ್ನು ದಂಡಿಸಿದ ಕಥಾಂಶವು ಉಕ್ತವಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು.

'ಶಾಹಿ' ಮತ್ತು 'ಶಾಹಾನುಶಾಹಿ' ಎಂಬ ಪದಗಳು 'ರಾಜ' ಮತ್ತು 'ರಾಜಾಧಿರಾಜ' ಎಂಬ ಅರ್ಥದ ಪಾರಸೀ-ಭಾಷಾಮೂಲದ ಪದಗಳೆಂದು ತಿಳಿದುಬರುವುದಲ್ಲದೆ ಕಥೆಯಲ್ಲಿ ಶಾಹಿಗಳನ್ನು ಪಾರಸಕುಲದವರೆಂದು ಹೇಳಲಾಗಿರುವುದರಿಂದ ಶಕವಂಶದ ಮೂಲಪುರುಷರಾದ ಶಾಹಿಗಳು ಪಾರಸೀಕರಾಗಿದ್ದಿರಬೇಕೆಂದು ಸೂಚಿತವಾಗುವುದು.

ಕ್ರಿ. ಪೂ. ೫೧೦ ಅಥವಾ ೫೦೦ ರಲ್ಲಿ ನಮ್ಮ ದೇಶದ ಪಶ್ಚಿಮಪಂಜಾಬ್ ಪ್ರಾಂತ್ಯವು ಪಾರಸೀಕದೊರೆಯಾದ ಡೇರಿಯಸ್ಸನ ವಶವಾಗಿದ್ದಿತೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ನಂದನು ಕ್ರಿ. ಪೂ. ೪೭೫ ರಲ್ಲಿ ಉಜ್ಜಯಿನೀ ಸಿಂಹಾಸನದಲ್ಲಿ ಅಧಿಷ್ಠಿತನಾಗುವ ಸ್ವಲ್ಪ ಕಾಲದ ಮುನ್ನವೇ ಭಾರತದೇಶದ ಪಶ್ಚಿಮ ಪಂಜಾಬ್ ಪ್ರಾಂತ್ಯವು ಪಾರಸೀಕರ ವಶವರ್ತಿಯಾಗಿದ್ದಿತೆಂದು ವ್ಯಕ್ತವಾಗುವುದು. ಕ್ರಿ. ಪೂ. ೪೫೦ ಮತ್ತು ೪೦೦ ರ ಮಧ್ಯವರ್ತಿಸಮಯದಲ್ಲಿ ಪರ್ಶಿಯಾಸಾಮ್ರಾಜ್ಯವು ಕ್ಷೀಣದೆಶೆಹೊಂದಿದ್ದಿತೆಂದು ಸನ್ಮಾನ್ಯ ಜಯಸ್ವಾಲ್‌ರವರ ಹೇಳಿಕೆಯಿಂದ ತಿಳಿದುಬರುವುದಲ್ಲದೆ ನಂದನು (ನಂದಿಯು) ಪಾರಸೀಕರನ್ನು ಪರಾಜಯಗೊಳಿಸಿ (ಭಾರತದ ಮೇಲಿನ) ಅವರ ಶಾಸನವನ್ನು ಅಂತ್ಯಗೊಳಿಸಿದನೆಂದು ಅಭಿಪ್ರಾಯಪಟ್ಟಿದ್ದಾರೆ.

ಅವಂತಿ ಮತ್ತು ಮಗಧರಾಜ್ಯಗಳ ವಿಶಾಲ ಪ್ರದೇಶದ ಸಾಮ್ರಾಟನಾದ ನಂದರಾಜನು ತನ್ನ ಸಾಮ್ರಾಜ್ಯದ ಭದ್ರತೆ ಮತ್ತು ರಕ್ಷಣೆಗಾಗಿ ಪಾರಸೀಕರಮೇಲೆ ಯುದ್ಧಮಾಡಬೇಕಾದ ಪ್ರಸಂಗ ಉಂಟಾಗಿದ್ದಲ್ಲಿ ಆಶ್ಚರ್ಯವಿಲ್ಲ. ಇಷ್ಟಲ್ಲದೆ ವಿದೇಶೀಯರು ಭಾರತದೇಶದ ಪ್ರದೇಶವನ್ನು ವಶಪಡಿಸಿಕೊಂಡು ತಮ್ಮ ಆಕ್ರಮಣವನ್ನು ವಿಸ್ತಾರಗೊಳಿಸಲು ಯತ್ನಿಸಿದ್ದುದು, ಸಾಮ್ರಾಟನಾದ ನಂದರಾಜನ ಪ್ರಭುತ್ವದ ಮರ್ಯಾದೆಗೆ ಭಂಗತರುವಂತಹುದಾಗಿದ್ದಿತೆಂಬುದರಲ್ಲಿ ಸಂಶಯವಿಲ್ಲ. ಈ ಸಂದರ್ಭದಲ್ಲಿ ಪಾರಸೀಕರ ಆಕ್ರಮಣ ಪ್ರವೃತ್ತಿಯನ್ನು ತಡೆಗಟ್ಟಿ ಅವರನ್ನು ದಮನಗೊಳಿಸುವುದರಲ್ಲಿ ನಂದರಾಜನು ವಿಜಯಿಯಾದನೆಂದು ಕಂಡುಬರುತ್ತದೆ. ಹೀಗೆ ನಂದರಾಜನಿಂದ ಪರಾಜಿತರಾದ ಪಾರಸೀಕರಾಜಪ್ರತಿನಿಧಿಗಳಾದ ಶಾಹಿಗಳು, ಪ್ರಭುವಾದ ಶಾಹಾನುಶಾಹಿಗೆ ತಮ್ಮ ತಲೆಗಳನ್ನೊಪ್ಪಿಸಬೇಕಾದ ನಿಬಂಧನವಿದ್ದಿತಾಗಿ, ಸ್ವದೇಶಕ್ಕೆ ಹಿಂದಿರುಗದೆ ನಂದರಾಜನ ಅಧೀನರಾಗಿ ಭಾರತದೇಶದಲ್ಲಿಯೇ ನೆಲೆಗೊಂಡಿದ್ದಾರೆ. ಮುಂದೆ ಮಗಧರಾಜ್ಯದ ಪ್ರಭುತ್ವವು ಕ್ಷೀಣದೆಶೆಗೆ ಬಂದಸಮಯದಲ್ಲಿ ಈ ಶಾಹಿಗಳ ವಂಶಜರಾದ ಶಕರು ಸುರಾಷ್ಟ್ರದಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರೆಂದು ಕಂಡುಬರುವುದು. ಈ ಶಕವಂಶದ ಮೂಲಪುರುಷರಾದ ಶಾಹಿಗಳಮೇಲೆ ವಿಜಯಸಾಧಿ

ಸಿದ ನಂದರಾಜನನ್ನು ಕಾಲಾನುಕ್ರಮದಲ್ಲಿ ಶಕೇಂದ್ರನೆಂದು ಹೆಸರಿಸುವ ಪರಿಪಾಠ ಬಂದಿತೆಂದು ವ್ಯಕ್ತವಾಗುವುದು. ಅಂತೆಯೇ ಇವನು ಉಜ್ಜಯಿನಿಯಲ್ಲಿ ರಾಜ್ಯಾಭಿಷಿಕ್ತನಾದ ಸಮಯದಾಧಾರದಿಂದ ಗಣನೆಮಾಡಲಾದ ಕಾಲಗಣನೆಯನ್ನು ಶಕಕಾಲವೆಂದು ಹೆಸರಿಸುವ ರೂಢಿಯುಂಟಾಯಿತೆಂದು ಫಲಿತವಾಗುವುದು.

ಸಪ್ತರ್ಷಿಚಾರಾನಯನದ ವಿಷಯವಾಗಿ ವೃದ್ಧಗರ್ಗ ಆಚಾರ್ಯರ ಮತವನ್ನು ನಿರೂಪಿಸುವ ಪೂರ್ವೋಲ್ಲಿಖಿತ ಶ್ಲೋಕದ 'ಷಡ್ದ್ವಿಕಪಂಚದ್ವಿ' ಎಂಬ ಸಂಖ್ಯಾವಾಚಕವು, '೨೫೨೬' ಎಂಬ ಸಂಖ್ಯೆಯ ನಿರ್ದೇಶಕವಾಗಿದೆಯೆಂಬ ಅಭಿಪ್ರಾಯದಿಂದ ವಿದ್ವಾಂಸರನೇಕರು, ಕ್ರಿ. ಪೂ. ೬ ನೇ ಶತಮಾನಕಾಲದಲ್ಲಿ ಶಕೆಯೊಂದು ಆರಂಭವಾಗಿದ್ದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. [ಸನ್ಮಾನ್ಯ ರಾಜಬಲಿಪಾಂಡೆಯವರ–'ವಿಕ್ರಮಾದಿತ್ಯ ಆಫ್ ಉಜ್ಜಯಿನೀ' ಪು. ಸಂ. ೭೪–೫] ಇಷ್ಟಲ್ಲದೆ ಕ್ರಿ. ಪೂ. ೬ ನೇ ಶತಮಾನದಲ್ಲಿ ಆರಂಭವಾದ ಈ ಶಕೆಯ ಪ್ರವರ್ತಕನು 'ಹರ್ಷ' ಎಂಬ ಹೆಸರಿನವನಾಗಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದು ಕಂಡುಬರುತ್ತದೆ. ಆದರೆ ಉಜ್ಜಯಿನಿಯಲ್ಲಿಯಾಗಲೀ ಅಥವಾ ಮತ್ತಾವ ರಾಜ್ಯಪ್ರದೇಶಗಳಲ್ಲಾಗಲೀ ಕ್ರಿ. ಪೂ. ೬ ನೇ ಶತಮಾನಕಾಲದಲ್ಲಿ 'ಹರ್ಷ' ಎಂಬ ಹೆಸರಿನ ರಾಜನೊಬ್ಬನು ರಾಜ್ಯಭಾರಮಾಡುತ್ತಿದ್ದನೆಂದು ನಿರ್ದೇಶಿಸುವ ಪುರಾವೃತ್ತಾಧಾರಗಳಿಲ್ಲವಾಗಿವೆ. ಕೆಲವೊಮ್ಮೆ ಪದ್ಯರೂಪದ ಕೃತಿಗಳಲ್ಲಿ ವ್ಯಕ್ತಿಗಳು ಮತ್ತು ನಗರಗಳೇ ಮೊದಲಾದವುಗಳ ಹೆಸರುಗಳನ್ನು ನಿರ್ದೇಶಿಸಲು ಆಯಾಯ ಹೆಸರುಗಳ ಸಮಾನಾರ್ಥಕವಾದ ಪದಗಳನ್ನು ಬಳಸಲಾಗಿರುವುದು ಕಂಡುಬರುತ್ತದೆ. ಇದರಂತೆ ನಂದರಾಜನ ಹೆಸರಿನಲ್ಲಿ ಪ್ರಚಲಿತವಾದ ಶಕೆಯನ್ನು ನಿರ್ದೇಶಿಸುವಲ್ಲಿ'ನಂದ' ಪದದ ಬದಲಾಗಿ 'ಹರ್ಷ' ಪದವು ಬಳಕೆಗೊಂಡಿದ್ದು, ಈ ಶಕೆಯನ್ನು ಹರ್ಷ (ವರ್ಧನ) ಶಕೆಯೆಂಬುದಾಗಿ ನಿರ್ದೇಶಿಸುವ ಪರಿಪಾಠಉಂಟಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಹೀಗೆ, ಈ ಗ್ರಹಿಕೆಯು ಸಂಭಾವ್ಯವೆನಿಸುವುದಾದಲ್ಲಿ ಮತ್ತು ವಿಕ್ರಮಶಕೆಗಿಂತ ಪೂರ್ವವರ್ತಿಯಾಗಿ ಯಾವುದಾದರೊಂದು ಶಕನೃಪಕಾಲವು ಬಳಕೆಯಲ್ಲಿದ್ದಿತೆಂಬುದು ಸುಸಂಗವೆನಿಸುವುದಾದ ಪಕ್ಷದಲ್ಲಿ, ಆ ಶಕೆಯು ಕ್ರಿ. ಪೂ. ೪೭೫ ರಲ್ಲಿ ನಂದರಾಜನ ಹೆಸರಿನಲ್ಲಿ ಪ್ರಚಲಿತವಾದ ಶಕೆಯಲ್ಲದೆ ಮತ್ತಾವುದೂ ಆಗಿರಲಾರದೆಂದು ನಿಶ್ಚಿತವಾಗುವುದು.

ವೈ. ಮ. ಸಂ. ಪುರಾಣಗಳಲ್ಲಿ, ಪಾಲಕರಾಜನ ಅನಂತರ ವಿಶಾಖಯೂಪನೆಂಬುವನನ್ನು ಹೆಸರಿಸಲಾಗಿದ್ದು, ಇವನು ೫೩ ವರ್ಷಕಾಲ ರಾಜ್ಯಭಾರಮಾಡಿದನೆಂದು ಮತ್ಸ್ಯಪುರಾಣದಲ್ಲಿ ನಿರ್ದೇಶಿತವಾಗಿರುವುದು ವಿದಿತವಿದೆ. ಆದರೆ ಮತ್ಸ್ಯಪುರಾಣದಲ್ಲಿಯೇ ಪಂಚಪ್ರಾದ್ಯೋತರ ಒಟ್ಟು ಆಳ್ವಿಕೆಯ ಕಾಲಾವಧಿಯನ್ನು ೫೨ ವರ್ಷಗಳೆಂದು ಹೇಳಲಾಗಿರುವುದರಿಂದ ಈ ಪಂಚಪ್ರಾದ್ಯೋತರಲ್ಲಿ ಒಬ್ಬನಾಗಿ ಪರಿಗಣಿತನಾಗುವ ವಿಶಾಖಯೂಪನೊಬ್ಬನೇ ೫೩ ವರ್ಷ ರಾಜ್ಯಭಾರನಡೆಸಿದನೆಂಬುದು

ಸುಸಂಗತವೆನಿಸುವುದಿಲ್ಲ. ಇಷ್ಟಲ್ಲದೆ ಪಾಲಕನ ಅನಂತರ ಆರ್ಯಕನೆಂಬುವನು ರಾಜ್ಯಭಾರಕ್ಕೆ ಬಂದಿರಬೇಕೆಂದು ಇತರ ಸಾಕ್ಷ್ಯಾಧಾರದಿಂದ ಸೂಚಿತವಾಗುವುದಾದ ಕಾರಣ, ಪುರಾಣಗಳಲ್ಲಿ ಪಾಲಕನ ಅನಂತರವರ್ತಿಯಾಗಿ ವಿಶಾಖಯೂಪನ ರಾಜ್ಯ ಭಾರವನ್ನು ನಿರ್ದೇಶಿಸಲಾಗಿರುವುದು ಸಕ್ರಮವೆನಿಸುವುದಿಲ್ಲ. ಇದರಿಂದ ವಿಶಾಖ ಯೂಪನ ವಿಷಯವಾಗಿ ಪುರಾಣಗಳ ಐತಿಹ್ಯವು ದೋಷಭಾಗಿಯಾಗಿದೆಯೆಂದು ಗ್ರಹಿಸಲವಕಾಶವಾಗುವುದು.

ವಿಶಾಖಭೂಪನೆಂಬ ಅರಸನೊಬ್ಬನು ಪಾಟಲೀಪುತ್ರನಗರದಲ್ಲಿ ರಾಜ್ಯಭಾರ ನಡೆಸುತ್ತಿದ್ದನೆಂದು ಮತ್ತು ಇವನ ಸುತನಾದ ವೈಶಾಖೇಯನು ವ್ಯಂತರೀಕೃತವಾದ ಉಪಸರ್ಗವನ್ನು ಜಯಿಸಿ ಕೇವಲಿಯಾಗಿ ಮುಕ್ತನಾದನೆಂದು ಬೃ. ಕ. ಕೋಶದ 'ಚೇಲನಾಮಹಾದೇವಿ' ಕಥಾನಕದಲ್ಲಿ ಉಕ್ತವಾಗಿದೆ. (ಕಥಾ ಸಂ. ೮) ವೈ. ಮ. ಸಂ. ಪುರಾಣಗಳಲ್ಲಿ ಮಗಧ ಮತ್ತು ಅವಂತೀರಾಜಸಂತತಿಗಳೆರಡರ ಇತಿವೃತ್ತಗಳು ಸಂಮಿಶ್ರವಾಗಿರುವುದು ಸ್ಪಷ್ಟವಿದೆ. ಇಷ್ಟಲ್ಲದೆ ಅಜಾತಶತ್ರು, ನಂದ ಮತ್ತು ಮಹಾ ನಂದರ ಅಡ್ಡಹೆಸರುಗಳಾದ ದರ್ಶಕ, ಶಿಶುನಾಗ ಮತ್ತು ಕಾಕವರ್ಣ ಎಂಬ ಹೆಸರು ಗಳು ಆಯಾ ವ್ಯಕ್ತಿಗಳಿಂದ ಭಿನ್ನರಾದ ಸ್ವತಂತ್ರವ್ಯಕ್ತಿಗಳ ಹೆಸರುಗಳೆನಿಸಿ ಸ್ಥಾನ ಪಲ್ಲಟವಶವರ್ತಿಯಾಗಿ ನಿರ್ದೇಶಿತವಾಗಿವೆಯೆಂದು ಹಿಂದೆ ಪ್ರತಿಪಾದಿಸಿದೆ. ಇದರಿಂದ 'ವಿಶಾಖಯೂಪ' ಎಂಬ ಹೆಸರಿನ ವಿಷಯದಲ್ಲಿಯೂ ಇಂತೆಯೇ ಆಗಿರಬಹುದೆಂಬ ಪರ್ಯಾಲೋಚನೆಗೆಡೆಯಾಗುವುದು. ಅಜಾತಶತ್ರುವಿನ ಮಗನಾದ ಉದಾಯಿ ಭದ್ರನು ತನ್ನ ನಾಲ್ಕನೇ ವರ್ಷದ ಆಳ್ವಿಕೆಯ ಸಮಯದಲ್ಲಿ ಪಾಟಲೀಪುತ್ರ (=ಕುಸು-ಮ) ಪುರವನ್ನು ರಾಜಧಾನಿಯಾಗಿ ಮಾಡಿಕೊಂಡನೆಂದು ವೈ. ಮ. ಸಂ. ಪುರಾಣ ಗಳಲ್ಲಿ [ವಾಯು ಪು. ಅ. ೩೭-ಶ್ಲೋ. ಸಂ. ೩೧೩] ಹೇಳಲಾಗಿದೆಯೆಲ್ಲದೆ ಜೈನ ಇತಿ ವೃತ್ತಗಳಿಂದಲೂ ಈ ಹೇಳಿಕೆಯು ಸಮರ್ಥಿತವಾಗುವುದು. ಈ ಹಿಂದೆ ಹೇಳಿರು ವಂತೆ ವಿಶಾಖಭೂಪನೆಂಬುವನು ಪಾಟಲೀಪುತ್ರನಗರದಲ್ಲಿ ದೊರೆಯಾಗಿದ್ದನೆಂದು ಬೃ. ಕ. ಕೋಶದ ಕಥೆಯಲ್ಲಿ ಹೇಳಿದೆಯಾದ್ದರಿಂದ ಈ ಹೆಸರಿನ ರಾಜನು ಉದಾಯಿ ಭದ್ರನ ತರುವಾಯ ಕಾಲದಲ್ಲಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಇನ್ನು ದಿಗಂಬರ ಜೈನಆಮ್ನಾಯಾನುಸಾರವಾಗಿ ಕೇವಲಿಗಳ ಕಾಲವು ಶ್ರೀ ವೀರನಿರ್ವಾಣ ದಿಂದ ೬೨ ವರ್ಷಗಳ ಅವಧಿಯಲ್ಲಿ ಸೀಮಿತವಾಗುವುದರಿಂದ ವಿಶಾಖಭೂಪನ ಸುತ ನಾದ ವೈಶಾಖೇಯನು ಈ ಅವಧಿಯೊಳಗಾಗಿ ಜೀವಿಸಿದ್ದಿರಬೇಕೆಂದು ಹಾಗೂ ವಿಶಾಖಭೂಪನು ಇದೇ ಅವಧಿಯಲ್ಲಿ ಪಾಟಲೀಪುತ್ರದಲ್ಲಿ ದೊರೆಯಾಗಿದ್ದಿರಬೇಕೆಂದು ಸೂಚಿತವಾಗುವುದು. ಉದಾಯಿಭದ್ರನ ತರುವಾಯ ಮುನಿಕನು ೧೭ ವರ್ಷ ರಾಜ್ಯ ಭಾರಮಾಡಿದನೆಂದು ಮತ್ತು ಇವನ ಅನಂತರ (ಶ್ರೀವೀರನಿರ್ವಾಣ ಸಂ. ೬೧ ರಲ್ಲಿ) ನಂದರಾಜನು ಪಾಟಲೀಪುತ್ರನಗರದ ಸಿಂಹಾಸನದಲ್ಲಿ ಅಧಿಷ್ಠಿತನಾದನೆಂದು ಹಿಂದೆ ಪ್ರತಿಪಾದಿಸಿದೆ. ಇದರಿಂದ ಮುನಿಕ ಅಥವಾ ನಂದರಾಜರೀರ್ವರಲ್ಲೊಬ್ಬನಿಗೆ

ವಿಶಾಖಭೂಪನೆಂಬ ಗೌಣನಾಮವಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಆದರೆ ಈ ಹೆಸರು ನಂದರಾಜನ ಗೌಣನಾಮವಾಗಿದ್ದಿರಬೇಕೆಂದು ಪರ್ಯಾಯರೀತಿಯಿಂದ ಸೂಚನೆ ದೊರೆಯುವುದು. ಹಿಂದೆ ಪ್ರತಿಪಾದಿತವಾಗಿರುವಂತೆ ವಿಶಾಖಯೂಪನನ್ನು ಪಂಚಪ್ರಾದ್ಯೋತರಲ್ಲೊಬ್ಬನನ್ನಾಗಿ ಪರಿಗಣಿಸಲು ಸಾಧ್ಯವಿಲ್ಲವಾದುದರಿಂದ ಮತ್ತು ಇವನು ೫೩ ವರ್ಷಕಾಲ ರಾಜ್ಯಭಾರಮಾಡಿದನೆಂಬ ಹೇಳಿಕೆಯು ಸುಸಂಗತವೆನಿಸುವುದಿಲ್ಲವಾದ್ದರಿಂದ, ಹಾಗೂ ಈ ೫೩ ವರ್ಷಗಳ ಕಾಲಾವಧಿಯು ಉಜ್ಜಯಿನಿಯಲ್ಲಿ ಪಂಚಪ್ರಾದ್ಯೋತರ ಒಟ್ಟು ೫೨ ವರ್ಷಗಳ ಆಳ್ವಿಕೆಯ ತರುವಾಯ ಪಟ್ಟಸ್ಥನಾದ ನಂದರಾಜನ ರಾಜ್ಯಾಭಿಷೇಕಸಮಯದೊಡನೆ ಸಮಾಯುಕ್ತವಾಗುವುದಾದ್ದರಿಂದ, ಮೂಲ ಇತಿವೃತ್ತಗಳಲ್ಲಿ ಈ ವಿಶಾಖಯೂಪ (ಭೂಪ) ಎಂಬ ಹೆಸರು ನಂದರಾಜನ ಗೌಣನಾಮವಾಗಿ ಪ್ರಯುಕ್ತವಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುದು.

ವಿಶಾಖಭೂಪ (ಯೂಪ) ಎಂಬ ಹೆಸರು ಶಿಶುನಾಗ ಎಂಬ ಹೆಸರಿನಂತೆ, ನಂದರಾಜನ ಜೀವನಕ್ಕೆ ಸಂಬಂಧಿಸಿದ ಇತಿವೃತ್ತಾಂಶ ಒಂದರ ಸೂಚಕವಾಗಿ ರೂಢಿಗತವಾದ ಹೆಸರಿನ ಪ್ರಭ್ರಂಶರೂಪವಾಗಿದೆಯೆಂದು ಹೇಳಲವಕಾಶವಿದೆ.

ಬೃ. ಕ. ಕೋಶದ ಪೂರ್ವಸೂಚಿತವಾದ ಕಥೆಯಲ್ಲಿ, ವೈಶಾಖೇಯ ಎಂಬ ಹೆಸರಿನ ಬದಲಾಗಿ 'ವಿಶಾಹ' ಎಂಬ ಪಾಠಭೇದವಿದೆಯೆಂದು ಈ ಕಥೆಯ ಅಡಿಟಿಪ್ಪಣಿಯಿಂದ ವ್ಯಕ್ತವಾಗುವುದು. ಮೂಲತಃ ಪ್ರಾಕೃತಭಾಷಾನಿಬದ್ಧವಾಗಿದ್ದ ಕಥೆಗಳ ಆಧಾರದಿಂದ ಹರಿಷೇಣಾಚಾರ್ಯರು, ಸಂಸ್ಕೃತಭಾಷೆಯಲ್ಲಿ ಬೃ. ಕ. ಕೋಶವನ್ನು ರಚಿಸಿರುವರೆಂಬುದರಲ್ಲಿ ಸಂಶಯವಿಲ್ಲ. ಸಾಧಾರಣವಾಗಿ ಸಂಸ್ಕೃತಪದಗಳ ಮಹಾಪ್ರಾಣಾಕ್ಷರಗಳ ಸ್ಥಾನಗಳಲ್ಲಿ ಪ್ರಾಕೃತಭಾಷಾಪದಗಳಲ್ಲಿ 'ಹ' ಕಾರವು ಸ್ಥಾನ ಪಡೆಯುತ್ತದೆ. ಇದರಿಂದ ಪ್ರಾಕೃತಮೂಲಗಳಲ್ಲಿ 'ವಿಶಾಹ' ಎಂದಿದ್ದುದು, ಸಂಸ್ಕೃತ ಭಾಷೆಯಲ್ಲಿ 'ವಿಶಾಖ' ಎಂಬುದಾಗಿ ಪರಿವರ್ತಿತವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಪ್ರಾಯಶಃ 'ವಿಶಾಹ' ಎಂಬ ಪದವು ಅರ್ಥದೃಷ್ಟಿಯಿಂದ ಅಸ್ಪಷ್ಟವೆನಿಸಿ ಕಂಡುಬಂದುದರಿಂದ, ಇದು ಪ್ರಾಕೃತಭಾಷೆಯ ಪದವಾಗಿದೆಯೆಂಬ ಗ್ರಹಿಕೆಯ ವಶವರ್ತಿಯಾಗಿ, ಅರ್ಥಯುಕ್ತವೆನಿಸುವಂತೆ, 'ವಿಶಾಖ' (ಭೂಪ) ಎಂಬ ಸಂಸ್ಕೃತ ಪದದ ರೂಪತಳೆದು ಉಳಿದುಬಂದಿದೆಯೆಂದು ವ್ಯಕ್ತವಾಗುವುದು. ಹಿಂದೆ ಹೇಳಿರುವಂತೆ, ಪಾರಸೀಕರಾಜಪ್ರತಿನಿಧಿಗಳಾದ ಶಾಹರ ವಿಜೇತೃವಾದ ನಂದರಾಜನನ್ನು, 'ವಿಶಾಹಭೂಪ'[1] ಎಂದು ಹೆಸರಿಸುವ ಪರಿಪಾಠಉಂಟಾಗಿದ್ದು, ಕಾಲಾಂತರದಲ್ಲಿ ಈ ಹೆಸರು 'ವಿಶಾಖಭೂಪ' ಎಂಬುದಾಗಿ ಪರಿವರ್ತಿತವಾಗಿದೆಯೆಂದು ವ್ಯಕ್ತವಾಗುವುದು.

ನಂದರಾಜನು ಕ್ರಿ. ಪೂ. ೪೭೫ ರಲ್ಲಿ ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿ ಈ ಸಮಯದಿಂದ ೮ ವರ್ಷಗಳ ತರುವಾಯ ಕ್ರಿ. ಪೂ. (೪೭೫ – ೮=) ೪೬೭ ರಲ್ಲಿ

ಮಗಧರಾಜ್ಯದ ಪ್ರಭುತ್ವವನ್ನು ಪಡೆದಿರುವನೆಂದು ಈವರೆವಿಗೆ ನಡೆದ ವಿಚಾರಸರಣಿಯಿಂದ ಫಲಿತವಾದಂತಾಗಿದೆ. ಆದರೆ ಈ ಫಲಿತಾಂಶದ ತಥ್ಯವನ್ನು ಪ್ರಶ್ನೆಯತ್ತವಾಗಿಸುವಂತಿರುವ ಮತ್ತೊಂದು ಅಂಶವನ್ನು ಈಗ ಪರಿಷ್ಕರಿಸಬೇಕಾದ ಅವಶ್ಯಕತೆಯಿದೆ.

ಯುಧಿಷ್ಠಿರನ ರಾಜ್ಯಭಾರಾಂತ್ಯಸಮಯ ಅಥವಾ ಪರಿಕ್ಷಿದ್ರಾಜನ ರಾಜ್ಯಭಾರಾಂಭಸಮಯದಲ್ಲಿ ಕಲಿಯುಗವು ಆರಂಭವಾಗಿದೆಯೆಂದೂ ಮತ್ತು ಈ ಸಮಯದಿಂದ ೨೬೨೫ ವರ್ಷಗಳ ತರುವಾಯದಲ್ಲಿ ನಂದರಾಜನು ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆಯಲ್ಲದೆ, ಈ ಸಮಯದಿಂದ ೮ ವರ್ಷಗಳ ತರುವಾಯದಲ್ಲಿ ಇವನಿಗೆ ಮಗಧರಾಜ್ಯದ ಪ್ರಭುತ್ವವು ಲಬ್ಧವಾಯಿತೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಇದರಂತೆ ಪರಿಕ್ಷಿದ್ರಾಜನ ರಾಜ್ಯಭಾರಾಂಭಸಮಯದಿಂದ (೨೬೨೫+೮=) ೨೬೩೩ ನೇ ವರ್ಷದಲ್ಲಿ ನಂದರಾಜನು ಮಗಧರಾಜ್ಯದ ಪ್ರಭುವಾಗಿ ಅಭಿಷಿಕ್ತನಾಗಿರುವನೆಂದು ಫಲಿತವಾದಂತಾಗುವುದು. ಆದರೆ ಪರಿಕ್ಷಿದ್ರಾಜನ ಜನ್ಮಸಮಯ ಮತ್ತು ನಂದರಾಜನ ರಾಜ್ಯಾಭಿಷೇಕಸಮಯಗಳ ಮಧ್ಯೆ ೧೦೫೦ ವರ್ಷಗಳ ಅಂತರವಿರುವುದಾಗಿ ವಿಷ್ಣುಪುರಾಣದಲ್ಲಿ ನಿರ್ದೇಶಿತವಾಗಿರುವುದು ಮತ್ತು ಭಾಗವತಪುರಾಣದಲ್ಲಿ ಈ ಅಂತರಕಾಲವನ್ನು ೧೧೧೫ ವರ್ಷಗಳೆಂದು ನಿರ್ದೇಶಿಸಲಾಗಿರುವುದು ವಿದಿತವಿದೆ. ಹೀಗೆ ಈ ಪುರಾಣಗಳ ಐತಿಹ್ಯೋಕ್ತಿಯಿಂದ, ಹಿಂದೆ ಪ್ರತಿಪಾದಿಸಲಾಗಿರುವ, ಪರಿಕ್ಷಿದ್ರಾಜನ ರಾಜ್ಯಭಾರಾಂಭಸಮಯ ಮತ್ತು ನಂದರಾಜನ ರಾಜ್ಯಾಭಿಷೇಕಸಮಯಗಳಮಧ್ಯೆ ೨೬೩೩ ವರ್ಷಗಳ ಅಂತರಕಾಲವಿದೆಯೆಂಬ, ಅಂಶದ ತಥ್ಯವು ಪ್ರಶ್ನವಶವಾದಂತಾಗುವುದು. ಈ ರೀತಿಯಾಗಿ ಪ್ರಶ್ನಾಯತ್ತವಾಗಿರುವ ಈ ಅಂಶದ ತಥ್ಯಾತಥ್ಯದ ಪರಿಷ್ಕಾರಕ್ಕಾಗಿ ಭಾರತಯುದ್ಧಸಮಯಾನಂತರ ರಾಜ್ಯಭಾರ ಮಾಡಿದ ಚಂದ್ರವಂಶ, ಸೂರ್ಯವಂಶ ಮತ್ತು ಬೃಹದ್ರಥವಂಶಗಳ ರಾಜಸಂತತಿಗಳ ಇತಿವೃತ್ತವು ಪುರಾಣಗಳಲ್ಲಿ ನಿರೂಪಿತವಾಗಿರುವ ಕ್ರಮವನ್ನು ಗಮನಿಸಬೇಕಾದ ಆವಶ್ಯಕತೆಯಿದೆ.

ಪುರಾಣಗಳಲ್ಲಿ ಪ್ರರೂಪಿತವಾಗಿರುವ ರಾಜವಂಶಚರಿತೆಯು, ಕಾಲಾಪೇಕ್ಷೆಯಿಂದ, ಎರಡು ವಿಭಾಗವಾಗಿ ಪರಿಗಣಿತವಾಗುವುದು. ಭಾರತಯುದ್ಧಪರ್ಯಂತ ಕಾಲದವರೆವಿಗೆ ಆದ ರಾಜಸಂತತಿಯ ಇತಿವೃತ್ತ ಹಾಗೂ ಈ ಸಮಯದಿಂದ ಮುಂದಿನ ರಾಜಸಂತತಿಯ ಇತಿವೃತ್ತಗಳನ್ನು ಕಾಲಾಪೇಕ್ಷೆಯಿಂದ ವಿಭಜಿಸಿ ಪ್ರರೂಪಿಸಲಾಗಿದೆ. ಭಾರತಯುದ್ಧವೀರರ ಸಮಕಾಲೀನರಾದ ವ್ಯಾಸಮಹರ್ಷಿಗಳು ಪುರಾಣಗಳನ್ನು ರಚನೆ ಮಾಡಿದರೆಂದು ಈ ಪುರಾಣಗಳಲ್ಲಿಯೇ ಹೇಳಲಾಗಿದೆ. ಇದರಂತೆ, ವ್ಯಾಸಮಹರ್ಷಿಗಳ ವಕ್ತೃತ್ವಾಪೇಕ್ಷೆಯಿಂದ ಭಾರತಯುದ್ಧಸಮಯಾನಂತರದ ರಾಜಸಂತತಿಯ ಇತಿವೃತ್ತವು ಭವಿಷ್ಯತ್ಕಾಲದ ಇತಿವೃತ್ತವೆನಿಸಿ ಪರಿಗಣಿತವಾಗುವುದು. ಇಷ್ಟಲ್ಲದೆ

ಭಾರತಯುದ್ಧವು ಅಂತ್ಯಗೊಂಡಸಮಯದಲ್ಲಿ ಪರಿಕ್ಷಿದ್ರಾಜನ ಜನನವಾಗಿದೆಯಾದುದರಿಂದ, ಇವನ ಜನ್ಮಸಮಯವು ಭಾರತಯುದ್ಧಸಮಯಾನಂತರದ ಭವಿಷ್ಯದ್ರಾಜಸಂತತಿಯ ಕಾಲನಿರ್ದೇಶನಕ್ಕೆ ಆಧಾರವೆನಿಸಿ ಪರಿಗಣಿತವಾಗಿದೆ. ಅಂತೆಯೇ ನಂದರಾಜನ ರಾಜ್ಯಾಭಿಷೇಕಸಮಯವನ್ನು ಪರಿಕ್ಷಿದ್ರಾಜನ ಜನ್ಮಸಮಯದಾಧಾರದಿಂದ ನಿರ್ದೇಶಿಸಲಾಗಿದೆಯೆಂದು ವ್ಯಕ್ತವಾಗುವುದು.

ಸಾಧಾರಣವಾಗಿ ಪುರಾಣಗಳೆಲ್ಲವೂ ವ್ಯಾಸಮಹರ್ಷಿಗಳಿಂದ ರಚಿತವಾದವುಗಳಾಗಿವೆಯೆಂಬ ಸಾಂಪ್ರದಾಯಿಕವಾದ ಅಭಿಪ್ರಾಯವಿದೆಯಾದರೂ, ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಪ್ರಧಾನವಾಗಿ, ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳು ನೈಮಿಷಾರಣ್ಯದಲ್ಲಿ ನಡೆದ ದೀರ್ಘಕಾಲಿಕ ಯಜ್ಞಸಮಯದಲ್ಲಿ ಸೂತಪುರಾಣಿಕರಿಂದ ಪ್ರಣೀತವಾದವುಗಳಾಗಿವೆಯೆಂದು ಈ ಪುರಾಣಗಳ ಹೇಳಿಕೆಗಳಿಂದಲೇ ವ್ಯಕ್ತವಾಗುವುದು.

ಸೂತಪುರಾಣಿಕರು, ಯುಧಿಷ್ಠಿರನಿಂದ ಮುಂದಿನ ಪುರುವಂಶಜರಾಜಸಂತತಿಯ ಇತಿವೃತ್ತವನ್ನು ಹೇಳಲುಪಕ್ರಮಿಸಿ, ಪರಿಕ್ಷಿದ್ರಾಜನಾದಿಯಾಗಿ ಅಶ್ವಮೇಧದತ್ತನೆಂಬ ರಾಜನ ಪರ್ಯಂತದ ರಾಜಸಂತತಿಯ ಇತಿವೃತ್ತವನ್ನು ಗತಕಾಲದ ವಿಷಯವಾಗಿ ಪ್ರರೂಪಿಸಿ, ಅನಂತರ ಈ ಅಶ್ವಮೇಧದತ್ತನ ಸುತನಾದ ಅಧಿಸಾಮಕೃಷ್ಣನಿಂದ ಮುಂದಿನ ಇತಿವೃತ್ತವನ್ನು ಭವಿಷ್ಯತ್ಕಾಲದ ಇತಿವೃತ್ತವೆನಿಸಿ ಹೇಳಿರುವುದು ಈ ಮುಂದಿನ ಶ್ಲೋಕಗಳಿಂದ ವ್ಯಕ್ತವಾಗುವುದು :

........................................................................ ।
ಪುತ್ರೋಽಶ್ವಮೇಧದತ್ತಾದ್ವೈ ಜಾತಃ ಪರಪುರಂಜಯಃ ॥ ೨೫೩ ॥
ಅಧಿಸಾಮಕೃಷ್ಣೋ ಧರ್ಮಾತ್ಮಾ ಸಾಂಪ್ರತೋಽಯಂ ಮಹಾಯಶಾಃ ।
ಯಸ್ಮಿನ್ ಪ್ರಶಾಸತಿ ಮಹೀಂ ಯುಷ್ಮಾಭಿರಿದಮಾಹೃತಂ ॥ ೨೫೪ ॥
ದುರಾಪಂ ದೀರ್ಘಸತ್ರಂ ವೈ ತ್ರೀಣಿ ವರ್ಷಾಣಿ ದುಶ್ಚರಂ ।
ವರ್ಷದ್ವಯಂ ಕುರುಕ್ಷೇತ್ರೇ ದೃಷದ್ವತ್ಯಾಂ ದ್ವಿಜೋತ್ತಮಾಃ ॥ ೨೫೫ ॥

ಋಷಯ ಊಚುಃ- ।

ಶ್ರೋತುಂ ಭವಿಷ್ಯಮಿಚ್ಛಾಮಃ ಪ್ರಜಾನಾಂ ವೈ ಮಹಾಮತೇ ।
ಸೂತ ಸಾರ್ಧಂ ನೃಪೈರ್ಭಾವ್ಯಂ ವ್ಯತೀತಂ ಕೀರ್ತಿತಂ ತ್ವಯಾ ॥ ೨೫೬ ॥
[ವಾ. ಪು. ಅ. ೩೭]

ಅಧಿಸೋಮಕೃಷ್ಣಶ್ಚೈತೇಷಾಂ ಪ್ರಥಮೋ ವರ್ತತೇ ನೃಪಃ ।
ತಸ್ಯಾನ್ವಯೇ ವಕ್ಷ್ಯಾಮಿ ಭವಿಷ್ಯೇ-ಕಥಿತಾನ್ನೃಪಾನ್ ॥ ೭೭ ॥
[ಮತ್ಸ್ಯಪುರಾಣ-ಅ. ೫೦]

ಅಧಿಸಾಮಕೃಷ್ಣನ ರಾಜ್ಯಭಾರಸಮಯದಲ್ಲಿ, ದೃಷದ್ವತೀನದೀತೀರದಲ್ಲಿ ದೀರ್ಘ ಕಾಲಿಕಯಜ್ಞವು ನಡೆದಿರಲು, ಸೂತಪುರಾಣಿಕರು ದ್ವಿಜೋತ್ತಮರ ಕೋರಿಕೆಯಂತೆ, ಅಧಿಸಾಮಕೃಷ್ಣನ ಪರ್ಯಂತಕಾಲದ ಇತಿವೃತ್ತವನ್ನು ನಿರೂಪಿಸಿರಲು, (ಆಗ) ಋಷಿ ಗಳು, 'ಗತಕಾಲದ ಇತಿವೃತ್ತವು ನಿನ್ನಿಂದ ಹೇಳಲ್ಪಟ್ಟಿತು, (ವ್ಯತೀತಂ ಕೀರ್ತಿತಂ ತ್ವಯಾ), ಎಲೈ ಮಹಾಮತಿಯಾದ ಸೂತನೆ! ಮುಂದಾಗಲಿರುವ (ಭಾವ್ಯಂ) ರಾಜಸಮೇತರಾದ ಪ್ರಜೆಗಳ ಭವಿಷ್ಯವನ್ನು ಕೇಳಲಿಚ್ಛಿಸುವೆವು' ಎಂದು ಕೋರಿದರೆಂದು ಮೇಲಿನ ಶ್ಲೋಕಗಳ ತಾತ್ಪರ್ಯವಾಗಿದೆ. ಇದರಿಂದ ಈಗ ಉಪಲಬ್ಧವಿರುವ ಪುರಾ ಣಗಳ ಪ್ರವಚನಕಾರರಾದ ಸೂತಪುರಾಣಿಕರು, ಪುರುವಂಶದ ಅಧಿಸಾಮಕೃಷ್ಣನ ಸಮಕಾಲೀನರಾಗಿದ್ದಿರಬೇಕೆಂದು ವ್ಯಕ್ತವಾಗುವುದಲ್ಲದೆ, ಈ ಅಧಿಸಾಮಕೃಷ್ಣನಿಂದ ಮುಂದಿನ ಪುರುವಂಶಜರಾಜಸಂತತಿಯ ಇತಿವೃತ್ತವನ್ನು ಸೂತಪುರಾಣಿಕರ ವಕ್ತೃ ತ್ವದಲ್ಲಿ ಭವಿಷ್ಯದ್ವೃತ್ತಾಂತವಾಗಿ ನಿರೂಪಿಸಲಾಗಿದೆಯೆಂದು ಸ್ಪಷ್ಟವಾಗುವುದು.

ಇಂತೆಯೇ ಇಕ್ಷ್ವಾಕುವಂಶಜನಾದ ದಿವಾಕರನೆಂಬುವನು ಸೂತಪುರಾಣಿಕರ ಸಮಕಾಲೀನನಾಗಿದ್ದು, ಈ ದಿವಾಕರನಿಂದ ಮುಂದಿನ ರಾಜಸಂತತಿಯ ಇತಿವೃತ್ತ ವನ್ನು ಭವಿಷ್ಯತ್ಕಾಲದ ಇತಿವೃತ್ತವನ್ನಾಗಿ ಪ್ರರೂಪಿಸಲಾಗಿರುವುದು ಈ ಮುಂದಿನ ಉಲ್ಲೇಖದಿಂದ ಸ್ಪಷ್ಟವಾಗುವುದು :

> ವತ್ಸವ್ಯೂಹಾತ್ ಪ್ರತಿವ್ಯೂಹಸ್ತಸ್ಯ ಪುತ್ರೋ ದಿವಾಕರಃ ।
> ಯಶ್ಚ ಸಾಂಪ್ರತಮಧ್ಯಾಸ್ತ ಅಯೋಧ್ಯಾಂ ನಗರೀಂ ನೃಪಃ ॥ ೨೭೮ ॥

[ವಾಯು ಪು.–ಅ. ೩೭–ಶ್ಲೋ. ಸಂ. ೨೭೮ ಮತ್ತು ಮುಂದೆ]

ಇದೇ ರೀತಿಯಾಗಿ ಮಗಧರಾಜ್ಯದ ಬೃಹದ್ರಥವಂಶಜನಾದ ಸೇನಾಜಿತ್ತನೆಂಬು ವನು ಸೂತಪುರಾಣಿಕರ ಸಮಕಾಲೀನನಾಗಿದ್ದು ಇವನಿಂದ ಮುಂದಿನ ರಾಜಸಂತ ತಿಯ ಇತಿವೃತ್ತವನ್ನು ಭವಿಷ್ಯತ್ಕಾಲದ ಇತಿವೃತ್ತವೆನಿಸಿ ಪ್ರರೂಪಿಸಲಾಗಿರುವುದು ಈ ಮುಂದಿನ ಉಲ್ಲೇಖದಿಂದ ಸ್ಪಷ್ಟವಾಗುವುದು :

> ಸೇನಾಜಿತ್ಸಾಂಪ್ರತಂಚಾಪಿ ಏತಾ ವೈ ಭುಜ್ಯತೇ ಸಮಾಃ ।
> ಶ್ರುತಂಜಯಸ್ತು ವರ್ಷಾಣಿ ಚತ್ವಾರಿಂಶದ್ಭವಿಷ್ಯತಿ ॥ ೨೯೮ ॥

[ವಾ. ಪು.]

ಈ ರೀತಿಯಾಗಿ ಮೇಲ್ಕಂಡ ಉಲ್ಲೇಖಗಳಿಂದ ಸೂತಪುರಾಣಿಕರು ಸೋಮ ವಂಶಜನಾದ ಅಧಿಸೋಮಕೃಷ್ಣ, ಇಕ್ಷ್ವಾಕುವಂಶಜನಾದ ದಿವಾಕರ ಮತ್ತು ಬೃಹ ದ್ರಥವಂಶಜನಾದ ಸೇನಾಜಿತ್ ಎಂಬ ರಾಜರ ಸಮಕಾಲೀನರಾಗಿದ್ದರೆಂದು ಮತ್ತು ಈ ರಾಜರಿಂದ ಮುಂದಿನ ರಾಜಸಂತತಿಯ ಇತಿವೃತ್ತವನ್ನು ಭವಿಷ್ಯತ್ಕಾಲದ ಇತಿವೃತ್ತ ವೆನಿಸಿ ಪುರಾಣಗಳಲ್ಲಿ ಪ್ರರೂಪಿಸಸಾಗಿದೆಯೆಂದು ಸ್ಪಷ್ಟವಾಗುವುದು.

ಮಗಧಾಧಿಪನೂ, ಬೃಹದ್ರಥವಂಶಜನೂ, ಜರಾಸಂಧನ ಸುತನೂ ಆದ ಸಹದೇವನು ಭಾರತಯುದ್ಧದಲ್ಲಿ ಮೃತನಾಗಲು, ಅವನ ಸುತನಾದ ಸೋಮಾಧಿಯು ಮಗಧರಾಜನಾಗಿ ಅಭಿಷಿಕ್ತನಾದನೆಂದು ಪುರಾಣಗಳಲ್ಲಿ ಹೇಳಲಾಗಿದೆ.[1] ಭಾರತಯುದ್ಧಾಂತ್ಯಸಮಯದಲ್ಲಿ ಪರಿಕ್ಷಿದ್ರಾಜನ ಜನನವಾಗಿದೆಯಾದುದರಿಂದ, ಇವನ ಜನ್ಮ ಮತ್ತು ಸೋಮಾಧಿಯ ರಾಜ್ಯಾಭಿಷೇಕಪ್ರಸಂಗಗಳು ಸಮಕಾಲೀನ ಪ್ರಸಂಗಗಳೆನಿಸಿ ಪರಿಗಣಿತವಾಗುವುವು. ಪುರಾಣಗಳಲ್ಲಿ, ಈ ಸೋಮಾಧಿರಾಜನ ಅನುಕ್ರಮದಲ್ಲಿ ಆರನೇ ರಾಜನಾಗಿ ನಿರ್ದೇಶಿತನಾಗಿರುವ ಬೃಹತ್ಕರ್ಮನೆಂಬ ರಾಜನ ಪರ್ಯಂತಕಾಲದ ಇತಿವೃತ್ತವನ್ನು ಗತಕಾಲದ ಇತಿವೃತ್ತವನ್ನಾಗಿಯೂ, ಏಳನೆಯ ಅರಸನೂ ಸೂತಪುರಾಣಿಕರ ಸಮಕಾಲೀನನೂ ಆದ ಸೇನಾಜಿತ್ತನಿಂದ ಮುಂದಿನ ರಾಜಸಂತತಿಯ ಇತಿವೃತ್ತವನ್ನು ಭವಿಷ್ಯತ್ಕಾಲದ ಇತಿವೃತ್ತವನ್ನಾಗಿಯೂ ಪ್ರರೂಪಿಸಲಾಗಿದೆ. ಈ ಬೃಹದ್ರಥಮನೆತನದ ಅಂತಿಮ ಅರಸನನ್ನು ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ 'ಅರಿಂಜಯ' ನೆಂದು ಹೆಸರಿಸಲಾಗಿದ್ದು ಇತರ ಪುರಾಣಗಳಲ್ಲಿ 'ರಿಪುಂಜಯ' ನೆಂದು ಹೆಸರಿಸಲಾಗಿದೆ. ಬೃಹದ್ರಥಮನೆತನದ ಈ ರಾಜಸಂತತಿಯ ಇತಿವೃತ್ತನಿರೂಪಣೆಯ ಅಂತ್ಯದಲ್ಲಿ ಉಕ್ತವಾಗಿರುವ ಈ ಮುಂದಿನ ಐತಿಹ್ಯಾಂಶವು ಪ್ರಕೃತಸಂದರ್ಭದ ದೃಷ್ಟಿಯಿಂದ ಗಮನಾರ್ಹವಾಗಿದೆ :

> ದ್ವಾತ್ರಿಂಶಚ್ಚ ನೃಪಾಹ್ಯೇತೇ ಭವಿತಾರೋ ಬೃಹದ್ರಥಾಃ ।
> ಪೂರ್ಣಂ ವರ್ಷಸಹಸ್ರಂ ವೈ ತೇಷಾಂ ರಾಜ್ಯಂ ಭವಿಷ್ಯತಿ ॥

ಅರ್ಥ : 'ಈ ಮುವ್ವತ್ತೆರಡುಜನ ರಾಜರು[2] ಮುಂದಾಗಲಿರುವ ಬೃಹದ್ರಥರು; ಪೂರ್ಣವಾಗಿ ಒಂದು ಸಹಸ್ರವರ್ಷಕಾಲ ಅವರ ರಾಜ್ಯಭಾರವು ಆಗುವುದು'.

ಈ ಐತಿಹ್ಯಾಂಶದನುಗುಣವಾಗಿ ೧೦೦೦ ವರ್ಷಕಾಲ ರಾಜ್ಯಭಾರಮಾಡಿದ ರಾಜಸಂತತಿಯು ಭವಿಷ್ಯತ್ಕಾಲದ ರಾಜಸಂತತಿಯಾಗಿ ನಿರ್ದೇಶಿತವಾಗಿರುವುದು ಸ್ಪಷ್ಟವಿದೆ. ಸೇನಾಜಿತ್ತನಿಂದ ಮುಂದಿನ ರಾಜಸಂತತಿಯು ಭವಿಷ್ಯತ್ಕಾಲದ ರಾಜಸಂತತಿಯಾಗಿ ನಿರ್ದೇಶಿತವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಸೇನಾಜಿತ್ತನ ರಾಜ್ಯಭಾರಾಂತ್ಯಸಮಯದಿಂದ ಇವನ ಮನೆತನದ ಅಂತಿಮ ಅರಸನಾದ ರಿಪುಂಜಯನ ಪರ್ಯಂತಕಾಲದ ರಾಜಸಂತತಿಯ ರಾಜ್ಯಭಾರವು ೧೦೦೦ ವರ್ಷಕಾಲ ನಡೆದಿದೆಯೆಂದು ಫಲಿತವಾಗುವುದು. ಇಂತೆಯೇ ರಿಪುಂಜಯನ ರಾಜ್ಯಭಾರಾಂತ್ಯಸಮಯದಿಂದ ೧೧೫ ವರ್ಷಗಳ ತರುವಾಯದಲ್ಲಿ ನಂದರಾಜನು ಅಭಿಷಿಕ್ತನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆಯಾದುದುರಿಂದ, ಸೇನಾಜಿತ್ತನ ರಾಜ್ಯಭಾರಾಂತ್ಯಸಮಯ ಮತ್ತು ನಂದರಾಜನ ರಾಜ್ಯಾಭಿಷೇಕಸಮಯಗಳ ಮಧ್ಯೆ (೧೦೦೦+೧೧೫=)

---

1 ವಾಯುಪುರಾಣ–ಅಧ್ಯಾಯ ೯೯–ಶ್ಲೋ. ಸಂ. ೨೯೯-೩೯೧.

2 ಬ್ರಹ್ಮಾಂಡ ಪುರಾಣದಲ್ಲಿ ಇಪ್ಪತ್ತೆರಡು ಜನ ರಾಜರೆಂದು ನಿರ್ದೇಶಿತವಾಗಿದೆ.

೧೧೧೫ ವರ್ಷಗಳ ಅಂತರವಿರುವುದಾಗಿ ಫಲಿತವಾಗುವುದು. ಇದರಿಂದ, ಪರಿಕ್ಷಿದ್ರಾಜನ ಜನ್ಮಸಮಯ ಮತ್ತು ನಂದರಾಜನ ರಾಜ್ಯಾಭಿಷೇಕಸಮಯಗಳ ಮಧ್ಯೆ ೧೦೫೦ ವರ್ಷಗಳ ಅಂತರವಿದೆಯೆಂದು ವಿಷ್ಣುಪುರಾಣದಲ್ಲಿ ನಿರ್ದೇಶಿತವಾಗಿರುವ ಐತಿಹ್ಯಾಂಶ ಮತ್ತು ೧೧೧೫ ವರ್ಷಗಳ ಅಂತರವಿದೆಯೆಂದು ಭಾಗವತಪುರಾಣದಲ್ಲಿ ನಿರ್ದೇಶಿತವಾಗಿರುವ ಐತಿಹ್ಯಾಂಶಗಳಲ್ಲಿ ಸಂಯೋಜಿತವಾಗಿರುವ (೧೦೫೦–೫೦ ; ೧೧೧೫–೧೧೫ =) ೧೦೦೦ ವರ್ಷಗಳ ಅಂತರಕಾಲವು, ಸೋಮಾಧಿಯ ರಾಜ್ಯಾಭಿಷೇಕಸಮಯದಿಂದ ರಿಪುಂಜಯನ ರಾಜ್ಯಭಾರಾಂತ್ಯಸಮಯಪರ್ಯಂತದ ಅವಧಿಯಾಗಿದೆಯೆಂಬ ತಪ್ಪು ಗ್ರಹಿಕೆಯು ಸಂಕಲಿತವಾಗಿದೆಯೆಂದು ವ್ಯಕ್ತವಾಗುವುದು. ಇಂತೆಯೇ ವಾಯು, ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿ ಅನುಕ್ರಮವಾಗಿ ಮಹಾದೇವ, ಮಹಾನಂದ ಮತ್ತು ಮಹಾಪದ್ಮ ಎಂಬ ಹೆಸರಿನ ರಾಜರ ರಾಜ್ಯಾಭಿಷೇಕಸಮಯವೆಂದು ನಿರ್ದೇಶಿಸಲಾಗಿರುವಲ್ಲಿಯೂ ಇದೇರೀತಿಯ ತಪ್ಪುಗ್ರಹಿಕೆಯು ಸಂಕಲಿತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಸದ್ಯ ಉಪಲಬ್ಧವಿರುವ ಪುರಾಣಗಳಲ್ಲಿ ನಿರೂಪಿತವಾಗಿರುವ ಮಗಧರಾಜಸಂತತಿ ಮತ್ತು ಅವಂತೀರಾಜಸಂತತಿಗಳ ಇತಿವೃತ್ತಪ್ರರೂಪಣೆಯಲ್ಲಿ ಅನೇಕ ರೀತಿಯ ನ್ಯೂನಾತಿರೇಕರೂಪದ ದೋಷಗಳೇರ್ಪಟ್ಟಿರುವುದು ಹಿಂದಿನ ವಿಮರ್ಶೆಯಿಂದ ಸ್ಪಷ್ಟಗೊಂಡಿದೆ. ಇಂತೆಯೇ ಪರಿಕ್ಷಿದ್ರಾಜನ ಜನ್ಮಸಮಯದಲ್ಲಿ ಅಭಿಷಿಕ್ತನಾದ ಸೋಮಾಧಿಯ ರಾಜ್ಯಾಭಿಷೇಕಸಮಯದಿಂದ ರಿಪುಂಜಯನ ರಾಜ್ಯಭಾರಾಂತ್ಯಸಮಯಪರ್ಯಂತದ ಅವಧಿಯನ್ನು ಮೇಲ್ಕಂಡಂತೆ ೧೦೦೦ ವರ್ಷಗಳೆಂದು ಪರಿಗಣಿಸಲಾಗಿರುವಲ್ಲಿಯೂ ಪ್ರಮಾದವಶವಾಗಿ ದೋಷವೇರ್ಪಟ್ಟಿದೆಯೆಂದು ಹೇಳಲವಕಾಶವಾಗುವುದು.

ನಂದರಾಜನ ರಾಜ್ಯಾಭಿಷೇಕಸಮಯ ನಿರ್ದೇಶಕವಾದ 'ಯಾವತ್ಪರಿಕ್ಷಿತೋ ಜನ್ಮ...............' ಎಂಬ ಪೂರ್ವೋಲ್ಲಿಖಿತ ಐತಿಹ್ಯಾಂಶವು ನಂದರಾಜನ ಇತಿವೃತ್ತ ಅಥವಾ ನಂದರಾಜಮನೆತನದ ಇತಿವೃತ್ತನಿರೂಪಣೆಯ ಸಂದರ್ಭದಲ್ಲಿ ಉಕ್ತವಾಗಿರದೆ ನಂದ, ಮೌರ್ಯ, ಶುಂಗ, ಕಣ್ವ ಮತ್ತು ಆಂಧ್ರಭೃತ್ಯವಂಶಜರಾದ ರಾಜರೆಲ್ಲರ ಇತಿವೃತ್ತ ನಿರೂಪಣೆಯ ಅನಂತರದಲ್ಲಿ ಅನನುಷಂಗಿಕರೀತಿಯಿಂದ ಉಕ್ತವಾಗಿದೆ. ಹೀಗೆ ಪೂರ್ವಾಪರಸಂಬಂಧವಿಲ್ಲದೆ, ಅನನುಷಂಗಿಕರೀತಿಯಿಂದ ಉಕ್ತವಾಗಿರುವ ಈ ಐತಿಹ್ಯಾಂಶವು ಆಂಧ್ರಭೃತ್ಯರಾಜಸಂತತಿಯ ರಾಜ್ಯಭಾರವು ಅಂತ್ಯಗೊಂಡಬಳಿಕ ಪುರಾಣಗಳಲ್ಲಿ ಸಂಯೋಜಿತವಾಗಿರುವುದೆಂದು ಮತ್ತು ಈ ಆಂಧ್ರಭೃತ್ಯರ ರಾಜ್ಯಭಾರಾಂತ್ಯಸಮಯವನ್ನು ನಿರ್ದೇಶಿಸುವ ಪ್ರಸಂಗವಶವಾಗಿ ಈ ಐತಿಹ್ಯಾಂಶವು ರೂಪಿತವಾಗಿದೆಯೆಂದು ವ್ಯಕ್ತವಾಗುವುದು. ಆಂಧ್ರಭೃತ್ಯರಾಜರ ರಾಜ್ಯಭಾರಾಂತ್ಯಸಮಯ ನಿರ್ದೇಶಕವಾದ ಒಂದೆರಡು ಪುರಾಣೋಕ್ತಿಗಳು ಈ ಮುಂದಿನಂತಿವೆ :

ಮಹಾದೇವಾಭಿಷೇಕಾತ್ತು ಜನ್ಮಯಾವತ್ಪರಿಕ್ಷಿತಃ ।
ಏತದ್ವರ್ಷಸಹಸ್ರಂತು ಜ್ಞೇಯಂ ಪಂಚಾಶದುತ್ತರಂ ॥ ೪೯ ॥

ಪ್ರಮಾಣಂ ವೈ ತಥಾಚೋಕ್ತಂ ಮಹಾಪದ್ಮಾಂತರಂ ಚ ಯತ್ |
ಅಂತರಂ ತಚ್ಛತಾನ್ಯಷ್ಟೌ ಷಟ್ತ್ರಿಂಶಚ್ಚ ಸಮಾಃ ಸ್ಮೃತಾಃ || ೪೧೦ ||
ಏತತ್ಕಾಲಾಂತರಂ ಭಾವ್ಯಾ ಆಂಧ್ರಾಂತಾ ಯೇ ಪ್ರಕೀರ್ತಿತಾ |
ಭವಿಷ್ಯೈಸ್ತತ್ರ ಸಂಖ್ಯಾತಾಃ ಪುರಾಣಜ್ಞೈಃ ಶ್ರುತರ್ಷಿಭಿಃ || ೪೧೧ ||

[ವಾಯುಪುರಾಣ ಅ. ೩೭].

ಮಹಾಪದ್ಮಾಭಿಷೇಕಾತ್ತು ಯಾವಜ್ಜನ್ಮ ಪರಿಕ್ಷಿತಃ |
ಏವಂ ವರ್ಷ ಸಹಸ್ರಂತು ಜ್ಞೇಯಂ ಪಂಚಾಶದುತ್ತರಂ || ೩೬ ||
ಪೌಲೋಮಾಸ್ತು ತಥಾಂಧ್ರಾಸ್ತು ಮಹಾಪದ್ಮಾಂತರೇ ಪುನಃ |
ಅನಂತಂರಂ ಶತಾನ್ಯಷ್ಟೌ ಷಟ್ತ್ರಿಂಶತ್ತು ಸಮಾಸ್ತಥಾ || ೩೭ ||
.............................................................
ತಾವತ್ಕಾಲಾಂತರಂ ಭಾವ್ಯಂ ಆಂಧ್ರಾಂತಾದಾಪರಿಕ್ಷಿತಃ || ೩೮ ||

[ಮತ್ಸ್ಯಪುರಾಣ-ಅ. ೨೭೩]

ಮಹಾನಂದಾಭಿಷೇಕಾಂತಂ ಜನ್ಮಯಾವತ್ಪರಿಕ್ಷಿತಃ |
............................................................. || ೨೨೭ ||

ವಾಯುಪುರಾಣದ ಮೇಲ್ಕಂಡ ಶ್ಲೋಕಗಳ ಪಾಠವಿದೆ.
.............................................................
............................................................. || ೨೨೮||
.............................................................
............................................................. || ೨೨೯ ||

[ಬ್ರಹ್ಮಾಂಡಪುರಾಣ-ಅ. ೭೪]

ಪರಿಕ್ಷಿದ್ರಾಜನ ಜನನಸಮಯ ಮತ್ತು ನಂದ ಅಥವಾ ಮಹಾನಂದಾದಿ ಇತರ ರಾಜರಲ್ಲೊಬ್ಬನ ರಾಜ್ಯಾಭಿಷೇಕಸಮಯಗಳ ಅಂತರಕಾಲವನ್ನು ನಿರ್ದೇಶಿಸುವ ಮೇಲ್ಕಂಡ ಐತಿಹ್ಯೋಕ್ತಿಯು ಆಂಧ್ರಮನೆತನದ ರಾಜಸಂತತಿಯ ಇತಿವೃತ್ತನಿರೂಪಣಾನಂತರದಲ್ಲಿ ಉಕ್ತವಾಗಿರುವುದನ್ನು ಗಮನಿಸಬಹುದು. ನಂದರಾಜನ ಅಥವಾ ಇವನ ಮನೆತನದ ಯಾರಾದರೊಬ್ಬ ರಾಜನ ಅಭಿಷೇಕಸಮಯವನ್ನು ನಿರ್ದೇಶಿಸುವ ಉದ್ದೇಶದಿಂದ ಈ ಐತಿಹ್ಯೋಕ್ತಿಯು ಪ್ರರೂಪಿತವಾಗಿದ್ದಲ್ಲಿ, ಇದು ಈ ರಾಜಮನೆತನದ ಇತಿವೃತ್ತನಿರೂಪಣಾಸಂದರ್ಭದಲ್ಲಿ ಉಕ್ತವಾಗಿದ್ದಿರಬೇಕಿದ್ದಿತು. ಆದರೆ ಈ ಐತಿಹ್ಯೋಕ್ತಿಯು ಆಂಧ್ರಮನೆತನದ ಇತಿವೃತ್ತನಿರೂಪಣಾನಂತರದಲ್ಲಿ ಉಕ್ತವಾಗಿದೆಯಾದುದರಿಂದ, ಈ ಮನೆತನದ ರಾಜ್ಯಭಾರಾಂತ್ಯಸಮಯವನ್ನು ನಿರ್ದೇಶಿಸುವ ಉದ್ದೇಶದಿಂದ ಪ್ರರೂಪಿತವಾಗಿದೆಯೆಂದು ವ್ಯಕ್ತಪಡುವುದಲ್ಲದೆ, ಮೇಲ್ಕಂಡ ಶ್ಲೋಕಗಳು ಆಂಧ್ರಮನೆತನದ ರಾಜ್ಯಭಾರವು ಅಂತ್ಯಗೊಂಡ ಸಮಯಾನಂತರವೇ ರಚಿತ

ವಾಗಿರಬೇಕೆಂದೂ ಗ್ರಹಿಸಲವಕಾಶವಾಗುವುದು. ಪೌರವವಂಶದ ಅಧಿಸಾಮಕೃಷ್ಣ ಮತ್ತು ಇವನ ಸಮಕಾಲೀನರಾದ ಬೃಹದ್ರಥಮನೆತನದ ಸೇನಾಜಿತ್ ಹಾಗೂ ಇಕ್ಷ್ವಾಕುವಂಶದ ದಿವಾಕರರಿಂದ ಮುಂದಿನ ರಾಜಸಂತತಿಯ ಇತಿವೃತ್ತವನ್ನು ಭವಿಷ್ಯದಿತಿವೃತ್ತವನ್ನಾಗಿ ಸೂತಪುರಾಣಿಕರು ನಿರೂಪಿಸಿದರೆಂದು ಸದ್ಯ ಉಪಲಬ್ಧವಿರುವ ಪುರಾಣಗಳಲ್ಲಿ ಹೇಳಲಾಗಿದೆಯಾದರೂ, ಈ ಪುರಾಣಗಳಲ್ಲಿಯೇ ಅನೇಕ ಸಂದರ್ಭಗಳಲ್ಲಿ ಪುರಾಣಜ್ಞರ, ಪುರಾವಿದರ, ವಂಶವಿದರ ಮತ್ತು ಭವಿಷ್ಯಪುರಾಣದ[1] ಹೇಳಿಕೆಗಳನ್ನು ಆಧಾರವೆನಿಸಿ ನಿರ್ದೇಶಿಸಲಾಗಿರುವ ಉಕ್ತಿಗಳೂ ಇವೆ. ಇಷ್ಟಲ್ಲದೆ ಸದ್ಯ ಉಪಲಬ್ಧವಿರುವ ಪುರಾಣಗಳಲ್ಲಿ ನಿರೂಪಿತವಾಗಿರುವ ರಾಜವಂಶಚರಿತೆಗೆ 'ಭವಿಷ್ಯಪುರಾಣ'ವು ಆಧಾರವಾಗಿದೆಯೆಂದು ಈ ಪುರಾಣಗಳ ಹೇಳಿಕೆಗಳಿಂದಲೇ ವ್ಯಕ್ತಪಡುವುದೆಂದೂ ಮತ್ತು ಮೂಲಾಧಾರವಾದ ಈ ಭವಿಷ್ಯಪುರಾಣವು ಈಗ ಉಪಲಬ್ಧವಿರುವ ಭವಿಷ್ಯಪುರಾಣದಿಂದ ಬೇರೆಯಾದುದೆಂದೂ ಸನ್ಮಾನ್ಯ ಪರ್ಜಿಟರ್‌ರವರು ಅಭಿಪ್ರಾಯಪಟ್ಟಿದ್ದಾರೆ.[2] ಇದರಂತೆ, ಆಂಧ್ರಮನೆತನದ ರಾಜ್ಯಭಾರಾಂತ್ಯಸಮಯಾನಂತರದ ಕಾಲದಲ್ಲಿ, ಸೂತಪುರಾಣೀಕರಿಂದ ಪ್ರಣೀತವಾದುದೆನಿಸಿ ಉಪಲಬ್ಧವಿದ್ದ ಮೂಲಭವಿಷ್ಯಪುರಾಣ ಹಾಗೂ ಇತರ ರಾಜವಂಶಚರಿತೆಗಳ ಆಧಾರದಿಂದ ರಾಜವಂಶಚರಿತೆಯನ್ನು ಸಂಕಲನಮಾಡಿ ಈಗ ಉಪಲಬ್ಧವಿರುವ ಪುರಾಣಗಳಲ್ಲಿ ಅಳವಡಿಸಿದ ಅಜ್ಞಾತವ್ಯಕ್ತಿಗಳು, ಮೂಲಭವಿಷ್ಯಪುರಾಣದಲ್ಲಿ ಬೃಹದ್ರಥರಾಜಸಂತತಿಯ ಇತಿವೃತ್ತದ ಅಂತ್ಯದಲ್ಲಿ ನಿರ್ದೇಶಿತವಾಗಿದ್ದ ೧೦೦೦ ವರ್ಷಗಳ ಕಾಲದ ರಾಜ್ಯಭಾರಾವಧಿಯನ್ನು, ಭಾರತಯುದ್ಧಾನಂತರ ಪರಿಕ್ಷಿದ್ರಾಜನ ಜನ್ಮಸಮಯದಲ್ಲಿ ಮಗಧರಾಜನಾಗಿ ಅಭಿಷಿಕ್ತನಾದ ಸೋಮಾಧಿಯಾರಭ್ಯ ಈ ಮನೆತನದ ಅಂತಿಮ ಅರಸನಾದ ರಿಪುಂಜಯನ ಪರ್ಯಂತಕಾಲವ ಒಟ್ಟು ರಾಜ್ಯಭಾರಕಾಲವನ್ನಾಗಿ ಗ್ರಹಿಸಿದ್ದಾರೆ. ಈ ಗ್ರಹಿಕೆಯನುಗುಣವಾಗಿ ನಂದ ಅಥವಾ ಮಹಾದೇವ ಅಥವಾ ಮಹಾನಂದ ಅಥವಾ ಮಹಾಪದ್ಮನ ರಾಜ್ಯಾಭಿಷೇಕಸಮಯವನ್ನು ನಿರ್ಣಯಿಸಲೆತ್ನಿಸಿ ಈ ನಿರ್ಣಯದನುಗುಣವಾಗಿ ಆಂಧ್ರಮನೆತನದ ರಾಜ್ಯಭಾರಾಂತ್ಯಸಮಯವನು' ನಿಶ್ಚಯಿಸಲೆತ್ನಿಸಲಾಗಿದೆಯೆಂದು ವ್ಯಕ್ತವಾಗುವುದು. ಅಂತೆಯೇ ಈ ಯತ್ನದ ಫಲವಾಗಿ 'ಪರಿಕ್ಷಿದ್ರಾಜನ ಜನ್ಮಸಮಯದಿಂದ ನಂದರಾಜನ (ಅಥವಾ ಪೂರ್ವಸೂಚಿತರಾದ ಇತರ ರಾಜರಲ್ಲೊಬ್ಬನ) ರಾಜ್ಯಾಭಿಷೇಕಸಮಯಪರ್ಯಂತ ೧೦೫೦ ಅಥವಾ ೧೧೧೫ ವರ್ಷಗಳು ಗತಿಸಿದ್ದುವು' ಎಂಬ ಐತಿಹ್ಯಾಂಶವು ರೂಪಿತವಾಗಿದೆಯೆಂದು ಹೇಳಲವಕಾಶವಾಗುವುದು. ಆದರೆ ಸೂತಪುರಾಣಿಕರ ಪ್ರವಚನರೂಪವಾಗಿ ಈಗ ಉಳಿದುಬಂದಿರುವ ಪುರಾಣಗಳಲ್ಲಿ ಸೋಮಾಧಿಯಾದಿಯಾಗಿ ಬೃಹತ್ಕ

---

1 ಭವಿಷ್ಯೇ ಕಥಿತಂ ಬುಧೈಃ.

2 ದಿ ಪುರಾಣ ಟೆಕ್ಸ್ಟ್ ಆಫ್ ದಿ ಡೈನಾಸ್ಟೀಸ್ ಆಫ್ ದಿ ಕಲಿ ಏಜ್—ಮುನ್ನುಡಿ.

ರ್ಮನ ಪರ್ಯಂತರಾದ ರಾಜರನ್ನು ಗತಕಾಲದ ಅರಸರನ್ನಾಗಿಯೂ ಮತ್ತು ಈ ಬೃಹತ್ಕರ್ಮನ ಸುತನಾದ ಸೇನಾಜಿತ್ತನಿಂದ ಮುಂದಿನ ರಾಜಸಂತತಿಯನ್ನು ಭವಿಷ್ಯದ್ರಾಜಸಂತತಿಯನ್ನಾಗಿಯೂ ನಿರ್ದೇಶಿಸಲಾಗಿದ್ದು, ಬೃಹದ್ರಥರಾಜಸಂತತಿಯ ಇತಿವೃತ್ತಾಂತ್ಯದಲ್ಲಿ ನಿರ್ದೇಶಿತವಾಗಿರುವ ೧೦೦೦ ವರ್ಷಗಳ ರಾಜ್ಯಭಾರಾವಧಿಯು ಸೇನಾಜಿತ್ತನಿಂದ ಮುಂದಿನ ಭವಿಷ್ಯದ್ರಾಜಸಂತತಿಯ ರಾಜ್ಯಭಾರಕಾಲವಾಗಿದೆಯೆಂದು ಹಿಂದಿನ ವಿಮರ್ಶೆಯಿಂದ ವ್ಯಕ್ತಪಟ್ಟಿದೆ. ಇದರಂತೆ ಪರಿಕ್ಷಿದ್ರಾಜನ ಜನ್ಮಸಮಯದಲ್ಲಿ ಅಭಿಷಿಕ್ತನಾದ ಸೋಮಾಧಿಯ ರಾಜ್ಯಭಾರಾರಂಭಸಮಯ ಮತ್ತು ರಿಪುಂಜಯನ ರಾಜ್ಯಭಾರಾಂತ್ಯಸಮಯಗಳ ಮಧ್ಯೆ ೧೦೦೦ ವರ್ಷಗಳಿಂದ ಅಧಿಕವಾದ ಕಾಲದ ಅಂತರವಿದೆಯೆಂದು ಫಲಿತವಾಗುವುದು. ಇಷ್ಟಲ್ಲದೆ, ಈಗ ಪುರಾಣಗಳಲ್ಲಿ ಯಾವ ಬೃಹದ್ರಥ, ಪೌರವ ಮತ್ತು ಇಕ್ಷ್ವಾಕುವಂಶಗಳ ರಾಜಸಂತತಿಯ ನಾಮಾವಲಿಯು ಉಳಿದುಬಂದಿದೆಯೋ ಅದರಲ್ಲಿ, ಭಾರತಯುದ್ಧಾಂತ್ಯಸಮಯದಲ್ಲಿ ಅಭಿಷಿಕ್ತರಾದ ರಾಜರಾದಿಯಾಗಿ ಅಂತಿಮರಾಜರಪರ್ಯಂತರಾದ ರಾಜರೆಲ್ಲರ ಹೆಸರುಗಳೂ ಸಮಗ್ರರೀತಿಯಿಂದ ಉಳಿದುಬಂದಿವೆಯೆಂದು ಹೇಳಲಾಗುವುದಿಲ್ಲ. ಉದಾಹರಣೆಗಾಗಿ : ಪೌರವವಂಶದ ರಾಜಸಂತತಿಯ ಇತಿವೃತ್ತಾಂತ್ಯದಲ್ಲಿ 'ಪಂಚವಿಂಶತಿ ನೃಪಾಹ್ಯೇತೇ ಭವಿಷ್ಯಾಃ ಪೂರ್ವವಂಶಜಾಃ' ಎಂದು ಹೇಳಲಾಗಿದೆ [ವಾಯುಪುರಾಣ-ಅಧ್ಯಾಯ ೩೭] ಇದರಿಂದ ಪುರಾಣಗಳಲ್ಲಿ ಸ್ಪಷ್ಟವಾಗಿ ಸೂತಪುರಾಣಿಕರ ಸಮಕಾಲೀನನೆಂದು ನಿರ್ದೇಶಿತನಾಗಿರುವ ಈ ವಂಶದ ಅಧಿಸೋಮಕೃಷ್ಣನ ತರುವಾಯ ಅಭಿಷಿಕ್ತನಾದ ನಿರ್ವಕ್ತ್ರನಾರಭ್ಯ ಅಂತಿಮ ಅರಸನಾದ ಕ್ಷೇಮಕನ ಪರ್ಯಂತ ೨೫ ಜನ ಭವಿಷ್ಯದ್ರಾಜರು ಆಗಿರುವರೆಂದು ವ್ಯಕ್ತವಾಗುವುದು. ಈ ಭವಿಷ್ಯದ್ರಾಜಸಂತತಿಯಲ್ಲಿ, ಭಾರತಯುದ್ಧಾಂತ್ಯಸಮಯದಲ್ಲಿ ಜನಿಸಿದ, ಪರಿಕ್ಷಿದ್ರಾಜನಾದಿಯಾಗಿ ಅಧಿಸೋಮಕೃಷ್ಣನ ಪರ್ಯಂತರಾದ ರಾಜರು ಪರಿಗಣಿತರಾಗುವುದಿಲ್ಲ. ಬ್ರಹ್ಮಾಂಡಪುರಾಣದಲ್ಲಿ [ಅಧ್ಯಾಯ ೭೪ – ಶ್ಲೋ. ಸಂ. ೨೬೭] 'ಅಶೀತಿರ್ಜನಮೇಜಯಾಃ' ಎಂಬ ಪೂರ್ವಾಪರಸಂಬಂಧವಿಲ್ಲದ ಐತಿಹ್ಯೋಕ್ತಿಯೊಂದು ಉಳಿದುಬಂದಿದೆ. ಇದರಿಂದ ಪರಿಕ್ಷಿದ್ರಾಜನ ಸುತನಾದ ಜನಮೇಜಯನ ಅನುಕ್ರಮದಲ್ಲಿ ೮೦ ಜನ ರಾಜರು ರಾಜ್ಯಭಾರಮಾಡಿರುವರೆಂದು ನಿರ್ದೇಶಿತವಾಗುವುದು. ಈ ೮೦ ಜನ ರಾಜರಲ್ಲಿ ಈ ವಂಶದ ೨೫ ಜನ ಭವಿಷ್ಯದ್ರಾಜರೂ ಪರಿಗಣಿತರಾಗಿರುವರೆಂದಾದಲ್ಲಿ, ಪರಿಕ್ಷಿದ್ರಾಜನಾದಿಯಾಗಿ ಅಧಿಸೋಮಕೃಷ್ಣನ ಪರ್ಯಂತ (೨+೮೦ – ೨೫=) ೫೭ ಜನ ರಾಜರಾಗಿರುವರೆಂದು ಗ್ರಹಿಸಲವಕಾಶವಾಗುವುದು. ಆದರೆ ಪುರಾಣಗಳಲ್ಲಿ ಈಗ ಉಳಿದುಬಂದಿರುವ ನಾಮಾವಲಿಯನುಗುಣವಾಗಿ ಪರಿಕ್ಷಿದ್ರಾಜನಾರಭ್ಯ ಅಧಿಸೋಮಕೃಷ್ಣನು ೫ ನೇ ರಾಜನಾಗಿ ಪರಿಗಣಿತನಾಗುವನು. ಆದ್ದರಿಂದ, ಈಗ ಪುರಾಣಗಳಲ್ಲಿ ಉಳಿದುಬಂದಿರುವ ಪೌರವಾದಿ ರಾಜಮನೆತನಗಳ ರಾಜಸಂತತಿಯ ನಾಮಾವಲಿಯು ಅಸಮಗ್ರವಿದೆಯೆಂದು ವ್ಯಕ್ತವಾಗುವುದು. ಅಂತೆಯೇ ಪರಿಕ್ಷಿದ್ರಾಜನ

ಜನ್ಮಸಮಯದಲ್ಲಿ ಅಭಿಷಿಕ್ತನಾದ ಬೃಹದ್ರಥಮನೆತನದ ಸೋಮಾಧಿಯಾದಿಯಾಗಿ ಸೇನಾಜಿತ್ತನ ಪರ್ಯಂತ ಕನಿಷ್ಠಮಿತಿಯಿಂದ ೫೦ ಜನ ರಾಜರಾದರೂ ಆಗಿರುವರೆಂದು ಗ್ರಹಿಸಲವಕಾಶವಾಗುವುದಲ್ಲದೆ, ಸೇನಾಜಿತ್ತನ ಅನಂತರಕಾಲೀನರಾದ ಭವಿಷ್ಯದ್ರಾಜರು ೧೦೦೦ ವರ್ಷಕಾಲ ರಾಜ್ಯಭಾರಮಾಡಿರುವರೆಂಬ ಪುರಾಣೋಕ್ತಿಯನ್ನಾಧರಿಸಿ, ಸೋಮಾಧಿಯಾದಿಯಾಗಿ ಸೇನಾಜಿತ್ತನ ಪರ್ಯಂತಕಾಲದ (ಕನಿಷ್ಠಮಿತಿ ಸಂಖ್ಯೆಯ) ೫೦ ಜನ ಅರಸರು, ಸ್ಥೂಲರೀತಿಯ ಗಣನೆಯಂತೆ, $\left(\frac{೧೦೦೦}{೩೨} \times ೫೦ =\right)$ ೧೫೫೦ ವರ್ಷಕಾಲ ರಾಜ್ಯಭಾರಮಾಡಿರುವರೆಂದು ಫಲಿತವಾಗುವುದು. ಇದರಂತೆ, ಪರಿಕ್ಷಿದ್ರಾಜನ ಜನ್ಮಸಮಯದಲ್ಲಿ ಅಭಿಷಿಕ್ತನಾದ ಸೋಮಾಧಿಯ ರಾಜ್ಯಭಾರಾರಂಭದಿಂದ ನಂದರಾಜನ ರಾಜ್ಯಾಭಿಷೇಕಸಮಯ ಪರ್ಯಂತ, ಸ್ಥೂಲರೀತಿಯಾಗಿ, (೧೫೫೦+೧೦೦೦+೧೧೫=) ೨೬೬೫ ವರ್ಷಗಳು ಅತೀತವಾಗಿದ್ದಿರಬೇಕೆಂಬ ಗಣನೆಯಾಗುವುದು. ಈ ಸ್ಥೂಲರೀತಿಯ ಗಣನೆಯು, ಹಿಂದೆ ಬೃಹತ್ಸಂಹಿತೆಯ ಉಕ್ತಿಯಾಧಾರದಿಂದ ನಿರ್ಣಯಿಸಲಾಗಿರುವ, ಪರಿಕ್ಷಿದ್ರಾಜನ ರಾಜ್ಯಾಭಿಷೇಕ ಮತ್ತು ನಂದರಾಜನ ರಾಜ್ಯಾಭಿಷೇಕಸಮಯಗಳ ಮಧ್ಯವರ್ತಿಯಾದ (೨೬೨೫+೮=) ೨೬೩೩ ವರ್ಷಗಳ ಅಂತರಕಾಲಪರಿಮಾಣಕ್ಕೆ ಬಹು ಸಮೀಪವರ್ತಿಯಾಗಿರುವುದು. ಇದರಿಂದ 'ಪರಿಕ್ಷಿದ್ರಾಜನ ಜನ್ಮಸಮಯದಿಂದ ನಂದರಾಜನ ರಾಜ್ಯಾಭಿಷೇಕಸಮಯಪರ್ಯಂತ ೧೧೧೫ ( ಅಥವಾ ೧೦೫೦) ವರ್ಷಗಳು ಗತಿಸಿದ್ದುವು' ಎಂಬ ಐತಿಹ್ಯಾಂಶದಲ್ಲಿ ಸಂಕಲಿತವಾಗಿರುವ ೧೦೦೦ ವರ್ಷಗಳ (ಬೃಹದ್ರಥರ ರಾಜ್ಯಭಾರ) ಕಾಲಾವಧಿಯ ಪರಿಗಣನೆಯು ಲೋಪದೋಷಭಾಗಿಯಾಗಿದೆಯೆಂದು ನಿಶ್ಚಿತವಾಗುವುದು. ಅಂತೆಯೇ ಪರಿಕ್ಷಿದ್ರಾಜನ ರಾಜ್ಯಭಾರಾರಂಭಸಮಯದಿಂದ (೨೬೨೫+೮=) ೨೬೩೩ ನೇ ವರ್ಷದಲ್ಲಿ ನಂದರಾಜನು ಮಗಧರಾಜ್ಯಾಧಿಪನಾಗಿ ಅಭಿಷಿಕ್ತನಾಗಿರುವನೆಂಬ ಹಿಂದಿನ ಪ್ರತಿಪಾದನೆಯು ತರ್ಕಬದ್ಧವಾದ ತಥ್ಯವೆನಿಸಿ ಅಬಾಧಿತವಾಗಿ ಉಳಿದುಕೊಳ್ಳುವುದು.

ಪ್ರಸಂಗವಶದಿಂದ, ಆಂಧ್ರರಾಜಮನೆತನದ ರಾಜ್ಯಭಾರಾಂತ್ಯಸಮಯದ ವಿಷಯವಾಗಿ ಪುರಾಣಗಳಲ್ಲಿ ಉಕ್ತವಾಗಿರುವ ಅಂಶವನ್ನು ಈಗ ಪರಿಶೀಲಿಸಬೇಕಾಗಿದೆ. ಪರಿಕ್ಷಿದ್ರಾಜನ ಜನ್ಮಸಮಯದಿಂದ ೧೦೫೦ ವರ್ಷಗಳ ತರುವಾಯದಲ್ಲಿ ಮಹಾಪದ್ಮನು ಅಭಿಷಿಕ್ತನಾದನೆಂದು ಮತ್ತು ಮಹಾಪದ್ಮನಿಂದ ಮುಂದೆ ೮೩೬ ವರ್ಷಗಳ ಸಮಯಕ್ಕೆ ಆಂಧ್ರಮನೆತನದ ರಾಜ್ಯಭಾರವು ಅಂತ್ಯಗೊಂಡಿತೆಂಬ ಮತ್ಸ್ಯಪುರಾಣದ ಹೇಳಿಕೆಯು ಮೇಲ್ಕಂಡ ವಿವರಣೆಯನುಗುಣವಾಗಿ ದೋಷಭಾಗಿಯಾಗಿದೆಯಾದರೂ, ಇದು ಆಂಧ್ರರಾಜಮನೆತನದ ರಾಜ್ಯಭಾರಾಂತ್ಯಸಮಯವನ್ನು ನಿರ್ಣಯಿಸುವಲ್ಲಿ ಸಹಾಯಕವಾಗಿದೆಯೆಂದು ಹೇಳಬಹುದಾಗಿದೆ. ಪರಿಕ್ಷಿದ್ರಾಜನ ಜನನ ಸಮಯ

ದಿಂದ ೧೦೫೦ ವರ್ಷಗಳ ತರುವಾಯದಲ್ಲಿ ಅಭಿಷಿಕ್ತನಾದ ರಾಜನನ್ನು ಹೆಸರಿಸುವಲ್ಲಿ ಪುರಾಣಗಳ ಮಧ್ಯೆ ಭಿನ್ನಮತವಿರುವುದು ಸ್ಪಷ್ಟವಿದೆ. ಆದ್ದರಿಂದ ಈ ಸಮಯದಲ್ಲಿ ಅಭಿಷಿಕ್ತನಾದ ರಾಜನ ಹೆಸರಿನ ವಿಷಯವು ಈ ಐತಿಹ್ಯಾಂಶದ ನಿರೂಪಕರಿಗೆ ಸಂಶಯಾಸ್ಪದವಾಗಿದ್ದಿರಬೇಕೆಂದು ಸೂಚಿತವಾಗುವುದು. ಇದರಿಂದ ಈ ೧೦೫೦ ವರ್ಷಗಳ ತರುವಾಯದ ಅವಧಿಯಿಂದ ಸೂಚಿತವಾಗುವ ಸಮಯವು ಮತ್ತಾರಾದರೊಬ್ಬ ರಾಜನ ರಾಜ್ಯಾಭಿಷೇಕ ಸಮಯದ ಸೂಚಕವಾಗಿರಬಹುದೇ ? ಎಂಬ ಪರ್ಯಾಲೋಚನೆಗೆ ಅವಕಾಶವಾಗುವುದು. ಬೃಹದ್ರಥಮನೆತನದ ರಿಪುಂಜಯನ ರಾಜ್ಯಭಾರಾಂತ್ಯಸಮಯದಿಂದ ೫೦ ವರ್ಷಗಳ ಅಂತ್ಯದಲ್ಲಿ ಶ್ರೇಣಿಕ-ಬಿಂಬಿಸಾರನ ರಾಜ್ಯಭಾರವು ಅಂತ್ಯಗೊಂಡ ತರುವಾಯ ಅವನ ಸುತನಾದ ಅಜಾತಶತ್ರುವು ಅಭಿಷಿಕ್ತನಾದನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಆದ್ದರಿಂದ ನಂದನು, (ಮಹಾನಂದನು, ಮಹಾದೇವನು, ಮಹಾಪದ್ಮನು) ಅಭಿಷಿಕ್ತನಾದನೆಂದು ನಿರ್ದೇಶಿಸಲಾಗಿರುವ ಮೇಲ್ಕಂಡ ಉಕ್ತಿಯಿಂದ ಸೂಚಿತವಾಗುವ ಸಮಯದಲ್ಲಿ ಅಜಾತಶತ್ರುವು ಅಭಿಷಿಕ್ತನಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಶ್ರೀ ವೀರನಿರ್ವಾಣಸಮಯದಿಂದ (ಕ್ರಿ. ಪೂ. ೫೨೭ ರಿಂದ) ೫ ವರ್ಷಗಳ ಪೂರ್ವ ಸಮಯದಲ್ಲಿ ಅಜಾತಶತ್ರುವು ರಾಜ್ಯಭಾರಾಧಿಷ್ಠಿತನಾದನೆಂದು ಹಿಂದೆ ಪ್ರತಿಪಾದಿಸಿದೆ. ಇದರಂತೆ ಅಜಾತಶತ್ರುವು ಕ್ರಿ. ಪೂ. (೫೨೭+೫=) ೫೩೨ ರಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಫಲಿತವಾಗುವುದು. ಈ ಸಮಯದಿಂದ ೮೩೬ ವರ್ಷಗಳ ಸಮಯಕ್ಕೆ ಅಂದರೆ ಕ್ರಿ ಶ. (೮೩೬—೫೩೨=) ೩೦೪ ರಲ್ಲಿ ಆಂಧ್ರಮನೆತನದ ರಾಜ್ಯಭಾರವು ಅಂತ್ಯಗೊಂಡು ಮುಂದೆ ಗುಪ್ತಮನೆತನದ ರಾಜ್ಯಭಾರವು ಆರಂಭವಾಗಿರಬೇಕೆಂದು ಫಲಿತವಾಗುವುದು. ಕ್ರಿ. ಶ. ೩೧೮ (ಅಥವಾ ೩೨೦) ರಲ್ಲಿ ಗುಪ್ತಮನೆತನದ ಪ್ರಥಮ ಚಂದ್ರಗುಪ್ತನು ರಾಜ್ಯಭಾರಾಧಿಷ್ಠಿತನಾದನೆಂಬ ಚರಿತ್ರೆಕಾರರ ಅಭಿಪ್ರಾಯವಿದೆಯಲ್ಲದೆ, ಈ ಸಮಯದ ಮುನ್ನ ಇವನ ಪೂರ್ವಜರೊಬ್ಬಿಬ್ಬರು ರಾಜ್ಯಭಾರನಡೆಸಿದ್ದಿರಬೇಕೆಂಬ ಅಭಿಪ್ರಾಯವೂ ಇದೆ. ಆದ್ದರಿಂದ ಕ್ರಿ. ಶ. ೩೦೩-೪ ರಲ್ಲಿ ಆಂಧ್ರರಾಜಮನೆತನದ ರಾಜ್ಯಭಾರವು ಅಂತ್ಯಗೊಂಡಿರಬಹುದೆಂದು ಗ್ರಹಿಸಲವಕಾಶವಾಗುವುದು.

ನಂದರಾಜನು ಬೃಹದ್ರಥಮನೆತನದ ರಾಜ್ಯಭಾರಾಂತ್ಯಸಮಯದಿಂದ ೧೧೫ ವರ್ಷಗಳತರುವಾಯದಲ್ಲಿ ಮಗಧರಾಜ್ಯಾಧಿಪನಾಗಿ ಅಭಿಷಿಕ್ತನಾಗಿರುವನೆಂಬ ಹಿಂದಿನ ಪ್ರತಿಪಾದನೆಯು ಈ ಮೇಲಿನ ವಿಚಾರಸರಣಿಯಿಂದಲೂ ದೃಢಪಟ್ಟಂತಾಗುವುದು. ನಂದರಾಜನು ಎಷ್ಟುವರ್ಷಕಾಲ ರಾಜ್ಯಭಾರಮಾಡಿದನೆಂಬುದನ್ನು ಈಗ ಪರಿಶೀಲಿಸಬೇಕಾಗಿದೆ. ಪುರಾಣಗಳಲ್ಲಿ ವಿಭಿನ್ನವ್ಯಕ್ತಿನಿರ್ದೇಶಕವೆನಿಸಿ ಉಳಿದು ಬಂದಿರುವ ಶಿಶುನಾಗ ಮತ್ತು ನಂಧಿವರ್ಧನ ಎಂಬ ಹೆಸರುಗಳು ನಂದರಾಜನ ನಿರ್ದೇಶಕಗಳಾಗಿವೆಯೆಂದು ಹಿಂದೆ ಹೇಳಲಾಗಿದೆ. ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣತ್ರಯದಲ್ಲಿಯೂ ಶಿಶುನಾಗ ಎಂಬ ಹೆಸರಿನೊಡನೆ ೪೦ ವರ್ಷಗಳ ರಾಜ್ಯಭಾರ

ಕಾಲವನ್ನು ನಿರ್ದೇಶಿಸಲಾಗಿದೆ. (ದ್ವಿ) ನಂದಿವರ್ಧನನ ಹೆಸರಿನೊಡನೆ ವಾಯುಪುರಾಣದಲ್ಲಿ ೪೩ ವರ್ಷಗಳ ರಾಜ್ಯಭಾರಕಾಲವನ್ನು ನಿರ್ದೇಶಿಸಿದೆಯಾದರೂ, ಮತ್ಸ್ಯ ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ೪೦ ವರ್ಷಗಳ ರಾಜ್ಯಭಾರಕಾಲವನ್ನು ಹೇಳಲಾಗಿದೆ. ಇದರಿಂದ ನಂದರಾಜನು ೪೦ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಗ್ರಹಿಸಲವಕಾಶವಾಗುವುದು. ಬರ್ಮೀ ಇತಿವೃತ್ತದ ಕಥನದಂತೆ ಸುಸುನಾಗ (=ಶಿಶುನಾಗ) ನು ೩೨ ವರ್ಷ ರಾಜ್ಯಭಾರಮಾಡಿರುವನೆಂದು ತಿಳಿದುಬರುವುದು. ನಂದರಾಜನು ಉಜ್ಜಯಿನಿಯಲ್ಲಿ ಅವಂತೀರಾಜನಾಗಿ ಅಭಿಷಿಕ್ತನಾದ, ೮ ವರ್ಷಗಳ ತರುವಾಯ ಮಗಧರಾಜನಾಗಿ ಅಭಿಷಿಕ್ತನಾದನೆಂದು ಹಿಂದೆ ಪ್ರತಿಪಾದಿಸಿದೆ. ಆದ್ದರಿಂದ ಬರ್ಮೀ ಇತಿವೃತ್ತದಲ್ಲಿ ಉಕ್ತವಾಗಿರುವ ಸುಸುನಾಗನ ೩೨ ವರ್ಷಗಳ ರಾಜ್ಯಭಾರಾವಧಿಯು, ನಂದರಾಜನು ಮಗಧರಾಜನಾಗಿ ಅಭಿಷಿಕ್ತನಾದ ತರುವಾಯ ಕಾಲದ (೪೦ – ೮ = ೩೨ ವರ್ಷ) ರಾಜ್ಯಭಾರಾವಧಿಯ ಸೂಚಕವಾಗಿದಿಯೆಂದು ಗ್ರಹಿಸಲವಕಾಶವಾಗುವುದು. ಇದರಂತೆ ಕ್ರಿ. ಪೂ. (೪೬೭ – ೩೨ =) ೪೩೫ ರಲ್ಲಿ ನಂದರಾಜನ ರಾಜ್ಯಭಾರವು ಅಂತ್ಯಗೊಂಡಿದ್ದೆಯೆಂದು ಫಲಿತವಾಗುವುದಲ್ಲದೆ ಈ ಫಲಿತಾಂಶದ ತಥ್ಯವು ಮುಂದಿನ ಇತಿಹಾಸಪ್ರಕರಣದಿಂದಲೂ ಸಮರ್ಥಿತವಾಗುವುದು.

ಮಹಾನಂದ: (ದ್ವಿ) ನಂದಿವರ್ಧನನ ಉತ್ತರಾಧಿಕಾರಿಯನ್ನು ಪುರಾಣಗಳಲ್ಲಿ 'ಮಹಾನಂದಿ' ಎಂಬುದಾಗಿ ಹೆಸರಿಸಲಾಗಿದೆ. 'ಮಹಾನಂದಾಭಿಷೇಕಾಂತಂ........' ಎಂಬ ಬ್ರಹ್ಮಾಂಡ ಪುರಾಣದ ಉಕ್ತಿಯನ್ನು ಗಮನಿಸಿದಲ್ಲಿ ಮಹಾನಂದಿಯನ್ನೇ 'ಮಹಾನಂದ' ನೆಂದು ನಿರ್ದೇಶಿಸುವ ಪರಿಪಾಠವಿದ್ದಿರಬೇಕೆಂದು ಅವಗತವಾಗುವುದು. ನಂದರಾಜನ ಗೌಣನಾಮವಾಗಿದ್ದ ಶಿಶುನಾಗ ಎಂಬ ಹೆಸರು ಪ್ರತ್ಯೇಕವ್ಯಕ್ತಿಯೊಬ್ಬನ ಹೆಸರೆನಿಸಿಕೊಂಡು ಪುರಾಣಗಳಲ್ಲಿ ಸ್ಥಾನಪಲ್ಲಟಹೊಂದಿದೆಯೆಂದು ಹಿಂದೆ ಪ್ರತಿಪಾದಿಸಲಾಗಿದೆಯಲ್ಲದೆ ಈ 'ಶಿಶುನಾಗ' ಎಂಬ ಹೆಸರಿನ ಅನಂತರವರ್ತಿಯಾಗಿ ಹೆಸರಿಸಲಾಗಿರುವ 'ಕಾಕವರ್ಣ' (ವಾ. ಪು.–ಶಕವರ್ಣ) ಎಂಬ ಹೆಸರು ಮಹಾನಂದನ ಗೌಣನಾಮವಾಗಿದ್ದು, ಇದೂ ಸ್ಥಾನಪಲ್ಲಟಪೂರ್ವಕ ಪ್ರತ್ಯೇಕವ್ಯಕ್ತಿಯೊಬ್ಬನ ಹೆಸರಿನ ರೂಪದಲ್ಲಿ ನಿರ್ದೇಶಿತವಾಗಿದೆಯೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಈ ಹೆಸರಿನ ವಿಷಯವಾಗಿ 'ಕಾಕಸ್ಯವರ್ಣ ಅಸ್ತಿಅಸ್ಯ ಇತ್ಯರ್ಥೇ ಣಿನಿಃ; ಕಾಕಸ್ಯವರ್ಣ ಇವ ವರ್ಣೋ ಯಸ್ಯ' ಎಂಬುದಾಗಿ ಸನ್ಮಾನ್ಯ ಸೀತಾನಾಥ್ ಪ್ರಧಾನರವರು ವಕ್ಕಾಣಿಸಿ, ಇವನಿಗೆ 'ಕಾಕವರ್ಣಿ' ಎಂಬ ಹೆಸರಿದ್ದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. 'ಕಾಗೆಯಬಣ್ಣದವ' ಎಂಬ ಅರ್ಥದ ಈ ಹೆಸರು ಕಪ್ಪುಬಣ್ಣದವನಾಗಿದ್ದ ಮಹಾನಂದನ ಗೌಣನಾಮವಾಗಿ ರೂಢಿಗತವಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಲ್ಲಿ ಮಹಾನಂದ-ಕಾಕವರ್ಣನನ್ನು 'ಕಾಲಾಶೋಕ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ಹಿಂದೆ ವಿವರಿಸಲಾಗಿದೆ.

ಶ್ರೀ ಗೌತಮಬುದ್ಧನ ಪರಿನಿರ್ವಾಣಪಶ್ಚಾತ್ ೧೦೦ ನೇ ವರ್ಷದ ಸಮಯಕ್ಕೆ ಕಾಲಾಶೋಕನ ೧೦ ನೇ ವರ್ಷದ ರಾಜ್ಯಭಾರವು ಅತೀತವಾಗಿದ್ದಿತೆಂದು ಮತ್ತು ಈ ಸಮಯದಲ್ಲಿ ಈ ರಾಜನ ನೆರವಿನಿಂದ ಬೌದ್ಧಯತಿಗಳ (ದ್ವಿತೀಯ) ಸಮ್ಮೇಳನವು ನಡೆಯಿತೆಂದು ಮಹಾವಂಸೋಕ್ಕೃತಿಕಾರನು ಹೇಳಿದ್ದಾನೆ. [ಮಹಾವಂಸೋ-ಪರಿಚ್ಛೇದ-೪; ಶ್ಲೋ. ಸಂ. ೮] ಶ್ರೀ ವೀರನಿರ್ವಾಣಪಶ್ಚಾತ್ ಎರಡುವರೆವರ್ಷಗಳ ತರುವಾಯದ ಸಮಯದಲ್ಲಿ ಶ್ರೀ ಗೌತಮಬುದ್ಧನು ಪರಿನಿರ್ವಾಣಹೊಂದಿರುವನೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಕ್ರಿ. ಪೂ. [೫೨೭ ವರ್ಷ, ೨ ತಿಂಗಳು – ೨ ವರ್ಷ, ೬ ತಿಂಗಳು = ೫೨೪ ವರ್ಷ ೮ ತಿಂಗಳು =] ೫೨೫ ನೇ ಇಸವಿ ಮೇ ಮಾಹೆಯಲ್ಲಿ ಶ್ರೀ ಗೌತಮಬುದ್ಧನ ಪರಿನಿರ್ವಾಣವಾಗಿದೆಯೆಂದು ಫಲಿತವಾಗುವುದಲ್ಲದೆ, ಕಾಲಾಶೋಕನ ನೆರವಿನಿಂದ ನಡೆದ ಬೌದ್ಧಯತಿಗಳ ದ್ವಿತೀಯ ಸಮ್ಮೇಳನವು ಕ್ರಿ. ಪೂ. (೫೨೫ – ೧೦೦=) ೪೨೫ ರಲ್ಲಿ ನಡೆದಿದೆಯೆಂದು ಮತ್ತು ಕಾಲಾಶೋಕನು ಕ್ರಿ. ಪೂ. ೪೩೫ ನೇ ಇಸವಿಯಲ್ಲಿ ರಾಜ್ಯಾಭಿಷಿಕ್ತನಾಗಿರುವನೆಂದು ಫಲಿತವಾಗುವುದು. ಮಹಾನಂದ - ಕಾಲಾಶೋಕನ ತಂದೆಯಾದ ಸುಸುನಾಗ - ನಂದರಾಜನ ರಾಜ್ಯಭಾರವು ಕ್ರಿ. ಪೂ. ೪೩೫ ರಲ್ಲಿ ಅಂತ್ಯಗೊಂಡಿದೆಯೆಂದು ಹಿಂದೆ ಪ್ರತಿಪಾದಿಸಲಾಗಿದೆ. ಅಂತೆಯೇ ಕಾಲಾಶೋಕ-ಮಹಾನಂದನು ಕ್ರಿ. ಪೂ. ೪೩೫ ರಲ್ಲಿ ರಾಜ್ಯಾಭಿಷೇಕಹೊಂದಿರುವನೆಂಬ ಈ ಮೇಲಿನ ಪ್ರತಿಪಾದನೆಯು ಸುಸಂಗತವಾಗಿದೆಯೆಂದು ವ್ಯಕ್ತವಾಗುವುದು.

ಬೌದ್ಧಯತಿಗಳ ದ್ವಿತೀಯಸಮ್ಮೇಳನವು ನಡೆದ ಸ್ಥಾನದ ವಿಷಯವಾಗಿ ಬೌದ್ಧಸಂಪ್ರದಾಯದ ಕೃತಿಗಳ ಉಕ್ತಿಗಳು ಭಿನ್ನಾಭಿಪ್ರಾಯಗಳಿಗೆಡೆಮಾಡಿವೆ. ಈ ಸಮ್ಮೇಳನವು ನಡೆದುದು ವೈಶಾಲಿಯಲ್ಲಿಯೇ? ಅಥವಾ ಪಾಟಲೀಪುತ್ರನಗರದಲ್ಲಿಯೇ? ಎಂಬ ಸಂದಿಗ್ಧತೆಗವಕಾಶವಾಗಿದೆಯೆಂದು ಸನ್ಮಾನ್ಯ ಜೈಜೆರ್‌ರವರು ಹೇಳಿದ್ದಾರೆ. ವೈಶಾಲಿಯ ಕುಸುಮಪುರೀವಿಹಾರದಲ್ಲಿ ಈ ಸಮ್ಮೇಳನವು ನಡೆಯಿತೆಂದು ಸನ್ಮಾನ್ಯ ತಾರಾನಾಥರು ಸ್ಪಷ್ಟವಾಗಿ ಹೇಳಿರುವರೆಂದು ಸನ್ಮಾನ್ಯ ಜಯಸ್ವಾಲ್‌ರವರು ಹೇಳಿದ್ದಾರೆ. ಇಂತೆಯೇ ಸುಸುನಾಗನು ವೈಶಾಲೀಮನೆತನಕ್ಕೆ ಸೇರಿದವನಾಗಿದ್ದಾನೆಂಬ ಹೇಳಿಕೆ ಮತ್ತು (ಕಾಮಾಶೋಕನ ಅನಂತರವರ್ತಿಯಾಗಿ ಹೆಸರಿಸಲಾಗಿರುವ) ನಂದಿ ಎಂಬುವನು ವೈಶಾಲಿಮನೆತನಕ್ಕೆ ಸೇರಿದವನಾಗಿದ್ದಾನೆಂಬ ತಾರಾನಾಥರ ಹೇಳಿಕೆಯಾಧಾರಗಳಿಂದ ನಂದಿಯು [=ಸುಸುನಾಗ-ಕಾಲಾಶೋಕನು] ಪ್ರಾಯಶಃ ಮಾತೃಮೂಲದಿಂದ ವೈಶಾಲಿ (ಲಿಚ್ಛವಿ) ಯ ಮನೆತನಕ್ಕೆ ಸಂಬಂಧಿಸಿದವನಾಗಿರಬೇಕೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟದ್ದಾರೆ. ಇಂತೆಯೇ ನಂದಿ(-ದ-) ವರ್ಧನ (=ಶಿಶುನಾಗ) ನ ಇತಿವೃತ್ತ ವಿಮರ್ಶಾಪ್ರಸಂಗದಲ್ಲಿ, ಸನ್ಮಾನ್ಯ ಸೀತಾನಾಥ್‌ಪ್ರಧ್ರಾರವರು, ವೈಶಾಲಿಯು ಶಿಶುನಾಗನ ರಾಜಧಾನಿಯಾಗಿದ್ದಿರಬೇಕೆಂದು ಅಬಿಪ್ರಾಯಪಟ್ಟಿದ್ದಾರೆ. ಆದರೆ, ನಂದರಾಜನು ಅವಂತೀರಾಜಮನೆತನಕ್ಕೆ ಸೇರಿದವನಾಗಿದ್ದಾನೆಂದು ಹಿಂದೆ ಪ್ರತಿಪಾದಿಸಲಾಗಿದೆಯಲ್ಲದೆ, ಅವಂತಿಯ

ರಾಜಧಾನಿಯಾದ ಉಜ್ಜಯಿನಿಯನ್ನು ಪ್ರಾಚೀನಕಾಲದಲ್ಲಿ 'ವಿಶಾಲಾ' ಎಂಬ ಹೆಸ
ರಿನಿಂದ ನಿರ್ದೇಶಿಸುವ ರೂಢಿಯಿದ್ದು, ಈ ವಿಶಾಲಾನಗರದ ರಾಜವುನೆತನದ ಅರಸ
ರಾದ ನಂದಾದಿರಾಜರನ್ನು ಬೌದ್ಧಸಾಹಿತ್ಯದಲ್ಲಿ ವೇಸಾಲೀಯರೆಂದು ಹೆಸರಿಸುವ ಪರಿ
ಪಾಠವಿರಬೇಕೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಕಾಲಾಶೋಕನ ನೆರವಿ
ನಿಂದ ನಡೆಯಿತೆಂದು ಹೇಳಲಾಗಿರುವ ದ್ವಿತೀಯಬೌದ್ಧಯತಿಸಮ್ಮೇಳನವು ವಿಶಾಲಾ
(ಉಜ್ಜಯಿನೀ) ನಗರದ ಕುಸುಮಪುರೀ ವಿಹಾರದಲ್ಲಿ ನಡೆದಿರಬೇಕೆಂದು ಗ್ರಹಿಸಲವ
ಕಾಶವಾಗುವುದು.

ಕಾಲಾಶೋಕನ ಕಾಲದಲ್ಲಿ ರಾಜಧಾನಿಯನ್ನು ರಾಜಗೃಹದಿಂದ ಪಾಟಲೀಪುತ್ರ
ನಗರಕ್ಕೆ ವರ್ಗಾಯಿಸಲಾಯಿತೆಂಬ ಬರ್ಮೀಇತಿವೃತ್ತದ ಹೇಳಿಕೆಯಿದೆಯೆಂದೂ
ಮತ್ತು ಇದೇ ರೀತಿಯಾಗಿ ಶ್ರೀ ಗೌತಮಬುದ್ಧನ ನಿರ್ವಾಣಪಶ್ಚಾತ್ ೧೦೦ ವರ್ಷಗಳ
ಸಮಯದಲ್ಲಿ ಅಶೋಕನಿಂದ ರಾಜಧಾನಿಯ ವರ್ಗಾವಣೆಯಾಯಿತೆಂದು ಹ್ಯೂಯೆನ್
ತ್ಸಾಂಗನು ನಿರ್ದೇಶಿಸಿರುವುದಾಗಿಯೂ ಸನ್ಮಾನ್ಯ ಜೈಜೆರ್‌ರವರು ಹೇಳಿದ್ದಾರೆ. ಇಷ್ಟ
ಲ್ಲದೆ ಹ್ಯೂಯೆನ್‌ತ್ಸಾಂಗನ ಅಭಿಪ್ರಾಯದಂತೆ 'ಅಶೋಕ' (=ವುಂತಾ) ಎಂಬ ಹೆಸರಿನ
ಒಬ್ಬನೇ ಒಬ್ಬ ರಾಜನಿರುವನಾದ್ದರಿಂದ ಈ ಹೆಸರಿನ ಇಬ್ಬರು ರಾಜರನ್ನು (ಅಂದರೆ
ಕಾಲಾಶೋಕ ಮತ್ತು ಮೌರ್ಯವಂಶಜನಾದ ಅಶೋಕಸಾಮ್ರಾಟರೀರ್ವರನ್ನು) ಏಕ
ವ್ಯಕ್ತಿಯಾಗಿ ಇವನು ಗ್ರಹಿಸಿರಬಹುದಾದ ಸಂಭವವಿದೆಯೆಂದು, ಸನ್ಮಾನ್ಯ ಜೈಜೆರ್
ರವರು ಅಭಿಪ್ರಾಯಪಟ್ಟಿದ್ದಾರೆ. ಆದರೆ, ಕಾಲಾಶೋಕನು ತನ್ನ ರಾಜಧಾನಿಯನ್ನು
ರಾಜಗೃಹದಿಂದ ಪಾಟಲೀಪುತ್ರನಗರಕ್ಕೆ ವರ್ಗಾಯಿಸಿದನೆಂಬುದು ಅಸಂಭಾವ್ಯವಾಗಿ
ಕಂಡುಬರುವುದು. ಉದಾಯಿಭದ್ರನು, ತನ್ನ ನಾಲ್ಕನೇ ವರ್ಷದ ರಾಜ್ಯಭಾರಸಮಯ
ದಲ್ಲಿ ನೂತನವಾಗಿ ನಿರ್ಮಿತವಾದ ಪಾಟಲೀಪುತ್ರನಗರವನ್ನು ರಾಜಧಾನಿಯನ್ನಾಗಿ
ಮಾಡಿಕೊಂಡನೆಂಬುದಾಗಿ ಪುರಾಣಗಳ ಹೇಳಿಕೆಯಿದೆಯಲ್ಲದೆ, ಈ ಹೇಳಿಕೆಯು ಜೈನ
ಸಂಪ್ರದಾಯದ ಪರಿಶಿಷ್ಟಪರ್ವದ ಕಥನದಿಂದಲೂ ಸಮರ್ಥಿತವಾಗುವುದು. ಇಷ್ಟಲ್ಲದೆ
ಪುಷ್ಪಪುರದ ಪೌರರು ಸುಸುನಾಗನನ್ನು ತಮ್ಮ ರಾಜನನ್ನಾಗಿ ನಿಯೋಜಿಸಿಕೊಂಡ
ರೆಂಬುದಾಗಿ ಮಹಾವಂಸೋಕ್ಕೃತಿಯಲ್ಲಿ ಹೇಳಿದೆಯಾದುದರಿಂದ ಸುಸುನಾಗ (=ನಂದ
ರಾಜ) ನು ಮಗಧರಾಜ್ಯಾಧಿಪನಾಗಿ ಅಭಿಷಿಕ್ತನಾದ ಸಮಯದಲ್ಲಿ ಪುಷ್ಪಪುರ
(=ಕುಸುಮಪುರ=ಪಾಟಲೀಪುತ್ರ) ವು ಮಗಧರಾಜ್ಯದ ರಾಜಧಾನಿಯಾಗಿದ್ದಿರ
ಬೇಕೆಂದು ಗ್ರಹಿಸಬೇಕಾಗುವುದು. ಆದ್ದರಿಂದ ಸುಸುನಾಗನ ಸುತನಾದ ಕಾಲಾ
ಶೋಕನ ಕಾಲದಲ್ಲಿ ರಾಜಗೃಹದಿಂವ ಪಾಟಲೀಪುತ್ರನಗರಕ್ಕೆ ರಾಜಧಾನಿಯ ವರ್ಗಾ
ವಣೆಯಾಯಿತೆಂಬ ಹೇಳಿಕೆಯು ಅಸಂಗತವೆನಿಸುವುದು. ಇಷ್ಟಾದರೂ ಕಾಲಾ
ಶೋಕನ ಕಾಲದಲ್ಲಿ ರಾಜಧಾನಿಯ ವರ್ಗಾವಣೆಯಾಯಿತೆಂಬ ಐತಿಹ್ಯಾಂಶವು ಸರ್ವಥಾ
ಅಸಂಗತವಾಗಿದೆಯೆಂದು ಹೇಳಿ ನಿರಾಕರಿಸಲಾಗುವುದಿಲ್ಲ. ಇವನ ಕಾಲದಲ್ಲಿ ಉಜ್ಜ
ಯಿನೀ (=ವಿಶಾಲಾ) ನಗರದಿಂದ ಪಾಟಲೀಪುತ್ರನಗರಕ್ಕೆ ರಾಜಧಾನಿಯ ವರ್ಗಾ

ವಣೆಯಾಗಿರಬೇಕೆಂದು ಹೇಳಲವಕಾಶವಿದೆ : ಕಾಲಾಶೋಕ (=ಮಹಾನಂದ) ನ ತಂದೆಯಾದ ಸುಸುನಾಗ (=ನಂದರಾಜ) ನು ಅವಂತೀರಾಜನಾಗಿ ಉಜ್ಜಯಿನಿಯಲ್ಲಿ ಅಭಿಷಿಕ್ತನಾದ ಎಂಟು ವರ್ಷಗಳ ತರುವಾಯ ಮಗಧರಾಜ್ಯಾಧಿಪನಾಗಿ ಅಭಿಷಿಕ್ತ ನಾದನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಹೀಗೆ ಇವನು ಮಗಧರಾಜ್ಯಾಧಿಪನಾಗಿ ಅಭಿಷಿಕ್ತನಾದಕೂಡಲೇ ತನ್ನ ರಾಜಧಾನಿಯಾಗಿದ್ದ ಉಜ್ಜಯಿನಿಯನ್ನು ತೊರೆದು ಪಾಟಲೀಪುತ್ರನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಹೇಳಲಾಗು ವುದಿಲ್ಲ. ಇವನ ರಾಜ್ಯಭಾರಕಾಲದಲ್ಲಿ ಉಜ್ಜಯಿನಿಯು ಪ್ರಧಾನಕೇಂದ್ರವಾಗಿಯೂ ಪಾಟಲೀಪುತ್ರನಗರವು ದ್ವಿತೀಯಕೇಂದ್ರವಾಗಿಯೂ ಇದ್ದು, ಕಾಲಾಶೋಕನು ಪಾಟಲೀಪುತ್ರನಗರದಲ್ಲಿ ರಾಜಪ್ರತಿನಿಧಿಯಾಗಿದ್ದಿರಬೇಕೆಂದು ಹೇಳಲವಕಾಶವಿದೆ. ದಿವ್ಯಾವದಾನದಲ್ಲಿ ಉಕ್ತವಾಗಿರುವ ಮಗಧರಾಜಸಂತತಿಯಲ್ಲಿ ಮುಂಡರಾಜನ ತರು ವಾಯ ಕಾಕವರ್ಣಿಯು ರಾಜ್ಯಭಾರಕ್ಕೆ ಬಂದನೆಂದು ನಿರ್ದೇಶಿಸಲಾಗಿದೆ. ಈ 'ಕಾಕವರ್ಣಿ' ಎಂಬ ಹೆಸರು ಕಾಲಾಶೋಕನ ಗೌಣನಾಮವಾಗಿದೆಯೆಂಬುದು ವಿದಿತ ವಿದೆ. ಇಂತೆಯೇ ಸನ್ಮಾನ್ಯ ತಾರಾನಾಥರ ಕೃತಿಯ ಹೇಳಿಕೆಯಂತೆ, ಮಗಧರಾಜ್ಯ ದಲ್ಲಿ, ಪ್ರಜೆಗಳ ಕೋರಿಕೆಯ ಮೇರೆಗೆ ಅಭಿಷಿಕ್ತನಾದ ರಾಜನು ಕಾಮಾಶೋಕ ಎಂಬ ಹೆಸರಿನವನಾಗಿದ್ದನೆಂದು ಸನ್ಮಾನ್ಯ ಜಯಸ್ವಾಲ್‌ರವರು ಹೇಳಿದ್ದಾರೆ. 'ಕಾಮಾಶೋಕ' ಎಂಬುದು 'ಕಾಲಾಶೋಕ' ಎಂಬುದರ ರೂಪಾಂತರವಾಗಿದೆಯೆಂದು ಗ್ರಹಿಸಬೇಕಾಗುವುದು. ಆದರೆ ಮಹಾವಂಸೋ ಮತ್ತು ಇತರ ದಾಕ್ಷಿಣಾತ್ಯ ಬೌದ್ಧ ಕೃತಿಗಳ ಹೇಳಿಕೆಯಂತೆ, ಮಗಧರಾಜ್ಯದ ಪ್ರಜೆಗಳ ಕೋರಿಕೆಯಂತೆ ಅಭಿಷಿಕ್ತನಾದ ರಾಜನು ಸುಸುನಾಗ ಎಂಬ ಹೆಸರಿನವನಾಗಿದ್ದು, ಕಾಲಾಶೋಕನು ಸುಸುನಾಗನ ಸುತನಾಗಿದ್ದಾನೆಂಬುದು ವಿದಿತವಿದೆ. ಈ ರೀತಿಯಾಗಿ ದಾಕ್ಷಿಣಾತ್ಯ ಮತ್ತು ಔತ್ತರೇಯ ಬೌದ್ಧಸಂಪ್ರದಾಯಗಳ ಕೃತಿಗಳಲ್ಲಿ ಮಗಧರಾಜ್ಯದ ನಾಗರೀಕರ ಕೋರಿಕೆಯ ಮೇರೆಗೆ ಅಭಿಷಿಕ್ತನಾದ ರಾಜನನ್ನು ಹೆಸರಿಸುವಲ್ಲಿ ಮತಭೇದವೇರ್ಪಡಲು, ಈ ಮೇಲೆ ಹೇಳಿ ದಂತೆ ನಂದರಾಜ (=ಸುಸುನಾಗ) ನ ಕಾಲದಲ್ಲಿ ಪಾಟಲೀಪುತ್ರನಗರವು ದ್ವಿತೀಯ ಕೇಂದ್ರವಾಗಿದ್ದು ಇಲ್ಲಿ ಕಾಲಾಶೋಕನು (=ಕಾಮಾಶೋಕ=ಕಾಕವರ್ಣಿಯು) ರಾಜ ಪ್ರತಿನಿಧಿಯಾಗಿದ್ದುದು ಕಾರಣವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಹೀಗೆ ನಂದರಾಜನ ಕಾಲದಲ್ಲಿ ಪಾಟಲೀಪುತ್ರನಗರದಲ್ಲಿ ರಾಜಪ್ರತಿನಿಧಿಯಾಗಿದ್ದ ಕಾಲಾ ಶೋಕನು, ಮುಂದೆ ತಾನು ರಾಜನಾಗಿ ಅಭಿಷಿಕ್ತನಾದ ಕೆಲವರ್ಷಗಳ ತರುವಾಯ ಪಾಟಲೀಪುತ್ರನಗರವನ್ನು ತನ್ನ ರಾಜ್ಯಭಾರದ ಪ್ರಧಾನಕೇಂದ್ರವನ್ನಾಗಿ ಮಾಡಿ ಕೊಂಡಿದ್ದಾನೆಂದು ಗ್ರಹಿಸುವುದು. ಸುಸಂಗತವೆನಿಸುವುದು. ಈ ರೀತಿಯಾಗಿ ಕಾಲಾ ಶೋಕನು ಪಾಟಲೀಪುತ್ರನಗರವನ್ನು ತನ್ನರಾಜಧಾನಿಯನ್ನಾಗಿ ಮಾಡಿಕೊಂಡನಾದು ದರಿಂದ ಈ ವಿಷಯವಾಗಿ ಬರ್ಮಾ ಇತಿವೃತ್ತದ ಮೇಲ್ಕಂಡ ಐತಿಹ್ಯವು ಭಾಗಶಃ ಸತ್ಯನಿಷ್ಠವಾಗಿದೆಯೆಂದು ವ್ಯಕ್ತವಾಗುವುದು.

ಕಾಕವರ್ಣ-ಶೈಶುನಾರಿಯು ಯವನರ ವಿವಂಚನೆಗೊಳಗಾಗಿ ಮೃತ್ಯುವಶನಾದ ವಿಷಯವನ್ನು ಬಾಣಕವಿಯು ಈ ಮುಂದಿನಂತೆ ಹೇಳಿದ್ದಾನೆ: "ಆಶ್ಚರ್ಯಕುತೂಹಲೀ ಚ ಚಂಡೀಪತಿರ್ದಂಡೋಪನತಯವನನಿರ್ಮಿತೇನ ನಭಸ್ತಲಯಾಯಿನಾ ಯಂತ್ರಯಾನೇನಾನೀಯತ ಕ್ವಾಪಿ| ಕಾಕವರ್ಣಃ ಶೈಶುನಾರಿಶ್ಚ ನಗರೋಪಕಂಠೇ ಕಂಠೇ ನಿಚಕೃತೋ ನಿಸ್ತ್ರಿಂಶೇನ|" ಟೀಕೆ: "ಕಾಕವರ್ಣೋ ಯವನಾನ್ವಿಜಿತ್ಯ ತೈಶ್ಚ ಸ್ವಪುರುಷಾನುಪಾಯಸೀಕೃತ್ಯ ಯಂತ್ರಯಾನೈಸ್ತದ್ವತ್ತ್ರೈಃ ಪರದಾರಾದೀ ಗಚ್ಛಯವನೈರಾತ್ಮದೇಶಂ ಪ್ರಾಪಯ್ಯ ನಿಹತ ಇತಿ|" [ಹರ್ಷಚರಿತ-ಉಚ್ಛ್ವಾಸ ೬] ಬಾಣಕವಿಯ ಈ ಹೇಳಿಕೆಯು ಕಾಕವರ್ಣ-ಮಹಾನಂದಿಯ ಜೀವಿತಾಂತ್ಯ ಘಟನೆಯ ಐತಿಹ್ಯವಾಗಿದೆಯೆಂದು ಸನ್ಮಾನ್ಯ ಸೀತಾನಾಥ್‌ಪ್ರಧಾನ್‌ರವರು ಅಭಿಪ್ರಾಯಪಟ್ಟಿದ್ದಾರೆ. ಸಾಧಾರಣವಾಗಿ, ಭಾರತೀಯಸಾಹಿತ್ಯಕೃತಿಗಳಲ್ಲಿ 'ಯವನ' ಪದವು ಗ್ರೀಕ್‌ಜನರ ಸೂಚಕವಾಗಿ ಪ್ರಯುಕ್ತವಾಗಿದೆ. ಆದರೆ ಕಾಕವರ್ಣ-ಮಹಾನಂದನ ಸಮಯಕ್ಕಾಗಲೇ ಗ್ರೀಕ್ ದೇಶದ ಜನರು ರಾಜಕೀಯ ಉದ್ದೇಶದಿಂದ ಭಾರತದ್ದೇಶಕ್ಕೆ ಬಂದಿದ್ದರೆಂದು ಸೂಚನೆಗೊಡುವ ಐತಿಹ್ಯಾಂಶಗಳು ಉಪಲಬ್ಧವಿಲ್ಲವಾಗಿವೆ. ಆದ್ದರಿಂದ ಇಲ್ಲಿ 'ಯವನ' ಎಂಬ ಪದದಿಂದ ವಿದೇಶಿಯರಾದ (ಪಾರಸೀಕ) ಶಾಹಿಜನರು ಸೂಚಿತರಾಗಿದ್ದಾರೆಂದು ಗ್ರಹಿಸಬೇಕಾಗುವುದು. ಪಾರಸೀಕ ದೊರೆಯ ಪ್ರತಿನಿಧಿಗಳಾಗಿ ಪಂಜಾಬ್ ಪ್ರಾಂತ್ಯದಲ್ಲಿ ನೆಲಸಿದ್ದ ಶಾಹಿಗಳು ನಂದರಾಜನಿಂದ ಪರಾಜಿತರಾದ ಅನಂತರ ಸ್ವದೇಶಕ್ಕೆ ಹಿಂದಿರುಗಿ ಹೋಗದೆ ನಂದರಾಜನ ಸಾಮಂತರಾಗಿ ಭಾರತದೇಶದಲ್ಲಿಯೇ ನೆಲೆಗೊಂಡಿದ್ದಾರೆ. ಈ ಶಾಹಿಜನರು ನಂದರಾಜನ ಕಾಲಾನಂತರ ಮಹಾನಂದನೊಡನೆ ನೆಂಟಸ್ತಿಕೆಯನ್ನು ಗಳಿಸಿದ್ದರೆಂದು ಹೇಳಲವಕಾಶವಿದೆ. ಮಹಾನಂದಿಗೆ ಶೂದ್ರಸ್ತ್ರೀಗರ್ಭಜನಾದ ಮಹಾಪದ್ಮನೆಂಬ ಮಗನಾದನೆಂದು ಮತ್ತು ಇವನು ಪರಶುರಾಮನಂತೆ ಸರ್ವಕ್ಷತ್ರಾಂತಕನೆನಿಸಿ ಮಗಧರಾಜ್ಯದ ಪ್ರಭುವಾಗಿ ಅಧಿಷ್ಠಿತನಾದನೆಂದು ಪುರಾಣಗಳಲ್ಲಿ ಹೇಳಲಾಗಿದೆ. [ಮತ್ಸ್ಯಪುರಾಣ ಅ. ೨೭೨, ಶ್ಲೋ. ಸಂ. ೧೮–೨೦] ಮಹಾಪದ್ಮನ ತಾಯಿಯು ವಿದೇಶೀಯ ಶಾಹಿಮನೆತನದವಳಾಗಿದ್ದುದರಿಂದ ಇವಳನ್ನು ವೈದಿಕ ಆಮ್ನಾಯನುಸಾರವಾಗಿ ಶೂದ್ರಳನ್ನಾಗಿ ನಿರ್ದೇಶಿಸಲಾಗಿದೆ. ಹೀಗೆ ಮಹಾನಂದನೊಡನೆ ವೈವಾಹಿಕ ಸಂಬಂಧವನ್ನು ಗಳಿಸಿದ ಶಾಹಿಗಳು ಅವನ ಆಪ್ತಜನರಂತೆ ವರ್ತಿಸುತ್ತಿದ್ದು ಸಮಯಸಾಧಿಸಿ ಅವನನ್ನು ಕೊಲೆಮಾಡಿ ತಮ್ಮ ರಾಜಕೀಯ ಉದ್ದೇಶವನ್ನು ಸಾಧಿಸಿಕೊಳ್ಳಲು ಯತ್ನಿಸಿದ್ದಾರೆಂದು ಕಂಡುಬರುವುದು. ಈ ರೀತಿಯಾಗಿ ವಿದೇಶೀಯರಾದ ಶಾಹಿಗಳ ವಿವಂಚನೆಗೆ ಬಲಿಯಾದ ಮಹಾನಂದ-ಕಾಕವರ್ಣಿಯ ಐತಿಹ್ಯಪ್ರಸಂಗವು ಬಾಣಕವಿಯ ಹರ್ಷಚರಿತದಲ್ಲಿ ಉದಾಹರಣ ರೂಪದಿಂದ ಮೇಲ್ಕಂಡಂತೆ ಉಲ್ಲಿಖಿತವಾಗಿದೆ.

ಮತ್ಸ್ಯಪುರಾಣದ ಹೇಳಿಕೆಯಾಧಾರದನುಗುಣವಾಗಿ ಪಂಚಪ್ರಾದ್ಯೋತರು ೫೨ ವರ್ಷಕಾಲ ರಾಜ್ಯಭಾರಮಾಡಿರುವರೆಂದೂ ತದನಂತರ ನಂದರಾಜನು (=ನಂದಿವರ್ಧನನು) ಅವಂತೀರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದೂ ಹಿಂದೆಪ್ರತಿಪಾದಿಸಲಾಗಿದೆ. ಪಂಚಪ್ರಾದ್ಯೋತರ ಒಟ್ಟು ರಾಜ್ಯಭಾರಕಾಲವನ್ನು ಮತ್ಸ್ಯಪುರಾಣದಲ್ಲಿ ೫೨ ವರ್ಷಗಳೆಂದೂ. ಇತರ ಎಲ್ಲ ಪುರಾಣಗಳಲ್ಲಿ ೧೩೮ ವರ್ಷಗಳೆಂದೂ ನಿರ್ದೇಶಿಸಲಾಗಿರುವುದು ವಿದಿತವಿದೆ. ಪಂಚಪ್ರಾದ್ಯೋತರಲ್ಲಿ ಅಂತಿಮನಾದ ಅರಸನನ್ನು ವಾಯುಪುರಾಣದಲ್ಲಿ 'ವರ್ತಿವರ್ಧನ' ಎಂಬುದಾಗಿಯೂ, ಬ್ರಹ್ಮಾಂಡಾದಿ ಇತರ ಪುರಾಣಗಳಲ್ಲಿ (ಪ್ರ) 'ನಂಡಿವರ್ಧನ' ಎಂಬುದಾಗಿಯೂ ಹೆಸರಿಸಲಾಗಿದೆಯಾದರೆ, ವಿಷ್ಣುಪುರಾಣದಲ್ಲಿ 'ನಂದಿವರ್ಧನ' ಎಂಬ ಹೆಸರು ಚತುರ್ಥ ಪ್ರಾದ್ಯೋತನ ಹೆಸರಾಗಿ ನಿರ್ದೇಶಿತವಾಗಿದ್ದು ಪಂಚಮ ಪ್ರಾದ್ಯೋತನನ್ನು 'ನಂದಿ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆ. [ಚತುರ್ಥಾಂಶ-ಅ. ೨೪]. ಇಂತೆಯೇ 'ಪಂಚಪ್ರಾದ್ಯೋತರು ೧೩೮ ವರ್ಷಕಾಲ ರಾಜ್ಯಭಾರಮಾಡುವರು' ಎಂಬ ಐತಿಹ್ಯಾಂಶವು ವಾಯುಪುರಾಣದಲ್ಲಿ 'ವರ್ತಿವರ್ಧನ' ಎಂಬ ಹೆಸರಿನ ಅನಂತರವರ್ತಿಯಾಗಿಯೂ, ಬ್ರಹ್ಮಾಂಡಾದಿ ಇತರ ಪುರಾಣಗಳಲ್ಲಿ (ಪ್ರ) 'ನಂದಿವರ್ಧನ' ಎಂಬ ಹೆಸರಿನ ಅನಂತರವರ್ತಿಯಾಗಿಯೂ ಇದೆಯಾದರೆ ವಿಷ್ಣುಪುರಾಣದಲ್ಲಿ 'ನಂದಿ' ಎಂಬ ಹೆಸರಿನ ಅನಂತರವರ್ತಿಯಾಗಿ ಉಕ್ತವಾಗಿದೆ. ತಾರಾನಾಥರ ಹೇಳಿಕೆಯಾಧಾರದಂತೆ 'ಯಶಸ್' ಎಂಬ ಹೆಸರಿನ ಬೌದ್ಧಆಚಾರ್ಯರು ವೈಶಾಲಿಯ ಕುಸುಮಪುರೀವಿಹಾರದಲ್ಲಿ ಬೌದ್ಧಯತಿಗಳ (ದ್ವಿತೀಯ) ಸಮ್ಮೇಳನವನ್ನು 'ನಂದಿನ್' ಎಂಬ ರಾಜನ ನೆರವಿನಿಂದ ನಡೆಸಿದರೆಂದೂ ಮತ್ತು ಈ ಆಚಾರ್ಯಯಶಸ್ಸರು ಕಾಮಾಶೋಕ (=ನಂದಿನ್=ಕಾಲಾಶೋಕ) ನನ್ನು ಬೌದ್ಧಮತಾನುಯಾಯಿಯನ್ನಾಗಿ ಪರಿವರ್ತಿಸಿದರೆಂದೂ ಸನ್ಮಾನ್ಯಜಯಸ್ವಾಲ್ ರವರು ಹೇಳಿದ್ದಾರೆ. [ಪೂ. ಸೂ. ಜರ್ನಲ್.] ಇದರಿಂದ ಕಾಲಾಶೋಕನನ್ನು 'ನಂದಿ' ಅಥವಾ 'ನಂದಿನ್' ಎಂಬುದಾಗಿಯೂ ಹೆಸರಿಸುವ ಪರಿಪಾಠವಿದ್ದಿರಬೇಕೆಂದು ವ್ಯಕ್ತವಾಗುವುದಲ್ಲದೆ ಈ ನಂದಿ(ನ್) ಎಂಬ ಹೆಸರು ಪ್ರಾಯಶಃ 'ಮಹಾನಂದಿ (ನ್)' ಎಂಬುದರ ಹ್ರಾಸರೂಪವಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಆದ್ದರಿಂದ ಪಂಚಪ್ರಾದ್ಯೋತರಲ್ಲಿ ಅಂತಿಮರಾಜನ ಹೆಸರೆನಿಸಿ ವಿಷ್ಣುಪುರಾಣದಲ್ಲಿ ನಿರ್ದೇಶಕವಾಗಿರುವ 'ನಂದಿ' ಎಂಬ ಹೆಸರು ಮಹಾನಂದಿ-ಕಾಲಾಶೋಕನ ನಿರ್ದೇಶಕವಾಗಿದೆಯೆಂದೂ ಮತ್ತು ಪಂಚಪ್ರಾದ್ಯೋತರು ೫೨ ವರ್ಷಕಾಲ ರಾಜ್ಯಭಾರಮಾಡಿರುವರೆಂದು ಹಿಂದೆ ಪ್ರತಿಪಾದಿಸಲಾಗಿದೆಯಾದುದರಿಂದ, ಮತ್ಸ್ಯಪುರಾಣದ ಹೊರತಾದ ಇತರ ಪುರಾಣಗಳಲ್ಲಿ ಹಾಗೂ ವಿಷ್ಣುಪುರಾಣದಲ್ಲಿ ('ನಂದಿ' ಎಂಬ ಹೆಸರಿನ ಅಂತ್ಯದಲ್ಲಿ) ನಿರ್ದೇಶಿತವಾಗಿರುವ ಸಮಷ್ಟಿರೂಪದ ೧೩೮ ವರ್ಷಗಳ ರಾಜ್ಯಭಾರಕಾಲವು ಸಪ್ತಮ ಪ್ರಾದ್ಯೋತನಾದ ನಂದಿಯ (=ಮಹಾನಂದಿ=ಕಾಲಾಶೋಕನ) ರಾಜ್ಯಭಾರಾಂತ್ಯಸಮಯದ ಸೂಚಕವಾಗಿದೆಯೆಂಬು ಗ್ರಹಿಸಲವಕಾಶವಾಗುವುದು. ಇದ

ರಂತೆ ಮಹಾನಂದಿ-ಕಾಲಾಶೋಕನು (೧೩೮-೫೨[1] — ೪೦[2]=) ೪೬ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಫಲಿತವಾಗುವುದು. ಮಹಾನಂದನ ನಾಮಾಂತರವಾದ 'ಕಾಕವರ್ಣ' ಎಂಬ ಹೆಸರಿನೊಡನೆ ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ೩೬ ವರ್ಷಗಳ ರಾಜ್ಯಭಾರಕಾಲವನ್ನೂ ಮತ್ತು 'ಮಹಾನಂದಿ' ಎಂಬ ಹೆಸರಿನೊಡನೆ ಈ ಮೂರು ಪುರಾಣಗಳಲ್ಲಿ ೪೩ ವರ್ಷಗಳ ರಾಜ್ಯಭಾರವನ್ನು ನಿರ್ದೇಶಿಸಲಾಗಿದೆ. ಇಂತೆಯೇ ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಾದ ಮಹಾವಂಸೋ ಮತ್ತು ಬರ್ಮೀ ಇತಿವೃತ್ತಕೃತಿಗಳಲ್ಲಿ ಕಾಲಾಶೋಕನ ಹೆಸರಿನೊಡನೆ ೨೮ ವರ್ಷಕಾಲದ ರಾಜ್ಯಭಾರಕಾಲವನ್ನು ನಿರ್ದೇಶಿಸಲಾಗಿದೆ. ಹೀಗೆ ಪುರಾಣಗಳಲ್ಲಿ ಮತ್ತು ಬೌದ್ಧ ಆಮ್ನಾಯದ ಕೃತಿಗಳಲ್ಲಿ ನಿರ್ದೇಶಿತವಾಗಿರುವ ಈ ಯಾವ ಒಂದು ರಾಜ್ಯಭಾರ ಕಾಲಾವಧಿಯೂ ಸಮಾಯೋಜಿತವಾಗುವುದಿಲ್ಲ. ಆದ್ದರಿಂದ ಈ ಮೇಲ್ಕಂಡಂತೆ ಅನುಬದ್ಧಕ್ರಮದಿಂದ ಮಹಾನಂದನ ರಾಜ್ಯಭಾರವು ಕ್ರಿ. ಪೂ. (೪೩೫ — ೪೬=) ೩೮೯ ರಲ್ಲಿ ಅಂತ್ಯಗೊಂಡಿದೆಯೆಂದು ನಿರ್ಣಯಿಸಲಾಗಿದೆ.

ಮಹಾನಂದನ ಕಾಲಾನಂತರದ ರಾಜಸಂತತಿಯ ಇತಿವೃತ್ತವಿಷಯದ ಪರಿಷ್ಕರಣಕ್ಕಾಗಿ, ಪುರಾಣಗಳಲ್ಲಿ ಹಾಗೂ ದಾಕ್ಷಿಣಾತ್ಯಬೌದ್ಧಆಮ್ನಾಯದ. ಕೃತಿಗಳಲ್ಲಿ ನಿರ್ದೇಶಿತವಾಗಿರುವ ನಂದ (=ಸುಸುನಾಗ) ರಾಜನಾದಿಯಾಗಿ ಮೌರ್ಯವಂಶದ ಅಶೋಕಸಾಮ್ರಾಟನ ಪರ್ಯಂತಕಾಲದ ರಾಜಸಂತತಿಯ ರಾಜ್ಯಭಾರಕಾಲಾವಧಿಯನ್ನು ಗಮನಿಸಬೇಕಾದ ಆವಶ್ಯಕತೆಯಿದೆ. ಅಂತೆಯೇ ಈ ವಿಷಯವನ್ನು ಮುಂದಿನ ಪುಟದಲ್ಲಿ ನಿರ್ದೇಶಿಸಲಾಗಿದೆ.

---

1 ಪಂಚಪ್ರಾದ್ಯೋತರ ರಾಜ್ಯಭಾರಕಾಲ ೫೨ ವರ್ಷ.

2 ನಂದರಾಜನ ರಾಜ್ಯಭಾರಕಾಲ (೮+೩೨=)೪೦ ವರ್ಷ.

| ವಾಯುಪುರಾಣದನುಸಾರ | | ಬ್ರಹ್ಮಾಂಡಪುರಾಣದನುಸಾರ | | ಮತ್ಸ್ಯಪುರಾಣದನುಸಾರ | |
|---|---|---|---|---|---|
| ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು |
| ೧. (ದ್ವಿ) ನಂದಿವರ್ಧನ | ೪೨ | ............ | ೪೦ | ............ | ೪೦ |
| ೨. ಮಹಾನಂದಿ | ೪೩ | ............ | ೪೩ | ............ | ೪೩ |
| ೩. ಮಹಾಪದ್ಮ | ೨೮ | ............ | ೮೮ | ............ | ೮೮ |
| ೪. ಮಹಾಪದ್ಮನ ಎಂಟು ಸುತರು | ೧೨ | ............ | ೧೨ | ............ | ೧೨ |
| ೫. ಕೌಟಿಲ್ಯ=ನಂದೇಂದು | ೧೦೦ | (೫) ಕೌಟಿಲ್ಯ=ನರೇಂದ್ರ | ೧೦೦ | (೫) ಚಂದ್ರಗುಪ್ತ | ೧೦೦ |
| ೬. ಚಂದ್ರಗುಪ್ತ | ೨೪ | ............ | ೨೪ | ಅನಂತರ ರಾಜ್ಯಭಾರವು ಮೌರ್ಯರನ್ನು ಸೇರುವುದು. | |
| ೭. ಭದ್ರಸಾರ | ೨೫ | ೭. ಬಿಂದುಸಾರ | ೨೫ | | |
| ೮. ಅಶೋಕ | ೨೬ | ............ | ೩೬ | | |

| ದೀಪವಂಸೋಕೃತಿಯನುಸಾರ | | ಮಹಾವಂಸೋಕೃತಿಯನುಸಾರ | | ಬರ್ಮೀಇತಿವೃತ್ತಕೃತಿಯನುಸಾರ | |
|---|---|---|---|---|---|
| ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು |
| ಸುಸುನಾಗ (=ನಂದ) | ೧೦ | ........................ | ೧೮ | ........................ | ೩೨ |
| ಕಾಲಾಶೋಕ | ? | ........................ | ೨೮ | ........................ | ೨೮ |
| ಕಾಲಾಶೋಕನ ಹತ್ತು ಮಕ್ಕಳು | ೨೨ | ........................ | ೨೨ | ಭದ್ರಸೇನ ಮತ್ತು ಎಂಟು ಸಹೋದರರು | ೩೩ |
| | | ನವನಂದರು | ೨೨ | ಉಗ್ರಸೇನ, ನಂದ ಮತ್ತು ಎಂಟು ಸಹೋದರರು | ೨೧ |
| ಚಂದಗುತ್ತ | ೨೪ | ........................ | ೨೪ | ........................ | ೨೪ |
| ಬಿಂದುಸಾರ | ? | ........................ | ೨೮ | ........................ | ೨೭ |
| ಅಶೋಕ | ೩೭ | ........................ | ೩೭ | ........................ | ? |

ಟಿಬೆಟ್ಟಿನ ಸಂಪ್ರದಾಯದ ಇತಿವೃತ್ತಾನುಸಾರವಾಗಿ ಧರ್ಮಾಶೋಕನು ಅಜಾತಶತ್ರುವಿನಿಂದ ಹತ್ತನೇ ತಲಾಂತರದ ರಾಜನಾಗಿದ್ದಾನೆ ಮತ್ತು ಇವನು ೫೪ ವರ್ಷ ಕಾಲ ರಾಜ್ಯಭಾರಮಾಡಿದ್ದಾನೆ.

ಮಹಾನಂದಿಯ ತರುವಾಯ, ಅವನ ಶೂದ್ರಸ್ತ್ರೀಗರ್ಭಜನಾದ ಮಹಾಪದ್ಮನು ರಾಜ್ಯಭಾರಾಧಿಷ್ಠಿತನಾದನೆಂದೂ, ಅನಂತರ ಇವನ ಅಷ್ಟಸುತರು ರಾಜ್ಯಭಾರಮಾಡಿದರೆಂದೂ ಮತ್ತು ಇವರೆಲ್ಲರನ್ನು ಕೌಟಿಲ್ಯನು ೧೨ ವರ್ಷಗಳ ಅವಧಿಯಲ್ಲಿ ವಧೆ ಮಾಡಿ 'ನಂದೇಂದು' ಅಥವಾ 'ನರೇಂದ್ರ'ನೆನಿಸಿ. ೧೦೦ ವರ್ಷಕಾಲ ರಾಜ್ಯಭಾರ ಮಾಡಿದನೆಂದೂ ಪುರಾಣಗಳಲ್ಲಿ ಹೇಳಲಾಗಿದೆ.[1] ಆದರೆ ಕೌಟಿಲ್ಯನು ಮಹಾಪದ್ಮ ಮತ್ತು ಅವನ ಸುತರನ್ನು ವಧೆಗೊಳಿಸಿದ ಅನಂತರ ತಾನೇ 'ನಂದೇಂದು' ಅಥವಾ ನರೇಂದ್ರನೆನಿಸಿ ೧೦೦ ವರ್ಷಕಾಲ ರಾಜ್ಯಭಾರಮಾಡಿದನೆಂಬುದು ಅಥವಾ ಇವನಿಂದ ರಾಷ್ಟ್ರದಲ್ಲಿ ಅಭಿಷಿಕ್ತನಾದ ಚಂದ್ರಗುಪ್ತನ ೧೦೦ ವರ್ಷಗಳ ಆಳ್ವಿಕೆಯ ಅನಂತರ ರಾಜ್ಯಭಾರವು ಮೌರ್ಯರನ್ನು ಸೇರಿತೆಂಬ ಪುರಾಣಗಳ ಮೇಲ್ಕಂಡ ಐತಿಹ್ಯವು ಅಸಂಗತವಾಗಿದೆಯೆಂಬುದು ಸ್ಪಷ್ಟವಿದೆ. ಆದ್ದರಿಂದ ಈ ಐತಿಹ್ಯಾಂಶವು ಯಾವುದೋ ರೀತಿಯ ನ್ಯೂನಾತಿರೇಕರೂಪದ ದೋಷಭಾಗಿಯಾಗಿದೆಯೆಂದು ಗ್ರಹಿಸಲವಕಾಶವಾಗುವುದು.

ಕಾಲಾಶೋಕ (=ಮಹಾನಂದ)ನ ತರುವಾಯ ಅವನ ಹತ್ತುಜನಮಕ್ಕಳು ೨೨ವರ್ಷಕಾಲ ರಾಜ್ಯಭಾರಮಾಡಿದರೆಂದು ದೀಪವಂಸೋ ಮತ್ತು ಮಹಾವಂಸೋ ಕೃತಿಗಳಲ್ಲಿ ನಿರ್ದೇಶಿತವಾಗಿದ್ದು ಈ ಐತಿಹ್ಯವು ತಥ್ಯನಿಷ್ಠವಾಗಿದೆಯೆಂದು ಹೇಳಲವಕಾಶವಿದೆ: ನಂದರಾಜನು ಮಗಧರಾಜನಾಗಿ ಅಭಿಷಿಕ್ತನಾದ ತರುವಾಯ ೩೨ ವರ್ಷಕಾಲ ರಾಜ್ಯಭಾರಮಾಡಿರುವನೆಂದೂ ಅನಂತರ ಇವನ ಸುತನಾದ ಮಹಾನಂದ-ಕಾಲಾಶೋಕನು ೪೬ ವರ್ಷಕಾಲ ರಾಜ್ಯಭಾರಮಾಡಿರುವನೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಇವರೀರ್ವರ ರಾಜ್ಯಭಾರದ (೩೨+೪೬=) ೭೮ ವರ್ಷಗಳ ಒಟ್ಟು ಅವಧಿಗೆ, ಕಾಲಾಶೋಕನ ತರುವಾಯ ಅವನ ದಶಸುತರು ರಾಜ್ಯಭಾರಮಾಡಿದರೆಂದು ಮೇಲ್ಕಂಡಂತೆ ಬೌದ್ಧಆಮ್ನಾಯಕೃತಿಗಳಲ್ಲಿ ನಿರ್ದೇಶಿಸಲಾಗಿರುವ ೨೨ ವರ್ಷಗಳ ಅವಧಿಯನ್ನು ಕೂಡಿಸಿದಲ್ಲಿ, ಫಲಿತಾಂಶವಾಗಿ (೭೮+೨೨=) ೧೦೦ ವರ್ಷಗಳ ಸಮಷ್ಟಿರೂಪದ ರಾಜ್ಯಭಾರಾವಧಿಯು ಲಬ್ಧವಾಗುವುದು ಇದರಿಂದ ಪುರಾಣಗಳಲ್ಲಿ, ಈ ಹಿಂದೆ ಹೇಳಲಾಗಿರುವಂತೆ, ಕೌಟಿಲ್ಯ (=ನಂದೇಂದು=ನರೇಂದ್ರ) ನ ಅಥವಾ ಚಂದ್ರಗುಪ್ತನ ಹೆಸರಿನೊಡನೆ ಅಸಂಗತರೀತಿಯಿಂದ ನಿರ್ದೇಶಿತವಾಗಿರುವ ೧೦೦ ವರ್ಷಗಳ

---

1 ವಾಯುಪುರಾಣ ಅಧ್ಯಾಯ ೩೭–ಶ್ಲೋ. ಸಂ. ೩೨೦ ರಿಂದ ೩೨೪; ಬ್ರಹ್ಮಾಂಡಪುರಾಣ ಅಧ್ಯಾಯ ೭೪–ಶ್ಲೋ. ಸಂ. ೧೩೯ ರಿಂದ ೧೪೪; ಮತ್ಸ್ಯಪುರಾಣ ಅಧ್ಯಾಯ ೨೭೨–ಶ್ಲೋ. ಸಂ. ೧೮ ರಿಂದ ೨೨ ಈ ಪುರಾಣದಲ್ಲಿ, ಕೌಟಿಲ್ಯನು ಮಹಾಪದ್ಮನಸುತರನ್ನು ವಧೆಗೊಳಿಸಿದ ತರುವಾಯ ಚಂದ್ರಗುಪ್ತನಿಗೆ ರಾಜ್ಯಭಾರದ ಪಟ್ಟಕಟ್ಟಿದನೆಂದೂ ಮತ್ತು ಈ ಚಂದ್ರಗುಪ್ತನ ೧೦೦ ವರ್ಷಗಳ ಆಳ್ವಿಕೆಯ ತರುವಾಯ ರಾಜ್ಯಭಾರವು ಮೌರ್ಯರನ್ನು ಸೇರಿತೆಂದೂ ಹೇಳಲಾಗಿದೆ.

ರಾಜ್ಯಭಾರಕಾಲವು ನಂದ, ಕಾಲಾಶೋಕ(=ಮಹಾನಂದ) ಮತ್ತು ಇವನ ತರುವಾಯ ಆಳಿದ ೧೦ ಜನ ರಾಜರ ರಾಜ್ಯಭಾರಕಾಲಗಳ ಒಟ್ಟು ರಾಜ್ಯಭಾರಾವಧಿಯಾಗಿರ ಬೇಕೆಂದು ಗ್ರಹಿಸಲವಕಾಶವಾಗುವುದು. ಇದರಂತೆ ಕಾಲಾಶೋಕನ ತರುವಾಯ ಅವನ ಸಂತತಿಯ ೧೦ ಜನ ಅರಸರು ೨೨ ವರ್ಷಕಾಲ ರಾಜ್ಯಭಾರಮಾಡಿರುವರೆಂಬ ಬೌದ್ಧ ಆಮ್ನಾಯದ ಐತಿಹ್ಯವು ತಥ್ಯಸಿಷ್ಠವಾಗಿದೆಯೆಂದು ಸ್ಫುಟಗೊಳ್ಳುವುದು. ಕಾಲಾಶೋಕ (=ಮಹಾನಂದ) ನ ರಾಜ್ಯಭಾರವು ಹಿಂದೆ ಪ್ರತಿಪಾದಿಸಿರುವಂತೆ ಕ್ರಿ. ಪೂ. ೩೮೯ ರಲ್ಲಿ ಅಂತ್ಯಗೊಂಡಿದೆಯಾದುದರಿಂದ ಇವನ ತರುವಾಯ ಆಳಿದ ೧೦ ಜನ ಅರ ಸರ ರಾಜ್ಯಭಾರವು ಕ್ರಿ. ಪೂ. (೩೮೯—೨೨=) ೩೬೭ ರಲ್ಲಿ ಕೊನೆಗೊಂಡಿದೆಯೆಂದು ಫಲಿತವಾಗುವುದು.

ಕಾಲಾಶೋಕನ ತರುವಾಯ ಅವನ ಹತ್ತುಜನ ಸುತರು ೨೨ ವರ್ಷಕಾಲ ರಾಜ್ಯ ಭಾರಮಾಡಿದರೆಂದು ದೀಪವಂಸೋ ಮತ್ತು ಮಹಾವಂಸೋಕೃತಿಗಳಲ್ಲಿ ಹೇಳಲಾಗಿದೆ ಯಾದರೆ, ಮೂಲತಃ ಇದೇ ಕೃತಿಗಳ ಸಂಪ್ರದಾಯದ ಕೃತಿಯೆನಿಸಿರುವ ಬರ್ಮೀ ಇತಿವೃತ್ತದಲ್ಲಿ, ಕಾಲಾಶೋಕನ ತರುವಾಯ ಅವನ ಸುತರಾದ ಭದ್ರಸೇನ ಮತ್ತು ೮ ಜನ ಸಹೋದರರು ೩೩ ವರ್ಷಕಾಲ ರಾಜ್ಯಭಾರಮಾಡಿದರೆಂದು ನಿರ್ದೇಶಿತವಾಗಿದೆ. ಇಂತೆಯೇ ಮಹಾವಂಸೋಕೃತಿಯಲ್ಲಿ ಕಾಲಾಶೋಕನ ದಶಸುತರ ಅನಂತರವರ್ತಿ ಯಾಗಿ ೨೨ ವರ್ಷಕಾಲ ನವನಂದರು ರಾಜ್ಯಭಾರಮಾಡಿದರೆಂದು ನಿರ್ದೇಶಿತವಾಗಿರು ವುದರ ಸಮಾನಾಂತರವಾಗಿ ಬರ್ಮೀ ಇತಿವೃತ್ತದಲ್ಲಿ, ಉಗ್ಗಸೇನ ನಂದ ಮತ್ತು ಅಷ್ಟ ಸಹೋದರರು ೨೧ ವರ್ಷಕಾಲ ರಾಜ್ಯಭಾರಮಾಡಿದುದಾಗಿ ನಿರ್ದೇಶಿತವಾಗಿದೆ. ಈ ಉಗ್ಗಸೇನ ನಂದ (=ಉಗ್ರಸೇನ ನಂದ) ಎಂಬ ಹೆಸರು ಮಹಾಪದ್ಮನ ನಾಮಾಂತರ ವಾಗಿದೆಯೆಂದು ಚರಿತ್ರಕಾರರು ಗುರುತಿಸಿದ್ದಾರೆ.[1] ಇದರಿಂದ ಕಾಲಾಶೋಕನ ತರು ವಾಯಕಾಲದ ೧೦ ಜನ ಅರಸರ ರಾಜ್ಯಭಾರಾನಂತರ ಉಗ್ರಸೇನ ನಂದ (=ಮಹಾ ಪದ್ಮ) ನು ರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಗ್ರಹಿಸಲವಕಾಶವಾಗುವು ದಲ್ಲದೆ, ಕೌಟಿಲ್ಯನಿಂದ ಹತರಾದರೆಂದು ಪುರಾಣಗಳಲ್ಲಿ, ನಿರ್ದೇಶಿತರಾಗಿರುವ ಮಹಾ ಪದ್ಮ ಮತ್ತು ಅವನ ಅಷ್ಟಸುತರನ್ನು ಮಹಾವಂಸೋ ಕೃತಿಕಾರನು 'ನವನಂದ' ರೆಂಬುದಾಗಿ ನಿರ್ದೇಶಿಸಿರುವನೆಂದೂ ಗ್ರಹಿಸಲವಕಾಶವಾಗುವುದು. ಈ ನವನಂದ ರಲ್ಲಿ ಅಂತಿಮನಾದ ಧನನಂದನನ್ನು ಚಂಡಕೋಪಿಯಾದ ಬ್ರಾಹ್ಮಣ ಚಾಣಕ್ಯನು ಕೊಂದು ಮೋರಿಯ ಕ್ಷತ್ರಿಯವಂಶಜನಾದ ಚಂದಗುತ್ತ (=ಚಂದ್ರಗುಪ್ತ) ನಿಗೆ ರಾಜ್ಯಾಭಿಷೇಕಮಾಡಿದುದಾಗಿ ಮಹಾವಂಸೋಕೃತಿಯಲ್ಲಿ ಹೇಳಲಾಗಿದೆ. (ಪರಿಚ್ಛೇದ ೫—ಶ್ಲೋ. ಸಂ. ೧೫ ರಿಂದ ೧೭) ಚಂದ್ರಗುಪ್ತಮೌರ್ಯನ ರಾಜ್ಯಭಾರವು ಕ್ರಿ.ಪೂ. ೩೨೨-೧ ರಲ್ಲಿ ಆರಂಭವಾಗಿದೆಯೆಂದು ಚರಿತ್ರಕಾರರು ನಿರ್ಣಯಿಸಿದ್ದಾರೆ. ಈ

1 ಹಿಂದೂ ಸಿವಿಲೈಜೇಶರ್ಷ—ಪು. ಸಂ. ೨೭೪.

ಹಿಂದೆ ವಿವರಿಸಲಾಗಿರುವಂತೆ ಕಾಲಾಶೋಕನ ತರುವಾಯ ಆಳಿದ ೧೦ ಜನ ಅರಸರ ರಾಜ್ಯಭಾರವು ಕ್ರಿ. ಪೂ. ೩೬೭ ರಲ್ಲಿ ಕೊನೆಗೊಂಡಿದೆಯಾದುದರಿಂದ ಮಹಾಪದ್ಮಾದಿ ನವನಂದರು (೩೬೭ – ೩೨೨ =) ೪೫ ವರ್ಷಕಾಲ ರಾಜ್ಯಭಾರಮಾಡಿರುವರೆಂದು ಫಲಿತವಾಗುವುದು. ಮಹಾಪದ್ಮ ಮತ್ತು ಅವನ ಎಂಟು ಜನ ಸುತರನ್ನು ೧೨ವರ್ಷ ಗಳ ಅವಧಿಯಲ್ಲಿ ಕೌಟಿಲ್ಯನು ವಧೆಗೈದನೆಂದು ಪುರಾಣಗಳ ಹೇಳಿಕೆಯಿಂದ ಸೂಚಿತ ವಾಗುವುದಾದ್ದರಿಂದ, ಮಹಾಪದ್ಮನ ತರುವಾಯ ಅವನ ಎಂಟುಜನ ಸುತರು ೧೨ ವರ್ಷಕಾಲ ರಾಜ್ಯಭಾರಮಾಡಿರುವರೆಂದು ಗ್ರಹಿಸಲವಕಾಶವಾಗುವುದು. ಅಂತೆಯೇ ಮಹಾಪದ್ಮನು (೪೫ – ೧೨ =) ೩೩ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಸ್ಫುಟವಾಗುವುದು.

ಕಾಲಾಶೋಕನ ರಾಜ್ಯಭಾರದ ಅಂತ್ಯಸಮಯ ಮತ್ತು ಚಂದ್ರಗುಪ್ತ ಮೌರ್ಯನ ರಾಜ್ಯಾಭಿಷೇಕಸಮಯಗಳ ಮಧ್ಯವರ್ತಿಕಾಲದಲ್ಲಿ ರಾಜ್ಯಭಾರಮಾಡಿದ ರಾಜಸಂತತಿಯ ಅನುಕ್ರಮವು ಸ್ಥೂಲರೀತಿಯಾಗಿ ಮೇಲ್ಕಂಡ ವಿವರಣೆಯಿಂದ ಸ್ಫುಟ ಗೊಂಡಿದೆ. ಈ ರಾಜಸಂತತಿಯಲ್ಲಿ ಒಬ್ಬಿಬ್ಬರು ರಾಜರ ಜೀವಿತೈತಿಹ್ಯ ಸಂಗತಿಗಳು ಪ್ರಕ್ಷೇಪವಿಕ್ಷೇಪವಶವಾಗಿ ಅಸ್ತವ್ಯಸ್ತಗೊಂಡು ಕಥಾರೂಪತಳೆದು ಉಳಿದುಬಂದಿವೆ. ಕಾಲಾಶೋಕ-ಮಹಾಪದ್ಮನ ಶೂದ್ರಸ್ತ್ರೀಗರ್ಭಜನಾದ ಮಹಾಪದ್ಮ (=ಉಗ್ರಸೇನ ನಂದ) ನು ತನ್ನ ಭ್ರಾತೃಗಳನ್ನು ವಧೆಮಾಡಿ ಸಿಂಹಾಸನವನ್ನು ಆಕ್ರಮಣಮಾಡಿರುವ ನೆಂದು ಸೂಚನೆಗೊಡುವ ಕಥಾಯತ್ತವಾದ ಐತಿಹ್ಯಗಳಿವೆ. ಇಂತೆಯೇ 'ಕಾಲಾ ಶೋಕ' ಮತ್ತು 'ಮೌರ್ಯ ಅಶೋಕ' ರೀರ್ವರ ನಾಮಸಾದೃಶ್ಯತೆ, ಹಾಗೂ 'ಚಂದ್ರಗುಪ್ತ' ಎಂಬ ಹೆಸರಿನ ಇಬ್ಬರು ರಾಜರ ನಾಮಸಾದೃಶ್ಯತೆ ಮತ್ತು ಈ ರಾಜರು ಗಳ ಸಮಯದ ಒಂದೆರಡು ಪ್ರಮುಖ ಐತಿಹಾಸಿಕ ಘಟನೆಗಳ ಸಾದೃಶ್ಯತೆಗಳ ಕಾರಣ ದಿಂದ ಭಿನ್ನಭಿನ್ನವ್ಯಕ್ತಿ ಸಂಬಂಧಿಯಾದ ಮತ್ತು ಭಿನ್ನಕಾಲೀನವಾದ ಐತಿಹಾಸಿಕ ಸಂಗತಿಗಳು ಕಾಲಾನುಕ್ರಮದಲ್ಲಿ ಕಲಬೆರಕೆಗೊಂಡು ಕಥಾರೂಪತಳೆದು ಉಳಿದು ಬಂದಿವೆ. ಇಂತಹ ಕಥೆಗಳಿಂದ ಐತಿಹಾಸಿಕಸಂಗತಿಗಳನ್ನು ವಿಮರ್ಶಾಪೂರ್ವಕ ಸಂಕಲನಮಾಡುವುದರ ಮೂಲಕ ಪ್ರಸಕ್ತ ಸಂದರ್ಭದ ಇತಿಹಾಸವದ್ನು ರೂಪಿಸ ಬೇಕಾಗಿದೆ.

ಅರ್ಥಶಾಸ್ತ್ರದಲ್ಲಿ[1] "ಅಂತರ್ಗೃಹಗತಸ್ಥವಿರಸ್ತ್ರೀ ಪರಿಶುದ್ಧಾಂ ದೇವೀಂ ಪಶ್ಯೇತ್। ನ ಕಾಂಚಿದಭಿಗಚ್ಛೇತ್" ಎಂಬ ರಾಜನೀತಿಯನ್ನು ಹೇಳಿ, ದೃಷ್ಟಾಂತರೂಪವಾಗಿ "ದೇವೀಗೃಹೇ ಲೀನೋ ಹಿ ಭ್ರಾತಾ ಭದ್ರಸೇನಂ ಜಘಾನ"–ಅರ್ಥಾತ್ "ದೇವಿ (ಮಹಾರಾಣಿ) ಯ ಗೃಹದಲ್ಲಿ ಮರೆಯಾಗಿದ್ದ ಭ್ರಾತೃವು ಭದ್ರಸೇನನನ್ನು ಕೊಂದ ನಷ್ಟೆ" ಎಂದು ಹೇಳಲಾಗಿದೆ. ದೃಷ್ಟಾಂತರೂಪದಲ್ಲಿ ಉಲ್ಲೇಖಿಸಲಾಗಿರುವ

1 ಅಧಿಕಾರ-೧, ಅಧ್ಯಾಯ ೨೦ ; ಪ್ರಕರಣ ೧೭.

ಮೇಲ್ಕಂಡ ಭದ್ರಸೇನನ ಹತ್ಯಾಪ್ರಸಂಗವು ಐತಿಹಾಸಿಕ ಘಟನೆಯಾಗಿರಬೇಕೆಂಬು ದರಲ್ಲಿ ಸಂಶಯವಿಲ್ಲ. ಈ ಐತಿಹ್ಯಾಂಶವು ಕಾಲಾಶೋಕನ ತರುವಾಯ ರಾಜ್ಯಭಾರ ದಲ್ಲಿ ಅಧಿಷ್ಠಿತನಾದನೆಂದು ಬರ್ಮೀ ಇತಿವೃತ್ತದಲ್ಲಿ ನಿರ್ದೇಶಿತನಾಗಿರುವ ಭದ್ರಸೇನನ ಜೀವಿತಾಂತ್ಯಘಟನೆಯ ನಿರ್ದೇಶಕವಾಗಿರಬೇಕೆಂಬ ಗ್ರಹಿಕೆಗೆ ಅವಕಾಶವೀಯುವುದು ಆದರೆ ಈ ಗ್ರಹಿಕೆಯ ಸಂಭಾವ್ಯತೆಯನ್ನು ಈ ಮುಂದಿನ ಬಾಣಕವಿಯ ಹೇಳಿಕೆಯು ಪ್ರಶ್ನವಶವಾಗಿಸುವುದು. "ಸ್ತ್ರೀ ವಿಶ್ವಾಸಿನಸ್ಚ ಮಹಾದೇವೀಗೃಹಗೂಢಭಿತ್ತಿಭಾ-ಗ್ಭ್ರಾತಾ ಭದ್ರಸೇನಸ್ಯಾಭವನ್ಮೃತ್ಯವೇ ಕಾಲಿಂಗಸ್ಯ ವೀರಸೇನಃ"[1] ಅರ್ಥಾತ್: "ಪಟ್ಟದರಸಿಯ ಮನೆಯ ಗೂಢವಾದ ಗೋಡೆಯಲ್ಲಿ (-ಅಡಗಿ-)ದ್ದ ವೀರಸೇನನೆಂಬ ಭ್ರಾತೃವು ಸ್ತ್ರೀವಿಶ್ವಾಸಿಯಾದ ಕಲಿಂಗದೇಶದ ಭದ್ರಸೇನನಿಗೆ ಮೃತ್ಯುವಾದನಷ್ಟೆ" ಎಂಬ ಬಾಣಕವಿಯ ಈ ಹೇಳಿಕೆಯಿಂದ ಭದ್ರಸೇನನು ಕಲಿಂಗರಾಜ್ಯದ ಅರಸನಾಗಿದ್ದಿ ರಬೇಕೆಂದು ಸೂಚಿತವಾಗುವುದಾದ್ದರಿಂದ ಇವನು ಮಗಧರಾಜನಾದ ಭದ್ರಸೇನನಿಂದ ಅನ್ಯವ್ಯಕ್ತಿಯಾಗಿರಬೇಕೆಂದು ಹೇಳಲವಕಾಶವಾಗುವುದು. ಇಂತಿದ್ದರೂ ಕಾಲಾ ಶೋಕನ ಸುತರಾದ ಭದ್ರಸೇನಾದಿಸಹೋದರರು ಭ್ರಾತೃವಿನ ವಿವಂಚನೆಗೆ ಗುರಿ ಯಾಗಿ ಹತರಾಗಿರುವರೆಂದು ಐತಿಹ್ಯಾಂತರಗಳಿಂದ ಸೂಚಿತವಾಗುವುದು. ಅಲೆಕ್ಸಾಂ ಡರನಿಂದ ಭಾರತದೇಶದ ಉತ್ತರಸೀಮೆಯ ಮೇಲೆ ಆಕ್ರಮಣ ನಡೆದಿದ್ದ ಸಮಯ ದಲ್ಲಿ ಮಗಧರಾಜ್ಯದ ಅರಸನಾಗಿದ್ದ ಅಂತಿಮ ನಂದ ಮತ್ತು ಇವನ ತಂದೆಯ ವಿಷ ಯವಾಗಿ ಚರಿತ್ರೆಯ ಕೃತಿಗಳಲ್ಲಿ ಉಲ್ಲಿಖಿತವಾಗಿರುವ ಕರ್ಟಿಯಸನ ಹೇಳಿಕೆಯು ಪ್ರಕೃತಸಂದರ್ಭದಲ್ಲಿ ಗಮನಾರ್ಹವಾಗಿದೆ. ಈ ಹೇಳಿಕೆಯ ತಾತ್ಪರ್ಯವು ಮುಂದಿ ನಂತಿದೆ :

"ಇವನ[2] (ಅಂತಿಮನಂದನ) ತಂದೆಯು ತನ್ನ ಹಸಿವನ್ನು ದೈನಂದಿನ ದುಡಿಮೆ ಯಿಂದ ಮುಚ್ಚಿಕೊಳ್ಳಲು ಹೆಣಗುತ್ತಿದ್ದ ಒಬ್ಬ ನಾಪಿತನಾಗಿದ್ದನು. ಆದರೆ ರೂಪ ದಲ್ಲಿ ಕೊರತೆಯಿಲ್ಲದವನಾಗಿದ್ದ ಇವನು ರಾಣಿಯ ಪ್ರೇಮಪಾತ್ರನಾಗಿ ಅವಳ ಪ್ರಭಾವ ದಿಂದ ರಾಜನ ಸನ್ನಿಹಿತ ಆಪ್ತವ್ಯಕ್ತಿಯನಿಸಿಕೊಂಡನು. ವಿಶ್ವಾಸಘಾತುಕನಾದ ಇವನು ಆ ರಾಜನನ್ನು ಕೊಂದು ರಾಜಕುಮಾರರ ಪೋಷಕನೆನಿಸಿಕೊಂಡವನಾಗಿ

---

1 ಹರ್ಷಚರಿತ_ಉಚ್ಛ್ವಾಸ ೬.

2 ಅಂತಿಮನಂದನನ್ನು 'ಕ್ಸಂದ್ರಮಸ್' ಅಥವಾ 'ಅಗ್ರಮಸ್' ಎಂಬುದಾಗಿ ಕರ್ಟಿಯಸನೇ ಮೊದಲಾದ ಬರಹಗಾರರು ಹೆಸರಿಸಿದ್ದಾರೆಂದು ಚರಿತ್ರೆಯ ಕೃತಿಗಳಲ್ಲಿ ಹೇಳಲಾಗಿದೆಯಲ್ಲದೆ, 'ಅಗ್ರಮಸ್' ಎಂಬುದು 'ಔಗ್ರಸೈನ್ಯ' ಎಂಬುದರ ರೂಪಾಂತರ ವಾಗಿದೆಯೆಂದೂ ಮತ್ತು ಇದರಿಂದ ಇವನು ಉಗ್ರಸೇನ (=ಮಹಾಪದ್ಮ) ನ ಸುತ ನಾಗಿರಬೇಕೆಂದು ಸೂಚಿತವಾಗುವುದೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.

ಸರ್ವಾಧಿಕಾರವನ್ನೂ ತನ್ನದಾಗಿಸಿಕೊಂಡನು. ಅನಂತರ ಆ ರಾಜಕುಮಾರರನ್ನೂ ಕೊಂದು ಈಗಿನ ಅರಸನನ್ನು (ಅಂತಿಮನಂದನನ್ನು) ಮಗನನ್ನಾಗಿ ಪಡೆದನು."

ಪುರಾಣಗಳಲ್ಲಿ, ಮಹಾಪದ್ಮನ ತರುವಾಯ ಅವನ ಅಷ್ಟಸುತರು ಅನುಕ್ರಮವಾಗಿ ರಾಜ್ಯಭಾರಮಾಡಿದರೆಂದೂ ಮತ್ತು ಇವರನ್ನು ಕೌಟಿಲ್ಯನು ವಧೆಗೊಳಿಸಿ ಚಂದ್ರಗುಪ್ತನಿಗೆ ರಾಜಪಟ್ಟಕಟ್ಟಿದನೆಂದೂ ಹೇಳಿರುವುದು ವಿದಿತವಿದೆ. ಇದರಂತೆ, ಭಾರತದೇಶದಮೇಲೆ ಅಲೆಕ್ಸಾಂಡರನಿಂದ ಆಕ್ರಮಣನಡಿದಿದ್ದ ಸಮಯದಲ್ಲಿ ಮಹಾಪದ್ಮನ ಅಷ್ಟಸುತರಲ್ಲೊಬ್ಬನು (ಅಂತಿಮನಂದನು) ರಾಜ್ಯಭಾರಮಾಡುತ್ತಿದ್ದಿರಬೇಕೆಂದು ಅವಗತವಾಗುವುದು. ಆದ್ದರಿಂದ ಕರ್ಟಿಯಸನ ಮೇಲ್ಕಂಡ ಹೇಳಿಕೆಯು ಮಹಾಪದ್ಮನಂದ ಮತ್ತು ಅವನ ಮಗನಿಗೆ ಸಂಬಂಧಿಸಿದ ಐತಿಹ್ಯವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಆದರೆ ಪುರಾಣಗಳಲ್ಲಿ ಹೇಳಲಾಗಿರುವಂತೆ ಮಹಾಪದ್ಮನು ಮಹಾನಂದನ ಶೂದ್ರಸ್ತ್ರೀಗರ್ಭಸಂಜಾತನಾದ ಪುತ್ರನಾಗಿದ್ದಾನಲ್ಲದೆ, ಕರ್ಟಿಯಸನ ಹೇಳಿಕೆಯಂತೆ ಇವನು ಯಃಕಶ್ಚಿತ್ ದಾರಿದ್ರ್ಯ ಪೀಡಿತನಾಗಿದ್ದ ನಾಪಿತನಲ್ಲ. ಮಹಾಪದ್ಮನು ಜನ್ಮತಃ ನಾಪಿತನಾಗಿರದೆ ನಂದರಾಜಮನೆತನದ ರಾಜನೊಬ್ಬನ ಸುತನಾಗಿದ್ದಿರಬೇಕೆಂದು ಸೂಚನೆಗೊಡುವ ಮತ್ತೊಂದು ಆಧಾರಾಂಶವಿದೆ: ನಂದರಾಜಮನೆತನದ ರಾಜಸಂತತಿಯು ಕನಿಷ್ಠಮಿತಿಯಿಂದ ೧೦೦ ವರ್ಷಕಾಲಪರ್ಯಂತವಾದರೂ ರಾಜ್ಯಭಾರಮಾಡಿರಬೇಕೆಂಬುದು ಸಾಧಾರಣವಾಗಿ ಎಲ್ಲ ಚರಿತ್ರಕಾರರಿಂದಲೂ ಅಂಗೀಕೃತವಾದ ಐತಿಹ್ಯಾಂಶವಾಗಿದೆ. ಮಹಾಪದ್ಮನ ರಾಜ್ಯಾಭಿಷೇಕ ಮತ್ತು ಚಂದ್ರಗುಪ್ತಮೌರ್ಯನ ರಾಜ್ಯಾಭಿಷೇಕಸಮಯಗಳ ಮಧ್ಯೆ ೪೫ ವರ್ಷಗಳ ಅಂತರಕಾಲವಿರುವುದೆಂದು ಹಿಂದೆ ವಿವರಿಸಲಾಗಿದೆ. ಇಷ್ಟಲ್ಲದೆ ಹಾಥಿಗುಂಫದ ಖಾರವೇಲನ ಶಾಸನದಲ್ಲಿ ನಿರ್ದೇಶಿತವಾಗಿರುವ 'ನಂದರಾಜ' ಎಂಬ ಹೆಸರು ನಂದವಂಶದ ಮೂಲಪುರುಷನಾದ ನಂದರಾಜನ ನಿರ್ದೇಶಕವಾಗಿರುವುದು.[1] ಮೂಲ ಪುರುಷನಾದ ಈ ನಂದರಾಜನ ಹೆಸರಿನ ಮೂಲದಿಂದ ಇವನ ವಂಶೀಕರಾದ ರಾಜರ ಹೆಸರುಗಳೊಡನೆ 'ನಂದ' ಪದವು ವಂಶಸೂಚಕವಾಗಿ ಬಳಕೆಗೊಂಡಿದೆಯೆಂಬುದು ಸ್ವಯಂಸ್ಪಷ್ಟವಿದೆ. ವಡ್ಡಾರಾಧನೆಯ ಚಾಣಾಕ್ಯರಿಸಿ ಕಥೆಯಲ್ಲಿ ಮಹಾಪದ್ಮನನ್ನು ನಂದರಾಜಾನ್ವಯದ ಅರಸನನ್ನಾಗಿ ಹೆಸಿರಿಸಲಾಗಿದೆಯೆಂಬುದಲ್ಲದೆ ಇವನನ್ನು 'ನಂದ' ಎಂಬ ಗೋತ್ರನಾಮದಿಂದಲೂ ನಿರ್ದೇಶಿಸಲಾಗಿದೆ. ಇಂತೆಯೇ ಇವನ ನಾಮಾಂತರವಾದ 'ಉಗ್ರಸೇನ' ಎಂಬ ಹೆಸರಿನ ಅಂತ್ಯದಲ್ಲಿಯೂ 'ನಂದ' ಪದವು ಪ್ರಯುಕ್ತವಾಗಿರುವುದನ್ನು ಬರ್ಮೀಇತಿವೃತ್ತಾಧಾರದ ರಾಜಸಂತತಿಯ ನಾಮಾವಲಿಯಲ್ಲಿ ಕಾಣಬಹುದು. ಆದ್ದರಿಂದ ಮಹಾಪದ್ಮನ ಹೆಸರಿನೊಡನೆ ಸಂಗತವಾಗಿರುವ 'ನಂದ' ಪದವು ಅವನ ವಂಶಸೂಚಕವಾಗಿರುವುದೆಂದು ವ್ಯಕ್ತವಾಗುವುದು. ಇದರಂತೆ ವಂಶಾನು

---

1 ಈ ವಿಷಯದ ವಿಶೇಷ ವಿವರಣೆಯನ್ನು ಮುಂದೆ ಕೊಡಲಾಗುವುದು.

ಕ್ರಮದಿಂದ ಮಹಾಪದ್ಮನಂದನು ನಂದರಾಜಮನೆತನದ ಅರಸನಾಗಿರುವನೆಂದು ಫಲಿತನಾಗುವುದಾದ್ದರಿಂದ ಇವನು ಮಹಾನಂದಿಯ (=ಮಹಾನಂದನ) ಶೂದ್ರಸ್ತ್ರೀಗರ್ಭಜನಾದ ಸುತನಾಗಿರುವನೆಂಬ ಪುರಾಣಗಳ ಹೇಳಿಕೆಯು ತಥ್ಯನಿಷ್ಠವಾಗಿರುವುದೆಂದು ನಿಶ್ಚಿತವಾಗುವುದು. ಇಂತಿದ್ದರೂ ಕರ್ಟಿಯಸನ ಮೇಲ್ಕಂಡ ಹೇಳಿಕೆ ಹಾಗೂ ಪರಿಶಿಷ್ಟಪರ್ವದ ಹೇಳಿಕೆಗಳಿಂದ ನಿರ್ದೇಶಿತವಾಗುವಂತೆ ಬಹುಪ್ರಾಚೀನಕಾಲದಿಂದಲೂ ನಂದರಾಜಮನೆತನದ ಅರಸನೊಬ್ಬನನ್ನು 'ನಾಪಿತ' ನೆಂದು ನಿರ್ದೇಶಿಸುವ ರೂಢಿಯಿದ್ದಿತೆಂದು ವ್ಯಕ್ತವಾಗುವುದಾದ್ದರಿಂದ. ಈ ವಿಷಯವು ಪರಿಷ್ಕಾರಾರ್ಹವೆನಿಸುವುದು. ನಂದರಾಜಮನೆತನದ ಮೂಲಪುರುಷನಾದ ನಂದರಾಜನು ಅವಂತೀರಾಜಸಂತತಿಯ ಅರಸನಾಗಿರುವನೆಂದೂ ಇವನನ್ನು ನಾಪಿತಕುಮಾರನೆಂದು ಪರಿಶಿಷ್ಟಪರ್ವದಲ್ಲಿ ನಿರ್ದೇಶಿಸಲಾಗಿರುವುದು ಅಸಂಗತವಾದುದಾಗಿದೆಯೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಆದ್ದರಿಂದ ಮಹಾಪದ್ಮನಂದನನ್ನೇ 'ನಾಪಿತ' ನೆಂದು ನಿರ್ದೇಶಿಸುವ ಪರಿಪಾಠವು ಪ್ರಾಚೀನಕಾಲದಿಂದಲೂ ಉಳಿದುಬಂದಿದೆಯೆಂದು ಗ್ರಹಿಸಬೇಕಾಗುವುದು. ಮಹಾಪದ್ಮನಂದನು, ಹಿಂದೆ ಹೇಳಿರುವಂತೆ, ವಿದೇಶೀಯ ಶಾಹಮನೆತನದ ಸ್ತ್ರೀಗರ್ಭಸಂಜಾತನಾದ ಪುತ್ರನಾಗಿದ್ದಾನಾದುದರಿಂದ, ಪುರಾಣಗಳಲ್ಲಿ ಇವನನ್ನು ಮಹಾನಂದಿಯ ಶೂದ್ರಸ್ತ್ರೀಗರ್ಭಜನಾದ ಸುತನೆಂಬುದಾಗಿ ನಿರ್ದೇಶಿಸಲಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ ಇವನನ್ನು ಕ್ಷತ್ರಿಯಕುಲಾಂತಕನೆಂಬುದಾಗಿ ಪುರಾಣಗಳಲ್ಲಿ ನಿರ್ದೇಶಿಸಲಾಗಿದ್ದು ಮಾತೃಸಂಬಂಧದಿಂದ ಮ್ಲೇಂಛನೂ ಮತ್ತು ಮಾತೃಸಂಬಂಧಿಗಳಾದ ವಿದೇಶೀಯ ಶಾಹಜನರ ಬೆಂಬಲದಿಂದ ಮಗಧರಾಜ್ಯದ ಸಿಂಹಾಸನವನ್ನು ಆಕ್ರಮಣಮಾಡಿದವನೂ, ಭಾರತೀಯ ಜನತೆಯ ಆದರಭಾವಕ್ಕೆ ಪಾತ್ರವಾಗಿದ್ದ ಪರಂಪರಾಗತ ಭಾರತದೇಶೀಯ ಕ್ಷತ್ರಿಯವಂಶಗಳ ಮೂಲೋತ್ಪಾಟಕನೂ ಆದ ಇವನು ಜನತೆಯ ದೃಷ್ಟಿಯಲ್ಲಿ ಅತಿತುಚ್ಛವ್ಯಕ್ತಿಯೆನಿಸಿಕೊಂಡಿದ್ದಾನೆ. ಈ ತುಚ್ಛಭಾವದ ಪರಿಣಾಮವಾಗಿ ಇವನನ್ನು ಜನತೆಯು ಪರೋಕ್ಷವಾಗಿ 'ನಾಪಿತ'ನೆಂದು ನಿರ್ದೇಶಿಸಲಾರಂಭಿಸಿದೆ. ಅಂತೆಯೇ ಅಲೆಕ್ಸಾಂಡರನಿಂದ ಭಾರತದೇಶದ ಮೇಲೆ ಆಕ್ರಮಣನಡೆದಿದ್ದ ಸಮಯದಲ್ಲಿ ಮಗಧರಾಜನಾಗಿದ್ದ ಮಹಾಪದ್ಮನ ಸುತನಾದ (ಧನ?) ನಂದನನ್ನು 'ನಾಪಿತಸೂನು' ವೆಂಬುದಾಗಿ ನಿರ್ದೇಶಿಸುತ್ತಿದ್ದರೆಂಬುದು ಸಂಭಾವ್ಯವೆನಿಸುವುದು. ಹೀಗೆ ಜನತೆಯ ಅವಜ್ಞಾಭಾವದ ಪರಿಣಾಮವಾಗಿ ಮಹಾಪದ್ಮನಿಗೆ ಅರ್ಪಿತವಾದ 'ನಾಪಿತ' ನಾಮಧೇಯವು ಕಾಲಾನುಕ್ರಮವಾಗಿ ಅನೇಕ ಕಲ್ಪಿತಾಂಶಗಳನ್ನು ಕೂಡಿಕೊಂಡು ಉಳಿದುಬಂದಿದೆಯೆಂದು ಕಂಡುಬರುವುದು. ಈ ವಿಷಯವಾಗಿ ಪರಿಶಿಷ್ಟಪರ್ವದಲ್ಲಿ ಕಂಡುಬರುವ ಕಲ್ಪನಾಂಶಗಳಂತೆ, ಗ್ರೀಕ್‌ಮೂಲದ ಐತಿಹ್ಯದಲ್ಲಿಯೂ ಕಾಲಾನುಕ್ರಮವಾಗಿ 'ನಾಪಿತ' ಪದದ ಹಿನ್ನೆಲೆಯಲ್ಲಿ 'ದೈನಂದಿನ ದುಡಿಮೆಯಿಂದ ತನ್ನ ಹಸಿವನ್ನು ಭರಿಸಲಾಗದಿದ್ದ' ಎಂಬ ಉತ್ಪ್ರೇಕ್ಷಾರೂಪದ ಕಲ್ಪಿತಾಂಶವು ಆರೂಢವಾಗಿದ್ದಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದ ಮಹಾಪದ್ಮನಂದನು, ಕರ್ಟಿಯಸನ ಹೇಳಿಕೆಯಿಂದ ನಿರ್ದೇಶಿತವಾಗು

ವಂತೆ. ಜನ್ಮತಃ ನಾಪಿತನೂ ದಾರಿದ್ರ್ಯಪೀಡಿತನೂ ಆದ ವ್ಯಕ್ತಿಯಾಗಿರದೆ, ಪುರಾಣ ಗಳಿಂದ ನಿರ್ದೇಶಿತವಾಗಿರುವಂತೆ, ಮಹಾನಂದಿಯ ಶೂದ್ರಸ್ತ್ರೀಗರ್ಭಸಂಜಾತನಾದ ಸುತನಾಗಿದ್ದಾನೆಂದು ನಿಶ್ಚಿತವಾಗುವುದು. ಇದರಿಂದ ಬರ್ಮೀಇತಿವೃತ್ತದಲ್ಲಿ, ಉಗ್ರ ಸೇನ ನಂದ (=ಮಹಾಪದ್ಮನಂದ) ನ ಪೂರ್ವಕಾಲೀನರಾಗಿ ರಾಜ್ಯಭಾರಮಾಡಿದ ರೆಂದು ನಿರ್ದೇಶಿತರಾಗಿರುವ ಭದ್ರಸೇನ ಮತ್ತು ಅವನ ಅಷ್ಟಸಹೋದರರು ಕಾಲಾಶೋ ಕನ ಪಟ್ಟಮಹಿಷೀಗರ್ಭಸಂಜಾತರಾದ ಸುತರಾಗಿದ್ದು ಮಹಾಪದ್ಮನಂದನ ಭ್ರಾತೃಗಳಾ ಗಿದ್ದರೆಂದು ವ್ಯಕ್ತವಾಗುವುದು. ಅಂತೆಯೇ ಹಿಂದೆ ಅರ್ಥಶಾಸ್ತ್ರದಿಂದ ಉಲ್ಲೇಖಿಸಲಾಗಿ ರುವ ಉಕ್ತಿಯು ಕಾಲಾಶೋಕನ ಪಟ್ಟಮಹಿಷೀಸುತನಾದ ಭದ್ರಸೇನನನ್ನು ಕೊಲೆ ಗೈದ ಐತಿಹ್ಯಪ್ರಸಂಗದ ಉಲ್ಲೇಖವಾಗಿರುವುದೆಂದು ನಿಶ್ಚಿತವಾಗುವುದು. ನಾಪಿತನು ರಾಣಿಯ ಪ್ರೇಮಪಾತ್ರನಾಗಿ ವಿಶ್ವಾಸಘಾತುಕತನದಿಂದ ರಾಜನನ್ನು ಕೊಲೆಮಾಡಿ, ರಾಜಕುಮಾರರ ರಕ್ಷಕನೆನಿಸಿ ಸರ್ವಾಧಿಕಾರವನ್ನೂ ತನ್ನದಾಗಿಸಿಕೊಂಡು ಆ ರಾಜ ಕುಮಾರರನ್ನೂ ಕೊಲೆಗೈದನೆಂಬ ಕರ್ಟಿಯಸನ ಹೇಳಿಕೆ ಹಾಗೂ ಭದ್ರಸೇನನು ತನ್ನ ರಾಣಿಯ ನಿವಾಸದಲ್ಲಿ ಅಡಗಿದ್ದ ಭ್ರಾತೃವಿನಿಂದ ಕೊಲೆಗೈಯ್ಯಲ್ಪಟ್ಟನೆಂಬ ಅರ್ಥ ಶಾಸ್ತ್ರದ ಹೇಳಿಕೆಗಳಿಂದ, ಭದ್ರಸೇನನ ಪಟ್ಟದರಸಿಯ ನೈಚ್ಯಪ್ರೇಮಪಾತ್ರನಾದ ಮಹಾಪದ್ಮನಂದನು ಭದ್ರಸೇನನನ್ನು ಕೊಲೆಮಾಡಿರುವನೆಂದು ಫಲಿತವಾಗುವುದಲ್ಲದೆ, ಮುಂದೆ ಭದ್ರಸೇನನ ಸಹೋದರರಾಜಕುಮಾರರ ರಕ್ಷಕನೆನಿಸಿ ಸರ್ವಾಧಿಕಾರವನ್ನೂ ತನ್ನದಾಗಿಸಿಕೊಂಡು ಆ ರಾಜಕುಮಾರರನ್ನೂ ಕೊಲೆಮಾಡಿರುವನೆಂದು ವ್ಯಕ್ತವಾಗು ವುದು.

ಭದ್ರಸೇನನ ಕೊಲೆಯ ಪ್ರಸಂಗದ ಐತಿಹ್ಯವು ಅಸ್ತವ್ಯಸ್ತವಾಗಿ ಕಥೆಯರೂಪು ತಳೆದು ಉಳಿದುಬಂದಿರುವುದನ್ನು ವಡ್ಡಾರಾಧನೆಯ ಚಾಣಕ್ಯರಿಸಿಕಥಾಂತರ್ಗತವಾದ ಈ ಮುಂದಿನ ಪ್ರಸಂಗದಿಂದಲೂ ಗುರುತಿಸಬಹುದಾಗಿದೆ.

"ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದು ಪೊಳಲದನಾಳ್ವೊಂ ನಂದವಂಶದೊಂ ಪದ್ಮನೆಂಬರಸನಾತನ ಮಹಾದೇವಿ ಸುಂದರಿಯೆಂಬೊಳಾಯಿರ್ವರ್ಗಂ ಮಗಂ ಮಹಾಪದ್ಮನೆಂಬೊಂ ಮಂತ್ರಿ ಕಾಪಿಯೆಂಬೊನಾತಂಗೆರಡನೆಯ ಪೆಸರ್ ವಿಶ್ವ ಸೇನನೆಂಬುದವಂತವರ್ಗಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಿರೆಯಿರೆ

ಮತ್ತೊಂದು ದಿವಸಂ ಕಾಪಿಯೆಂಬ ಮಂತ್ರಿ ಸುಂದರಿ ಮಹಾದೇವಿಗೆ ಕಣ್ಬೀ ಟಂಗೊಂಡು ಅರಸನಂ ಕೊಂದರಸಿಯೊಳ್ಬಾಳ್ವೆನೆಂಬ ಬಗೆಯಿಂದಂ..................ಪಳೆ ವಾವಿಯತಡಿಯೊಳಿರಿದು ಕೊಂದು ಬಾವಿಯೊಳ್ ನೂಂಕೆ..................."

ಮೇಲ್ಕಂಡ ಪ್ರಸಂಗವು ಮಗಧರಾಜನಾದ ಭದ್ರಸೇನನ ಕೊಲೆಯ ಐತಿಹ್ಯದ ಅಸ್ತವ್ಯಸ್ತರೂಪವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಇದರಿಂದ ಪ್ರಾಚೀನಕಾಲದ ಐತಿಹಾಸಿಕ ಸಂಗತಿಗಳು ಕಾಲಾನುಕ್ರಮವಾಗಿ ಅಸ್ತವ್ಯಸ್ತಗೊಂಡು ಕಥಾರೂಪತಳೆದು

ಉಳಿದುಬಂದಿವೆಯೆಂದು ಸ್ಪಷ್ಟವಾಗುವುದು. ಇಂತೆಯೇ ಅಸ್ತವ್ಯಸ್ತರೂಪತಳೆದಿದ್ದ ಐತಿಹ್ಯವೊಂದರಾಧಾರದಿಂದ ಬಾಣಕವಿಯು, ಹಿಂದೆ ಉಲ್ಲೇಖಿಸಲಾಗಿರುವಂತೆ, ಭದ್ರಸೇನನು ಕಲಿಂಗದೇಶದ ಅರಸನಾಗಿದ್ದನೆಂದೂ ಮತ್ತು ಇವನನ್ನು 'ವೀರಸೇನ' ಎಂಬ ಹೆಸರಿನ ಭ್ರಾತೃವು ಕೊಲೆಗೈದನೆಂದೂ ನಿರ್ದೇಶಿಸಿರುವನೆಂದು ಗ್ರಹಿಸಲವಕಾಶವಾಗುವುದು. ಆದ್ದರಿಂದ ಬಾಣಕವಿಯು ಈ ಪ್ರಭ್ರಂಶರೂಪದ ಹೇಳಿಕೆಯಾಧಾರದಿಂದ, ಮಗಧರಾಜನಾದ ಭದ್ರಸೇನನನ್ನು ಅವನ ಭ್ರಾತೃವಾದ ಉಗ್ರಸೇನ(=ಮಹಾಪದ್ಮ) ನು ಕೊಲೆಗೈದನೆಂಬ ಐತಿಹಾಸಿಕ ಸಂಗತಿಯ ತಥ್ಯವನ್ನು, ಶಂಕಿಸುವುದು ಸಮುಚಿತವೆನಿಸುವುದಿಲ್ಲ.

ಕಾಲಾಶೋಕನ ೧೦ ಜನ ಸುತರ ೨೨ ವರ್ಷಗಳ ರಾಜ್ಯಭಾರಾನಂತರ ಚಂದ್ರಗುಪ್ತನ ರಾಜ್ಯಭಾರವು ಆರಂಭವಾಯಿತೆಂದು ದೀಪವಂಸೋಕ್ಕೃತಿಯಲ್ಲಿ ನಿರ್ದೇಶಿತವಾಗಿರುವುದಾದರೆ ಮಹಾವಂಸೋಕ್ಕೃತಿಯಲ್ಲಿ, ಕಾಲಾಶೋಕನ ೧೦ ಜನ ಸುತರ ೨೨ ವರ್ಷಗಳ ರಾಜ್ಯಭಾರಾನಂತರ ನವನಂದರ ೨೨ ವರ್ಷಗಳ ರಾಜ್ಯಭಾರವು ನಿರ್ದೇಶಿತವಾಗಿದೆ. ಇಂತೆಯೇ ಬರ್ಮೀಇತಿವೃತ್ತದಲ್ಲಿ ಕಾಲಾಶೋಕನ ಸುತರನ್ನು ೯ ಜನರೆಂದು ನಿರ್ದೇಶಸಲಾಗಿರುವುದಲ್ಲದೆ, ಇವರು ೩೩ ವರ್ಷಕಾಲ ರಾಜ್ಯಭಾರಮಾಡಿದರೆಂದು ನಿರ್ದೇಶಿಸಲಾಗಿದೆ. ಹೀಗೆ ಏಕಮೂಲಸಂಪ್ರದಾಯದವುಗಳೆನಿಸಿದ ಈ ಕೃತಿಗಳಲ್ಲಿ ಕಂಡುಬರುವ ಈ ವ್ಯತ್ಯಾಸಗಳಿಗೆ ನ್ಯೂನಾತಿರೇಕರೂಪದ ಯಾವುದೋ ಒಂದು ಅಂಶವು ಕಾರಣವಾಗಿದೆಯೆಂದು ಗ್ರಹಿಸಬೇಕಾಗುವುದು. ಇದೇ ರೀತಿಯಾಗಿ ಹಿಂದೆ ಹೇಳಲಾಗಿರುವಂತೆ, ಪುರಾಣಗಳಲ್ಲಿ ಅಸಂಗತರೀತಿಯಿಂದ 'ನಂದೇಂದು' ಅಥವಾ 'ನರೇಂದ್ರ' ಅಥವಾ ಚಂದ್ರಗುಪ್ತನು ೧೦೦ ವರ್ಷಕಾಲ ರಾಜ್ಯವಾಳುವನೆಂದು ನಿರ್ದೇಶಿಸಲಾಗಿರುವುದಕ್ಕೂ ಪ್ರಕೃತಸಂದರ್ಭದ ಯಾವುದಾದರೊಂದು ಐತಿಹಾಸಿಕಾಂಶದ ನ್ಯೂನತೆಯು ಕಾರಣವಾಗಿದೆಯೆಂದು ಗ್ರಹಿಸಬೇಕಾಗುವುದು. ಆದ್ದರಿಂದ ಈ ಐತಿಹಾಸಿಕಾಂಶದ ಪರಿಷ್ಕಾರಕ್ಕಾಗಿ ಬೃ. ಕ. ಕೋಶದ ಈ ಮುಂದಿನ ಕಥೆಯನ್ನು ಗಮನಿಸಬೇಕಾದ ಆವಶ್ಯಕತೆಯಿದೆ.

ವ್ಯಂಜನಕಥಾನಕಂ [ಕಥಾಸಂಖ್ಯೆ ೨೩].

**ಕಥಾಸಾರಾಂಶ:** "ಮಗಧದೇಶದ ರಾಜಗೃಹದಲ್ಲಿ ವೀರಸೇನನೆಂಬ ರಾಜನಿದ್ದನು. ಇವನ ವಲ್ಲಭೆ ವೀರಸೇನೆ. ಇವರಿಗೆ ಸಿಂಹನೆಂಬ ಮಗನಾದನು. ಸೋಮಶರ್ಮ ಪಂಡಿತನು ಸಿಂಹನ ಉಪಾಧ್ಯಾಯನಾಗಿದ್ದನು. ಇಂತಿರಲು, ಸಮಸ್ತರಾಜಮಂಡಲವನ್ನು ಜಯಿಸಿ ತನ್ನ ಸಾಮಂತರಾಜರನ್ನಾಗಿಮಾಡಿಕೊಂಡಿದ್ದ ವೀರಸೇನನಿಗೆ ಉತ್ತರಾಪಥದೇಶದ ಪೋದನಪುರದ ಸಿಂಹರಥರಾಜನೊಬ್ಬನು ಮಾತ್ರ ಅಜೇಯನೆನಿಸಿ ಉಳಿದುಕೊಂಡಿದ್ದನು. ಇವನನ್ನು ತನ್ನ ವಶವರ್ತಿಯಾಗಿ ಮಾಡಿಕೊಳ್ಳಲೋಸುಗ ವೀರಸೇನನು ಚತುರಂಗಬಲಸಮೇತನಾಗಿ ಪೋದನಪುರದ ಕೋಟೆಯನ್ನು

ಸುತ್ತುವರಿದು ನಿಂತನು. ಬಹುದಿನಗಳಾದರೂ ವೀರಸೇನನಿಗೆ ಪೋದನಪುರವನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಆಗ ವೀರಸೇನನು, 'ನನಗೆ ಎಳೆಯವಯಸ್ಸಿನ ಒಬ್ಬನೇ ಒಬ್ಬ ಮಗನಿರುವನು. ಅವನು ವಿದ್ಯಾಭ್ಯಾಸದಲ್ಲಿ ನಿರತನಾಗಿರುವನೋ, ಇಲ್ಲವೋ' ಎಂದು ಚಿಂತಿಸಿ ತನ್ನ ರಾಣಿ ಮತ್ತು ಮಂತ್ರಿಮುಖ್ಯರಿಗೆ 'ಸಿಂಹಮಧ್ಯಾಪಯದ್ರುತಂ' (=ಸಿಂಹನಿಗೆ ತ್ವರಿತವಾಗಿ ಅಧ್ಯಯನಮಾಡಿಸಿ) ಎಂಬ ಅಭಿಪ್ರಾಯದ ಪತ್ರವನ್ನು ಕಳುಹಿಸಿದನು. ರಾಣಿ ಮತ್ತು ಮಂತ್ರಿಗಳೆದುರಿನಲ್ಲಿ ಲೇಖಕನು 'ಸಿಂಹೋಂಧೀ ಕ್ರಿಯತಾಂ' (=ಸಿಂಹನನ್ನು ಕುರುಡುಗೊಳಿಸಿರಿ) ಎಂದು ಪಠಿಸಿದನಾಗಿ ರಾಜನ ಭೀತಿಯಿಂದ ಮೂಢರೂ ಶೋಕವಿಹ್ವಲಚಿತ್ತರೂ ಆದ ರಾಣಿ ಮತ್ತು ಮಂತ್ರಿಗಳು ಸಿಂಹನನ್ನು ಕುರುಡುಗೊಳಿಸಿದರು. ಬಹುದಿನಗಳ ಬಳಿಕ ಪೋದನಪುರವನ್ನು ಜಯಿಸಿ ಬಂದ ವೀರಸೇನನು ತನ್ನ ಮಗನು ಕುರುಡಾಗಿರುವುದನ್ನು ಕಂಡು, ನಡೆದ ವಿಷಯವನ್ನು ತಿಳಿದು ಸಂತಪ್ತಚಿತ್ತನಾಗಿ ಲೇಖಕನನ್ನು ಶಿಕ್ಷಿಸಿದನು."

ವೀರಸೇನನ ಸುತನಾದ ಸಿಂಹನನ್ನು ಕುರುಡುಗೊಳಿಸುವ ಮೇಲ್ಕಂಡ ಕಥೆಯ ಪ್ರಸಂಗ ಹಾಗೂ ದಿವ್ಯಾವದಾನ[1], ಪರಿಶಿಷ್ಟಪರ್ವ[2] ಮತ್ತು ವಡ್ಡಾರಾಧನೆ[3]ಗಳಲ್ಲಿ ಉಕ್ತವಾಗಿರುವ ಮೌರ್ಯವಂಶಜನಾದ ಅಶೋಕಸಾಮ್ರಾಟನ ಸುತನಾದ ಕುಣಾಲನನ್ನು ಕುರುಡುಗೊಳಿಸುವ ಪ್ರಸಂಗಗಳು ಸದೃಶರೂಪದ ಘಟನೆಗಳಾಗಿರುವುದು ಸ್ಪಷ್ಟವಿದೆ. ದಿವ್ಯಾವದಾನದಲ್ಲಿ ಮೌರ್ಯ ಅಶೋಕಸಾಮ್ರಾಟನ ಐತಿಹ್ಯವಿಷಯವಾಗಿ ಉಕ್ತವಾಗಿರುವ ಈ ಮುಂದಿನ ಐತಿಹ್ಯಾಂಶವು ಪ್ರಕೃತಸಂದರ್ಭದ ದೃಷ್ಟಿಯಿಂದ ಗಮನಾರ್ಹವಾಗಿದೆ. 'ವರ್ಷಶತಪರಿನಿರ್ವೃತಸ್ಯ ತಥಾಗತಸ್ಯ ಪಾಟಲೀಪುತ್ರನಗರೇ ಅಶೋಕೋನಾಮ ರಾಜಾ ಭವಿಷ್ಯತಿ' ಈ ಐತಿಹ್ಯಾಂಶದಿಂದ ಇಲ್ಲಿ ನಿರ್ದೇಶಿತವಾಗಿರುವ ಅಶೋಕನು ಶ್ರೀ ಗೌತಮಬುದ್ಧನ ನಿರ್ವಾಣಪಶ್ಚಾತ್ ೧೦೦ ವರ್ಷಗಳ ಸಮಯದಲ್ಲಿ ರಾಜನಾಗಿದ್ದನೆಂದು ಸೂಚಿತವಾಗುವುದು.' ದಾಕ್ಷಿಣಾತ್ಯ ಬೌದ್ಧ ಆಮ್ನಾಯದ ಕೃತಿಗಳ ಹೇಳಿಕೆಯಾಧಾರದಿಂದ ಶ್ರೀ ಗೌತಮಬುದ್ಧನ ನಿರ್ವಾಣಪಶ್ಚಾತ್ ೧೦೦ ವರ್ಷಗಳ ಸಮಯದಲ್ಲಿ ಕಾಲಾಶೋಕ (=ಮಹಾನಂದ) ನು ರಾಜ್ಯಭಾರಮಾಡುತ್ತಿದ್ದನೆಂದು ಹಿಂದೆ ನಿರ್ಣಯಿಸಲಾಗಿರುವುದು ವಿದಿತವಿದೆ. ಆದ್ದರಿಂದ ದಿವ್ಯಾವದಾನದಲ್ಲಿ ಉಕ್ತವಾಗಿರುವ ಮೇಲ್ಕಂಡ ಅಶೋಕನ ಐತಿಹ್ಯವು ಕಾಲಾಶೋಕನ ಐತಿಹ್ಯವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಲ್ಲಿ ನಿರೂಪಿತವಾಗಿರುವ ಕಾಲಾಶೋಕ ಮತ್ತು ಮೌರ್ಯಅಶೋಕರ ಐತಿಹ್ಯ

---

1 ಸನ್ಮಾನ್ಯರಾದ ಕೋವೆಲ್ ಮತ್ತು ನೆಯಿಲ್‌ರವರಿಂದ ಸಂಪಾದಿತವಾಗಿರುವ ಕೃತಿ—ಪು. ಸಂ. ೩೬೮.

2 ಸರ್ಗ-೯, ಶ್ಲೋ. ಸಂ. ೧೫ ರಿಂದ ೩೪.

3 ಭದ್ರಬಾಹುಭಟ್ಟಾರಕರ ಕಥೆ.

ವಿಷಯಗಳು ಹಾಗೂ ಔತ್ತರೇಯ ಬೌದ್ಧಆಮ್ನಾಯದ ಕೃತಿಗಳಲ್ಲಿ ನಿರೂಪಿತವಾಗಿರುವ ಅಶೋಕನ ಐತಿಹ್ಯವಿಷಯಗಳನ್ನು ಪರಿಶೀಲಿಸಿರುವ ಸನ್ಮಾನ್ಯ ಜೈಜರ್‌ರವರು, 'ಇಬ್ಬರು ಅಶೋಕರ ಜೀವಿತೈತಿಹ್ಯಗಳು ಒಬ್ಬ ಅಶೋಕನ ಐತಿಹ್ಯವಾಗಿ ಔತ್ತರೇಯ ಬೌದ್ಧ ಆಮ್ನಾಯದಲ್ಲಿ ರೂಪುಗೊಂಡಿವೆ' ಯೆಂದು ಅಭಿಪ್ರಾಯಪಟ್ಟಿದ್ದಾರೆ [ಮಹಾವಂಸೋ-ಆಂಗ್ಲಾನುವಾದ-ಮುನ್ನುಡಿ]. ಇಂತೆಯೇ ಕಾಲಾಶೋಕನ ಜೀವಿತಸಂಬಂಧಿಯಾದ ಅನೇಕ ಐತಿಹ್ಯಾಂಶಗಳು ಮೌರ್ಯ ಅಶೋಕನ ಜೀವಿತೈತಿಹ್ಯಗಳಾಗಿ ರೂಪುಗೊಂಡಿವೆಯೆಂದು ಸನ್ಮಾನ್ಯ ಜಯಸ್ವಾಲ್‌ರವರು ಅಭಿಪ್ರಾಯಪಟ್ಟಿದ್ದಾರೆ. [ಪೂ. ಸೂ. ಜರ್ನಲ್]. ಇದರಿಂದ ಕಾಲಾಶೋಕನ ಸುತನನ್ನು ಕುರುಡುಗೊಳಿಸಿದ ಐತಿಹ್ಯಪ್ರಸಂಗವು ದಿವ್ಯಾವದಾನದಲ್ಲಿ (ಮೌರ್ಯ) ಅಶೋಕನ ಸುತ ಕುಣಾಲನನ್ನು ಕುರುಡುಗೊಳಿಸಿದ ಐತಿಹ್ಯವಾಗಿ ಪರಿವರ್ತಿತವಾಗಿರುವ ಸಂಭವವಿದೆಯೆಂದು ಹೇಳಲವಕಾಶವಾಗುವುದು.

ಔತ್ತರೇಯಬೌದ್ಧಆಮ್ನಾಯದ ಕೃತಿಯಾದ ದಿವ್ಯಾವದಾನದಲ್ಲಿ ಮೇಲ್ಕಂಡಂತೆ ಕಾಲಾಶೋಕನ ಐತಿಹ್ಯಪ್ರಸಂಗವು ಮೌರ್ಯ ಅಶೋಕನ ಐತಿಹ್ಯಪ್ರಸಂಗವಾಗಿ ಪರಿವರ್ತಿತವಾಗಿದೆಯೆಂದು ಪಾಕ್ಷಿಕವಾಗಿ ಒಪ್ಪಬಹುದಾದರೂ, ಜೈನಆಮ್ನಾಯದ ಕೃತಿಗಳಾದ ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳಲ್ಲಿಯೂ ಈ ಐತಿಹ್ಯವು ಮೌರ್ಯ ಅಶೋಕನ ಜೀವಿತಸಂಬಂಧಿ ಐತಿಹ್ಯವಾಗಿ ನಿರೂಪಿತವಾಗಿದ್ದು ಭಿನ್ನಸಂಪ್ರದಾಯಗಳೆರಡರ ಹೇಳಿಕೆಗಳ ಸಹಮತದ ಕಾರಣದಿಂದ ಪ್ರಕೃತಸಂದರ್ಭದ ಐತಿಹ್ಯವು ಮೌರ್ಯ ಅಶೋಕನ ಜೀವಿತಸಂಬಂಧಿಯಾದ ಐತಿಹ್ಯವೇ ಆಗಿರಬೇಕೆಂದು ಹೇಳಲವಕಾಶವಾಗುವುದು. ಆದರೆ ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳ ಈ ಐತಿಹ್ಯವು ಬೌದ್ಧಮತ ಸಂಪ್ರದಾಯದ ಐತಿಹ್ಯದಿಂದ ಪ್ರಭಾವಿತವಾದುದಾಗಿದೆಯೆಂದು ಆಧಾರಾಂತರದಿಂದ ಸೂಚಿತವಾಗುವುದು. ಶ್ವೇತಾಂಬರ ಜೈನಪಂಥದ ಆಚಾರನಿಯಮಗಳನ್ನು ರೂಪಿಸುವಲ್ಲಿ ಈ ಮತದ ಪ್ರವರ್ತಕರು ಬೌದ್ಧಆಗಮಗ್ರಂಥಗಳಿಂದ ಮಾರ್ಗದರ್ಶನ ಪಡೆದುದಾಗಿಯೂ ಮತ್ತು ಬೌದ್ಧಮತಗ್ರಂಥಗಳಿಂದ ಧಾರ್ಮಿಕವಿಷಯಗಳನ್ನು ಭೂಯಿಷ್ಠವಾಗಿ ಸ್ವಕೀಯಗೊಳಿಸಿಕೊಂಡುದಾಗಿಯೂ ಚೀನೀಯಾತ್ರಿಕ ಹ್ಯೂಏನ್‌ತ್ಸಾಂಗರು ಹೇಳಿರುವುದಾಗಿ ಸನ್ಮಾನ್ಯ ಜೇಮ್ಸ್‌ಫೆರ್ಗ್ಯೂರ್ಸನ್ ಮತ್ತು ಬರ್ಗೆಸ್‌ರವರು 'ದಿ ಕೇವ್ ಟೆಂಪಲ್ಸ್ ಆಫ್ ಇಂಡಿಯಾ' [ಪುಂ. ಸಂ. ೪೮೫ ರಿಂದ ೪೮೮] ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಹ್ಯೂಏನ್‌ತ್ಸಾಂಗರ ಈ ಹೇಳಿಕೆಯು ಉತ್ಪ್ರೇಕ್ಷಾಯುತವಾಗಿದೆಯೆಂಬುದು ನಿಜವಾದರೂ ಸರ್ವಥಾ ಅಸತ್ಯವೆಂದು ಹೇಳಲಾಗುವುದಿಲ್ಲ. ಕ್ರಿ. ಶ. ೭ ನೇ ಶತಮಾನ ಕಾಲದಲ್ಲಿ ಶ್ವೇತಾಂಬರ ಜೈನ ಆಗಮಗ್ರಂಥಗಳ ವಿಷಯವಾಗಿ ಇದ್ದ ಪರಿವಾದವು ಹ್ಯೂಏನ್‌ತ್ಸಾಂಗರ ಮೇಲ್ಕಂಡ ಹೇಳಿಕೆಗೆ ಆಧಾರವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಈಗ ಉಪಲಬ್ಧವಿರುವ ಶ್ವೇತಾಂಬರಜೈನಪಂಥದ ಆಗಮಗ್ರಂಥಗಳು ಕ್ರಿ. ಶ. ೫ ನೇ ಶತಮಾನಕಾಲದಲ್ಲಿ ಆಚಾರ್ಯ ದೇವರ್ಧಿಗಣಿಗಳ ಪ್ರಧಾನ

ಸಂಪಾದಕತ್ವದಲ್ಲಿ ರೂಪುಗೊಂಡವುಗಳಾಗಿವೆ. ಔತ್ತರೇಯ ಬೌದ್ಧಆಮ್ನಾಯದ ಐತಿಹ್ಯವನ್ನಾಧರಿಸಿ 'ಚಂದ್ರಗುಪ್ತ' ಎಂಬ ಹೆಸರಿನ ಈರ್ವರು ಮಗಧರಾಜರ ಸಮಕಾಲೀನರಾಗಿದ್ದ ಆಚಾರ್ಯರಾದ ಭದ್ರಬಾಹು, ಸ್ಥೂಲಭದ್ರ, ಮಹಾಗಿರಿ ಮತ್ತು ಸುಹಸ್ತಿಸೂರಿಗಳ ಕಾಲನಿರ್ಣಯವನ್ನು ಈ ಆಗಮಗ್ರಂಥಗಳಲ್ಲಿ ಮಾಡಲಾಗಿದ್ದು, ತದನುಗುಣವಾಗಿ ಪರಿಶಿಷ್ಟಪರ್ವದಲ್ಲಿ ಈ ಐತಿಹ್ಯವು ನಿರೂಪಿತವಾಗಿರುವುದೆಂದು ಅಧಿಗತವಾಗುವುದು. ಇಂತೆಯೇ ವಡ್ಡಾರಾಧನೆಯು ಯಾಪನೀಯಜೈನಪಂಥದ ಆಚಾರ್ಯರಿಂದ ರಚಿತವಾಗಿದ್ದು, ಈ ಪಂಥದವರು ಶ್ವೇತಾಂಬರ ಮತ್ತು ದಿಗಂಬರ ಜೈನಪಂಥಗಳ ಆಗಮಗಳೆರಡನ್ನೂ ಸನ್ಮಾನಿಸುತ್ತಿದ್ದಾರಾಗಿ, ಈ ಕೃತಿಯ ಭದ್ರಬಾಹುಭಟ್ಟಾರರ ಕಥೆಯಲ್ಲಿ ಶ್ವೇತಾಂಬರ ಜೈನಆಮ್ನಾಯದ ಐತಿಹ್ಯವು ಸಂಕಲಿತವಾಗಿದೆಯೆಂದು ಹೇಳಲು ಸಾಕಷ್ಟು ಪ್ರಮಾಣಗಳಿವೆ. ಇದರಂತೆ ಔತ್ತರೇಯ ಬೌದ್ಧಆಮ್ನಾಯಮೂಲದ ದಿವ್ಯಾವದಾನದಲ್ಲಿ ನಿರೂಪಿತವಾಗಿರುವ (ಮೌರ್ಯ) ಅಶೋಕನ ಐತಿಹ್ಯಪ್ರಸಂಗವು ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳಲ್ಲಿ ನಿರೂಪಿತವಾಗಿರುವ ಅಶೋಕನ ಐತಿಹ್ಯಕ್ಕೆ ಮೂಲಾಧಾರವಾಗಿದೆಯೆಂದು ಸ್ಫುಟವಾಗುವುದು. ದಿವ್ಯಾವದಾನದಲ್ಲಿ ಕಾಲಾಶೋಕನ ಐತಿಹ್ಯವು ಮೌರ್ಯ ಅಶೋಕನ ಐತಿಹ್ಯವಾಗಿ ಪರಿವರ್ತಿತವಾಗಿರುವುದೆಂದು ಈ ಹಿಂದೆ ಪ್ರತಿಪಾದಿಸಲಾಗಿರುವುದರನುಗುಣವಾಗಿ, ಈ ಕೃತಿಯ ಮೂಲಐತಿಹ್ಯದಾಧಾರದಿಂದ ಪರಿಶಿಷ್ಟಪರ್ವ ಮತ್ತು ವಡ್ಡರಾಧನೆಗಳಲ್ಲಿ ಪ್ರರೂಪಿತವಾಗಿರುವ ಮೌರ್ಯ ಅಶೋಕನ ಸುತನನ್ನು ಕುರುಡುಗೊಳಿಸುವ ಐತಿಹ್ಯ ಪ್ರಸಂಗವು ಮೂಲತಃ ಕಾಲಾಶೋಕನ ಸುತನನ್ನು ಕುರುಡುಗೊಳಿಸುವ ಐತಿಹ್ಯ ಪ್ರಸಂಗವಾಗಿದ್ದಿರಬೇಕೆಂದು ವ್ಯಕ್ತವಾಗುವುದು. ಇಂತೆಯೇ ಬೃ. ಕ. ಕೋಶದ ಮೇಲ್ಕಂಡ ವ್ಯಂಜನಕಥಾನಕದ 'ವೀರಸೇನ' ಎಂಬ ಹೆಸರೂ ಕಾಲಾಶೋಕನ ನಿರ್ದೇಶಕವಾಗಿರುವುದೆಂದು ಸೂಚನೆಗೊಡುವ ಕಥಾಯತ್ತವಾದ ಪರೋಕ್ಷರೂಪದ ಐತಿಹ್ಯಾಧಾರಗಳಿವೆ.

ವಂಶಾನುಕ್ರಮದಿಂದ ಅವಂತೀರಾಜಮನೆತನದವರಾದ ನಂದರಾಜಸಂತತಿಯ ಅರಸರು 'ಸೇನ' ಎಂಬ ಪದದಿಂದ ಅಂತ್ಯವಾಗುವ ಹೆಸರುಗಳನ್ನು ಹೊಂದಿದ್ದರೆಂದು ಹೇಳಲವಕಾಶವಿದೆ. ನಂದರಾಜನ ಪೂರ್ವಜರಾದ ಅರಸರಲ್ಲಿ ಕನಿಷ್ಠಪಕ್ಷ ಮೂವರು ಅರಸರು 'ಸೇನ' ಎಂಬ ಪದದಿಂದ ಅಂತ್ಯವಾಗುವ ಹೆಸರುಗಳನ್ನು ಹೊಂದಿದ್ದರೆಂದು ಹಿಂದೆ ಅವಂತೀರಾಜಸಂತತಿಯ ಇತಿವೃತ್ತ ಪ್ರಸಂಗದಲ್ಲಿ ಹೇಳಲಾಗಿದೆ.[1] ಇಂತೆಯೇ ನಂದರಾಜನ ಮೊಮ್ಮಕ್ಕಳೀರ್ವರು 'ಭದ್ರಸೇನ' ಮತ್ತು 'ಉಗ್ರಸೇನ' ಎಂಬ ಹೆಸರಿನವರಾಗಿದ್ದರೆಂಬುದು ವಿದಿತವಿದೆ. ಪೂರ್ವೋಲ್ಲಿಖಿತವಾದ ದೇವರತಿ ಮತ್ತು ಜಯಸೇನ ನೃಪತಿ ಕಥಾನಕಗಳ 'ಜಯಸೇನ' ಎಂಬ ಹೆಸರಿನೊಡನೆ ವ್ಯಾಕ್ಷಿಪ್ತರೀತಿಯಿಂದ

---

1 ಪಾಲಕ-ಜಯಸೇನ ; ಪ್ರದ್ಯೋತ-ಮಹಾಸೇನ ; ಅವಂತಿವರ್ಧನ-ಕುಮಾರಸೇನ

ನಂದರಾಜನ ಐತಿಹ್ಯವು ಸಂಕಲಿತವಾಗಿರುವುದಾಗಿ ಹಿಂದೆ ವಿವರಿಸಲಾಗಿದೆ. ಈ ಜಯಸೇನನ ಸುತನನ್ನು 'ವೀರಸೇನ' ಎಂದು ಜಯಸೇನನೃಪತಿಕಥಾನಕದಲ್ಲಿ ಹೆಸರಿಸಲಾಗಿದೆ. ದಿಗಂಬರ ಆಮ್ನಾಯದ ಕೃತಿಗಳಲ್ಲಿ ನಂದವಂಶವನ್ನು 'ವಿಜಯವಂಶ' ಎಂದು ಹೆಸರಿಸಲಾಗಿರುವುದೆಂದು ಮತ್ತು ವಡ್ಡಾರಾಧನೆಯಲ್ಲಿ ನಂದರಾಜನನ್ನು 'ವಿಜಯನಂದಂ' ಎಂದು ಹೆಸರಿಸಲಾಗಿದೆಯೆಂದೂ ಹಿಂದೆ ಸ್ಪಷ್ಟಪಡಿಸಿದೆ. ಇದರಿಂದ ನಂದರಾಜನಿಗೆ 'ವಿಜಯ' ಎಂಬ ಹೆಸರಿದ್ದಿರಬೇಕೆಂದು ಮತ್ತು ಈ ಹೆಸರಿನ ಅಂತ್ಯದಲ್ಲಿ 'ನಂದ' ಅಥವಾ 'ಸೇನ' ಎಂಬೆರಡು ಪದಗಳಲ್ಲೊಂದನ್ನು ಸಂಯೋಜಿಸಿ ಹೆಸರಿಸುವ ಪರಿಪಾಠವಿದ್ದರಬೇಕೆಂದು ಸ್ಫುಟಗೊಳ್ಳುವುದು. ಇದರಂತೆ ಈ 'ವಿಜಯಸೇನ' ಎಂಬುದರ ಭ್ರಂಶರೂಪದ 'ಜಯಸೇನ' ಎಂಬ ಹೆಸರು ದೇವರತಿ ಮತ್ತು ಜಯಸೇನ ನೃಪತಿಕಥಾನಕಗಳಲ್ಲಿ ವ್ಯಾಕ್ಷಿಪ್ತರೀತಿಯಿಂದ ಸೇರಿದ್ದು ಈ ಜಯಸೇನನ ಸುತನ ಹೆಸರಾದ 'ವೀರಸೇನ' ಎಂಬುದು ಕಾಲಾಶೋಕ-ಮಹಾನಂದನ ನಾಮಾಂತರವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ, ತಾರಾನಾಥರ ಕೃತಿಯಾಧಾರದಿಂದ ರೂಪಿತವಾಗಿರುವ ಮಗಧರಾಜಸಂತತಿಯ ಚೌಬಂಧದಲ್ಲಿ ನಿರ್ದೇಶಿತವಾಗಿರುವ 'ವೀರಸೇನ' ಎಂಬ ಹೆಸರು ಕಾಲಾಶೋಕ-ಮಹಾನಂದನ ನಾಮಾಂತರವಾಗಿದೆಯೆಂದು ಪರೋಕ್ಷ ರೀತಿಯಿಂದ ಸೂಚಿತವಾಗುವುದು. ಈ ಚೌಬಂಧದಲ್ಲಿ ನಿರ್ದೇಶಿತವಾಗಿರುವ 'ಕಾಮಾಶೋಕ' ಮತ್ತು 'ನಂದಿ' ಎಂಬ ಹೆಸರುಗಳು ಕಾಲಾಶೋಕ-ಮಹಾನಂದನ ನಿರ್ದೇಶಕಗಳಾಗಿವೆಯೆಂದು ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟಿದೆ. ಈ 'ನಂದಿ' ಎಂಬ ಹೆಸರಿನ ಅನಂತರವರ್ತಿಯಾಗಿ 'ವೀರಸೇನಸುತ ನಂದ' ಎಂಬುದಾಗಿಯೂ ತದನಂತರ 'ಮಹಾಪದ್ಮ' ಎಂಬ ಹೆಸರೂ ನಿರ್ದೇಶಿತವಾಗಿವೆ. ಕಾಲಾಶೋಕನ ತರುವಾಯ ಅವನ ಮಗನಾದ ಭದ್ರಸೇನನು ರಾಜ್ಯಭಾರಾಧಿಷ್ಠಿತನಾದನೆಂದೂ ಇವನನ್ನು ಮಹಾಪದ್ಮನು ಕೊಲೆಗೈದನೆಂದೂ ಹಿಂದೆ ಸ್ಪಷ್ಟಪಡಿಸಲಾಗಿದೆ. ಈ ಭದ್ರಸೇನನನ್ನು 'ಪದ್ಮ' ಎಂಬ ಹೆಸರಿನಿಂದ ವಡ್ಡಾರಾಧನೆಯಲ್ಲಿ ನಿರ್ದೇಶಿಸಲಾಗಿದ್ದು, ಇವನ ತರುವಾಯ ಮಹಾಪದ್ಮನ ರಾಜ್ಯಭಾರವು ಆರಂಭವಾದಂತೆ ನಿರ್ದೇಶಿಸಲಾಗಿದೆ. ಇದರಿಂದ ತಾರಾನಾಥರ ಕೃತಿಯಾಧಾರದಿಂದ ರೂಪಿತವಾಗಿರುವ ಚೌಬಂಧದಲ್ಲಿ ವೀರಸೇನಸುತನೆಂದು ನಿರ್ದೇಶಿಸಲಾಗಿರುವ 'ನಂದ' ಎಂಬ ಹೆಸರು ಪದ್ಮ-ಭದ್ರಸೇನನ ಸೂಚಕವಾಗಿದೆಯೆಂದು ಗ್ರಹಿಸಲವಕಾಶವಾಗುವುದಲ್ಲದೆ, ಭದ್ರಸೇನನ ತರುವಾಯ ಅವನ ಅಷ್ಟಸಹೋದರರು ಹಾಗೂ ಮತ್ತೊಬ್ಬರಾಜನು ರಾಜ್ಯಭಾರಮಾಡಿದ ಐತಿಹ್ಯಪ್ರಸಂಗವು ತಾರಾನಾಥರ ಕೃತಿ ಮತ್ತು ವಡ್ಡಾರಾಧನೆಗಳೆರಡರಲ್ಲಿಯೂ ಪರಿಚ್ಯುತವಾಗಿದೆಯೆಂದು ವ್ಯಕ್ತವಾಗುವುದು. ಆದ್ದರಿಂದ ತಾರಾನಾಥರ ಕೃತಿಯಲ್ಲಿ 'ನಂದ' ನ ತಂದೆ ಎಂದು ನಿರ್ದೇಶಿಸಲಾಗಿರುವ 'ವೀರಸೇನ' ಎಂಬ ಹೆಸರು ಕಾಲಾಶೋಕ-ಮಹಾನಂದನ ಸೂಚಕವಾಗಿರುವುದೆಂದು ಸ್ಫುಟಗೊಳ್ಳುವುದು.

ಇದರಂತೆ ಪೂರ್ವೋಲ್ಲಿಖಿತವಾದ ವ್ಯಂಜನಕಥಾನಕದ 'ವೀರಸೇನ' ಎಂಬ ಹೆಸರು ಕಾಲಾಶೋಕ-ಮಹಾನಂದನ ನಿರ್ದೇಶಕವಾಗಿದೆಯೆಂದು ಫಲಿತವಾಗುವುದು.

ಕಾಲಾಶೋಕ-ವೀರಸೇನನ ಸುತ ಸಿಂಹನನ್ನು ಕುರುಡುಗೊಳಿಸಿದ ಐತಿಹ್ಯವು ದಿವ್ಯಾವದಾನ, ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳಲ್ಲಿ, ಮೌರ್ಯಅಶೋಕನ ಸುತ ಕುಣಾಲನನ್ನು ಕುರುಡುಗೊಳಿಸುವ ಪ್ರಸಂಗವೆನಿಸಿ ಪರಿವರ್ತಿತವಾಗಿದೆಯೆಂದು ಮೇಲ್ಕಂಡ ವಿಚಾರಸರಣಿಯಿಂದ ವ್ಯಕ್ತಪಟ್ಟಿದೆ. ಮೌರ್ಯ ಅಶೋಕನ ಅನಂತರ ಕುಣಾಲನ ಸುತನಾದ ಸಂಪ್ರತಿಚಂದ್ರಗುಪ್ತನು[1] ರಾಜ್ಯಭಾರಾಧಿಷ್ಠಿತನಾದನೆಂದು ವಡ್ಡಾರಾಧನೆಯಲ್ಲಿ ಹೇಳಲಾಗಿದೆ. ಆದರೆ ವಾಯುಪುರಾಣದ ಹೇಳಿಕೆಯಂತೆ ಮೌರ್ಯ ಅಶೋಕನ ತರುವಾಯ ಅವನ ಮಗನಾದ ಕುನಾಲನು ರಾಜ್ಯಭಾರಾಧಿಷ್ಠಿತನಾದ ನೆಂದು ನಿರ್ದೇಶಿತವಾಗುವುದು. [ಅಧ್ಯಾಯ–೩೭; ಶ್ಲೋ. ಸಂ. ೩೨೭] ಈ ಕುನಾಲನನ್ನು ಬ್ರಹ್ಮಾಂಡಪುರಾಣದಲ್ಲಿ 'ಕುಶಾಲ' ಎಂದು ಹೆಸರಿಸಲಾಗಿದೆ. ಕುನಾಲನ (= ಕುಶಾಲನ) ತರುವಾಯ ಅವನ ಮಗನಾದ ಬಂಧುಪಾಲಿತನು ರಾಜ್ಯಭಾರಾಧಿಷ್ಠಿತನಾದನೆಂದು ಈ ಎರಡು ಪುರಾಣಗಳಲ್ಲಿಯೂ ನಿರ್ದೇಶಿತವಾಗಿರುವುದು. ಪ್ರಾಯಶಃ ಈ 'ಬಂಧುಪಾಲಿತ' ನನ್ನೇ ದಿವ್ಯಾವದಾನಾದಿ ಕೃತಿಗಳಲ್ಲಿ ಸಂಪ್ರತಿ (+ ಚಂದ್ರಗುಪ್ತ) ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ಗ್ರಹಿಸಲವಕಾಶ ವಾಗುವುದು. ಮೌರ್ಯ ಅಶೋಕನ ತರುವಾಯ ಮೌರ್ಯಸಂತತಿಯ ಆರು ಜನ ಅರಸರು ಮಾತ್ರ ರಾಜ್ಯಭಾರಮಾಡಿರುವರೆಂದು ಮತ್ತು ಇವರೆಲ್ಲರ ಒಟ್ಟು ರಾಜ್ಯ ಭಾರಕಾಲವು ೪೮ ವರ್ಷಗಳ ಅವಧಿಯುಳ್ಳದ್ದಾಗಿರುವುದೆಂದು ಹೇಳಲವಕಾಶ ವಿದೆ. ಮತ್ಸ್ಯಪುರಾಣದಲ್ಲಿ ಚಂದ್ರಗುಪ್ತನ ಕಾಲಾನಂತರದ ಮೌರ್ಯರಾಜ ಸಂತತಿಯ ಇತಿವೃತ್ತವು ಅಸ್ತವ್ಯಸ್ತರೀತಿಯಿಂದ ಉಳಿದುಬಂದಿದೆ. ಈ ಪುರಾಣದಲ್ಲಿ 'ಅಶೋಕ' ಎಂಬ ಹೆಸರು 'ಶಕ' ಎಂಬ ಪ್ರಭ್ರಂಶರೂಪತಳೆದಿದೆ. ಇಂತೆಯೇ ಈ ಪುರಾಣದಲ್ಲಿ 'ದಶರಥನು ೮ ವರ್ಷಕಾಲ ರಾಜ್ಯವಾಳುವನು' ಎಂದು ಹೇಳಿ ಅನಂತರ 'ಅವನ ಮಗ ಸಪ್ತತಿಯು ೯ ವರ್ಷಕಾಲ ರಾಜ್ಯವಾಳುವನು' ಎಂದು ಹೇಳಲಾಗಿದೆ. ಇಲ್ಲಿ ಪ್ರಯುಕ್ತವಾಗಿರುವ 'ಸಪ್ತತಿ' ಎಂಬ ಪದವು 'ಸಂಪ್ರತಿ' ಎಂಬುದರ ಭ್ರಂಶರೂಪ ವಾಗಿದೆಯೆಂದು ಗ್ರಹಿಸಲವಕಾಶವಾಗುವುದಲ್ಲದೆ ವಾಯು ಮತ್ತು ಬ್ರಹ್ಮಾಂಡಪುರಾಣ ಗಳಲ್ಲಿ ಕುನಾಲನ ಸುತನೆಂದು ನಿರ್ದೇಶಿತನಾಗಿರುವ ಬಂಧುಪಾಲಿತನಿಗೆ 'ಸಂಪ್ರತಿ' ಎಂಬ ಅಡ್ಡಹೆಸರಿದ್ದಿರಬೇಕೆಂದೂ ಗ್ರಹಿಸಬೇಕಾಗುವುದು. ಹೀಗೆ ಅಶೋಕ ಮೌರ್ಯನ ತರುವಾಯಕಾಲದ ಮೌರ್ಯರಾಜಸಂತತಿಯಲ್ಲಿ 'ಸಂಪ್ರತಿ' ಎಂಬ ಹೆಸ ರಿನ ರಾಜನೊಬ್ಬನಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದಾದರೂ ಈ ಹೆಸರಿ ನೊಡನೆ ಸಂಯೋಜಿತವಾಗಿಯಾಗಲೀ ಅಥವಾ ಪ್ರತ್ಯೇಕವಾಗಿಯಾಗಲೀ 'ಚಂದ್ರ

---

1 ಪರಿಶಿಷ್ಟಪರ್ವದಲ್ಲಿ 'ಸಂಪ್ರತಿ' ಎಂದು ಮಾತ್ರ ಹೆಸರಿಸಿದೆ.

ಗುಪ್ತ' ಎಂಬ ಹೆಸರಿನ ರಾಜನೊಬ್ಬನಿದ್ದನೆಂಬುದಾಗಿ ಪುರಾಣಗಳಲ್ಲಿ ನಿರ್ದೇಶಿತವಾಗಿಲ್ಲದಿರುವುದು ಪ್ರಕೃತಸಂದರ್ಭದ ದೃಷ್ಟಿಯಿಂದ ಗಮನಾರ್ಹವಾದ ಅಂಶವಾಗಿದೆ. ಇದರಿಂದ ದಿವ್ಯಾವದಾನ, ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳಲ್ಲಿ ಈ ಹಿಂದೆ ಹೇಳಿರುವಂತೆ ಕಾಲಾಶೋಕನ ಸುತ ಸಿಂಹನನ್ನು ಕುರುಡುಗೊಳಿಸುವ ಪ್ರಸಂಗದ ಮೂಲ ಐತಿಹ್ಯವು ಅಶೋಕಮೌರ್ಯನ ಸುತ ಕುನಾಲನನ್ನು ಕುರುಡುಗೊಳಿಸುವ ಪ್ರಸಂಗವೆನಿಸಿ ಪರಿವರ್ತಿತವಾಗಿರುವುದು ಮಾತ್ರವಲ್ಲದೆ ಕಾಲಾಶೋಕನ ಮೊಮ್ಮಗನ ಹೆಸರು ಹಾಗೂ ಇವನ ಐತಿಹ್ಯವು ಅಶೋಕಮೌರ್ಯನ ಮೊಮ್ಮಗನಾದ ಸಂಪ್ರತಿಯ ಹೆಸರಿನೊಡನೆ ಸಂಕಲಿತವಾಗಿರುವುದೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ ಈ ಗ್ರಹಿಕೆಯ ತಥ್ಯವು ಈ ಮುಂದಿನ ಐತಿಹ್ಯಾಂಶಗಳಿಂದಲೂ ಸಮರ್ಥಿತವಾಗುವುದು.

೧) "ಮಹಾಪದ್ಮನ ಸುತರನ್ನು ವಧೆಗೊಳಿಸಿದ ಕೌಟಿಲ್ಯನು ನೂರುವರ್ಷಕಾಲ ಭೂಮಿಯನ್ನನುಭವಿಸಿ **ನಂದೇಂದು**ವಾಗುವನು ಅಥವಾ **ನರೇಂದ್ರ**ನಾಗುವನು ಎಂಬ ವಾಯು ಮತ್ತು ಬ್ರಹ್ಮಾಂಡಪುರಾಣಗಳ ಹೇಳಿಕೆಗಳು ಹಾಗೂ ಕೌಟಿಲ್ಯನು **ಚಂದ್ರಗುಪ್ತ**ನನ್ನು ರಾಷ್ಟ್ರದಲ್ಲಿ ಅಭಿಷೇಕಿಸುವನು ; ಮತ್ತು ನೂರು ವರ್ಷಗಳ ರಾಜ್ಯಭಾರಾನಂತರ (ರಾಜ್ಯವು) ಮೌರ್ಯರನ್ನು ಸೇರುವುದು" ಎಂಬ ಮತ್ಸ್ಯಪುರಾಣದ ಹೇಳಿಕೆಗಳು ಅಸಂಗತವಿದ್ದು ಇಲ್ಲಿ ನಿರ್ದೇಶಿತವಾಗಿರುವ ನೂರು ವರ್ಷಗಳ ರಾಜ್ಯಭಾರಾವಧಿಯು, ನಂದರಾಜನು ಮಗಧರಾಜನಾಗಿ ಅಭಿಷಿಕ್ತನಾದ ಸಮಯ ಮತ್ತು ಮಹಾವಂಸೋಕ್ತಿಯಲ್ಲಿ ಕಾಲಾಶೋಕನ ೧೦ ನೇ ಸುತನೆಂದು ನಿರ್ದೇಶಿತನಾಗಿರುವ ರಾಜನ ರಾಜ್ಯಭಾರಾಂತ್ಯಸಮಯಗಳ ಅಂತರಕಾಲದೊಡನೆ ಸಮಾಯುಕ್ತವಾಗುವುದೆಂದು ಹಿಂದೆ ವಿವರಿಸಲಾಗಿದೆ. ವಾಯುಪುರಾಣದ 'ನಂದೇಂದು' ಎಂಬ ಹೆಸರು 'ನಂದಚಂದ್ರ' ಎಂಬುದರ ಪರ್ಯಾಯರೂಪವಾಗಿದ್ದು, 'ನಂದ' ಪದವು ವಂಶವಾಚಕವಾಗಿಯೂ 'ಚಂದ್ರ' ಎಂಬುದು ಈ ರಾಜನ ಹೆಸರಾಗಿಯೂ ಇರುವುದೆಂದು ಗ್ರಹಿಸಲವಕಾಶವಿದೆ. ಮೌರ್ಯ ಚಂದ್ರಗುಪ್ತನನ್ನು ಮುದ್ರಾರಾಕ್ಷಸ ನಾಟಕದಲ್ಲಿ [ಪ್ರಸ್ತಾವನೆ-ಪದ್ಯ ಸಂ. ೭] 'ಮೌರ್ಯೇಂದು' ಎಂಬ ಪರ್ಯಾಯರೂಪದ ಹೆಸರಿನಿಂದ ನಿರ್ದೇಶಿಸಲಾಗಿರುವುದರಿಂದ ವಾಯುಪುರಾಣದ 'ನಂದೇಂದು' ಎಂಬ ಹೆಸರು 'ನಂದ-ಚಂದ್ರಗುಪ್ತ' ಎಂಬ ಹೆಸರಿನ ಪರ್ಯಾಯರೂಪವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ ವಾಯುಪುರಾಣದ 'ನಂದೇಂದು' ಎಂಬ ಹೆಸರಿನ ಸ್ಥಾನದಲ್ಲಿ ಮತ್ಸ್ಯಪುರಾಣದಲ್ಲಿ 'ಚಂದ್ರಗುಪ್ತ' ಎಂಬ ಹೆಸರು ಪ್ರಯುಕ್ತವಾಗಿದ್ದು, ಇವನ ರಾಜ್ಯಭಾರದ ತರುವಾಯ (ರಾಜ್ಯವು) ಮೌರ್ಯರನ್ನು ಸೇರುವುದೆಂಬ ಹೇಳಿಕೆಯಿದೆಯಾದುದರಿಂದ, 'ನಂದೇಂದು' ಎಂಬ ಹೆಸರು ನಂದರಾಜಸಂತತಿಯ ಚಂದ್ರಗುಪ್ತನ ನಿರ್ದೇಶಕವಾಗಿ ಪ್ರಯುಕ್ತವಾಗಿರುವ ಪರ್ಯಾಯರೂಪದ ಹೆಸರಾಗಿದೆಯೆಂದು ವ್ಯಕ್ತವಾಗುವುದಲ್ಲದೆ, ಮಹಾವಂಸೋ

ಕೃತಿಯಲ್ಲಿ ಕಾಲಾಶೋಕನ ೧೦ ನೇ ಸುತನೆಂದು ನಿರ್ದೇಶಿತನಾಗಿರುವ ರಾಜನು 'ಚಂದ್ರಗುಪ್ತ-ನಂದ' ಎಂಬ ಹೆಸರಿನವನಾಗಿದ್ದಿರಬೇಕೆಂದು ಫಲಿತವಾಗುವುದು.

೨) ದಿವ್ಯಾವದಾನದಲ್ಲಿ ಬಿಂದುಸಾರನನ್ನು 'ನಂದ' ನ ಸುತನೆಂದು ನಿರ್ದೇಶಿಸ ಲಾಗಿರುವುದು ವಿದಿತವಿದೆ. ಆದರೆ ಇತರ ಎಲ್ಲ ಇತಿವೃತ್ತಗಳ ಹೇಳಿಕೆಗಳಾಧಾರದಿಂದ ಬಿಂದುಸಾರನು ಚಂದ್ರಗುಪ್ತಮೌರ್ಯನ ಸುತನಾಗಿರುವನೆಂಬುದು ನಿಶ್ಚಿತವೆನಿಸಿದೆ. ಆದ್ದರಿಂದ ದಿವ್ಯಾವದಾನದಲ್ಲಿ ಬಿಂದುಸಾರನನ್ನು ನಂದನ ಸುತನೆಂದು ನಿರ್ದೇಶಿಸಲಾ ಗಿರುವುದಕ್ಕೆ ಈ ಕೃತಿಯ ಕರ್ತೃವು ನಂದ(–ಚಂದ್ರಗುಪ್ತ) ಮತ್ತು (ಮೌರ್ಯ–) ಚಂದ್ರಗುಪ್ತ ಎಂಬ ಹೆಸರುಗಳನ್ನು ಏಕವ್ಯಕ್ತಿಸೂಚಕಗಳನ್ನಾಗಿ ಗ್ರಹಿಸಿದುದು ಕಾರಣವಾಗಿರಬೇಕೆಂದು ಹೇಳಲವಕಾಶವಾಗುವುದು.

೩) ಚಂದ್ರಗುಪ್ತಮೌರ್ಯನು ರಾಜ್ಯಭಾರದಲ್ಲಿ ಅಭಿಷಿಕ್ತನಾದ ಸಮಯವನ್ನು ಹೇಮಚಂದ್ರಾಚಾರ್ಯರು ಈ ಮುಂದಿನಂತೆ ನಿರ್ದೇಶಿಸಿದ್ದಾರೆ :

'ಶ್ರೀ ಮಹಾವೀರತೀರ್ಥಂಕರನ ನಿರ್ವಾಣಪಶ್ಚಾತ್ ೧೫೫ ವರ್ಷಗಳು ಕಳೆ ದಿರಲು ಚಂದ್ರಗುಪ್ತನು ರಾಜನಾದನು' ಎಂದು ಹೇಳಿದ್ದಾರೆ. [ಪೂರ್ವೋಲ್ಲಿಖಿತ–ಪರಿ ಶಿಷ್ಟಪರ್ವ–ಸರ್ಗ ೮] ಆದರೆ ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳೇ ಮೊದಲಾದ ಇತರ ಕೃತಿಗಳಲ್ಲಿ ಶ್ರೀ ವೀರನಿರ್ವಾಣಪಶ್ಚಾತ್ ೬೦ ವರ್ಷಗಳ ತರುವಾಯ ನಂದ ರಾಜಮನೆತನದ ರಾಜ್ಯಭಾರವು ಆರಂಭವಾಯಿತೆಂದೂ, ಈ ಮನೆತನದ ೧೫೫ (ಅಥವಾ ೧೫೦) ವರ್ಷಗಳ ರಾಜ್ಯಭಾರಾನಂತರ ಮೌರ್ಯವಂಶಜರ ರಾಜ್ಯಭಾರವು ಆರಂಭವಾಯಿತೆಂದೂ ನಿರ್ದೇಶಿತವಾಗಿದೆ. ಇಷ್ಟಲ್ಲದೆ ಪರಿಶಿಷ್ಟಪರ್ವಕೃತಿಕಾರರಾದ ಹೇಮಚಂದ್ರಾಚಾರ್ಯರೂ, ಶ್ರೀ ವೀರನಿರ್ವಾಣಪಶ್ಚಾತ್ ೬೦ ವರ್ಷಗಳು ಕಳೆದಿರಲು ನಂದನು ಮಗಧರಾಜನಾಗಿ ಅಭಿಷಿಕ್ತನಾದನೆಂಬುದಾಗಿ ಹೇಳಿರುವುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಇದರಂತೆ ಮೌರ್ಯಚಂದ್ರಗುಪ್ತನು ಶ್ರೀ ವೀರನಿರ್ವಾಣ ಪಶ್ಚಾತ್ (೬೦+೧೫೦=) ೨೧೦ ನೇ ವರ್ಷ (ಅಥವಾ ೬೦+೧೫೫=೨೧೫ ನೇ ವರ್ಷ) ದ ತರುವಾಯದಲ್ಲಿ ರಾಜ್ಯಭಾರಾಧಿಷ್ಠಿತನಾಗಿರಬೇಕೆಂದು ಸೂಚಿತವಾಗು ವುದು. ಆದ್ದರಿಂದ ಶ್ರೀ ವೀರನಿರ್ವಾಣಪಶ್ಚಾತ್ ೧೫೫ ನೇ ವರ್ಷದ ತರುವಾಯ ದಲ್ಲಿ ಮೌರ್ಯ ಚಂದ್ರಗುಪ್ತನು ರಾಜ್ಯಭಾರದಲ್ಲಿ ಅಧಿಷ್ಠಿತನಾದನೆಂಬ ಹೇಮಚಂದ್ರಾ ಚಾರ್ಯರ ಹೇಳಿಕೆಯು ಅಸಂಗತವೆನಿಸುವುದು. ಇದರಿಂದ ಶ್ರೀ ವೀರನಿರ್ವಾಣ ಪಶ್ಚಾತ್ ೧೫೫ ವರ್ಷಗಳು ಗತಿಸಿರಲು ಚಂದ್ರಗುಪ್ತನು ರಾಜ್ಯಭಾರದಲ್ಲಿ ಅಧಿಷ್ಠಿತ ನಾದನು' ಎಂಬಪರಂಪರಾಗತವಾದ ಐತಿಹ್ಯವನ್ನು ಹೇಮಚಂದ್ರಾಚಾರ್ಯರು ಮೌರ್ಯ ಚಂದ್ರಗುಪ್ತನ ರಾಜ್ಯಾಭಿಷೇಕಸಮಯದ ಸೂಚಕವಾಗಿ ಗ್ರಹಿಸಿರುವರೆಂದು ಕಂಡುಬರುವುದು. ಹೇಮಚಂದ್ರಾಚಾರ್ಯರ ಈ ಗ್ರಹಿಕೆಯು ಈ ಮೇಲೆ ವಿವ ರಿಸಿರುವಂತೆ ಅಸಂಗತವೆನಿಸುವುದಾದ ಕಾರಣ ಮೌರ್ಯ ಚಂದ್ರಗುಪ್ತನಿಗಿಂತಲೂ

ಪೂರ್ವಭಾವಿಯಾಗಿ ಆಳಿದ ನಂದರಾಜಸಂತತಿಯಲ್ಲಿ ಚಂದ್ರಗುಪ್ತನೆಂಬ ಅರಸನೊಬ್ಬ ನಿದ್ದಿರಬೇಕೆಂದು ಮತ್ತು ಇವನು ಶ್ರೀ ವೀರನಿರ್ವಾಣಪಶ್ಚಾತ್ ೧೫೫ ನೇ ವರ್ಷದಲ್ಲಿ ರಾಜ್ಯಭಾರಾಧಿಷ್ಠಿತನಾಗಿರಬೇಕೆಂದು ಗ್ರಹಿಸಲವಕಾಶವಾಗುವುದು.

೪) ಮಗಧರಾಜನಾದ ಚಂದ್ರಗುಪ್ತಸಾಮ್ರಾಟನು ಆಚಾರ್ಯ ಶ್ರುತಕೇವಲಿ ಭದ್ರಬಾಹು ಗುರುಗಳಿಂದ ಮುನಿದೀಕ್ಷೆಪಡೆದು, ಮುನಿಸಂಘದೊಡನೆ ಉಜ್ಜಯಿನಿಯಿಂದ ದಕ್ಷಿಣಾಪಥದತ್ತ ಪ್ರಯಾಣಮಾಡಿ ಶ್ರವಣಬೆಳಗೊಳ (=ಕಳ್ಬಪ್ಪು) ವನ್ನು ಸೇರಿ, ಅಲ್ಲಿ ಚಂದ್ರಗಿರಿಯಮೇಲೆ ಸಲ್ಲೇಖನವ್ರತವನ್ನು ಕೈಗೊಂಡು ತನ್ನ ಗುರುವಿನ ಸೇವೆಯಲ್ಲಿ ನಿರತನಾಗಿದ್ದನೆಂಬ ದಿಗಂಬರ ಜೈನ ಸಂಪ್ರದಾಯದ ಐತಿಹ್ಯವಿರುವುದು ವಿದಿತವಿದೆ. ಕಳ್ಬಪ್ಪುವಿನಲ್ಲಿ ಸಲ್ಲೇಖನವ್ರತವನ್ನು ಕೈಗೊಂಡ ಶ್ರುತಕೇವಲಿ ಭದ್ರಬಾಹು ಆಚಾರ್ಯರು ಶ್ರೀ ವೀರನಿರ್ವಾಣ ಸಂವತ್ ೧೬೨ ರಲ್ಲಿ ಸ್ವರ್ಗಸ್ಥರಾದರೆಂದು ದಿಗಂಬರ ಜೈನ ಆಮ್ನಾಯದ ಪಟ್ಟಾವಲಿಗಳೇ ಮೊದಲಾದ ಕೃತಿಗಳ ಹೇಳಿಕೆಗಳಿಂದ ವ್ಯಕ್ತವಾಗುವುದು. ಇದರಿಂದ ಪೂರ್ವೋಲ್ಲಿಖಿತವಾದ ಪರಿಶಿಷ್ಟಪರ್ವದ ಹೇಳಿಕೆಯಂತೆ ಶ್ರೀ ವೀರನಿರ್ವಾಣ ಪಶ್ಚಾತ್ ೧೫೫ ನೇ ವರ್ಷದ ತರುವಾಯದಲ್ಲಿ ರಾಜ್ಯಾಭಿಷೇಕ ಹೊಂದಿದ ಚಂದ್ರಗುಪ್ತನೇ ಶ್ರು. ಕೇ. ಭದ್ರಬಾಹು ಆಚಾರ್ಯರಿಂದ ಮುನಿದೀಕ್ಷೆಪಡೆದು ತನ್ನಗುರುವಿನೊಡನೆ ದಕ್ಷಿಣಾಪಥದತ್ತ ಪ್ರಯಾಣಮಾಡಿ ಶ್ರವಣಬೆಳಗೊಳದ ಚಂದ್ರಗಿರಿಯನ್ನು ಸೇರಿ ಗುರುಸೇವೆಯಲ್ಲಿ ನಿರತನಾಗಿದ್ದನೆಂದು ಗ್ರಹಿಸಲವಕಾಶವಾಗುವುದು.

೫) ಶ್ರು. ಕೇ. ಭದ್ರಬಾಹುಆಚಾರ್ಯರು ಮುನಿಸಂಘದೊಡನೆ ದಕ್ಷಿಣಾಪಥದತ್ತಪ್ರಯಾಣಮಾಡಿದ ಸಮಯದಲ್ಲಿ, ಅವರೊಡನೆ ಪ್ರಯಾಣಮಾಡದೆ ಉತ್ತರಾಪಥದಲ್ಲಿಯೇ ನಿಂತ ಮುನಿಗಣಗಳ ಆಚಾರ್ಯರಾಗಿದ್ದವರಲ್ಲಿ ಸ್ಥೂಲಭದ್ರಾಚಾರ್ಯರು ಒಬ್ಬರಾಗಿದ್ದರೆಂದು ದಿಗಂಬರ ಜೈನಸಂಪ್ರದಾಯದ ಕೃತಿಗಳಲ್ಲಿ ಹೇಳಲಾಗಿದೆ. ಇಂತೆಯೇ ಶ್ರು. ಕೇ. ಭದ್ರಬಾಹುಆಚಾರ್ಯರ ಅನಂತರ ಆಚಾರ್ಯಪಟ್ಟಸ್ಥರಾದ ಸ್ಥೂಲಭದ್ರಾಚಾರ್ಯರು ೪೫ ವರ್ಷಕಾಲ ಜೀವಿಸಿದ್ದರೆಂದೂ ಮತ್ತು ಇವರು ಸ್ವರ್ಗಸ್ಥರಾದ ವರ್ಷದಲ್ಲಿಯೇ ನವಮನಂದರಾಜನ ರಾಜ್ಯಭಾರವು ಅಂತ್ಯಗೊಂಡು ಮೌರ್ಯ ಮನೆತನದರಾಜ್ಯಭಾರವು ಆರಂಭವಾಯಿತೆಂದೂ ಶ್ವೇತಾಂಬರ ಜೈನಸಂಪ್ರದಾಯದ ಪಟ್ಟಾವಲಿಯಲ್ಲಿ ಹೇಳಲಾಗಿದೆ[1]. ಈ ಐತಿಹ್ಯಾಧಾರದಿಂದ ಶ್ರು. ಕೇ. ಭದ್ರಬಾಹು ಆಚಾರ್ಯರೊಡನೆ ದಕ್ಷಿಣಾಪಥದತ್ತ ಪ್ರಯಾಣಮಾಡಿದ ನಂದಚಂದ್ರಗುಪ್ತನ ರಾಜ್ಯಭಾರಾನಂತರ ೪೫ ವರ್ಷಕಾಲ ಮಹಾಪದ್ಮಾದಿ ನವನಂದರ ರಾಜ್ಯಭಾರವು ನಡೆಯಿತೆಂದೂ ತದನಂತರ ಮೌರ್ಯಚಂದ್ರಗುಪ್ತನು ರಾಜ್ಯಭಾರದಲ್ಲಿ ಅಭಿಷಿಕ್ತ

---

1 ಪಟ್ಟಾವಲಿ ಆಫ್ ದಿ ತಪಾಗಚ್ಛ—ಇಂಡಿಯನ್ ಆಂಟಿಕ್ವೆರಿ—ಗ್ರಂ. ಭಾ. ೧೧-೧೮೮೨—ಪು. ಸಂ. ೨೪೫-೨೫೬— ಅಡಿಟಿಪ್ಪಣಿ-೩೫.

ನಾಗಿರುವನೆಂದೂ ಮತ್ತು ಇದೇ ವರ್ಷದಲ್ಲಿ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾಗಿರುವರೆಂದೂ ಸ್ಫುಟಗೊಳ್ಳುವುದು. ಕಾಲಾಶೋಕನ ಅನಂತರ ಆಳಿದ ೧೦ ಜನ ರಾಜರಲ್ಲಿ ಅಂತಿಮನಾದರಾಜನ ರಾಜ್ಯಭಾರಾಂತ್ಯ ಸಮಯದಿಂದ ೪೫ ವರ್ಷಗಳ ತರುವಾಯದಲ್ಲಿ ಮೌರ್ಯ ಚಂದ್ರಗುಪ್ತನ ರಾಜ್ಯಾಭಿಷೇಕವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಇದರಿಂದ ಮಹಾವಂಸೋ ಐತಿಹ್ಯದನುಗುಣವಾಗಿ ಕಾಲಾಶೋಕನ ಹತ್ತು ಜನ ಸುತರೆಂದು ಪರಿಗಣಿತರಾಗಿರುವ ರಾಜರಲ್ಲಿ ನಂದಚಂದ್ರಗುಪ್ತನು ಅಂತಿಮರಾಜನಾಗಿರುವನೆಂದು ವ್ಯಕ್ತವಾಗುವುದು. ಇಂತೆಯೇ ನಂದರಾಜನು ಮಗಧ ರಾಜ್ಯಭಾಗದಲ್ಲಿ ಅಭಿಷಿಕ್ತನಾದ ಸಮಯ ಮತ್ತು ಕಾಲಾಶೋಕನ ತರುವಾಯ ಆಳಿದ ೧೦ ಜನ ರಾಜರಲ್ಲಿ ಅಂತಿಮನಾದ ರಾಜನ ರಾಜ್ಯಭಾರಾಂತ್ಯಸಮಯಗಳ ಮಧ್ಯೆ ೧೦೦ ವರ್ಷಗಳ ಅಂತರಕಾಲವಿರುವುದೆಂದು ಹಿಂದೆಪ್ರತಿಪಾದಿಸಲಾಗಿದೆಯಾದುದರಿಂದ ಕಾಲಾಶೋಕನ ದಶಮಸುತನೆಂದು ಪರಿಗಣಿತನಾಗುವ ನಂದಚಂದ್ರಗುಪ್ತನ ರಾಜ್ಯಭಾರವು ವೀ. ನಿ. ಸಂ. (೬೧+೧೦೦=) ೧೬೧= ಕ್ರಿ. ಪೂ. ೩೬೭ ರಲ್ಲಿ ಅಂತ್ಯಗೊಂಡಿದ್ದು ಇವನು (೧೬೧ – ೧೫೬=) ೫ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಫಲಿತವಾಗುವುದು.

೭) ಕಾಲಾಶೋಕನ ತರುವಾಯ ಅವನ ಹತ್ತು ಜನ ಸುತರು ರಾಜ್ಯಭಾರ ಮಾಡಿದರೆಂದು ಮಹಾವಂಸೋಕೃತಿಯಲ್ಲಿ ಹೇಳಲಾಗಿರುವುದರ ಪ್ರತಿಯಾಗಿ ಬರ್ಮೀ ಇತಿವೃತ್ತದಲ್ಲಿ ಇವರನ್ನು ಒಂಬತ್ತು ಜನರೆಂದು ನಿರ್ದೇಶಿಸಲಾಗಿರುವುದು ವಿದಿತವಿದೆ. ಏಕೈಕಮೂಲಸಂಪ್ರದಾಯದವುಗಳೆನಿಸಿದ ಈ ಕೃತಿಗಳ ಹೇಳಿಕೆಗಳಲ್ಲಿ ಕಂಡುಬರುವ ಈ ವ್ಯತ್ಯಾಸಕ್ಕೆ ಯಾವುದಾದರೊಂದು ಕಾರಣವಿಲ್ಲದಿರಲಾರದು. ಹರಿಷೇಣಾಚಾರ್ಯರ ಬೃ. ಕ. ಕೋಶದ ಪೂರ್ವೋಲ್ಲಿಖಿತಕಥೆಯಿಂದ ಸಿಂಹನು ವೀರಸೇನ (=ಕಾಲಾಶೋಕ) ನ ಪಟ್ಟಮಹಿಷೀಗರ್ಭಸಂಜಾತನಾದ ಜ್ಯೇಷ್ಠ ಸುತನಾಗಿರುವನೆಂದು ಸೂಚಿತವಾಗುವುದು. ಇಂತೆಯೇ ಬರ್ಮೀಇತಿವೃತ್ತದಲ್ಲಿ ನಿರ್ದೇಶಿತರಾಗಿರುವ ಭದ್ರಸೇನಾದಿ ಒಂಭತ್ತು ಜನ ಸಹೋದರರು ಕಾಲಾಶೋಕನ ಕುಲಸಂಪನ್ನಳಾದ ಮಡದಿಯಲ್ಲಿ ಜನಿಸಿದ ಸುತರಾಗಿರುವರೆಂದು ಗ್ರಹಿಸಬೇಕಾಗುವುದು. ಕಾಲಾಶೋಕನಿಗೆ ಈ ಹತ್ತು ಜನ ಸುತರಲ್ಲದೆ ಶೂದ್ರಸ್ತ್ರೀಗರ್ಭಜನಾದ ಮಹಾಪದ್ಮನೆಂಬ ಮತ್ತೊಬ್ಬ ಮಗನಿದ್ದನೆಂಬುದು ವಿದಿತವಿದೆ. ಸಿಂಹ ಮತ್ತು ಅವನ ಸುತನ ಐತಿಹ್ಯವಿಷಯವು ದಿವ್ಯಾವದಾನ, ಪರಿಶಿಷ್ಟಪರ್ವ ಮತ್ತು ವಡ್ಡಾರಾಧನೆಗಳಲ್ಲಿ ಕುಣಾಲ ಮತ್ತು ಸಂಪ್ರತಿಯ ಐತಿಹ್ಯವೆನಿಸಿ ಪರಿವರ್ತಿತವಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಇದರಂತೆ [ಜ್ಯೇಷ್ಠಸುತನಾದ ಸಿಂಹನು ಕುರುಡನಾಗಿದ್ದು ರಾಜನಾಗುವ ಅರ್ಹತೆಯನ್ನು ಹೊಂದಿರದಿದ್ದುದರಿಂದ ಕಾಲಾಶೋಕನ ಮರಣಾನಂತರ ಭದ್ರಸೇನ ಮತ್ತು ಅವನ ಅಷ್ಟಸಹೋದರರು ಅನುಕ್ರಮವಾಗಿ ರಾಜ್ಯವಾಳಿರುವರೆಂದೂ ಇವರ ಈ ರಾಜ್ಯಭಾರದ ಐತಿಹ್ಯವು ಬರ್ಮೀಇತಿವೃತ್ತದಲ್ಲಿ ಉಳಿದುಬಂದಿದೆಯೆಂದೂ ಫಲಿತವಾಗುವುದು.] ಕುಣಾಲನ

ಸುತನಾದ ಸಂಪ್ರತಿಯ ಐತಿಹ್ಯವು ಭಾಗಶಃ ಸಿಂಹನ ಸುತನ ಐತಿಹ್ಯವಾಗಿದೆಯಾದುದರಿಂದಲೂ ಮತ್ತು ಮಹಾವಂಸೋಕ್ಕೃತಿಯಲ್ಲಿ ಕಾಲಾಶೋಕನ ತರುವಾಯ ಅವನ ಹತ್ತು ಜನ ಸುತರ ರಾಜ್ಯಭಾರವನ್ನು ನಿರ್ದೇಶಿಸಿ ತದನಂತರ (ಮಹಾಪದ್ಮಾದಿ) ನವನಂದರ ರಾಜ್ಯಭಾರವನ್ನು ನಿರ್ದೇಶಿಸಿರುವುದರಿಂದಲೂ, ಭದ್ರಸೇನಾದಿ ಒಂಭತ್ತು ಜನ ಸಹೋದರರ ರಾಜ್ಯಭಾರಾನಂತರ ಹತ್ತನೆಯವನಾಗಿ ಸಿಂಹನ ಸುತನು ರಾಜ್ಯಭಾರಮಾಡಿರುವನೆಂದು ಗ್ರಹಿಸಲವಕಾಶವಾಗುವುದು. ಮಹಾವಂಸೋಕ್ಕೃತಿಯಲ್ಲಿ ನಿರ್ದೇಶಿತರಾಗಿರುವ ಹತ್ತುಜನ ರಾಜರಲ್ಲಿ ನಂದಚಂದ್ರಗುಪ್ತನು ಅಂತಿಮರಾಜನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆಯಾದುದರಿಂದ ಇವನು ಸಿಂಹನ ಸುತನಾಗಿರುವನೆಂದು ವ್ಯಕ್ತವಾಗುವುದು. ಪರಿಶಿಷ್ಟಪರ್ವದಲ್ಲಿ ಕುಣಾಲನ ಸುತನನ್ನು 'ಸಂಪ್ರತಿ' ಎಂದು ಹೆಸರಿಸಿದೆಯಾದರೆ, ವಡ್ಡಾರಾಧನೆಯಲ್ಲಿ ಇವನನ್ನು 'ಸಂಪ್ರತಿ ಚಂದ್ರಗುಪ್ತ' ಎಂದು ಹೆಸರಿಸಲಾಗಿದೆ. ಇದರಿಂದ ವಡ್ಡಾರಾಧನೆಯ ಕಥೆಯಲ್ಲಿ ಸಿಂಹನ ಸುತನಾದ ಚಂದ್ರಗುಪ್ತನ ಐತಿಹ್ಯವಮಾತ್ರವಲ್ಲದೆ ಇವನ ಹೆಸರೂ ಕುಣಾಲನ ಸುತನಾದ ಸಂಪ್ರತಿಯಹೆಸರಿನೊಡನೆ ಸಂಯೋಜಿತವಾಗಿರುವುದೆಂದು ಅಭಿವ್ಯಕ್ತವಾಗುವುದು.

೭) ಪ್ರದ್ಯೋತಮಹಾಸೇನನ ಅನುಕ್ರಮದಲ್ಲಿ ಮಹಾನಂದ-ಕಾಲಾಶೋಕನು ೭ನೇ ರಾಜನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಮಹಾನಂದನ ತರುವಾಯ, ಅವನ ೯ ಜನ ಸುತರೂ ತದನಂತರ ಅವನ ಮೊಮ್ಮಗನಾದ ನಂದಚಂದ್ರಗುಪ್ತನೂ ರಾಜ್ಯಭಾರಮಾಡಿರುವರಾದ್ದರಿಂದ ಪ್ರದ್ಯೋತ ಮಹಾಸೇನನ ಅನುಕ್ರಮದಲ್ಲಿ ನಂದಚಂದ್ರಗುಪ್ತನು (೭+೯+೧=) ೧೭ ನೆಯ ರಾಜನಾಗಿರುವನೆಂದು ವ್ಯಕ್ತವಾಗುವುದು. ಶ್ವೇತಾಂಬರ ಜೈನಆಮ್ನಾಯದ ಖರತರಗಚ್ಛದಪಟ್ಟಾವಲಿಯ ಐತಿಹ್ಯದಂತೆ, ಮೌರ್ಯಅಶೋಕನ ಮೊಮ್ಮಗನಾದ ಸಂಪ್ರತಿಯು ಶ್ರೇಣಿಕಬಿಂಬಿಸಾರನ ಅನುಕ್ರಮದಲ್ಲಿ ೧೭ನೆಯ ರಾಜನಾಗಿದ್ದನೆಂದು ನಿರ್ದೇಶಿತನಾಗಿದ್ದಾನೆ. (ಇಂಡಿಯನ್ ಆಂಟಿಕ್ವೆರಿ ಗ್ರಂ. ಭಾಗ ೧೧-೧೮೮೩, ಪು. ಸಂ. ೨೪೫-೨೫೬]. ಆದರೆ ಸಂಪ್ರತಿಯು ಶ್ರೇಣಿಕಬಿಂಬಿಸಾರನ ಅನುಕ್ರಮದಲ್ಲಿ ೩೦ ನೇ ರಾಜನಾಗಿರುವನೆಂದು ಹೇಳಲವಕಾಶವಿದೆ. ಹಿಂದೆ ಹೇಳಲಾಗಿರುವಂತೆ, ಶ್ವೇತಾಂಬರ ಜೈನಆಮ್ನಾಯದ ಕೃತಿಗಳಲ್ಲಿ ನಂದಚಂದ್ರಗುಪ್ತನ ಐತಿಹ್ಯವು ಭಾಗಶಃ ಸಂಪ್ರತಿಯ ಐತಿಹ್ಯವಾಗಿ ಪರಿವರ್ತಿತವಾಗಿರುವುದಾದ್ದ-ರಿಂದ ಖರತರಗಚ್ಛದ ಪಟ್ಟಾವಲಿಯ ಮೇಲ್ಕಂಡ ಐತಿಹ್ಯವು ಮೂಲತಃ ನಂದಚಂದ್ರಗುಪ್ತನ ಐತಿಹ್ಯಾಂಶವಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಅಂತೆಯೇ 'ಪ್ರದ್ಯೋತಮಹಾಸೇನನ ಅನುಕ್ರಮದಲ್ಲಿ ನಂದಚಂದ್ರಗುಪ್ತನು ೧೭ನೇ ಅರಸನಾಗಿದ್ದನು' ಎಂಬ ಪರಿಗಣನೆಯ ಮೂಲಐತಿಹ್ಯವು 'ಶ್ರೇಣಿಕಬಿಂಬಿಸಾರನ ಅನುಕ್ರಮದಲ್ಲಿ ಸಂಪ್ರತಿಯು ೧೭ನೇ ರಾಜನಾಗಿದ್ದನು' ಎಂಬ ಅಸಂಗತವಾದ ಐತಿಹ್ಯವಾಗಿ ಪರಿವರ್ತಿತವಾಗಿದೆಯೆಂದು ಸ್ಫುಟಗೊಳ್ಳುವುದು.

೮) ನಂದರಾಜನಿಗೆ 'ಶಿಶುನಾಗ' ಎಂಬ ಮತ್ತೊಂದು ಹೆಸರಿದ್ದು, ಈ ಹೆಸರು ಪುರಾಣಗಳಲ್ಲಿ ಸ್ಥಾನಪಲ್ಲಟ ಪೂರ್ವಕ ನಂದರಾಜನಿಂದ (=ದ್ವಿ. ನಂದಿವರ್ಧನನಿಂದ) ಎಂಟನೇ ತಲೆಮಾರಿನಷ್ಟು ಪೂರ್ವಕಾಲೀನನಾದ ರಾಜನೊಬ್ಬನ ಹೆಸರೆನಿಸಿ ನಿರ್ದೇಶಿತವಾಗಿದೆಯೆಂಬುದು ಸ್ಪಷ್ಟಗೊಂಡಿದೆ. ಈ ಶಿಶುನಾಗ ಎಂಬ ಹೆಸರಿನ ಅನುಕ್ರಮದಲ್ಲಿ ಕಾಕವರ್ಣ, ಕ್ಷೇಮಧರ್ಮ, ಕ್ಷೇಮಜಿತ್ (ಅಥವಾ ಕ್ಷತ್ರೌಜ), ವಿವಿಸಾರ (=ಬಿಂಬಿಸಾರ), ಅಜಾತಶತ್ರು, ದರ್ಶಕ (=ವಂಶಕ), ಉದಾಯಿ (ದ್ವಿ.) ನಂದಿವರ್ಧನ ಮತ್ತು ಮಹಾನಂದಿ ಎಂಬ ಅರಸರನ್ನು ಹೆಸರಿಸಿಯಾದ ಬಳಿಕ, ಇವರೆಲ್ಲರ ಒಟ್ಟು ಸಂಖ್ಯೆ ಮತ್ತು ಮತ್ತು ಒಟ್ಟು ರಾಜ್ಯಭಾರಕಾಲದ ಅವಧಿಯ ವಿಷಯವಾಗಿ ಈ ಮುಂದಿನಂತೆ ವಾಯು, ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿ ಹೇಳಲಾಗಿದೆ :

ಇತ್ಯೇತೇ ಭವಿತಾರೋ ವೈ ಶೈಶುನಾಕಾ ನೃಪಾದಶ ।
ಶತಾನಿ ತ್ರೀಣಿ ವರ್ಷಾಣಿ ದ್ವಿಷಷ್ಟ್ಯಭ್ಯಧಿಕಾನಿತು ॥೩೧೬॥

[ವಾಯುಪುರಾಣ-ಅಧ್ಯಾಯ ೩೭]

..............................................

ಭವಿಷ್ಯಂತಿ ಚ ವರ್ಷಾಣಿ ಷಷ್ಟ್ಯುತ್ತರಶತತ್ರಯಂ ॥೧೩೪॥
ಶಿಶುನಾಗಾ ದಶೈವೈತೇ ರಾಜಾನಃ ಕ್ಷತ್ರಬಂಧವಃ ।
.............................................. ॥೧೩೫॥

[ಬ್ರಹ್ಮಾಂಡಪುರಾಣ-ಅಧ್ಯಾಯ ೭೪]

..............................................

ಇತ್ಯೇತೇ ಭವಿತಾರೋತ್ರ ವಂಶೇ ವೈ ಶಿಶುನಾಕತಃ ॥೧೨॥
ಶತಾನಿ ತ್ರೀಣಿ ಪೂರ್ಣಾನಿ ಷಷ್ಠಿರ್ವರ್ಷಾಧಿಕಾನಿ ತು ।
ಶಿಶುನಾಕಾ ಭವಿಷ್ಯಂತಿ ರಾಜಾನಃ ಕ್ಷತ್ರಬಂಧವಃ ॥೧೩॥

[ಮತ್ಸ್ಯಪುರಾಣ-ಅಧ್ಯಾಯ ೨೭೨]

ವಾಯು ಮತ್ತು ಬ್ರಹ್ಮಾಂಡ ಪುರಾಣಗಳ ಮೇಲ್ಕಂಡ ಹೇಳಿಕೆಗಳಿಂದ, ಶಿಶುನಾಗನ ತರುವಾಯ ಅವನ ಸಂತತಿಯ ೧೦ ಜನ ಅರಸರು ರಾಜ್ಯಭಾರಮಾಡಿರುವರೆಂದು ಪರಿಗಣಿತವಾಗುವುದು. ಆದರೆ ಈ ಶಿಶುನಾಗನ ಸಂತತಿಯ ಅರಸರೆನಿಸುವ ಶೈಶುನಾಗರ ೯ ಹೆಸರುಗಳನ್ನು ಮಾತ್ರ ವಾಯು ಮತ್ತು ಬ್ರಹ್ಮಾಂಡಪುರಾಣಗಳಲ್ಲಿ ಹೇಳಿದೆಯಾದರೆ ಮತ್ಸ್ಯಪುರಾಣದಲ್ಲಿ ೧೧ ಹೆಸರುಗಳನ್ನು ಹೇಳಲಾಗಿದೆ. ಇಂತೆಯೇ ಈ ಶೈಶುನಾಗರ ಒಟ್ಟು ರಾಜ್ಯಭಾರಕಾಲವನ್ನು ವಾಯುಪುರಾಣದಲ್ಲಿ ೩೬೨ ವರ್ಷಗಳೆಂದೂ, ಬ್ರಹ್ಮಾಂಡಪುರಾಣದಲ್ಲಿ ೩೬೦ ವರ್ಷಗಳೆಂದೂ ಮತ್ತು ಮತ್ಸ್ಯಪುರಾಣದಲ್ಲಿ ೩೬೩ ವರ್ಷಗಳೆಂದೂ ಹೇಳಲಾಗಿರುವುದು ಸ್ಪಷ್ಟವಿದೆ. ಹೀಗೆ ದಶಶೈಶುನಾಗರ

ಹೆಸರುಗಳು ಮತ್ತು ಒಟ್ಟು ರಾಜ್ಯಭಾರಕಾಲವನ್ನು ಹೇಳುವಲ್ಲಿ ಪುರಾಣಗಳ ಮಧ್ಯೆ ಒಮ್ಮತವಿಲ್ಲದಿರುವುದರಿಂದ ಈ ಐತಿಹ್ಯವಿಷಯವು ನ್ಯೂನಾತಿರೇಕರೂಪದೋಷ ಭಾಗಿಯಾಗಿದೆಯೆಂದು ವ್ಯಕ್ತವಾಗುವುದು. ಹಿಂದೆ ಹೇಳಲಾಗಿರುವಂತೆ, ನಂದರಾಜನಿಗೆ 'ಶಿಶುನಾಗ' ಎಂಬ ಹೆಸರಿದ್ದಿತಾದುದರಿಂದ ಪುರಾಣಗಳಲ್ಲಿ ಹೇಳಲಾಗಿರುವ ಮೇಲ್ಕಂಡ ದಶಶೈಶುನಾಗರ ಸಂಬಂಧಿಯಾದ ಐತಿಹ್ಯವು ನಂದರಾಜನ ಸಂತತಿಯ ಅರಸರಿಗೆ ಅನ್ವಿತವಾದುದಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಅಂತೆಯೇ ನಂದರಾಜನ ತರುವಾಯ ಆಳಿದ ಮಹಾನಂದ-ಕಾಲಾಶೋಕ ಮತ್ತು ಇವನ ೯ ಜನ ಸುತರು ದಶಶೈಶುನಾಗರೆನ್ನಿಸಿಕೊಳ್ಳುವರು. ಮಹಾನಂದ-ಕಾಲಾಶೋಕನು ೪೬ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಇವನ ತರುವಾಯ ಆಳಿದ ೧೦ ಜನ ರಾಜರ ಒಟ್ಟು ರಾಜ್ಯಭಾರವು ೨೨ ವರ್ಷಗಳ ಅವಧಿಯುಳ್ಳದ್ದಾಗಿದ್ದು, ಈ ಹತ್ತು ಜನ ಅರಸರಲ್ಲಿ ಅಂತಿಮನಾದ ನಂದಚಂದ್ರಗುಪ್ತನು ೫ ವರ್ಷಕಾಲ ರಾಜ್ಯಭಾರಮಾಡಿರುವನಾದ್ದರಿಂದ ಇವನಿಂದ ಪೂರ್ವಭಾವಿಯಾಗಿ ರಾಜ್ಯಭಾರಮಾಡಿದ ೯ ಜನ ಅರಸರ ಒಟ್ಟುರಾಜ್ಯಭಾರಕಾಲವು (೨೨ – ೫=) ೧೭ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಫಲಿತವಾಗುವುದು. ಇದರಂತೆ ದಶಶೈಶುನಾಗರೆನ್ನಿಸಿಕೊಂಡ ಕಾಲಾಶೋಕ ಮತ್ತು ಅವನ ಸುತರಾದ ಭದ್ರಸೇನಾದಿ ೯ ಜನ ರಾಜರ ಒಟ್ಟು ರಾಜ್ಯಭಾರಕಾಲವು (೪೬+೧೭=)೬೩ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಫಲಿತವಾಗುವುದು. ಪುರಾಣಗಳ ಮೂಲ ಐತಿಹ್ಯದಲ್ಲಿಯೂ ದಶಶೈಶುನಾಗರ ರಾಜ್ಯಭಾರಕಾಲವನ್ನು ೬೩ ವರ್ಷಗಳ ಅವಧಿಯುಳ್ಳದ್ದನ್ನಾಗಿ ನಿರ್ದೇಶಿಸಲಾಗಿದ್ದು, ಇದು ಈಗ ಮತ್ಸ್ಯಪುರಾಣದಲ್ಲಿ ಉಳಿದುಬಂದಿರುವಂತೆ, ೩೬೩ ವರ್ಷಗಳ ಅವಧಿಯುಳ್ಳದ್ದೆನಿಸಿ ವ್ಯತ್ಯಸ್ತರೂಪ ತಳೆದಿರಬಹುದಾದ ಸಂಭವವಿದೆಯೆಂದು ಹೇಳಲವಕಾಶವಿದೆ. ಹಿಂದೆ ಉಲ್ಲೇಖಿಸಲಾಗಿರುವ ಮತ್ಸ್ಯಪುರಾಣದ 'ಶತಾನಿ ತ್ರೀಣಿ ಪೂರ್ಣಾನಿ ಷಷ್ಟಿವರ್ಷಾಧಿಕಾನಿತು' ಎಂಬ ಉಕ್ತಿಯ ಮೊದಲ ಪದವಾದ 'ಶತಾನಿ' ಎಂಬುದು 'ಗತಾನಿ' ಎಂಬುದರ ವ್ಯತ್ಯಸ್ತರೂಪವಾಗಿರಬಹುದೆಂದು ಪರಿಭಾವಿಸಬಹುದಾದಲ್ಲಿ, ಪುರಾಣಗಳಲ್ಲಿ ಮೂಲತಃ 'ದಶಶೈಶುನಾಗರ ರಾಜ್ಯಭಾರದ ಪೂರ್ಣ ೬೩ ವರ್ಷಗಳು ಕಳೆದವು' ಎಂಬರ್ಥದ ಐತಿಹ್ಯೋಕ್ತಿಯಿದ್ದಿತೆಂದು ಸ್ಫುಟಗೊಳ್ಳುವುದು. ದಶಶೈಶುನಾಗರ ವಿಷಯವಾಗಿ ಪೂರ್ವೋಲ್ಲಿಖಿತವಾಗಿರುವ ಪುರಾಣಗಳಐತಿಹ್ಯದಿಂದ ಸಂದಿಗ್ಧತೆಯೇರ್ಪಟ್ಟು ಚರಿತ್ರಕಾರರಲ್ಲಿ ಈ ವಿಷಯವಾಗಿ ಭಿನ್ನಾಭಿಪ್ರಾಯಗಳೇರ್ಪಡಲು ಅವಕಾಶವಾಗಿದೆ. ಇಂತೆಯೇ ಮಹಾಪದ್ಮನು ೮೮ ವರ್ಷಕಾಲ ರಾಜ್ಯಭಾರಮಾಡುವನೆಂದು[1] ಬ್ರಹ್ಮಾಂಡ ಮತ್ತು ಮತ್ಸ್ಯಪುರಾಣಗಳಲ್ಲಿ ಹೇಳಲಾಗಿರುವುದರ ವಿಷಯ

---

1 ಅಷ್ಟಾಶೀತಿತುವರ್ಷಾಣಿ ಪೃಥಿವೀಂ ಪಾಲಯಿಷ್ಯತಿ। ಬ್ರಹ್ಮಪುರಾಣ_ಅ. ೨೪. ಶ್ಲೋ. ಸಂ. ೧೩೧. ಅಷ್ಟಾಶೀತಿಸ್ತು ವರ್ಷಾಣಿ ಪೃಥಿವ್ಯಾಂ ಚ ಭವಿಷ್ಯತಿ। ಮತ್ಸ್ಯಪುರಾಣ_ಅ. ೨೭೨-ಶ್ಲೋ. ಸಂ. ೨೦.

ವಾಗಿಯೂ ಚರಿತ್ರಕಾರರಲ್ಲಿ ಪರಾಮರ್ಶೆ ನಡೆದಿದೆ. ಈ ೮೮ ವರ್ಷಗಳ ರಾಜ್ಯ ಭಾರಾವಧಿಯು, ಒಬ್ಬರಾಜನ ರಾಜ್ಯಭಾರಕಾಲವಾಗಿರದೆ, ಸಮಷ್ಟಿರೂಪದ ರಾಜ್ಯ ಭಾರಕಾಲವಾಗಿದೆಯೆಂದು ಗ್ರಹಿಸಬೇಕಾಗುವುದು. ಭದ್ರಸೇನನನ್ನು ವಡ್ಡಾರಾಧನೆ ಯಲ್ಲಿ 'ಪದ್ಮ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿರುವುದು ವಿದಿತವಿದೆ. ಇದರಿಂದ ಮಹಾಪದ್ಮನ ರಾಜ್ಯಭಾರಕಾಲವೆಂದು ನಿರ್ದೇಶಿತವಾಗಿರುವ ೮೮ ವರ್ಷಗಳ ಕಾಲ ಪರಿಮಾಣವು ಭದ್ರಸೇನ-ಪದ್ಮನ ರಾಜ್ಯಭಾರಾಂತ್ಯಸಮಯದ ಸೂಚಕವಾಗಿರುವು ದೆಂದು ಪರಿಭಾವಿಸಲವಕಾಶವಾಗುವುದು. ನಂದರಾಜ ಮತ್ತು ಮಹಾನಂದರಾಜರ ಒಟ್ಟು ರಾಜ್ಯಭಾರಕಾಲವು (೩೨+೪೬=) ೭೮ ವರ್ಷಗಳ ಅವಧಿಯುಳ್ಳದ್ದಾಗಿರು ವುದು. ಮಹಾನಂದನ ತರುವಾಯ ಭದ್ರಸೇನನು ೧೦ ವರ್ಷಕಾಲ ರಾಜ್ಯಭಾರ ಮಾಡಿರುವನೆಂದಾದಲ್ಲಿ ನಂದ, ಮಹಾನಂದ ಮತ್ತು ಭದ್ರಸೇನ-ಪದ್ಮರ ಒಟ್ಟು ರಾಜ್ಯ ಭಾರಕಾಲವು ೮೮ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಫಲಿತವಾಗುವುದು. ಈ ೮೮ ವರ್ಷಗಳ ರಾಜ್ಯಭಾರಕಾಲಾವಧಿಯು, ಪ್ರಕೃತಸಂದರ್ಭದ ರಾಜಸಂತ ತಿಯ ರಾಜ್ಯಭಾರಕಾಲಪರಿಮಾಣಗಳೊಡನೆ ಇನ್ನಾವರೀತಿಯಿಂದಲೂ ಸಮಾಯೋ ಜಿತವಾಗುವುದಿಲ್ಲವಾದ್ದರಿಂದ ನಂದ, ಮಹಾನಂದ ಮತ್ತು ಭದ್ರಸೇನರ ಒಟ್ಟು ರಾಜ್ಯ ಭಾರಕಾಲದ ಸೂಚಕವಾಗಿದೆಯೆಂದು ಗ್ರಹಿಸುವುದು ಸುಸಂಗತವೆನಿಸುವುದು. ಇದ ರಂತೆ ಭದ್ರಸೇನ-ಪದ್ಮನು ೧೦ ವರ್ಷಗಳ ಕಾಲವೂ ಅನಂತರ ಇವನ ಎಂಟು ಜನ ಸಹೋದರರು (೧೭–೧೦=) ೭ ವರ್ಷಗಳ ಕಾಲವೂ ತದನಂತರ ನಂದಚಂದ್ರಗುಪ್ತನು ೫ ವರ್ಷಗಳ ಕಾಲವೂ ರಾಜ್ಯಭಾರಮಾಡಿರುವರೆಂದು ವ್ಯಕ್ತಪಡುವುದು.

ಮೇಲ್ಕಂಡ ವಿಚಾರಸರಣಿಯಿಂದ ಸ್ಫುಟಗೊಂಡಿರುವ ಐತಿಹಾಸಿಕಾಂಶಗಳಾ ಧಾರದಿಂದ ಮಹಾನಂದ ಮತ್ತು ನಂದಚಂದ್ರಗುಪ್ತರ ಮಧ್ಯಕಾಲೀನವಾದ ಐತಿ ಹಾಸಿಕ ಪ್ರಸಂಗವು ಈ ಮುಂದಿನಂತೆ ರೂಪಿತವಾಗುವುದು.

ಶೈಶುನಾಗಿ ಕಾಕವರ್ಣಿಯು ಕೊಲೆಗೊಂಡ ಪ್ರಸಂಗದ ವಿಷಯವಾಗಿ ಹರ್ಷ ಚರಿತದಲ್ಲಿ ಉಕ್ತವಾಗಿರುವ ಅಂಶವನ್ನು ಕುರಿತು ಯವನರ ವಿವಂಚನೆಗೊಳಗಾಗಿ ಕಾಕವರ್ಣಿಯು ಮೃತನಾದನೆಂದು ಟೀಕಾಕಾರನು ಹೇಳಿರುವನೆಂದೂ ಮತ್ತು ಇಲ್ಲಿ 'ಯವನ' ಪದವು ಗ್ರೀಕ್‌ಜನರ ಸೂಚಕವಾಗಿರದೆ ಶಾಹಿಜನರ ಸೂಚಕವಾಗಿರುವು ದೆಂದೂ ಹಿಂದೆ ವಿವರಿಸಲಾಗಿದೆ. ಮಹಾನಂದ-ಕಾಕವರ್ಣಿಯ ಈ ಕೊಲೆಯ ಪ್ರಸಂ ಗದ ೨ ವರ್ಷಗಳ ಮುನ್ನ ಇವನ ಮಂತ್ರಿಯಾಗಿದ್ದ ಶಕಟಾಲನು ರಾಜಕೋಪಕ್ಕೆ ಪಾತ್ರನಾಗಿ ಮೃತ್ಯುವನ್ನಪ್ಪಿದ್ದನೆಂದು ಹೇಳಲವಕಾಶವಿದೆ.

ನವಮನಂದನ ಅಮಾತ್ಯನಾಗಿದ್ದ ಶಕಟಾಲನು ರಾಜನ ಕೋಪಕ್ಕೆ ಪಾತ್ರನಾಗಿ ಆತ್ಮಹತ್ಯೆಮಾಡಿಕೊಂಡ ಪ್ರಸಂಗವು ಪರಿಶಿಷ್ಟಪರ್ವದಲ್ಲಿ ಪ್ರರೂಪಿತವಾಗಿದೆ. ಈ ಕೃತಿ ಯಲ್ಲಿ ಪ್ರರೂಪಿತವಾಗಿರುವ ನಂದರಾಜಸಂತತಿಯ ಐತಿಹ್ಯದಂತೆ ೯ ಜನ ನಂದರಾಜ

ರನ್ನು ಮಾತ್ರ ಪರಿಗಣನೆಮಾಡಲಾಗಿದೆಯಾದುದದರಿಂದ ಶಕಟಾಲನನ್ನು ನವಮ ನಂದನ ಮಂತ್ರಿಯನ್ನಾಗಿ ನಿರ್ದೇಶಿಸಲಾಗಿದೆ. ಆದರೆ ಈ ಶಕಟಾಲನು ಮಹಾನಂದನ ಮಂತ್ರಿಯಾಗಿದ್ದನೆಂದು ಪ್ರಮಾಣೀಕರಿಸಲು ಆಧಾರವಿದೆ. ಸ್ಥೂಲಭದ್ರಾಚಾರ್ಯರು ತಮ್ಮ ತಂದೆಯಾದ ಶಕಟಾಲನ ಮರಣವಾರ್ತೆಯನ್ನು ಕೇಳಿ ಐಹಿಕವಿಷಯಗಳಲ್ಲಿ ವಿರಕ್ತಿಭಾವತಳೆದು ಯತಿದೀಕ್ಷೆಯನ್ನು ಸ್ವೀಕರಿಸಿದರೆಂದು ಪರಿಶಿಷ್ಟಪರ್ವದಲ್ಲಿ ಹೇಳಿದೆ. ಹೀಗೆ ದೀಕ್ಷೆಗೊಂಡ ಸ್ಥೂಲಭದ್ರಾಚಾರ್ಯರು ೨೪ ವರ್ಷ ಸಾಮಾನ್ಯ-ಯತಿಪರ್ಯಾಯದಲ್ಲಿದ್ದುದಾಗಿಯೂ ಅನಂತರ ೪೫ ವರ್ಷಕಾಲ ಆಚಾರ್ಯಪಟ್ಟಧರರಾಗಿದ್ದುದಾಗಿಯೂ ಶ್ವೇತಾಂಬರಜೈನಆಮ್ನಾಯದ ಐತಿಹ್ಯದಲ್ಲಿ ನಿರೂಪಿಸಲಾಗಿದೆ. ಇವರು ನಂದಚಂದ್ರಗುಪ್ತನ ರಾಜ್ಯಭಾರಾಂತ್ಯಸಮಯದಲ್ಲಿ ಆಚಾರ್ಯಪಟ್ಟಧರರಾದರೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಇವರು ಕ್ರಿ. ಪೂ. (೩೬೭+೨೪=) ೩೯೧ ರಲ್ಲಿ ದೀಕ್ಷಿತರಾಗಿರುವರೆಂದು ಅಧಿಗತವಾಗುವುದಲ್ಲದೆ, ಇದೇ ಸಮಯದಲ್ಲಿ ಶಕಟಾಲನು ಮೃತ್ಯುವನ್ನಪ್ಪಿರುವನೆಂದು ಸ್ಫುಟಗೊಳ್ಳುವುದು. ಮಹಾನಂದನ ರಾಜ್ಯಭಾರವು ಕ್ರಿ. ಪೂ. ೩೮೮ ರಲ್ಲಿ ಅಂತ್ಯಗೊಂಡಿದೆಯೆಂದು ಪ್ರತಿಪಾದಿಸಲಾಗಿದೆಯಾದುದರಿಂದ ಶಕಟಾಲನು ಮಹಾನಂದನ ಮಂತ್ರಿಯಾಗಿದ್ದನೆಂದೂ, ಇವನು ಮೃತ್ಯುವಶನಾದ ೩ ವರ್ಷಗಳ ಅನಂತರದಲ್ಲಿ ಮಹಾನಂದನು ಶಾಹಿಜನರ ವಿವಂಚನೆಗೊಳಗಾಗಿ ಮೃತ್ಯುವಶನಾಗಿರುವನೆಂದೂ ವ್ಯಕ್ತವಾಗುವುದು. ಮಹಾನಂದನ ತರುವಾಯ ಭದ್ರಸೇನನೂ ತದನಂತರ ಅವನ ಅಷ್ಟಸಹೋದರರೂ ರಾಜ್ಯಭಾರಮಾಡಿದರೆಂಬುದು ಮತ್ತು ಇವರೆಲ್ಲರನ್ನೂ ಮಹಾಪದ್ಮನು ವಂಚನೆಯಿಂದ ಕೊಲೆಗೈದನೆಂಬುದು ಶ್ರುತಪಟ್ಟಿದೆ. ಹೀಗೆ ಮಂತ್ರಿ-ಶಕಟಾಲ, ಮಹಾನಂದ ಮತ್ತು ಇವನ ಒಂಭತ್ತು ಜನ ಸುತರ ಕೊಲೆಯ ಪ್ರಸಂಗದ ಹಿನ್ನೆಲೆಯಲ್ಲಿ ರಾಜಮನೆತನದ ಅಂತಶ್ಯತ್ರುಗಳ ಕೈವಾಡವಿದ್ದಿತೆಂದು ಮತ್ತು ಮಹಾಪದ್ಮನ ತಾಯಿಯ ಬಂಧುವರ್ಗದವರಾದ ಶಾಹಿಜನರೇ ಈ ಅಂತಶ್ಯತ್ರುಗಳಾಗಿದ್ದಿರಬೇಕೆಂದು ಪರಿಭಾವಿಸಬೇಕಾಗುವುದು. ಪ್ರಾಯಶಃ ಈ ಅಂತಶ್ಯತ್ರುಗಳೇ ಭದ್ರಸೇನನಿಗೆ ರಾಜ್ಯಭಾರದ ಪಟ್ಟಕಟ್ಟಿ ತಮ್ಮ ಹಿತಾಸಕ್ತಿಯನ್ನು ಸಾಧಿಸಿಕೊಂಡಿದ್ದಾರೆ. ಭದ್ರಸೇನನ ರಾಜ್ಯಾಭಿಷೇಕಸಮಯದಲ್ಲಿ ಆದಿನ್ನೂ ಕಿರಿಯಪ್ರಾಯದವನಾಗಿದ್ದ ಮಹಾಪದ್ಮನು ತನ್ನ ಹಿತವಂದಿಗರ ಸಹಾಯದಿಂದ ರಾಜನ ಆಪ್ತತ್ವವನ್ನು ಗಳಿಸಿ ಪ್ರಧಾನಿಪಟ್ಟಪಡೆದಿದ್ದಾನೆ. ಅನಂತರ ಇವನು ಭದ್ರಸೇನನ ಮಡದಿಯನ್ನು ತನ್ನವಳನ್ನಾಗಿಸಿಕೊಂಡು ಅವಳ ಬೆಂಬಲಪಡೆದು ಭದ್ರಸೇನನನ್ನು ಕೊಲೆಮಾಡಿದ್ದಾನೆ. ತದನಂತರ ಇತರ ಎಂಟುಜನ ರಾಜಕುಮಾರರಿಗೆ ರಾಜಪಟ್ಟಕಟ್ಟಿ ಅವರೆಲ್ಲರನ್ನೂ ಏಳುವರ್ಷಗಳ ಅವಧಿಯೊಳಗಾಗಿ ಕೊಲೆಮಾಡಿದ್ದಾನೆ. ಈ ಎಂಟುಜನರೂ ಮಹಾಪದ್ಮನ ಬೆಂಬಲದಿಂದ ರಾಜಗದ್ದುಗೆಯನ್ನೇರಿದ್ದಾರಾದರೂ ಮಹಾಪದ್ಮನ ಸರ್ವಾಧಿಕಾರ ಮತ್ತು ದುರ್ವ್ಯವಹಾರಗಳನ್ನು ವಿರೋಧಿಸಿ

ರಾಜ್ಯ ಮತ್ತು ಸ್ವಜನ ಹಿತಸಾಧನೆಗಾಗಿ ಯತ್ನಿಸಿ ಇವರೆಲ್ಲರೂ ಅಪಮೃತ್ಯುವಿನ ಪಾಶಕ್ಕೊಳಗಾಗಿದ್ದಾರೆ.

ನಂದಚಂದ್ರಗುಪ್ತನ ಐತಿಹ್ಯವು ಮೌರ್ಯ ಅಶೋಕನ ಮೊಮ್ಮಗನಾದ ಸಂಪ್ರತಿಯ ಐತಿಹ್ಯವಾಗಿ ಪರಿವರ್ತನೆಗೊಂಡು ದಿವ್ಯಾವದಾನ, ವಡ್ಡಾರಾಧನೆ ಮತ್ತು ಪರಿಶಿಷ್ಟಪರ್ವಗಳಲ್ಲಿ ಪ್ರರೂಪಿತವಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಆದ್ದರಿಂದ ಸಂಪ್ರತಿಗೆ ರಾಜ್ಯಭಾರವು ಲಭ್ಧವಾದ ವಿಷಯವಾಗಿ ಈ ಕೃತಿಗಳಲ್ಲಿ ಪ್ರರೂಪಿತವಾಗಿರುವ ಪ್ರಸಂಗವನ್ನು ನಂದಚಂದಗುಪ್ತನಿಗೆ ಸಂಬಂಧಿಸಿದ ಐತಿಹ್ಯವನ್ನಾಗಿ ಗ್ರಹಿಸಬೇಕಾಗುವುದು. ಕುಣಾಲನು ಚಿಕ್ಕವಯಸ್ಸಿನವನಿರುವಾಗ ತನ್ನ ತಂದೆ ಅಶೋಕನಿಂದ ಕುಮಾರ ಭುಕ್ತಿಯೆನಿಸಿ ದೊರೆತಿದ್ದ ಉಜ್ಜಯಿನಿಯಲ್ಲಿ ವಾಸಿಸುತ್ತಿದ್ದನೆಂದೂ, ಕೂಟಲೇಖದ ಕಾರಣ ಕುರುಡನಾದ ಕುಣಾಲನಿಗೆ ಯುವರಾಜಪಟ್ಟಕಟ್ಟುವುದು ಯುಕ್ತವಲ್ಲೆಂದು ಭಾವಿಸಿದ ಅಶೋಕನು ತನ್ನ ಮತ್ತೊಬ್ಬ ಮಡದಿಯಲ್ಲಿ ಜನಿಸಿದ ಕುಮಾರನಿಗೆ ಉಜ್ಜಯಿನಿಯನ್ನಿತ್ತು ಕುಣಾಲನಿಗೆ ಜೀವಿಕೆಗಾಗಿ ಬೇರೊಂದು ಗ್ರಾಮವನ್ನು ಕೊಟ್ಟಿದ್ದಾಗಿಯೂ, ತದನಂತರ ಕುಣಾಲನು ತನಗೆ ಪುತ್ರಪ್ರಾಪ್ತಿಯಾದ ವಿಷಯವನ್ನು ತಿಳಿಸಿ, ರಾಜ್ಯಭಾರವನ್ನು ತನ್ನ ಮಗನಿಗೆ ಕೊಡಬೇಕೆಂದು ಪ್ರಾರ್ಥಿಸಲು, ಅಶೋಕನು, ಹತ್ತುದಿನಗಳ ವಯಸ್ಸಿನ ಕುಣಾಲಸೂನುವಿಗೆ 'ಸಂಪ್ರತಿ' ಎಂದು ನಾಮಕರಣಮಾಡಿ ರಾಜ್ಯಾಭಿಷೇಕಮಾಡಿದುದಾಗಿ ಪರಿಶಿಷ್ಟಪರ್ವದಲ್ಲಿ ಹೇಳಿದೆ. ಕಾಲಾಶೋಕ (=ಮಹಾನಂದ=ವೀರಸೇನ) ನು ಪಾಟಲೀಪುತ್ರನಗರವನ್ನು ರಾಜ್ಯಾಡಳಿತದ ಕೇಂದ್ರವನ್ನಾಗಿಮಾಡಿಕೊಂಡನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಇಷ್ಟಾದರೂ, ವಂಶಾನುಕ್ರಮದಿಂದ ಅವಂತೀರಾಜಮನೆತನದ ಅರಸನಾಗಿದ್ದ ಕಾಲಾಶೋಕನು ತಾಯ್ನೆಲವಾದ ಉಜ್ಜಯಿನಿಯನ್ನು ತನ್ನ ರಾಜ್ಯದದ್ವಿತೀಯಕೇಂದ್ರವನ್ನಾಗಿ ಮಾಡಿಕೊಂಡಿದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಅಂತೆಯೇ 'ಕುಣಾಲನು ಚಿಕ್ಕವಯಸ್ಸಿನವನಿದ್ದಾಗ ಕುಮಾರಭುಕ್ತಿಯೆನಿಸಿ ದೊರೆತಿದ್ದ ಉಜ್ಜಯಿನಿಯಲ್ಲಿ ವಾಸಿಸುತ್ತಿದ್ದನು 'ಎಂಬ ಮೇಲ್ಕಂಡ ಪ. ಪರ್ವದ ಹೇಳಿಕೆಯು ಕಾಲಾಶೋಕ (=ಮಹಾನಂದ= ವೀರಸೇನ)ನ ಸುತನಾದ ಸಿಂಹನಿಗೆ ಸಮುಚಿತರೀತಿಯಿಂದ ಅನ್ವಿತವಾಗುವುದು. ಇಂತೆಯೇ ಹತ್ತುದಿನದ ಕೂಸಾದ ಸಂಪ್ರತಿಗೆ ರಾಜಪಟ್ಟಕಟ್ಟಿದನೆಂಬ ಮೇಲ್ಕಂಡ ಪ್ರಸಂಗವು ವಸ್ತುತಃ, ವೀರಸೇನ-ಕಾಲಾಶೋಕನು ತನ್ನ ಮೊಮ್ಮಗನಾದ ನಂದಚಂದ್ರಗುಪ್ತನಿಗೆ ಯುವರಾಜಪಟ್ಟವನ್ನು ಕಟ್ಟಿದ ಐತಿಹ್ಯವಾಗಿದೆ. ಕಾಲಾಶೋಕನು ನಂದಚಂದ್ರಗುಪ್ತನನ್ನು ಯುವರಾಜನನ್ನಾಗಿ ಅಭಿಷೇಕಿಸಿದುದಲ್ಲದೆ ಪ್ರಾಯಶಃ ಅವನನ್ನು ಉಜ್ಜಯಿನಿಯಲ್ಲಿ ರಾಜಪ್ರತಿನಿಧಿಯನ್ನಾಗಿ ನಿಯಮಿಸಿದ್ದಾನೆ. ಹೀಗೆ ನಂದಚಂದ್ರಗುಪ್ತನು ಮಗಧರಾಜ್ಯದ ರಾಜನಾಗುವ ಭಾಧ್ಯತೆಯನ್ನು ಹೊಂದಿದ್ದನಾದರೂ ಕಾಲಾಶೋಕನ ಮರಣಾನಂತರ ಭದ್ರಸೇನನು ತನ್ನ ಬೆಂಬಲಿಗರ ಸಹಕಾರದಿಂದ ರಾಜಗದ್ದುಗೆಯನ್ನೇರಿದ್ದಾನೆ. ಇಂತೆಯೇ ಭದ್ರಸೇನನ ಅನಂತರ ಅವನ ಅಪ್ಪಸಹೋದರರು ಮಹಾ

ಪದ್ಮನ ಬೆಂಬಲದಿಂದ ರಾಜಗದ್ದುಗೆಯನ್ನೇರಿ ಅವನಿಂದಲೇ ಹತರಾಗಿದ್ದಾರೆ. ಈ ಸಮಯದಲ್ಲಿನ್ನೂ ಮಹಪದ್ಮನಿಗೆ ತಾನೇ ರಾಜಗದ್ದುಗೆಯನ್ನೇರಲು ಅವಶ್ಯಕವಾದ ಸಹಕಾರ ಸೌಲಭ್ಯಗಳು ರೂಪಿತವಾಗಿದ್ದಿಲ್ಲವಾದುದರಿಂದ ನಂದಚಂದ್ರಗುಪ್ತನಿಗೆ ರಾಜ ಪಟ್ಟಕಟ್ಟಿದ್ದಾನೆ. ಈ ರೀತಿಯಾಗಿ ಮಗಧರಾಜ್ಯದ ಸಾಮ್ರಾಟನೆನಿಸಿಕೊಂಡ ನಂದಚಂದ್ರಗುಪ್ತನಿಗೆ ಅವನ ಚಿಕ್ಕಪ್ಪಂದಿರಾದ ಭದ್ರಸೇನಾದಿ ಸಹೋದರರು ಕ್ಷಿಪ್ರ ರೀತಿಯಿಂದ ಮೃತ್ಯುವಶರಾದುದರ ಕಾರಣವು ತಿಳಿದಿರಲಿಲ್ಲವೆಂದು ಹೇಳಲಾಗುವುದಿಲ್ಲ. ಅಂತೆಯೇ ಇವನು ರಾಜನಾಗಿ ಅಭಿಷಿಕ್ತನಾದ ಅನಂತರ ರಾಜ್ಯದ ಪ್ರಧಾನಕೇಂದ್ರ ವಾಗಿದ್ದ ಪಾಟಲೀಪುತ್ರನಗರಕ್ಕೆ ಹೋಗಿ ನೆಲಸದೆ, ಚಿಕ್ಕಂದಿನಿಂದಲೂ ಅಧಿ ಷ್ಠಾನವನ್ನಾಗಿ ಹೊಂದಿದ್ದ ಉಜ್ಜಯಿನಿಯನ್ನೇ ತನ್ನ ರಾಜಧಾನಿಯನ್ನಾಗಿಮಾಡಿ ಕೊಂಡಿದ್ದಾನೆ. ಇದರಿಂದ ಪಾಟಲೀಪುತ್ರನಗರದಲ್ಲಿ ರಾಜಪ್ರತಿನಿಧಿಯೆನಿಸಿ ಅಧಿ ಕಾರಾರೂಢನಾಗಿದ್ದ ಮಹಾಪದ್ಮನು ರಾಜ್ಯದ ಸೇನೆ ಹಾಗೂ ಆಡಳಿತದ ಮುಖ್ಯ ಅಧಿಕಾರಸ್ಥಾನಗಳಲ್ಲಿ ತನ್ನ ತಾಯಿಯ ಬಂಧುವರ್ಗದ ಶಾಹಿಜನರನ್ನು ನಿಯಮಿಸು ವುದರ ಮೂಲಕ ತನ್ನ ಅಧಿಕಾರವನ್ನು ಭದ್ರಪಡಿಸಿಕೊಂಡು ಸರ್ವತೋಮುಖವಾಗಿ ಶಕ್ತಿಸಂವರ್ಧನೆಮಾಡಿಕೊಂಡಿದ್ದಾನೆ. ನಂದಚಂದ್ರಗುಪ್ತನು ತನ್ನ ಐದು ವರ್ಷ ಗಳ ರಾಜ್ಯಭಾರಸಮಯದಲ್ಲಿ ಮಹಾಪದ್ಮನ ಪ್ರಾಬಲ್ಯವನ್ನು ಮುರಿಯಲು ಯತ್ನಿಸ ದಿರಲಾರನು. ಆದರೆ ಈ ಯತ್ನದ ಫಲವಾಗಿ ಅವನಿಗೆ ಮತ್ತು ಅವನ ಆಪ್ತಬಂಧು ವರ್ಗಕ್ಕೆ ಮಹಾಪದ್ಮನಿಂದಾಗಬಹುದಾದ ಅಪಾಯವು ಪರಿವರ್ಧಿತವಾಗಿರಬಹು ದಲ್ಲದೆ ಮತ್ತಾವ ಪ್ರಯೋಜನವೂ ಆಗಿರಲಾರದು. ಮಹಾಪದ್ಮನ ಕುಟಿಲತಂತ್ರಕ್ಕೆ ಭದ್ರಸೇನಾದಿಸಹೋದರರು ಬಲಿಯಾಗಿ ಮೃತರಾದಂತೆ ನಂದಚಂದ್ರಗುಪ್ತನು ಮೃತ ನಾಗದಿದ್ದರೂ, ಶ್ರುತಕೇವಲಿ ಭದ್ರಬಾಹುಆಚಾರ್ಯರ ಐತಿಹ್ಯದಿಂದ ಸೂಚಿತವಾಗು ವಂತೆ, ಇವನು ಮುನಿದೀಕ್ಷೆಪಡೆದನೆಂದು ವ್ಯಕ್ತವಾಗುವುದು. ಮುನಿದೀಕ್ಷೆಪಡೆಯುವ ಮುನ್ನ ನಂದಚಂದ್ರಗುಪ್ತನು ತನ್ನ ಮಗನಾದ ಸಿಂಹಸೇನನಿಗೆ ರಾಜ್ಯಭಾರದ ಪಟ್ಟ ಕಟ್ಟಿದನೆಂದು ವಡ್ಡಾರಾಧನೆಯ ಭದ್ರಬಾಹುಭಟ್ಟಾರರ ಕಥೆಯಿಂದ ಸೂಚಿತವಾಗು ವುದು.[1] ಇದರಂತೆ. ನಂದಚಂದ್ರಗುಪ್ತನು ಉಜ್ಜಯಿನಿಯಲ್ಲಿ ಆಚಾರ್ಯ ಭದ್ರ ಬಾಹು ಮುನಿಗಳಿಂದ ಮುನಿದೀಕ್ಷೆಪಡೆಯುವಮುನ್ನ ತನ್ನ ಮಗನಾದ ಸಿಂಹಸೇನನಿಗೆ

---

1 ನಂದಚಂದ್ರಗುಪ್ತನನ್ನು 'ನಂದೇಂದು' ಎಂಬ ಪರ್ಯಾಯರೂಪದ ಹೆಸರಿ ನಿಂದ ವಾಯುಪುರಾಣದಲ್ಲಿ ನಿರ್ದೇಶಿಸಲಾಗಿರುವಂತೆ 'ನವನಂದ', 'ನವೇಂದು', 'ನೂತನ ಚಂದ್ರ' ಎಂಬ ಹೆಸರುಗಳಿಂದಲೂ ನಿರ್ದೇಶಿಸುವ ಪರಿಪಾಠವಿದ್ದಿರಬಹುದೆ ಎಂಬ ಪರಿ ಭಾವನೆಗೆಡೆಯಿದೆಯಲ್ಲದೆ, ಪ್ರಸಿದ್ಧ ನಾಟಕಕಾರನಾದ ಭಾಸಕವಿಯು ಈ ನವೇಂದುವಿನ ಸುತನಾದ ಸಿಂಹಸೇನನ ಆಸ್ಥಾನಕವಿಯಾಗಿದ್ದಿರಬಹುದೆ ಎಂಬ ಪರಾಮರ್ಶೆಗೂ ಅವ ಕಾಶವಿದೆ.

ಮಗಧರಾಜ್ಯಭಾರದ ಪಟ್ಟಕಟ್ಟಿರುವನೆಂಬ ಐತಿಹ್ಯದಲ್ಲಿ ಅಸಂಗತವೆನಿಸುವಂತಹು ದೇನಿಲ್ಲ. ಪಾಟಲೀಪುತ್ರನಗರದಲ್ಲಿ ರಾಜಪ್ರತಿನಿಧಿಯೆನಿಸಿ ರಾಜ್ಯಾಡಳಿತದ ಸರ್ವಾಧಿ ಕಾರವನ್ನು ತನ್ನದಾಗಿಸಿಕೊಂಡಿದ್ದ ಮಹಾಪದ್ಮನು ನಂದಚಂದ್ರಗುಪ್ತನ ನಿರ್ಗಮನಾ ನಂತರದ ಸ್ವಲ್ಪಸಮಯದಲ್ಲಿಯೇ ಮಗಧರಾಜ್ಯದ ಸಾಮ್ರಾಟನೆನಿಸಿ ರಾಜಗದ್ದುಗೆ ಯನ್ನು ಆಕ್ರಮಣಮಾಡಿರುವನೆಂದು ಹೇಳಲವಕಾಶವಿದೆ. ಪರಿಶಿಷ್ಟಪರ್ವದಲ್ಲಿ ಪ್ರರೂಪಿತವಾಗಿರುವ ನಂದರಾಜನ ಐತಿಹ್ಯದಲ್ಲಿ ಮಹಾಪದ್ಮನಂದನ ಐತಿಹ್ಯವು ಸಂಕ ಲಿತವಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಅಂತೆಯೇ ಮಗಧರಾಜನಾಗಿ ನಂದನು ಅಭಿಷಿಕ್ತನಾದ ಸಮಯದಲ್ಲಿ ನಾಪಿತಸೂನುವೆಂಬ ತಿರಸ್ಕಾರಭಾವದಿಂದ ಅವನನ್ನು ಸನ್ಮಾನಿಸದಿದ್ದ ಸಾಮಂತರಾಜರನ್ನು ಲೇಪ್ಯಮಯರಾದ ಪ್ರತೀಹಾರರಲ್ಲಿ ಅಧಿಷ್ಠಿತಳಾದ ಅವನ ಪುಣ್ಯದೇವತೆಯು ಕೊಂದುಹಾಕಿದಳೆಂದು ಪರಿಶಿಷ್ಟಪರ್ವದಲ್ಲಿ ಹೇಳಲಾಗಿರುವ ಪ್ರಸಂಗವು ಮಹಾಪದ್ಮನಂದನ ಐತಿಹ್ಯವಾಗಿದೆಯೆಂದು ಪುರಾಣ ಗಳಲ್ಲಿ ಇವನ ವಿಷಯವಾಗಿ ಉಳಿದುಬಂದಿರುವ 'ಕ್ಷತ್ರಿಯಾಂತಕೃನ್ನೃಪಃ' ಎಂಬ ಐತಿಹ್ಯದಿಂದ ಸಮರ್ಥಿತವಾಗುವುದು. ಇದರಂತೆ, ನಂದಚಂದ್ರಗುಪ್ತನು ಮುನಿದೀಕ್ಷೆ ಪಡೆಯುವ ಮುನ್ನ ಅವನ ಮಗನಾದ ಸಿಂಹಸೇನನಿಗೆ ಮಗಧರಾಜ್ಯಭಾರದ ಪಟ್ಟಕಟ್ಟಿ ದನಾದರೂ, ತದನಂತರ ಸ್ವಲ್ಪಕಾಲದಲ್ಲಿಯೇ ಪಾಟಲೀಪುತ್ರನಗರದಲ್ಲಿ ಮಹಾಪದ್ಮನು ರಾಜಗದ್ದುಗೆಯನ್ನೇರಿ ಮಗಧರಾಜ್ಯದ ಸಾಮ್ರಾಟನೆನಿಸಿ ಅಭಿಷಿಕ್ತನಾಗಿರುವನೆಂದೂ ಮತ್ತು ಇವನ ಸಾಮ್ರಾಟತನವನ್ನು ಮನ್ನಿಸದೆ ವಿರೋಧಿಗಳಾಗಿ ಎದುರು ನಿಂತ ಕ್ಷತ್ರಿಯರಾಜರೆಲ್ಲರನ್ನೂ ಇವನು ನಿರ್ಮೂಲಗೊಳಿಸಿರುವನೆಂದೂ ಫಲಿತವಾಗುವುದು.

ನಂದರಾಜನು ಮಗಧರಾಜನಾಗಿ ಅಭಿಷಿಕ್ತನಾದ ಅನಂತರ ಅವಂತಿ ಮತ್ತು ಮಗಧರಾಜ್ಯಗಳು ಏಕಾಧಿಪತ್ಯದ ಪ್ರಭುತ್ವಕ್ಕೊಳಪಟ್ಟುವಾದ್ದರಿಂದ ಈ ಒಕ್ಕೂಟದ ಸಾಮ್ರಾಜ್ಯವು ಉತ್ತರಭಾರತದ ರಾಜ್ಯಾಧಿಪತ್ಯಗಳಲ್ಲಿ ಬಹು ಪ್ರಭಾವಶಾಲಿಯಾದ ಪ್ರಮುಖಸ್ಥಾನವನ್ನು ಗಳಿಸಿದೆಯೆಂಬುದರಲ್ಲಿ ಸಂಶಯವಿಲ್ಲ. ಇಷ್ಟಲ್ಲದೆ, ಚರಿತ್ರೆಯ ನೋಟಕ್ಕೆ ನಿಲುಕುವಂತೆ ಪ್ರಪ್ರಥಮವಾಗಿ, ಉತ್ತರಭಾರತಸೀಮೆಯಲ್ಲಿ ಪಂಜಾಬು ಪ್ರದೇಶವನ್ನು ಸ್ವಾಯತ್ತೀಗೊಳಿಸಿಕೊಂಡು ಇತರ ರಾಜ್ಯಭಾಗಗಳನ್ನೂ ಆಕ್ರ ಮಿಸಲು ಹವಣಿಸಿದ್ದು ಭಾರತೀಯರ ಪೌರುಷ ಮತ್ತು ಆತ್ಮಗೌರವವನ್ನು ಪ್ರಶಿ ಸುವಂತಿದ್ದ ಪಾರಸೀಕಶಾಹಿರಾಜಪ್ರತಿನಿಧಿಗಳನ್ನು ಪರಾಜಯಗೊಳಿಸಿದ ನಂದ ರಾಜನಿಂದ ಭಾರತೀಯರ ಗೌರವವು ಪುನಃ ಪ್ರತಿಷ್ಠಿತವಾಗಿದೆಯೆಂಬುದರಲ್ಲಿ ಸಂಶಯ ವಿಲ್ಲ. ನಂದರಾಜನ ಈ ವಿಜಯದಿಂದಾಗಿ ಮಗಧಸಾಮ್ರಾಜ್ಯವು ಮತ್ತೂ ವಿಸ್ತೃತ ಗೊಂಡುದಲ್ಲದೆ ಭಾರತೀಯ ಕ್ಷತ್ರಿಯಮನೆತನದ ಅನೇಕ ರಾಜರು ಇವನ ಸಾಮಂತ ರಾಗಿದ್ದಾರೆ. ಆದ್ದರಿಂದ ನಂದರಾಜನ ಕಾಲದಲ್ಲಿ ಮಗಧರಾಜ್ಯವು ಬಹು ಪ್ರಭಾವ

ಶಾಲಿಯಾದ ವಿಶಾಲ ಸಾಮ್ರಾಜ್ಯವಾಗಿ ರೂಪುಗೊಂಡಿದೆಯೆಂದು ಹೇಳಲವಕಾಶವಾಗುವುದು. ನಂದರಾಜನ ತರುವಾಯ ಮಹಾನಂದನು ತನ್ನ ಸಾಮಂತರಾಜರಾಗಲು ಒಪ್ಪದಿದ್ದ ಇತರ ಅನೇಕ ರಾಜರನ್ನು ಗೆದ್ದು ಉತ್ತರಭಾರತದೇಶವನ್ನು ಏಕಚ್ಛತ್ರಾಧಿಪತ್ಯವಾಗಿಸಿರುವನೆಂದು ಬೃ. ಕ. ಕೋಶದ ವ್ಯಂಜನಕಥಾನಕದಿಂದ ಸೂಚಿತವಾಗುವುದು. ಇವನ ತರುವಾಯ ಮಗಧರಾಜ್ಯದ ರಾಜಮನೆತನದಲ್ಲಿ ಏರ್ಪಟ್ಟ ವಿಷಮಪರಿಸ್ಥಿತಿಯ ಪರಿಣಾಮವಾಗಿ ಈ ಮಹಾಸಾಮ್ರಾಜ್ಯದ ಹಿತಚಿಂತಕರೂ ಬೆಂಬಲಿಗರೂ ಆಗಿದ್ದ ಭಾರತೀಯ ಕ್ಷತ್ರಿಯ ಮನೆತನಗಳ ರಾಜರು ಮಹಾಪದ್ಮನ ವಿರೋಧಿಗಳಾಗತೊಡಗಿದ್ದಾರೆ. ಆದರೆ ಶಾಹಿಕುಲದವರ ಬೆಂಬಲಹೊಂದಿದ್ದ ಮಹಾಪದ್ಮನು ತನ್ನ ವಿರೋಧಿಗಳೆನಿಸಿದ ಭಾರತದ ಕ್ಷತ್ರಿಯವಂಶಜರಾದ ರಾಜರುಗಳನ್ನು ನಿರ್ಮೂಲಗೊಳಿಸಿದ್ದಾನೆ. ಅಂತೆಯೇ ಮಹಾಪದ್ಮನ ವಿಷಯವಾಗಿ ಪುರಾಣಗಳಲ್ಲಿ 'ಕ್ಷತ್ರಿಯಾಂತಕೃನ್ನೃಪಃ' ಎಂಬ ಐತಿಹ್ಯವು ಉಳಿದುಬಂದಿದೆ.[1]

ಮಹಾಪದ್ಮನ ತರುವಾಯ ರಾಜ್ಯಭಾರಮಾಡಿದ ಅವನ ಅಷ್ಟಸುತರನ್ನು ಕೌಟಿಲ್ಯನು ಹನ್ನೆರಡು ವರ್ಷಗಳ ಅವಧಿಯಲ್ಲಿ ವಧೆಗೊಳಿಸಿ, ಚಂದ್ರಗುಪ್ತನಿಗೆ ರಾಜಪಟ್ಟಕಟ್ಟಿದನೆಂದು ಮತ್ಸ್ಯಪುರಾಣದಲ್ಲಿ ಹೇಳಿರುವುದು ವಿದಿತವಿದೆ.[2] ಇಂತೆಯೇ ಮಗಧರಾಜ್ಯದಲ್ಲಿ ನಂದರಾಜಸಂತತಿಯ ಆಳ್ವಿಕೆಯನ್ನು ಕೊನೆಗಾಣಿಸಲು ಚಾಣಕ್ಯನು ಹನ್ನೆರಡುವರ್ಷಕಾಲ ಹೋರಾಟನಡೆಸಿದನೆಂದು ವಡ್ಡಾರಾಧನೆಯ ಹೇಳಿಕೆಯಿಂದಲೂ ಸೂಚಿತವಾಗುವುದು.

ಚಾಣಕ್ಯನು ನಂದರಾಜಸಂತತಿಯನ್ನು ನಿರ್ಮೂಲಗೊಳಿಸಿದ ಐತಿಹ್ಯಸೂಚಕವಾದ ಮುದ್ರಾರಾಕ್ಷಸನಾಟಕದ ಈ ಮುಂದಿನ ಉಕ್ತಿಗಳು ಪ್ರಕೃತಸಂದರ್ಭದಲ್ಲಿ ವಿಶೇಷ ಗಮನಾರ್ಹವಾಗಿವೆ.

ಚಾಣಕ್ಯ: "ಅಥವಾ ಎಲ್ಲಜನರೆದುರಿನಲ್ಲಿ ನಂದವಂಶವಧೆಯನ್ನು (ಕುರಿತು) ಪ್ರತಿಜ್ಞೆಮಾಡಿದ ನನ್ನಿಂದ ದುಸ್ತರವಾದ (ಆ) ಪತಿಜ್ಞಾನದಿಯು ದಾಟಲ್ಪಟ್ಟಿತು...." [ಅಂಕ ೧]

---

1 ಗುಣಾಢ್ಯಕವಿರಚಿತವಾದ ಬೃಹತ್ಕಥಾಧಾರದಿಂದ ರಚಿತವಾಗಿರುವ ಬೃಹತ್ಕಥಾಮಂಜರಿಯೇ ಮೊದಲಾದ ಕೃತಿಗಳಲ್ಲಿ ಮಹಾಪದ್ಮನನ್ನು 'ಯೋಗನಂದ' ಎಂಬ ಹೆಸರಿನಿಂದ ನಿರ್ದೇಶಿಸಿರುವಂತೆ ಕಂಡುಬರುತ್ತದೆ. ಇವನ ಆಪ್ತರೆನಿಸಿಕೊಂಡಿದ್ದವರಲ್ಲಿ ಪಾಣಿನಿಆಚಾರ್ಯರಿಂದ ರಚಿತವಾಗಿರುವ ಅಷ್ಟಾಧ್ಯಾಯೀ ವ್ಯಾಕರಣಕ್ಕೆ ವಾರ್ತಿಕೆಯನ್ನು ರಚಿಸಿದ ಕಾತ್ಯಾಯನಾಚಾರ್ಯರು ಒಬ್ಬರಾಗಿದ್ದರೆಂದು ಹೇಳಲವಕಾಶವಿದೆ.

2 ಉದ್ಧರಿಷ್ಯತಿ ಕೌಟಲ್ಯಃ ಸಮೈರ್ದ್ವಾದಶಭಿಃಸುತಾನ್ । ಅ. ೨೭೨- ಶ್ಲೋ. ೨೨

ಮತ್ತೂ :

"ಹಿಂದೆ ಅಗ್ರಾಸನದಿಂದ ಎಳೆಯಲ್ಪಟ್ಟು ಸ್ವಾಧೀನ ತಪ್ಪಿದ ನನ್ನನ್ನು ಯಾರು ರಾಜಭಯದಿಂದ ಬಾಗಿದ (ಹಾಗೂ) ಧಿಕ್ಕಾರಶಬ್ದಗರ್ಭಿತವಾದ ಮುಖಗಳೊಡನೆ ಸಂತಾಪಯುಕ್ತರಾಗಿ ನೋಡಿದರೋ ಆ ಜನರು ಈಗ ಅಂತೆಯೇ ಪರ್ವತಶಿಖರದಿಂದ ಸಿಂಹದಿಂದ ಕೆಡವಲ್ಪಟ್ಟ ಸಲಗನನ್ನೋಪಾದಿಯಲ್ಲಿ ನನ್ನಿಂದ ಸಿಂಹಾಸನದಿಂದ ಸಂತತಿ ಸಹಿತನಾಗಿ ಉರುಳಿಸಲ್ಪಟ್ಟಿರುವ ನಂದನನ್ನು ಕಾಣುತ್ತಿರುವರು" [ಅಂಕ-೧; ಶ್ಲೋ.-೧೧]

ನನ್ನಿಂದ: "ಭೂಮಿಗೆ ಹೃದಯಶಲ್ಯರಂತಿದ್ದ ನವನಂದರು ನಿರ್ಮೂಲಗೊಳಿಸಲ್ಪಟ್ಟರು...." [ಅಂಕ-೧; ಶ್ಲೋ.-೧೩]

"....(ಅಮಾತ್ಯ) ರಾಕ್ಷಸನ ಕಣ್ಣೆದುರಿನಲ್ಲಿಯೇ, ಒಬ್ಬನಾದಮೇಲೊಬ್ಬನಂತೆ ನಂದರು (ಬೇರಾವನಿಂದ) ಹತರಾದರು" [1]

ಐತಿಹಾಸಿಕವಸ್ತುಪ್ರಧಾನವಾದ ಮುದ್ರಾರಾಕ್ಷಸನಾಟಕದ ಈ ಉಕ್ತಿಗಳು ಚಾಣಕ್ಯನಿಂದ ಮಹಾಪದ್ಮ ಮತ್ತು ಅವನ ಅಷ್ಟಸುತರು ಹತರಾದ ಐತಿಹ್ಯಪ್ರಸಂಗವನ್ನು ಪ್ರತಿಬಿಂಬಿಸುತ್ತವೆಯೆಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಚಾಣಕ್ಯನು ಹನ್ನೆರಡುವರ್ಷಕಾಲ ಸತತವಾಗಿ ಹೋರಾಟನಡೆಸಿ ಮಹಾಪದ್ಮಾದಿ ನವನಂದರನ್ನು ವಧೆಗೊಳಿಸಿ ಮೌರ್ಯಚಂದ್ರಗುಪ್ತನಿಗೆ ಮಗಧರಾಜ್ಯದ ಪಟ್ಟಕಟ್ಟಿದನೆಂದು ವ್ಯಕ್ತವಾಗುವುದು.

---

1 ನಂದಾಃ ಪರ್ಯಾಯಭೂತಾಃ ಪಶವಇವ ಹತಾಃ ಪಶ್ಯತೋ ರಾಕ್ಷಸಸ್ಯ ॥
ಅಂಕ-೩; ಶ್ಲೋ.-೨೭

## ಮಗಧರಾಜಸಂತತಿ

| ಕ್ರಮಸಂಖ್ಯೆ | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜ್ಯಭಾರಾರಂಭ ವರ್ಷ–ಕ್ರಿ. ಪೂ. |
|---|---|---|---|
| ೧ | ಕೌಣಕಿ–ಚಿಲಂತಪುತ್ರ–ಪ್ರದ್ಯೋತ | ೧೨ | ೫೮೩–೮೨ |
| ೨ | ಶ್ರೇಣಿಕ–ಬಿಂಬಿಸಾರ | ೩೮ | ೫೭೧–೭೦ |
| ೩ | ಅಜಾತಶತ್ರು–ದರ್ಶಕ–ಕೂಣಿಕ–ಕುಣಿಕ–ಕೋಣಕ | ೩೨ | ೫೩೩–೩೨ |
| ೪ | ಉದಾಯಿಭದ್ರ | ೧೬ | ೫೦೧–೫೦೦ |
| ೫ | ಮುಂಡ–ಮುನಿಕ–ನಾಗದಾಸಕ | ೧೭ | ೪೮೫–೮೪ |

ಮೊತ್ತ : ೧೧೫

## ಅವಂತೀರಾಜಸಂತತಿ

| ಕ್ರಮಸಂಖ್ಯೆ | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜ್ಯಭಾರಾರಂಭ ವರ್ಷ ಕ್ರಿ. ಪೂ. |
|---|---|---|---|
| ೧ | ಪಾಲಕ–ಜಯಸೇನ | (?) | (?) |
| ೨ | ಪ್ರದ್ಯೋತ–ಮಹಾಸೇನ | ೨೩ | ಕ್ರಿ. ಪೂ. ೫೫೧–೫೦ |
| ೩ | ಗೋಪಾಲಕ–1 | ೪ | " ೫೨೮–೨೭ |
| ೪ | ಪಾಲಕ–2 | ೨೪ | " ೫೨೪–೨೩ |
| ೫ | ಆರ್ಯಕ–3 | ೨೧ (?) | " ೫೦೦–೪೯೯ |
| ೬ | ಸೂರ್ಯಕ (?) ೪ | ೩ (?) | " ೪೭೯–೭೮ |
| ೭ | ಅವಂತಿವರ್ಧನ–ಕುಮಾರಸೇನ ೫ | | |
| ೮ | ನಂದಿವರ್ಧನ–ನಂದರಾಜ | ೮ | " ೪೭೬–೭೫ |

ಕ್ರಮಸಂಖ್ಯೆ ೩ ರಿಂದ ೭ ರವರೆಗೆ ಪಂಚಪ್ರಾದ್ಯೋತರು. ೩ ರಿಂದ ೮ ರವರೆಗೆ ಒಟ್ಟು ರಾಜ್ಯಭಾರಕಾಲ ೬೦ ವರ್ಷಗಳು=ಪಾಲಯ ರಣ್ಣಂ ಛಟ್ಟೀ

| ಕ್ರಮಸಂಖ್ಯೆ | ರಾಜರ ಹೆಸರುಗಳು | ರಾಜ್ಯಭಾರ ವರ್ಷಗಳು | ರಾಜ್ಯಭಾರಾರಂಭ | | |
|---|---|---|---|---|---|
| | | | ವೀ. ನಿ. ಪ. | ಬು. ನಿ. ಪ. | ಕ್ರಿ. ಪೂ. |
| ೧ | ನಂದರಾಜ–ನಂದಿವರ್ಧನ–ಶಿಶುನಾಗ–ವಿಜಯಸೇನ–ವಿಶಾಹಭೂಪ | ೩೨ | ೬೧ | ೫೮ | ೪೬೭ |
| ೨ | * ಮಹಾನಂದ–ಕಾಲಾಶೋಕ–ವೀರಸೇನ–ನಂರ್ದಿ–ಕಾಕವರ್ಣಿ | ೪೬ | ೯೩ | ೯೦ | ೪೩೫ |
| ೩ | ಭದ್ರಸೇನ–ಪದ್ಮನಂದ | ೧೦ | ೧೩೯ | ೧೩೬ | ೩೮೯ |
| ೪–೧೧ | ಭದ್ರಸೇನನ ಎಂಟುಜನ ಸಹೋದರರು | ೭ | ೧೪೯ | ೧೪೬ | ೩೭೯ |
| ೧೨ | ನಂದಚಂದ್ರಗುಪ್ತ | ೫ | ೧೫೬ | ೧೫೩ | ೩೭೨ |
| ೧೩ | ಮಹಾಪದ್ಮನಂದ–ಉಗ್ರಸೇನ | ೩೩ | ೧೬೧ | ೧೫೮ | ೩೬೭ |
| ೧೪–೨೧ | ಮಹಾಪದ್ಮನ ಎಂಟುಜನ ಸುತರು | ೧೨ | ೧೯೪ | ೧೯೧ | ೩೩೪ |
| — | ಮೌರ್ಯ ಚಂದ್ರಗುಪ್ತನ ರಾಜ್ಯಾಭಿಷೇಕ | — | ೨೦೬ | ೨೦೩ | ೩೨೨ |

*ದಶಶೈಶುನಾಗರು–ಇವರ ಒಟ್ಟು ರಾಜ್ಯಭಾರಕಾಲ ೬೩ ವರ್ಷಗಳು.

(* marks rows ೨–೪, grouped by a brace.)

## ಮೌರ್ಯರಾಜಸಂತತಿ

ಮೌರ್ಯಚಂದ್ರಗುಪ್ತನು ಕ್ರಿ. ಪೂ. ೩೨೩ ಮತ್ತು ೩೨೧ ರ ಮಧ್ಯವರ್ತಿ ಸಮಯದಲ್ಲಿ ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾಗಿರುವನೆಂದು ಚರಿತ್ರಕಾರರು ಗ್ರೀಕ್‌ದೇಶಮೂಲದ ಇತಿಹಾಸಕೃತಿಗಳಾಧಾರದಿಂದ ನಿರ್ಣಯಿಸಿದ್ದಾರೆ. ಆದ್ದರಿಂದ ಮೇಲ್ಕಂಡಂತೆ ಇವನು ಕ್ರಿ. ಪೂ. ೩೨೨ ರಲ್ಲಿ ಮಗಧರಾಜನಾಗಿ ಅಭಿಷಿಕ್ತನಾಗಿರುವನೆಂದು ಭಾರತೀಯ ಇತಿವೃತ್ತಸಾಹಿತ್ಯದಾಧಾರದಿಂದ ನಿರ್ಣಯಿಸಲಾಗಿರುವುದರ ತಥ್ಯವು ಅಬಾಧಿತನೆನಿಸುವುದು. ಹೀಗೆ ಇವನ ರಾಜ್ಯಭಾರಾರಾಂಭಸಮಯದ ಐತಿಹ್ಯಾಂಶವು ನಿರ್ವಿವಾದರೀತಿಯಿಂದ ನಿರ್ಣೀತವೆನಿಸಿದೆಯಾದರೂ, ಈ ಮಹಾ ಸಾಮ್ರಾಟನ ವಂಶ, ಬಾಲ್ಯ ಇವೇ ಮುಂತಾದ ಕೆಲವು ಪ್ರಮುಖ ಐತಿಹ್ಯಾಂಶಗಳು ವಿವಾದಾಸ್ಪದವಾಗಿ ಉಳಿದಿವೆ. ಈ ಐತಿಹ್ಯಾಂಶಗಳ ಪರಿಷ್ಕರಣದಲ್ಲಿ ಇದುವರೆವಿಗೂ ಚರಿತ್ರಕಾರರ ಗಮನವನ್ನು ಸೆಳೆಯದಿರುವ ಕೆಲವಂಶಗಳನ್ನು ಇಲ್ಲಿ ಪರಿಶೀಲಿಸಲಾಗುವುದು.

ಮೌರ್ಯಚಂದ್ರಗುಪ್ತ ಮತ್ತು ಇವನ ಗುರುವಾದ ಚಾಣಾಕ್ಯರೀರ್ವರೂ ಮಹಾಪದ್ಮಾದಿ ನವನಂದರನ್ನು ವಧೆಗೈದು ಮಗಧರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಳ್ಳುವ ಮುನ್ನ ಕರ್ನೂಲ್ ಜಿಲ್ಲೆಯಲ್ಲಿರುವ ಶ್ರೀಶೈಲಪರ್ವತದ ಸುತ್ತುಮುತ್ತಿನ ಪ್ರದೇಶದಲ್ಲಿ ವಾಸಿಸುತ್ತಿದ್ದರೆಂದು ವಡ್ಡಾರಾಧನೆಯ ಚಾಣಾಕ್ಯರಿಸಿ ಕಥೆಯಿಂದ ಸೂಚಿತವಾಗುವುದು.

ಮಹಾಪದ್ಮನಿಂದ ಅಪಮಾನಿತನಾದ ಚಾಣಾಕ್ಯನು ಭಗವಂತವೇಷಧಾರಣೆ ಮಾಡಿ 'ಮಹೋದಕ' (ಅಥವಾ ಪಾಠಾಂತರದನುಗುಣವಾಗಿ 'ಕಾಹಳ') ಎಂಬ ಪೊಳಲಿಗೆ ಹೋಗಿ ವಾಸಿಸುತ್ತಿದ್ದನೆಂದು ವಡ್ಡಾರಾಧನೆಯ ಚಾಣಾಕ್ಯರಿಸಿ ಕಥೆಯಲ್ಲಿ ಹೇಳಲಾಗಿರುವುದನ್ನು ಹಿಂದೆ ಉಲ್ಲೇಖಿಸಲಾಗಿದೆ. ಇಲ್ಲಿಂದ ಮುಂದಿನ ಕಥಾ ಸಾರಾಂಶವನ್ನು ಪ್ರಕೃತಸಂದರ್ಭದಲ್ಲಿ ಗಮನಿಸಬೇಕಾಗಿದೆ.

ಆ (ಮಹೋದಕ ಅಥವಾ ಕಾಹಳ) ಎಂಬ ಪೊಳಲನಾಳುತ್ತಿದ್ದ ಮಯೂರ ವಂಶದ ಅರಸನಾದ ಕುಮುದನ ಮಹಾದೇವಿ ಮಂದೆಯು (ಪಾಠಾಂತರದಂತೆ 'ನಂದೆ' ಯು) ಗರ್ಭಿಣಿಯಾಗಿ ಚಂದ್ರನನ್ನು ನುಂಗುವ ಬಯಕೆಯುಳ್ಳವಳಾಗಿದ್ದಳು. ಈ ವಿಷಯವನ್ನು ತಿಳಿದ ಚಾಣಾಕ್ಯನು ಉಪಾಯಾಂತರದಿಂದ ಆಕೆಯ ಬಯಕೆಯನ್ನು ಪೂರಯಿಸಿದನು. ಅನಂತರ ಈಕೆಯು ಜನ್ಮವಿತ್ತ ಕೂಸನ್ನು ಚಾಣಾಕ್ಯನಿಗೊಪ್ಪಿಸಿದರು. ಆ ಕೂಸಿಗೆ ಚಾಣಾಕ್ಯನು 'ಚಂದ್ರಭುಕ್ತ' ಎಂದು ನಾಮಕರಣ ಮಾಡಿದನು. ಚಂದ್ರಭುಕ್ತನು ೧೬ ವರ್ಷ ಪ್ರಾಯದವನಾಗಲು, ಪೃಥ್ವಿಯನ್ನೆಲ್ಲ ಆಳುವ ಲಕ್ಷಣಯುಕ್ತನಾದ ಅವನನ್ನು ಅರಸನನ್ನಾಗಿ ಮಾಡುವುದಾಗಿ ಚಾಣಾಕ್ಯನು ಅಲ್ಲಿಯ ಸಾಮಂತರು, ಮಂತ್ರಿಗಳು, ಅರಸುಮಕ್ಕಳು ಮತ್ತು ತಳ

ವಾರರಿಗೆ ಹೇಳಿ, ಇವರೆಲ್ಲರಿಗೂ ಇಲ್ಲಿಯ ಬಾಳಿಗಿಂತ ಹತ್ತು ಪಟ್ಟು ಹೆಚ್ಚಿನ ಬಾಳನ್ನು ಕೊಡುವುದಾಗಿ ಬೋಧಿಸಿ ಎಲ್ಲರನ್ನೂ ಶ್ರೀಪರ್ವತದ ಮೇಲೆ ಕರೆದೊಯ್ದು ಇರಿಸಿದನು. ಅನಂತರ ರಸಯೋಗದಿಂದ ಅಪಾರವಾದ ಪೊನ್ನರಾಶಿಯನ್ನು ಮಾಡಿ, ಶ್ರೀಪರ್ವತದ ಮೇಲಕ್ಕೆ ಹೇರು ಮಣ್ಣು ಒಟ್ಟುವವರಿಗೆ ಒಂದು ಹೇರುಪೊನ್ನುಕೊಡುವುದಾಗಿ ನಾಡಿನಲ್ಲಿ ಡಂಗುರ ಹೊಯ್ಸಿದನು. ಹೇರು ಪೊನ್ನಿನಾಶೆಯಿಂದ ಆ ನಾಡಿನೊಕ್ಕಲಿಗರು ಶ್ರೀಪರ್ವತದಮೇಲೆ ತಂದುಹಾಕಿದ ಮಣ್ಣರಾಶಿಯಿಂದ ಕೋಟೆಮಾಡಿ ಮಾಟಕೂಟಪ್ರಸಾದಸಹಿತವಾಗಿ ಪೊಳಲೊಂದನ್ನು ಕಟಿ ಸೇನೆಯನ್ನು ಸಜ್ಜುಗೊಳಿಸಿದನು. ಅನಂತರ ಚಂದ್ರಭುಕ್ತನೊಡಗೊಂಡು ಪೋಗಿ ಮಹಾಪದ್ಮನನ್ನೆದುರಿಸಿ ಸೋತೋಡಿ ಬದುಕಿ, ವರುಷವರುಷವೂ ಯುದ್ಧಮಾಡಿ ಸೋಲುತ್ತಿದ್ದನು. ತದನಂತರ ಪಾಟಲೀಪುತ್ರನಗರದ ಸಾಲಿಗರ ಮುದುಕಿಯ ಅಣಕುನುಡಿಯೊಂದರಿಂದ ಜಾಗೃತನಾಗಿ, ಭೇದೋಪಾಯಪೂರ್ವಕ ಮಹಾಪದ್ಮನನ್ನು ಸೋಲಿಸಿದನು. ಆಗ ಮಹಾಪದ್ಮನು ಓಡಿಹೋಗಲು ಮತ್ತು (ಅವನ ಮಂತ್ರಿಯಾದ) ಸುಬಂಧುವು ಪಿರಿದಾದ ಕಾಳೆಗಮಂ ಕಾದಿ ಸೋಲಲು, ಆತನನ್ನು ಹಿಡಿದು ಸಂಕಲೆಯನಿಕ್ಕಿ ಸೆರೆಯೊಳಿಟ್ಟನು. ಅನಂತರ ಚಂದ್ರಭುಕ್ತನಿಗೆ ರಾಜ್ಯಾಭಿಷೇಕಮಾಡಿ, ಮಹಾಪದ್ಮನರಸಿ ಚಂದ್ರಮತಿಮಹಾದೇವಿಯನ್ನು ಚಂದ್ರಭುಕ್ತನ ಮಹಾದೇವಿಯನ್ನಾಗಿ ಮಾಡಿ, ಶ್ರೀಪರ್ವತದೊಳಿದ್ದ ತನ್ನ ಪಾರ್ವಂತಿಯನ್ನು ಕರೆಯಿಸಿಕೊಂಡು ಮಗಧವಿಷಯಮನಾಳುತ್ತಮಿಷ್ಟವಿಷಯಕಾಮಭೋಗಂಗಳನುಭವಿಸುತ್ತಮಿರೆ—ಮತ್ತಂ ಚಂದ್ರಮತಿಮಹಾದೇವಿಗೆ ಗರ್ಭಮಾಗಿಯೊಂದು ದಿವಸಂ ರಥಮನೇರಿದೊಡಾರಥದ ಚಕ್ರದ !ಪತ್ತುಂಕದಿರ್ಗಳ್ ನೆಲದೊಳದ್ದುದಂ ಚಾಣಾಕ್ಯಂ ಕಂಡು ಈ ಚಂದ್ರಭುಕ್ತಂ ಮೊದಲಾಗಿ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂ ದಶಮಯೂರರ್ಕಳಾಳ್ವರೆಂದಾದೇಶಂ ಗೆಯ್ದಂ.

ಮೇಲ್ಕಂಡ ಕಥೆಯಲ್ಲಿ ಯುದ್ಧದ ಪೂರ್ವಸಜ್ಜಿಕೆಯಾಗಿ ಶ್ರೀಪರ್ವತದ ಮೇಲೆ ಚಾಣಾಕ್ಯನು ಪೊಳಲೊಂದನ್ನು ನಿರ್ಮಿಸಿದನೆಂದು ಹೇಳಲಾಗಿದೆ. ಸನ್ಮಾನ್ಯ ಪಿ. ಬಿ. ದೇಸಾಯಿಯವರು ಜೈನ ಸಂಪ್ರದಾಯದ ಕಥೆಗಳಲ್ಲಿ ಹೆಸರಿಸಲಾಗಿರುವ ಶ್ರೀಪರ್ವತವನ್ನು ಕರ್ನೂಲ್ ಜಿಲ್ಲೆಯಲ್ಲಿರುವ ಶ್ರೀಶೈಲವಾಗಿದೆಯೆಂದು ಗುರುತಿಸಿರುವರಲ್ಲದೆ ಪರಂಪರಾಗತಕಥನದನುಸಾರವಾಗಿ ಇಲ್ಲಿ 'ಚಂದ್ರಗುಪ್ತಪಟ್ಟಣ' ಎಂಬ ಹೆಸರಿನ ಗ್ರಾಮವೊಂದಿದ್ದಿತೆಂದು ಹೇಳಿದ್ದಾರೆ.[1] ಇದರಿಂದ ವಡ್ಡಾರಾಧನೆಯ ಮೇಲ್ಕಂಡ ಕಥೆಯಲ್ಲಿ ಚಾಣಾಕ್ಯನು ಯುದ್ಧಸಜ್ಜಿಕೆಯ ಅಂಗವಾಗಿ ಶ್ರೀಪರ್ವತದಲ್ಲಿ (ಶ್ರೀಶೈಲದಲ್ಲಿ) ನಗರವೊಂದನ್ನು ನಿರ್ಮಿಸಿದನೆಂದು ಹೇಳಲಾಗಿರುವುದು ಇತಿಹಾಸ ತಥ್ಯಯುಕ್ತವಾಗಿದೆಯೆಂದು ಸಾಕ್ಷೀಕೃತವಾಗುವುದಲ್ಲದೆ, ಚಾಣಕ್ಯ ಮತ್ತು ಚಂದ್ರ

---

1 'ಜೈನಿಸಂ ಇನ್ ಸೌತ್ ಇಂಡಿಯಾ ಅಂಡ್ ಸಂ ಜೈನ ಎಪಿಗ್ರಾಫ್ಸ್' ಪು. ಸಂ. ೫-೬

ಗುಪ್ತರೀರ್ವರೂ ಮಗಧರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಳ್ಳುವ ಮುನ್ನ ಶ್ರೀಶೈಲ ಪರ್ವತದ ಸುತ್ತುಮುತ್ತಿನ ಪ್ರದೇಶವಾಸಿಗಳಾಗಿದ್ದಿರಬೇಕೆಂದೂ ಸೂಚಿತವಾಗುವುದು.

ಚಂದ್ರಗುಪ್ತನ ವಿಷಯವಾಗಿ ಚರ್ಚಾಸ್ಪದವೆನಿಸಿ ಉಳಿದಿರುವ ಐತಿಹ್ಯಾಂಶಗಳಲ್ಲಿ ಇವನ ಕುಲಗೋತ್ರಗಳ ವಿಷಯವೂ ಒಂದಾಗಿದೆ. ಈ ವಿಷಯದ ಸಂಬಂಧವಾಗಿ ಐತಿಹಾಸಿಕ ಕೃತಿಗಳಲ್ಲಿ ಕಂಡುಬರುವ ಈ ಮುಂದಿನ ಅಂಶಗಳನ್ನು ಗಮನಿಸಬೇಕಾಗಿದೆ :

೧) ಮಹಾಪದ್ಮನ ಅಷ್ಟಸುತರ ಆಳ್ವಿಕೆಯ ತರುವಾಯ (ಚಂದ್ರಗುಪ್ತಾದಿ) ಮೌರ್ಯರು ೧೩೭ ವರ್ಷಕಾಲ ರಾಜ್ಯಭಾರಮಾಡುವರೆಂದು ಪುರಾಣಗಳಲ್ಲಿ ಹೇಳಲಾಗಿದೆ.

೨) ಮುದ್ರಾರಾಕ್ಷಸ ನಾಟಕದಲ್ಲಿ ಕೆಲವೊಮ್ಮೆ ಚಂದ್ರಗುಪ್ತನನ್ನು 'ಮೌರ್ಯ' 'ಮೌರ್ಯೇಂದು' ಮತ್ತು 'ಮೌರ್ಯಪುತ್ರ' ಎಂಬ ಅಭಿಧಾನಗಳಿಂದ ನಿರ್ದೇಶಿಸಿಲಾಗಿದೆ.

೩) ಪರಿಶಿಷ್ಟಪರ್ವದಲ್ಲಿ ಚಂದ್ರಗುಪ್ತನನ್ನು ಕೆಲವೊಮ್ಮೆ 'ಮೌರ್ಯ' ಎಂಬ ಅಭಿಧಾನದಿಂದ ನಿರ್ದೇಶಿಸಲಾಗಿದೆಯಲ್ಲದೆ, ಇವನು ಮಯೂರಪೋಷಕಮಹತ್ತರನ ಸುತೆಯ ಗರ್ಭಸಂಜಾತನಾದವನೆಂದು ಹೇಳಿದೆ. ಶ್ವೇತಾಂಬರ ಜೈನ ಸಂಪ್ರದಾಯದ ಕೃತಿಗಳಾದ 'ತಿತ್ಥೋಗಾಲೀಪಇನ್ನಯ ಮತ್ತು ತಿರ್ಥೋದ್ಧಾರ ಪ್ರಕರಣಗಳಲ್ಲಿ ಚಂದ್ರಗುಪ್ತನ ವಂಶಸೂಚಕವಾಗಿ 'ಮುರಿಯ' ಎಂಬ ಪದವು ಪ್ರಯುಕ್ತವಾಗಿದೆ. ದಿಗಂಬರ ಜೈನ ಸಂಪ್ರದಾಯದ ಕೃತಿಗಳಾದ 'ತಿಲೋಯಪಣ್ಣತ್ತಿ' ಮತ್ತು ಹರಿವಂಶ ಪುರಾಣಗಳಲ್ಲಿ ಅನುಕ್ರಮವಾಗಿ 'ಮರುದಯ' ಮತ್ತು 'ಮುರುಂದ' ಪದಗಳು ಚಂದ್ರಗುಪ್ತನ ವಂಶಸೂಚಕವಾಗಿ ಪ್ರಯುಕ್ತವಾಗಿವೆ. ಹರಿಷೇಣಾಚಾರ್ಯ ವಿರಚಿತವಾದ ಬೃ. ಕ. ಕೋಶದಲ್ಲಿ[1] ಅಶೋಕರಾಜನನ್ನು ಮೇರಿಕಾನ್ವಯದವನೆಂದು ಹೇಳಿದೆ. [ಪ್ರಾಯಶಃ ಈ 'ಮೇರಿಕ' ಪದವು 'ಮೋರಿಕ' ಅಥವಾ 'ಮೋರಿಯ' ಎಂಬ ಪದಗಳ ಪ್ರಭ್ರಂಶರೂಪವಾಗಿದೆಯೆಂದು ಕಂಡುಬರುವುದು] ವಡ್ಡಾರಾಧನೆಯಲ್ಲಿ ಚಂದ್ರಗುಪ್ತನನ್ನು ಮಯೂರವಂಶಜನೆಂದು ಸೂಚಿಸಲಾಗಿದೆ.

೪) ಮಹಾವಂಸೋ ಕೃತಿಯಲ್ಲಿ ಚಂದ್ರಗುಪ್ತನನ್ನು ಮೋರಿಯ ಕ್ಷತ್ರಿಯ ಮನೆತನದವನೆಂದು ಹೇಳಿದೆ.

೫) 'ಮೌರ್ಯ' ಎಂಬ ಹೆಸರಿನ ಮೂಲವನ್ನು ಸೂಚಿಸುವಂತಹ ಕಥೆಯೊಂದು ಪ್ರಚಲಿತವಿದೆ: ನಂದರಾಜಸಿದ್ಧಾರ್ಥಕನು ಮುರಾ ಎಂಬ ಶೂದ್ರಸ್ತ್ರೀಯನ್ನು ವಿವಾಹವಾಗಿದ್ದನೆಂದೂ ಈಕೆಯಲ್ಲಿ ಜನಿಸಿದ ಸುತನಿಗೆ 'ಮೌರ್ಯ' ಎಂಬ

---

1 ಕಥಾ ಸಂ. ೯೫—ಉಪಕಾರಮುನಿಕಥಾನಕಂ

ಹೆಸರಾಯಿತೆಂದೂ ಈ ಮೌರ್ಯನ ಕಿರಿಯ ಸುತನೇ ಚಂದ್ರಗುಪ್ತನೆಂದೂ ರವಿನರ್ತಕ ಕವಿರಚಿತವಾದ 'ಚಾಣಕ್ಯಕಥೆ'ಯಲ್ಲಿ ಹೇಳಿದೆ. ಇಂತೆಯೇ ಮುದ್ರಾರಾಕ್ಷಸ ನಾಟಕದ ಉಪೋದ್ಘಾತದ ಗದ್ಯರೂಪದ ಆಖ್ಯಾಯಿಕೆಯಲ್ಲಿ, ಉಗ್ರಧನ್ವನಂದನ ಶೂದ್ರಪತ್ನಿಯಾದ 'ಮುರಾ' ಎಂಬುವಳ ಗರ್ಭಸಂಜಾತನಾದ ಮೌರ್ಯನಿಗೆ ಚಂದ್ರ ಗುಪ್ತಾದಿ ಶತಪುತ್ರರಾದರೆಂದು ಹೇಳಿದೆಯಾದರೆ ಪದ್ಯ ಆಖ್ಯಾಯಿಕೆಯಲ್ಲಿ, ಜರಾಸಂಧ ನಿಂದ ಮುಂದೆ ೩೭ ನೆಯ ಅರಸನಾದ ನಂದರಾಜನ ಮುರಾ ಎಂಬ ಹೆಸರಿನ ದಾಸಿ ಯಲ್ಲಿ ಚಂದ್ರಗುಪ್ತನು ಜ್ಯೇಷ್ಠಸುತನಾಗಿ ಜನಿಸಿದನೆಂದು ಹೇಳಿದೆ. [1]

೬) ಋಗ್ವೇದದಲ್ಲಿ ಪ್ರಯುಕ್ತವಾಗಿರುವ 'ಮೂರದೇವಾಃ' ಎಂಬ ಪದ ದೊಡನೆ 'ಮೌರ್ಯ' [ಹಾಗೂ'ಮೋರಿಯ'] ಎಂಬ ಪದವು ಆನುಷಂಗಿಕಸಂಬಂ ಧವುಳ್ಳದ್ದಾಗಿದ್ದು ಇದು ವೈದಿಕಜನಾಂಗವು ಭಾರತದೇಶವನ್ನು ಪ್ರವೇಶಿಸುವ ಪೂರ್ವ ಭಾವಿಯಾಗಿ ಬಹು ಪ್ರಾಚೀನಕಾಲದಿಂದಲೂ ಇಲ್ಲಿ ವಾಸಿಸುತ್ತಿದ್ದ ಮೂಲನಿವಾಸಿ ಜನಾಂಗ ಒಂದರ ಮನೆತನದ ಹೆಸರಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿ ದ್ದಾರೆ[2]

ಋಗ್ವೇದದ 'ಮೂರದೇವಾಃ' ಎಂಬ ಪದವು ಆನುಷಂಗಿಕವಾಗಿ 'ಮೌರ್ಯ' ಪದದೊಡನೆ ಸಂಬಂಧಉಳ್ಳದಾಗಿರುವುದೆಂಬ ಮೇಲ್ಕಂಡ ಅಭಿಪ್ರಾಯದಂತೆ, ಶ್ರೀ ಕೃಷ್ಣನ ಪರಾಕ್ರಮಗುಣದ್ಯೋತಕವಾದ 'ಮುರಾರಿ' ಎಂಬ ಹೆಸರಿನೊಡನೆ ಸಂಕಲಿತ ವಾಗಿರುವ 'ಮುರ' ಪದವೂ 'ಮೌರ್ಯ' ಪದದೊಡನೆ ಆನುಷಂಗಿಕವಾದ ಸಂಬಂಧ ಉಳ್ಳದ್ದಾಗಿದೆಯೆಂದು ಭಾವಿಸಲವಕಾಶವಿದೆ. ಪ್ರಾಯಶಃ ಮುರಜನಾಂಗದ ಬಲಿಷ್ಠ ನಾಯಕನಾಗಿದ್ದ ಮುರಾಸುರನನ್ನು ಶ್ರೀ ಕೃಷ್ಣನು ವಧೆಗೈದನಾಗಿ, ಉತ್ತರಭಾರತ ದಲ್ಲಿ ತನ್ನ ನೆಲೆಯನ್ನು ಕಳೆದುಕೊಂಡ ಆ ಜನಾಂಗವು ದಕ್ಷಿಣಭಾರತವನ್ನು ಆಶ್ರ ಯಿಸಿ ನೆಲೆನಿಂತಿದೆ. ಈ ಮುರಮನೆತನದ ಸಂತತಿಯ ಅರಸರನ್ನು ಪ್ರಾಕೃತಮೂಲದ ಭಾಷೆಗಳಲ್ಲಿ 'ಮುರಿಯ' ಅಥವಾ 'ಮೋರಿಯ' ಎಂದೂ ಸಂಸ್ಕೃತಭಾಷೆಗಳಲ್ಲಿ ಮೌರ್ಯ' ಎಂದೂ ಹೆಸರಿಸುವ ಪರಿಪಾಠ ಉಂಟಾಗಿದೆಯೆಂದು ಗ್ರಹಿಸಲವಕಾಶ ವಾಗುವುದು. ಇಷ್ಟಲ್ಲದೆ, ಶ್ರೀ ವೀರತೀರ್ಥಂಕರನ ಸಮವಸರಣದ ಗಣಧರ ರಲ್ಲೊಬ್ಬರು 'ಮೌರ್ಯ' ಎಂಬ ಹೆಸರಿನವರಾಗಿರುವರಾದ್ದರಿಂದ ಕ್ರಿ. ಪೂ. ೬ ನೇ ಶತಮಾನಕಾಲದಲ್ಲಿ 'ಮೌರ್ಯ' ಪದವು ಗೋತ್ರನಾಮ ರೂಪದಲ್ಲಿ ಬಳಕೆಯಲ್ಲಿದ್ದಿ ತೆಂದು ವ್ಯಕ್ತವಾಗುವುದು. ಈ ಕಾರಣಗಳಿಂದ ವಡ್ಡಾರಾಧನೆಯ ಮೇಲ್ಕಂಡ ಕಥೆ ಯಿಂದ ಸೂಚಿತವಾಗುವಂತೆ ಕ್ರಿ. ಪೂ. ೪ ನೇ ಶತಮಾನಕಾಲದಲ್ಲಿ ದಕ್ಷಿಣಭಾರತದ

---

1 ಮುದ್ರಾರಾಕ್ಷಸನಾಟಕ; ಪ್ರಕಾಶನ-ಶ್ರೀಹರಿಕೃಷ್ಣನಿಬಂಧ ಭವನಂ, ಬನಾರಸ್

2 ಜಿತೇಂದ್ರನಾಥ್‌ಬ್ಯಾನರ್ಜಿಯವರ 'ಡೆವಲಪ್‌ಮೆಂಟ್ ಆಫ್ ಹಿಂದೂ ಇಕೊ- ನಾಗ್ರಫಿ' ಪುಂ. ಸಂ. ೭೧-೭೬

ಶ್ರೀಶೈಲದ ಸುತ್ತುಮುತ್ತಿನ ಪ್ರದೇಶದಲ್ಲಿ 'ಮುರಿಯ' ಅಥವಾ 'ಮೋರಿಯ' ಅಥವಾ 'ಮೌರ್ಯ' ಎಂಬ ಮನೆತನದ ಅರಸರು ರಾಜ್ಯಭಾರಮಾಡುತ್ತಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಚಂದ್ರಗುಪ್ತನ ವಂಶಸೂಚಕವಾದ 'ಮೌರ್ಯ' ಎಂಬ ಪದವು 'ಮುರಾ' ಎಂಬ ಶೂದ್ರಸ್ತ್ರೀಯ ಹೆಸರಿನ ಮೂಲದಿಂದ ನಿಷ್ಪನ್ನವಾಗಿದೆಯೆಂದು ಮುದ್ರಾರಾಕ್ಷಸ ನಾಟಕದ ಪೂರ್ವೋಕ್ತ ಉಪೋದ್ಘಾತಗಳ ಕಥನದಿಂದ ಸೂಚಿತವಾಗುವುದು. ಆದ್ದರಿಂದ ಶ್ರೀಶೈಲದ ಸುತ್ತುಮುತ್ತಿನಲ್ಲಿ ರಾಜ್ಯಭಾರಮಾಡುತ್ತಿದ್ದ ಮೌರ್ಯಮನೆತನದೊಡನಿದ್ದ ಮಾತೃಸಂಬಂಧದ ಮೂಲದಿಂದ ಚಂದ್ರಗುಪ್ತನಿಗೆ 'ಮೌರ್ಯ' ಎಂಬ ಗೋತ್ರನಾಮವು ಆರೂಢವಾಗಿರಬೇಕೆಂದು ಸ್ಫುಟಗೊಳ್ಳುವುದು.

ಅನ್ವಯಕ್ರಮದಿಂದ ಮೌರ್ಯಚಂದ್ರಗುಪ್ತನನ್ನು ನಂದವಂಶಜನೆಂದು ನಿರ್ದೇಶಿಸುವ ಪೂರ್ವೈತಿಹ್ಯಗಳಿವೆ. ಬೃಹತ್ಕಥಾಮಂಜರಿಯಲ್ಲಿ 'ಯೋಗನಂದನು ಕೀರ್ತಿಶೇಷನಾದ ಬಳಿಕ ಮಹೌಜಸನಾದ ಚಾಣಕ್ಯನಿಂದ ಪೂರ್ವನಂದಸುತನಾದ ಚಂದ್ರಗುಪ್ತನು ರಾಜ್ಯಭಾರದಲ್ಲಿ ಅಧಿಸ್ಥಾಪಿತನಾದನು' ಎಂಬ ಹೇಳಿಕೆಯಿದೆ.[1] ಮುದ್ರಾರಾಕ್ಷಸನಾಟಕದ ಉಕ್ತಿಯೊಂದರನುಗುಣವಾಗಿಯೂ ಮೌರ್ಯಚಂದ್ರಗುಪ್ತನು ನಂದಾನ್ವಯದವನಾಗಿರುವನೆಂದು ಸೂಚಿತವಾಗುವುದು.[2] ಇಂತೆಯೇ ರವಿನರ್ತಕನ ಚಾಣಕ್ಯಕಥಾ ಮತ್ತು ಮುದ್ರಾರಾಕ್ಷಸನಾಟಕದ ಉಪೋದ್ಘಾತಗಳ ಕಥನಗಳನುಗುಣವಾಗಿ ಚಂದ್ರಗುಪ್ತನು (ಉಗ್ರಸೇನ) ನಂದರಾಜನ ಮೊಮ್ಮಗ ಅಥವಾ ಮಗನನ್ನಾಗಿ ನಿರ್ದೇಶಿತನಾಗಿರುವುದು ಸ್ಪಷ್ಟವಿದೆ. ಹೀಗೆ ಈ ಎಲ್ಲ ಕಥೆಗಳಲ್ಲಿಯೂ ಒಂದಲ್ಲ ಒಂದು ರೀತಿಯಾಗಿ ಮೌರ್ಯಚಂದ್ರಗುಪ್ತನನ್ನು ನಂದಾನ್ವಯದ ವ್ಯಕ್ತಿಯನ್ನಾಗಿ ನಿರ್ದೇಶಿಸಲಾಗಿರುವುದರ ಹಿನ್ನೆಲೆಯಲ್ಲಿ ಐತಿಹಾಸಿಕಕಥೆಯ ತಥ್ಯವಿರಬೇಕೆಂದು ಗ್ರಹಿಸಲವಕಾಶವಾಗುವುದು.

ಬೃಹತ್ಕಥಾಮಂಜರಿಯಲ್ಲಿ ಚಂದ್ರಗುಪ್ತನನ್ನು ಪೂರ್ವನಂದಸುತನೆಂದು ನಿರ್ದೇಶಿಸಲಾಗಿದೆಯಾದುದರಿಂದ, ನಂದರಾಜಮನೆತನದ ಪೀಳಿಗೆಯನ್ನು ಎರಡು ಮಾರ್ಗವಾಗಿ ಪರಿಗಣಿಸುವ ಪರಿಪಾಠಉಂಟಾಗಿದ್ದು ಶೂದ್ರಸ್ತ್ರೀಗರ್ಭಸಂಜಾತನಾದ ಮಹಾಪದ್ಮನಿಂದ ಪೂರ್ವಕಾಲೀನವಾದ ಕುಲೀನರಾಜಸಂತತಿಯನ್ನು 'ಪೂರ್ವ

---

1 ಕಥಾಪೀಠ-ಪ್ರಥಮಲಂಬಕ-ಪದ್ಯಸಂಖ್ಯೆ-೨೧೪.

2 ಭಾಗುರಾಯಣಃ ।—ಏವಮೇತತ್ । ಕಿಂತ್ವಮಾತ್ಯರಾಕ್ಷಸಶ್ಚಾಣಕ್ಯೇ ಬದ್ಧವೈರೋ ನ ಚಂದ್ರಗುಪ್ತೇ । ತದ್ಯದಿಕದಾಚಿಚ್ಚಾಣಕ್ಯಮತಿಜಿತಕಾಶಿನಮಸಹಮಾನಃ ಸಾಚಿವ್ಯಾದವರೋಪಯೇತ್ ತತೋ ನಂದಕುಲಭಕ್ತ್ಯಾ ನಂದಾನ್ವಯಾಯ ಏವಾಯಮಿತಿ ಸುಹೃಜ್ಜನಾಪೇಕ್ಷಯಾಚಾಮಾತ್ಯರಾಕ್ಷಸಶ್ಚಂದ್ರಗುಪ್ತೇನ ಸಹ ಸಂದಧೀತ । ಚಂದ್ರಗುಪ್ತೋಽಪಿ ಪಿತೃಪರ್ಯಾಯಾಗತಏವಾಯಮಿತಿ ಸಂಧಿಮನುಮನ್ಯೇತ — ಅಂಕ ೪; ಏಳನೇ ಪದ್ಯಾಂತರದ ಆರನೇ ವಾಕ್ಯ..

ನಂದ' ರೆಂಬುದಾಗಿ ನಿರ್ದೇಶಿಸುವ ರೂಢಿಯಿದ್ದಿರಬೇಕೆಂದು ಭಾವಿಸಲವಕಾಶವಾಗುವುದು. ಈ ಪೂರ್ವನಂದರಾಜಸಂತತಿಯಲ್ಲಿ ನಂದಚಂದ್ರಗುಪ್ತನು ಅಂತಿಮನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಮೌರ್ಯಚಂದ್ರಗುಪ್ತನು ಈ ನಂದಚಂದ್ರಗುಪ್ತನ ಮೊಮ್ಮಗನಾಗಿರುವನೆಂದು ಹೇಳಲವಕಾಶವಿದೆ. ಗ್ರೀಕ್ ದೇಶಮೂಲದ ಐತಿಹ್ಯದಂತೆ ಮೌರ್ಯಚಂದ್ರಗುಪ್ತನು ಅಲೆಕ್ಸಾಂಡರನನ್ನು ಸಂದರ್ಶಿಸಿದ ಸಮಯದಲ್ಲಿ ಅದಿನ್ನೂ ಹುಡುಗಪ್ರಾಯದವನಾಗಿದ್ದನೆಂದು ಚರಿತ್ರೆಗಳ ಹೇಳಿಕೆಗಳಿಂದ ತಿಳಿದುಬರುವುದು. ಇಂತೆಯೇ ಚಾಣಕ್ಯನು ಮಹಾಪದ್ಮನ ಮೇಲೆ ಯುದ್ಧ ಹೂಡಲು ಸಜ್ಜಿಕೆನಡೆಸಿದ ಸಮಯದಲ್ಲಿ ಚಂದ್ರಗುಪ್ತನು ೧೬ ವರ್ಷಪ್ರಾಯದವನಾಗಿದ್ದನೆಂದು ವಡ್ಡಾರಾಧನೆಯ ಮೇಲ್ಕಂಡ ಕಥೆಯಲ್ಲಿ ಹೇಳಲಾಗಿದ್ದು ಮಹಾಪದ್ಮ ಮತ್ತು ಅವನ ಅಷ್ಟಸುತರನ್ನು ನಿರ್ಮೂಲಗೊಳಿಸಲು ಚಾಣಕ್ಯ ಮತ್ತು ಚಂದ್ರಗುಪ್ತರು ಸತತವಾಗಿ ೧೨ ವರ್ಷಕಾಲ ಹೋರಾಡಿರುವರಾದ್ದರಿಂದ, ಚಂದ್ರಗುಪ್ತಮೌರ್ಯನು ಮಗಧರಾಜ್ಯಭಾರಾಧಿಷ್ಠಿತನಾದಸಮಯದಲ್ಲಿ ೨೮ ಅಥವಾ ೨೯ ವರ್ಷ ವಯೋಮಾನದವನಾಗಿದ್ದನೆಂದು ಫಲಿತವಾಗುವುದು. ಇದರಂತೆ, ನಂದಚಂದ್ರಗುಪ್ತನು ಮುನಿದೀಕ್ಷೆಪಡೆದಸಮಯದಿಂದ ಸುಮಾರು (೪೫–೨೯=) ೧೬ ವರ್ಷಗಳ ತರುವಾಯದಲ್ಲಿ ಮೌರ್ಯಚಂದ್ರಗುಪ್ತನು ಜನಿಸಿರುವನೆಂದು ಫಲಿತವಾಗುವುದಾದ್ದರಿಂದ ಇವರೀರ್ವರ ನಡುವೆ ಕನಿಷ್ಠಮಿತಿಯಿಂದ ಒಂದು ಸಂತತಿಯ ಅಂತರವಾದರೂ ಇರಬೇಕೆಂದು ಗ್ರಹಿಸಬೇಕಾಗುವುದು. ಇಷ್ಟಲ್ಲದೆ 'ಧರ್ಮಾಶೋಕನು ಅಜಾತಶತ್ರುವಿನಿಂದ ೧೦ ನೇ ತಲೆಮಾರಿನ ರಾಜನಾಗಿರುವನು' ಎಂಬ ಟಿಬೆಟ್ಟಿನ ಐತಿಹ್ಯದನುಗುಣವಾಗಿ ಮೌರ್ಯ ಚಂದ್ರಗುಪ್ತನು ೮ ನೇ ತಲೆಮಾರಿನ ರಾಜನಾಗಿ ಪರಿಗಣಿತನಾಗುವನಾದ್ದರಿಂದ, ಇವನು ನಂದಚಂದ್ರಗುಪ್ತನ ಮೊಮ್ಮಗನಾಗಿರಬೇಕೆಂದು ಸೂಚಿತವಾಗುವುದು.[1]

ವಡ್ಡಾರಾಧನೆಯ ಮೇಲ್ಕಂಡ ಕಥೆಯಲ್ಲಿ ಚಂದ್ರಗುಪ್ತನ ತಂದೆತಾಯಿಯರನ್ನು 'ಕುಮುದ' ಮತ್ತು 'ಮಂದೆ' (ಅಥವಾ ಪಾಠಾಂತರದನುಗುಣವಾಗಿ 'ನಂದೆ') ಎಂದು ಹೆಸರಿಸಿದೆ. ಚಂದ್ರಗುಪ್ತನ ತಂದೆಯ ಈ ಹೆಸರು ಮುದ್ರಾರಾಕ್ಷಸನಾಟಕದ ಪ್ರಸಂಗವೊಂದಲ್ಲಿ ಧ್ವನಿಪೂರ್ವಕವಾಗಿಸೂಚಿತವಾಗಿದೆಯೆಂದು ಹೇಳಲವಕಾಶವಿದೆ; ಕುಸುಮಪುರದಲ್ಲಿ ಕೌಮುದೀಮಹೋತ್ಸವವು ನಡೆಯಲಿದೆಯೆಂಬುದನ್ನು ತಿಳಿದ

---

1 ದಿವ್ಯಾವದಾನದಲ್ಲಿ ಪ್ರರೂಪಿತವಾಗಿರುವ ರಾಜಸಂತತಿಯನುಕ್ರಮದನುಗುಣವಾಗಿ ಅಶೋಕನು ಉದಾಯಿಭದ್ರನಾದಿಯಾಗಿ ೧೦ ನೇ ರಾಜನಾಗಿ ನಿರ್ದೇಶಿತನಾಗಿದ್ದು ಇಲ್ಲಿ ಮೌರ್ಯಚಂದ್ರಗುಪ್ತ ಎಂಬ ಹೆಸರಿನ ಬದಲಾಗಿ ನಿರ್ದೇಶಿತವಾಗಿರುವ 'ನಂದ' ಎಂಬುದು ಎಂಟನೇ ತಲಾಂತರದ ರಾಜನ ಹೆಸರಾಗಿ ನಿರೂಪಿತವಾಗಿರುವುದನ್ನು ಗಮನಿಸಬಹುದು.

ಅಮಾತ್ಯರಾಕ್ಷಸನು, ಆ ವಿಷಯವಾಗಿ ತನ್ನ ಮನದ ಭಾವನೆಯನ್ನು ಈ ಮುಂದಿನಂತೆ ವ್ಯಕ್ತಪಡಿಸುವನು :

"ಹಾ ! ದೇವ, ನಂದ,

ಕೌಮುದೀ ಕುಮುದಾನಂದೇ ಜಗದಾನಂದಹೇತುನಾ ।
ಕೀದೃಶೀ ಸತಿ ಚಂದ್ರೇಽಪಿ ನೃಪಚಂದ್ರ ತ್ವಯಾ ವಿನಾ ॥"

[ಅಂಕ ೪–ಪದ್ಯ ಸಂ. ೯]

ಇಲ್ಲಿ 'ಕುಮುದಾನಂದೇ ಚಂದ್ರೇ' (ಸತ್ಯಪಿ) ಎಂಬುದು 'ನೈದಿಲೆಗೆ ಆನಂದ ದಾಯಕನಾದ ಚಂದ್ರನಿದ್ದಾಗ್ಯೂ' ಎಂಬ ಮತ್ತು 'ಕುತ್ಸಿತರೀತಿಯಿಂದ ಮುದಿತ ರಾಗುವವರಿಗೆ ಆನಂದದಾಯಕನಾದ ಚಂದ್ರಗುಪ್ತನಿದ್ದಾಗ್ಯೂ'ಎಂಬ ಶ್ಲೇಷಾರ್ಥದಿಂದ ಪ್ರಯುಕ್ತವಾಗಿದೆಯೆಂಬುದು ನಿಶ್ಚಿತವಿದೆ. ಇಷ್ಟಲ್ಲದೆ ಇದು ಮತ್ತೂ ಒಂದು ವಿಶಿಷ್ಟಾರ್ಥದಿಂದ ಪ್ರಯುಕ್ತವಾಗಿದೆಯೆಂದು ಹೇಳಲವಕಾಶವಿದೆ. 'ಜಗದಾನಂದ ಹೇತುತ್ವ' ರೂಪವಿಶೇಷಣದ ಮೂಲಕ ನೃಪಚಂದ್ರನಾದ ನಂದನ ಗುಣೋತ್ಕರ್ಷತೆಯನ್ನು ಸೂಚಿಸಿರುವುದರ ಪ್ರತಿಯಾಗಿ 'ಕುಮುದಾನಂದೇ' ಎಂಬ ವಿಶೇಷಣದ ಮೂಲಕ ಚಂದ್ರಗುಪ್ತನ ಗುಣನಿಕೃಷ್ಟತೆಯು ಸೂಚಿತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಇದರಂತೆ ನೃಪಚಂದ್ರನೆನಿಸಿದ್ದ ನಂದನು ಜಗತ್ತಿಗೆಲ್ಲಾ ಆನಂದವನ್ನುಂಟುಮಾಡುವಂತಹವನಾಗಿದ್ದನೆಂಬ ಗುಣಮಹತ್ವದ ಪ್ರತಿಯಾಗಿ ಹೆಸರಿಗೆ ಮಾತ್ರ ಚಂದ್ರನೆನಿಸಿರುವ ಚಂದ್ರಗುಪ್ತನು (ತನ್ನ ತಂದೆಯಾದ) ಕುಮುದನಿಗೆ ಮಾತ್ರ ಆನಂದವನ್ನುಂಟುಮಾಡುವಂತಹವನಾಗಿರುವನೆಂಬುವಾಗಿ ಇವನ ಗುಣದ ಅಲ್ಪತ್ವಕ್ಕೆ ದನಿಗೊಡಲಾಗಿದೆಯೆಂದು ವ್ಯಕ್ತವಾಗುವುದು. ಇದರಿಂದ ಚಂದ್ರಗುಪ್ತನ ತಂದೆಯನ್ನು ವಡ್ಡಾರಾಧನೆಯಲ್ಲಿ 'ಕುಮುದ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿರುವುದು ಐತಿಹಾಸಿಕತಥ್ಯನಿಷ್ಠವಾಗಿದೆಯೆಂದು ಫಲಿತವಾಗುವುದು.

ಕುಮುದನ ಪತ್ನಿಗೆ, ಮೇಲ್ಕಂಡ ಕಥೆಯ ಪಾಠಾಂತರದಿಂದ ಸೂಚಿತವಾಗುವಂತೆ, 'ನಂದೆ' ಎಂಬ ಹೆಸರಿದ್ದಿತೆಂದು ವಿದಿತವಾಗುವುದು. ಜೈನ ಆಮ್ನಾಯದ ಹಲವಾರು ಕಥೆಗಳಲ್ಲಿ ಪತಿಯ ಹೆಸರಿಗೆ ಸ್ತ್ರೀಲಿಂಗರೂಪವಿತ್ತು ಪತ್ನಿಯ ಹೆಸರನ್ನಾಗಿ ಮಾರ್ಪಡಿಸಿರುವ ನಿದರ್ಶನಗಳಿವೆ. ಉದಾಹರಣೆಗಾಗಿ ಹಿಂದೆ ಉಲ್ಲೇಖಿಸಿರುವ ವ್ಯಂಜನಕ ಕಥಾನಕದಲ್ಲಿ ವೀರಸೇನನ ಪತ್ನಿಯನ್ನು 'ವೀರಸೇನಾ' ಎಂಬುದಾಗಿ ಹೆಸರಿಸಿರುವುದನ್ನು ಗಮನಿಸಬಹುದು. ಇಂತೆಯೇ ಕುಮುದನನ್ನು 'ನಂದ' ಎಂಬುದಾಗಿಯೂ ಹೆಸರಿಸುವ ಪರಿಪಾಠವಿದ್ದು ಅವನ ಪತ್ನಿಯನ್ನು 'ನಂದೆ' ಎಂಬುದಾಗಿ ಹೆಸರಿಸುವ ರೂಢಿಯುಂಟಾಗಿರಬೇಕೆಂದು ಪರಿಭಾವಿಸಲವಕಾಶವಾಗುವುದು. ಅಥವಾ ಮೂಲತಃ 'ಕುಮುದ-ನಂದ' ಎಂಬ ಹೆಸರಿನ ಅಂತ್ಯಪದವಾಗಿದ್ದ 'ನಂದ' ಪದವು

ಲಿಪಿ ಪ್ರಮಾದಾದಿ ದೋಷವಶವಾಗಿ ಪ್ರತ್ಯೇಕಗೊಂಡು, 'ನಂದೆ' ಎಂಬುದಾಗಿ ಕುಮುದನ ಪತ್ನಿಯ ಹೆಸರೆನಿಸಿ ಉಳಿದುಬಂದಿರಬಹುದಾದ ಸಂಭವವಿದೆ. ಹೀಗೆ ಈ ಎರಡು ವಿಚಾರಸರಣಿಗಳನುಗುಣವಾಗಿ, ಒಂದಲ್ಲ ಒಂದುರೀತಿಯಿಂದ, ಕುಮುದ ನಿಗೆ 'ನಂದ' ಎಂಬ ಉಪನಾಮವಿದ್ದಿರಬೇಕೆಂದೂ ಮತ್ತು ಇವನು ನಂದರಾಜಾ ನ್ವಯದ ಅರಸನಾಗಿರಬೇಕೆಂದೂ ವ್ಯಕ್ತವಾಗುವುದು. ಮೌರ್ಯ ಚಂದ್ರಗುಪ್ತನು ನಂದಚಂದ್ರಗುಪ್ತನ ಮೊಮ್ಮಗನಾಗಿರಬೇಕೆಂಬುದರ ಸಾಧ್ಯತೆಯನ್ನು ಹಿಂದೆ ವಿವ ರಿಸಲಾಗಿದೆ. ಇದರಂತೆ ಇವನ ತಂದೆಯಾದ ಕುಮುದ(-ನಂದ-)ನು ಮುರಮನೆತನದ ರಾಜಕುವರಿಯಲ್ಲಿ ಜನಿಸಿದ, ನಂದಚಂದ್ರಗುಪ್ತನ ಸುತನಾಗಿರುವನೆಂದು ಅಧಿಗತ ವಾಗುವುದು. ನಂದಚಂದ್ರಗುಪ್ತನು ವಿವಾಹವಾಗಿದ್ದ ಮುರಮನೆತನದ ಅರಸು ಕುವರಿಯನ್ನು 'ಮುರಾ' ಎಂಬುದಾಗಿ ಹೆಸರಿಸುವ ಪರಿಪಾಠವು ಅಂತಃಪುರಜನರಲ್ಲಿ ಉಂಟಾಗಿದ್ದು, ಇವಳಲ್ಲಿ ಜನಿಸಿದ ಸುತನಾದ ಕುಮುದನಂದನನ್ನು ಪ್ರಾಕೃತಭಾಷಾ ರೂಪದ 'ಮುರಿಯ' ಎಂಬ ರೂಢಿನಾಮದಿಂದ ಹೆಸರಿಸುವ ರೂಢಿಯುಂಟಾಗಿದೆ. ಅಂತೆಯೇ ಮುದ್ರಾರಾಕ್ಷಸ ನಾಟಕದ ಉಪೋದ್ಘಾತದ ಕಥೆಯಲ್ಲಿ ಮೌರ್ಯಚಂದ್ರ ಗುಪ್ತನ ಅಜ್ಜಿಯನ್ನು 'ಮುರಾ' ಎಂಬುದಾಗಿಯೂ ಮತ್ತು ತಂದೆಯನ್ನು 'ಮೌರ್ಯ' ನೆಂಬುದಾಗಿಯೂ ನಿರ್ದೇಶಿಸಲಾಗಿರುವುದರ ಐತಿಹಾಸಿಕತೆಯು ಸತ್ಯದಿಂದ ದೂರ ವಾದುದಾಗಿಲ್ಲವೆಂದು ಫಲಿತವಾಗುವುದು. ಈ ಫಲಿತಾಂಶದಾಧಾರದಿಂದ ಕುಮುದ ನಂದನು ದಕ್ಷಿಣಭಾರತಪ್ರದೇಶದಲ್ಲಿ ನೆಲೆಗೊಂಡಿದ್ದಿರಲು ಕಾರಣವೇನೆಂಬುದನ್ನು ಸುಲಭವಾಗಿ ಊಹಿಸಬಹುದಾಗಿದೆ. ನಂದಚಂದ್ರಗುಪ್ತನು ತನ್ನ ಪಟ್ಟದರಸಿಯ ಗರ್ಭಸಂಜಾತಸುತನಾದ ಸಿಂಹಸೇನನಿಗೆ ಮಗಧರಾಜ್ಯಭಾರದ ಪಟ್ಟಕಟ್ಟಿ ಶ್ರು. ಕೇ. ಭದ್ರಬಾಹುಆಚಾರ್ಯರ ಬಳಿ ಮುನಿದೀಕ್ಷೆಪಡೆದು ಮುನಿಸಂಘದೊಡನೆ ದಕ್ಷಿಣಾ ಪಥದತ್ತ ಪಯಣಬೆಳೆಸಿದ ಅನಂತರ ಕುಮುದನಂದನು ತನ್ನ ಮಾತೃಸಂಬಂಧಿಗಳ ಆಶ್ರಯಪಡೆದು ದಕ್ಷಿಣಭಾರತಪ್ರದೇಶದಲ್ಲಿ ತನ್ನದೇ ಆದ ರಾಜ್ಯವನ್ನು ಸ್ಥಾಪಿಸಿ ಕೊಂಡಿದ್ದಾನೆ. ದಕ್ಷಿಣಭಾರತಪ್ರದೇಶದಲ್ಲಿ ನಂದರಾಜಸಂಬಂಧಿಪುರಾವೃತ್ತದ ಅನೇಕ ಕುರುಹುಗಳನ್ನು ಚರಿತ್ರಕಾರರು ಗುರುತಿಸಿದ್ದಾರೆ. ಈ ಕುರುಹುಗಳು ಪ್ರಾಯಶಃ ಕುಮುದನಂದ ಮತ್ತು ಇವನ ಸಂತತಿಯ ಅರಸರುಗಳಿಗೆ ಸಂಬಂಧಿಸಿದ ಐತಿಹಾಸಿಕ ಪುರಾವೆಗಳಾಗಿವೆ.

ಮೌರ್ಯಚಂದ್ರಗುಪ್ತನು ಪಿತೃವಂಶಾನುಕ್ರಮದಿಂದ ನಂದರಾಜಮನೆತನದವ ನಾಗಿಯೂ ಮಾತಾಮಹಳ ಮನೆತನದ ಸಂಬಂಧದಿಂದ ಮುರಕುಲದ ಅರಸುಗಳ ಸಂಬಂಧಿಯಾಗಿಯೂ ಇರುವನೆಂದು ವ್ಯಕ್ತಪಟ್ಟಿದೆ. ಪ್ರಾಚೀನಕಾಲದಲ್ಲಿ ಹಿಮವ ತ್ಪರ್ವತ ಮತ್ತು ವಿಂಧ್ಯಪರ್ವತಗಳ ನಡುವಣ ದೇಶಭಾಗವನ್ನು ಆರ್ಯಾವರ್ತವೆಂದು ಕರೆಯಲಾಗುತ್ತಿದ್ದು ವಿಂಧ್ಯಪರ್ವತದಿಂದ ದಕ್ಷಿಣದಿಶೆಯ ದೇಶಭಾಗವು ಉತ್ತರ ಭಾರತದ ಉಚ್ಚವರ್ಣದವರ ದೃಷ್ಟಿಯಲ್ಲಿ ಅನಾರ್ಯದೇಶವೆನ್ನಿಸಿಕೊಂಡಿದ್ದಿತೆಂದು

ಹೇಳಲು ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಅಂತೆಯೇ ದಕ್ಷಿಣಭಾರತದ ನಿವಾಸಿಗಳಾಗಿದ್ದ ಮುರಕುಲದ ಅರಸರು ಉತ್ತರಭಾರತದ ಉಚ್ಚವರ್ಣದವರ ದೃಷ್ಟಿಯಲ್ಲಿ ಅನಾರ್ಯ ಅಥವಾ ಮ್ಲೇಚ್ಛ ಅಥವಾ ಶೂದ್ರರೆಂದು ಪರಿಗಣಿತರಾಗಿದ್ದರಾದುದರಿಂದ ಈ ಮನೆತನದ ಅರಸುಕುವರಿಯ ಗರ್ಭಸಂಜಾತನಾದ ಕುಮುದನಂದ ಹಾಗೂ ಇವನ ಸಂತತಿಯ ಅರಸರಾದ ಮೌರ್ಯರಾಜರನ್ನು ಶೂದ್ರಪ್ರಾಯರನ್ನಾಗಿ ಪರಿಗಣಿಸಲಾಗಿದ್ದಿತೆಂದು ಮುದ್ರಾರಾಕ್ಷಸನಾಟಕದ ಕಥಾಯತ್ತ ಐತಿಹ್ಯ ಹಾಗೂ ಈ ನಾಟಕದ ಉಪೋದ್ಘಾತದ ಕಥಾಯತ್ತ ಐತಿಹ್ಯಾಂಶಗಳಿಂದ ವ್ಯಕ್ತವಾಗುವುದು. ಅಂತೆಯೇ ಮುದ್ರಾರಾಕ್ಷಸ ನಾಟಕದ ಈ ಮುಂದಿನ ಉಕ್ತಿಗಳು ಮೌರ್ಯಚಂದ್ರಗುಪ್ತನನ್ನು ಕುಲಹೀನನನ್ನಾಗಿ ಪರಿಗಣಿಸಲಾಗಿದ್ದಿತೆಂಬುದನ್ನು ಸಾಕ್ಷೀಕರಿಸುವುವು.

ಕಾಂಚುಕೀಯನು ಹೇಳುವ ಮಾತು :

'ತತ್ ಸ್ಥಾನೇ ಖಲು ವೃಷಲೋ ದೇವಶ್ಚಂದ್ರಗುಪ್ತಃ'

[ಅಂಕ ೩, ೧೫ ನೇ ಶ್ಲೋಕಾನಂತರದ ವಾಕ್ಯ]

ಅಮಾತ್ಯರಾಕ್ಷಸನಾಡುವ ನುಡಿ :

'ಪತಿಂ ಪಾಪಂ ಮೌರ್ಯಂ ಯದಸಿ ಕುಲಹೀನಂ ಕೃತವತೀ'

[ಅಂಕ ೨, ಪ. ಸಂ. ೭, ಪಾದ ೨]

ಮೇಲ್ಕಂಡ ಕಾಂಚುಕೀಯನ ಮಾತಿನಲ್ಲಿ ಪ್ರಯುಕ್ತವಾಗಿರುವ 'ವೃಷಲ' ಪದದಿಂದ ಚಂದ್ರಗುಪ್ತನ ವಿಷಯವಾಗಿ ಜಾತಿಹೀನತೆಯ ಅವಜ್ಞೆಯು ಸೂಚಿತವಾಗಿದೆಯಾದರೆ, ಅಮಾತ್ಯರಾಕ್ಷಸನ ನುಡಿಯಲ್ಲಿ ಸ್ಪಷ್ಟವಾಗಿ ಚಂದ್ರಗುಪ್ತನು ಕುಲಹೀನನೆನ್ನಿಸಿಕೊಂಡಿದ್ದಾನೆ. ಇಷ್ಟಲ್ಲದೆ ಶೂದ್ರಸ್ತ್ರೀಗರ್ಭಸಂಜಾತನಾದ ಮಹಾಪದ್ಮನಾರಭ್ಯ ಮುಂದಿನಕಾಲದ ರಾಜರೆಲ್ಲರೂ ಶೂದ್ರಕುಲದವರಾಗಿರುವರೆಂಬ ಪುರಾಣೋಕ್ತಿಯನುಗುಣವಾಗಿಯೂ[1] ಚಂದ್ರಗುಪ್ತಾದಿ ಮೌರ್ಯಸಂತತಿಯ ಅರಸರು ಶೂದ್ರಕುಲದವರೆಂದು ಪರಿಗಣಿತರಾಗಿದ್ದಾರೆ. ಹೀಗೆ ಸರ್ವಸಾಧಾರಣವಾಗಿ ವೈದಿಕಮತಸಂಪ್ರದಾಯದ ಪರಂಪರಾಗತ ಇತಿವೃತ್ತಕೃತಿಗಳಲ್ಲಿ ಕಂಡುಬರುವ ಹೇಳಿಕೆಗಳನುಗುಣವಾಗಿ ಚಂದ್ರಗುಪ್ತಾದಿ ಮೌರ್ಯವಂಶಜರು ಶೂದ್ರರಾಜರೆಂದು ಪರಿಗಣಿತರಾಗಿರಲು, ಈ ರಾಜಸಂತತಿಯು ಮಾತೃಮೂಲದಿಂದ ದಕ್ಷಿಣಭಾರತ ಪ್ರದೇಶವಾಸಿಗಳಾಗಿದ್ದ ಮುರಮನೆತನದ ಅರಸರ ಸಂಬಂಧಿಗಳಾಗಿದ್ದುದೇ ಕಾರಣವಾಗಿರುವುದೆಂದು ವ್ಯಕ್ತವಾಗುವುದು.

---

1 ತತಃ ಪ್ರಭೃತಿ ರಾಜಾನೋ ಭವಿಷ್ಯಾಃ ಶೂದ್ರಯೋನಯಃ ।

[ವಾಯುಪುರಾಣ– ಅಧ್ಯಾಯ ೩೭, ಪದ್ಯ ಸಂ. ೩೨೧]

ಚಾಣಕ್ಯ ಮತ್ತು ಚಂದ್ರಗುಪ್ತರು ಮಗಧರಾಜ್ಯವನ್ನು ಆಕ್ರಮಣಮಾಡಿದ ಸಮಯದಲ್ಲಿ ಅನೇಕ ರಾಜರು ಅವರ ಬೆಂಬಲಿಗರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಹೀಗೆ ಇವರಿಗೆ ಬೆಂಬಲವಿತ್ತ ರಾಜರಲ್ಲಿ, ಭಾರತೀಯ-ಕಥಾಯತ್ತವಾದ ಐತಿಹ್ಯದನು ಗುಣವಾಗಿ, 'ಪರ್ವತಕ' ಎಂಬ ಹೆಸರಿನ ರಾಜನು ಪ್ರಮುಖನಾಗಿದ್ದಾನೆ. ಆದರೆ ಇವನು ಐತಿಹಾಸಿಕ ವ್ಯಕ್ತಿಯೇ ? ಅಥವಾ ಕೇವಲ ಕಲ್ಪನೆಯ ವ್ಯಕ್ತಿಯೇ ? ಎಂಬುದು ಇಂದಿಗೂ ಸಮಸ್ಯಾತ್ಮಕವಾಗಿ ಉಳಿದಿರುವ ಅಂಶವಾಗಿದೆ. ಇವನ ವಿಷಯವಾಗಿ ಪರಿಶಿಷ್ಟಪರ್ವ ಮತ್ತು ಬೃಹತ್ಕಥಾಕೋಶಗಳಲ್ಲಿ ಈ ಮುಂದಿನ ಐತಿಹ್ಯವು ಉಳಿದು ಬಂದಿದೆ.

ಪರಿಶಿಷ್ಟಪರ್ವದ ಕಥನ [ಸರ್ಗ ೮; ಪ. ಸಂ. ೨೯೭ ರಿಂದ ೩೩೮]

"ಚಾಣಕ್ಯನು (ಯುದ್ಧ) ಸಹಾಯಾಪೇಕ್ಷಿಯಾಗಿ ಹಿಮವತ್ಕೂಟವಾಸಿಯಾದ 'ಪರ್ವತಕ' ಎಂಬ ಹೆಸರಿನ ರಾಜನೊಡನೆ ಸ್ನೇಹ ಬೆಳೆಸಿದನು. ಒಂದು ದಿನ ಚಾಣಕ್ಯನು, 'ನಂದರಾಜನನ್ನು ಕೊಂದು ಅವನ ರಾಜ್ಯವನ್ನು ಸೋದರರಂತೆ ಹಂಚಿಕೊಳ್ಳೋಣ'ಎಂದು ಪರ್ವತಕನಿಗೆ ಹೇಳಿದನು. ಅವನ ಮಾತು ಪರ್ವತಕನಿಗೆ ಒಪ್ಪಿಗೆಯಾಯಿತು. ಅನಂತರ ಚಾಣಕ್ಯನ (ಬುದ್ಧಿ) ಸಾಮರ್ಥ್ಯಯುಕ್ತರಾದ ಚಂದ್ರಗುಪ್ತ ಮತ್ತು ಪರ್ವತಕರು ಅಮಿತವಾದ ಸೈನ್ಯದೊಡನೆ ಪಾಟಲೀಪುತ್ರನಗರವನ್ನು ಸುತ್ತುವರಿದು ಅದನ್ನು ಭೇದಿಸಿ ಒಳಹೊಕ್ಕರು. ಆಗ ಕೋಶ, ಬಲ, ಬುದ್ಧಿ ಮತ್ತು ಪರಾಕ್ರಮಗಳಿಂದ ಕ್ಷೀಣನಾಗಿದ್ದ ನಂದನು ನಾಸಾಗ್ರಾರೂಢಜೀವಿತನಾಗಿ ಚಾಣಕ್ಯನ ಬಳಿ ಧರ್ಮದ್ವಾರವನ್ನು ಬೇಡಿದನು. ಇವನ ಈ ಬೇಡಿಕೆಯನ್ನು ಮನ್ನಿಸಿ 'ನಿನಗಿಷ್ಟವಾದುದನ್ನು ಯಥಾಶಕ್ತಿಯಾಗಿ ರಥವೊಂದರಲ್ಲಿ ತೆಗೆದುಕೊಂಡುಹೋಗು ನಿನ್ನನ್ನು ಯಾರೂ ತಡೆಯುವುದಿಲ್ಲ; ಸಮಾಧಾನಹೊಂದು ; ಹೆದರಬೇಡ, ಬ್ರಾಹ್ಮಣನೋಪಾದಿಯಲ್ಲಿ ಅವಧ್ಯನಾಗಿರುವೆ' ಎಂದು ಹೇಳಿದನು. ಆ ಕೂಡಲೇ ನಂದರಾಜನು ರಥದಲ್ಲಿ ಸಾಧ್ಯವಾದಷ್ಟು ಧನವನ್ನು ತುಂಬಿಸಿಕೊಂಡು, ತನ್ನ ಇಬ್ಬರು ಪತ್ನಿಯರು ಮತ್ತು ಮಗಳನ್ನು ಕರೆದುಕೊಂಡು ನಗರದಿಂದ ಹೊರಬಿದ್ದನು. ಅಲ್ಲಿ ನಂದರಾಜನ ಮಗಳು ಎದುರಾಗಿ ಬರುತ್ತಿದ್ದ ಚಂದ್ರಗುಪ್ತನನ್ನು ಕಂಡು ಅವನಲ್ಲಿ ಅನುರಾಗ ವುಕ್ತವಳಾದಳು. ಇದನ್ನು ತಿಳಿದ ನಂದರಾಜನು 'ಎಲೈ ವತ್ಸೆ! ಕ್ಷತ್ರಿಯ ಕನ್ಯೆಯರಿಗೆ ಸ್ವಯಂವರವು ವಿಧಿಸಲ್ಪಟ್ಟಿದೆ; ಇಷ್ಟಾನುಸಾರವಾಗಿ ನಿನ್ನ ಅಭೀಪ್ಸಿತ ವರವನ್ನು ಹೊಂದು. ನಿನಗೆ ಮಂಗಳವಾಗಲಿ, ರಥದಿಂದ ಇಳಿಯುವಳಾಗು, ನನ್ನನ್ನು ಬಿಡು, ನಿನ್ನ ವಿವಾಹವಿಷಯವು ನನಗೆ ಅಲುಗಿನ ಚುಚ್ಚಿನಂತಾಗಿದೆ. ನಿನ್ನೊಡನೆ ಅದು ಹೋಗಲಿ' ಎಂದು ಹೇಳಿದನು. ಹೀಗೆ ಅನುಮತಿಪಡೆದ ನಂದರಾಜನ ಮಗಳು ಆ ಕೂಡಲೇ ರಥದಿಂದಿಳಿದು ಚಂದ್ರಗುಪ್ತನ ರಥವನ್ನೇರಲು ಚಕ್ರದ ಒಂಭತ್ತು ಅರೆಗಳು ಗಾಣಕ್ಕೆ ಸಿಕ್ಕಿದ ಕಬ್ಬಿನಂತೆ, ಭಗ್ನವಾದವು. 'ಅಮಂಗಲಕರ

ಳಾಗಿ ಇವಳಾರೋ ಒಬ್ಬಳು ನನ್ನ ರಥವನ್ನೇರುತ್ತಿದ್ದಾಳೆ' ಎಂದು ಭಾವಿಸಿದ ಚಂದ್ರಗುಪ್ತನು ಅವಳನ್ನು ರಥದಿಂದೋಡಿಸಲು ಯತ್ನಿಸುತ್ತಿದ್ದುದನ್ನು ಕಂಡ ಚಾಣಕ್ಯನು 'ಇದು ಶುಭಶಕುನ, ಅನ್ಯಥಾಭಾವಿಸಬೇಡ, ಈ ಶಕುನದಿಂದ ನಿನ್ನ ವಂಶವು ಒಂಭತ್ತು ತಲಾಂತರಗಳ ಪರ್ಯಂತ ಹೆಚ್ಚುಹೆಚ್ಚಾದ ಅಭಿವೃದ್ಧಿಹೊಂದುವುದಾಗಿ ಸೂಚಿತವಾಗುವುದು' ಎಂದು ಹೇಳಿದನು.

ಅನಂತರ ಚಂದ್ರಗುಪ್ತ ಪರ್ವತಕರು ನಂದರಾಜನ ಭವನವನ್ನು ಪ್ರವೇಶಿಸಿ, ಅಲ್ಲಿದ್ದ ವಿಪುಲವಾದ ಸಂಪತ್ತನ್ನು ಹಂಚಿಕೊಳ್ಳಲು ತೊಡಗಿದರು. ಆಗ ನಂದರಾಜನಿಂದ ಪೋಷಿತಳಾಗಿದ್ದ ವಿಷಕನ್ಯೆಯನ್ನು ಕಂಡ ಪರ್ವತಕನು ಆಕೆಯಲ್ಲಿ ಅನುರಕ್ತನಾದನು. ಇದನ್ನು ತಿಳಿದ ಚಾಣಕ್ಯನು ಆ ವಿಷಕನ್ಯೆಯನ್ನು ಪರ್ವತಕನಿಗಿತ್ತು ವಿವಾಹಮಾಡಿದನು. ಪಾಣಿಗ್ರಹಣವಿಧಿ ನಡೆಯುತ್ತಿರಲು ಹೋಮಾಗ್ನಿಯ ತಾಪದಿಂದ ಆ ಕನ್ಯೆಯಲ್ಲಿ ಮೂಡಿದ ಬೆವರಿನ ಸಂಪರ್ಕದಿಂದ ಪರ್ವತಕನಿಗೆ ವಿಷವೇರಿ ದೇಹಸ್ವಾಸ್ಥ್ಯ ತಪ್ಪಿತು. ಆಗ ಪರ್ವತಕನು ಚಂದ್ರಗುಪ್ತನನ್ನು ಕುರಿತು ವತ್ಸನೇ! ವಿಷಪಾನಮಾಡಿದವನಂತೆ ಮಾತನಾಡಲೂ ತ್ರಾಣವಿಲ್ಲದವನಾಗಿದ್ದೇನೆ; ಸಾಯುತ್ತಿದ್ದೇನೆ, ನನ್ನನ್ನು ಬದುಕಿಸು' ಎಂದು ಹೇಳಿದನು. ಆಗ ಚಂದ್ರಗುಪ್ತನು 'ಮಾಂತ್ರಿಕರೆ, ಮಾಂತ್ರಿಕರೆ! ವೈದ್ಯರೆ, ವೈದ್ಯರೆ!' ಎಂದು ಕೂಗುತ್ತಿರಲು ಚಾಣಕ್ಯನು ಅವನನ್ನು ಕುರಿತು 'ಔಷಧವಿಲ್ಲದೆ ನಿನ್ನ ವ್ಯಾಧಿಯು ತೊಲಗುವಂತಿದ್ದರೆ, ಅದು ತೊಲಗಲಿ, ಮೌನವಾಗಿರು ಅರ್ಧ ರಾಜ್ಯಾಪಹಾರಿಯನ್ನು ಯಾವನು ಕೊಲ್ಲುವುದಿಲ್ಲವೋ ಅಂತಹವನು ತಾನೇ ಕೊಲೆಗೊಳ್ಳುವನು. ಹೀಗೆ ವಧಾರ್ಹನಾದ ಇವನು ಸ್ವಯಂ ಮೃತನಾಗುತ್ತಿರಲು ನೀನು ಪುಣ್ಯವಂತನಿರುವಿ' ಎಂದು ಪಿಸುಗುಟಿದನು. ಅನಂತರ ಹಿಮವತ್ಕೂಟದ ರಾಜನು ಮೃತನಾದನಾಗಿ ಚಂದ್ರಗುಪ್ತನು ಪೂರ್ಣ ರಾಜ್ಯದ ಅಧಿಪತಿಯಾದನು.

ಬೃಹತ್ಕಥಾಕೋಶದ ಕಥನ–ಚಾಣಕ್ಯಮುನಿ ಕಥಾನಕಂ-[ಕಥಾಸಂಖ್ಯೆ-೧೪೩] "....ನಂದವಂಶವನ್ನು ಸಮೂಲೋತ್ಪಾಟನಮಾಡುವುದಾಗಿ ಪ್ರತಿಜ್ಞೆಮಾಡಿದ ಚಾಣಕ್ಯನು 'ರಾಜ್ಯಾಪೇಕ್ಷಿಯಾದ ವ್ಯಕ್ತಿಯಾರಾದರಿದ್ದಲ್ಲಿ ಅವನು ಶೀಘ್ರವಾಗಿ ನನ್ನ ಬಳಿ ಬಂದು ನಿಲ್ಲಲಿ' ಎಂದು ಕೂಗಿದನು. ಇದನ್ನು ಕೇಳಿದ ವ್ಯಕ್ತಿಯೋರ್ವನು 'ನಾನು ರಾಜ್ಯಾಪೇಕ್ಷಿಯಾಗಿರುವೆನು, ಪ್ರಭುವೇ! ಅದನ್ನು ನನಗೆ ಕೊಡು' ಎಂದು ಹೇಳಿದನು. ಚಾಣಕ್ಯನು ಆ ವ್ಯಕ್ತಿಯ ಕೈಹಿಡಿದು ಶೀಘ್ರವಾಗಿ (ಪಾಟಲಿಪುತ್ರ) ನಗರದಿಂದ ಹೊರಬಿದ್ದನು. ಅನಂತರ ಆ ವ್ಯಕ್ತಿಯೊಡನೆ ಶೀಘ್ರಗಾಮಿಯಾದ ಕುದುರೆಯನ್ನೇರಿ ವಾರ್ಧಿಮಧ್ಯದಲ್ಲಿ (ದ್ದ) ಜಲದುರ್ಗವನ್ನು ಪ್ರವೇಶಿಸಿ ರಾಜ್ಯದ (ರಾಜನ?) ಅನ್ವೇಷಣದಲ್ಲಿದ್ದನು. ಇಂತಿದ್ದ ಇವನ ವಿಷಯವನ್ನು (?) ವ್ಯಕ್ತಿಯೋರ್ವನು 'ಸಮುದ್ರಜಲದಿಂದಾಗಿರುವ ಜಲದುರ್ಗದಲ್ಲಿ ಧೀಮಂತನಾದ ನರಶ್ರೇಷ್ಠನೋರ್ವನಿದ್ದಾನೆ' ಎಂದು

ಪ್ರತ್ಯಂತ(=ಸೀಮಾಂತ) ವಾಸಿಯಾದ ರಾಜನಿಗೆ ತಿಳಿಸಿದನು. ಇದನ್ನು ಕೇಳಿದ ಪ್ರತ್ಯಂತವಾಸಿಭೂಪನು ಮತಿಶಾಲಿಯಾದ ಚಾಣಕ್ಯನನ್ನು ತನ್ನಸ್ಥಾನಕ್ಕೆ ಕರೆದೊಯ್ದನು. ಆಗ ಪ್ರತ್ಯಂತವಾಸಿಗಳಾದ ರಾಜರೆಲ್ಲರೂ ಪರ್ವತಾಂತದ (ಪರ್ವಂತಾತನ?) ಬಳಿ ಸೇರಿ ಧನ-ದವಸಾದಿಗಳೆಲ್ಲವನ್ನೂ ಕಳುಹಿದರು? [ಪರ್ವಂತಾಂತಂ ಪರಿಪ್ರಾಪ್ಯ ಭೂಪಾಃ ಪ್ರತ್ಯಂತವಾಸಿನಃ। ಭಕ್ತಂ ಪ್ರವೇಶಯಾಮಾಸುರ್ಧನಂ ಚ ಸಕಲಂ ತದಾ ‖ ೬೭ ‖] ಅನಂತರ ಇವರು ಪ್ರತ್ಯಂತವಾಸಿಭೂಪರಿಂದ ಭೇದೋಪಾಯಪೂರ್ವಕ ನಂದರಾಜನನ್ನು (ಕುರಿತು) ದ್ವೇಷಭಾವತಾಳಿದವರಾಗಿ ಇದ್ದರು(?) ಶತ್ರುಗಳಾದ ಪ್ರತ್ಯಂತವಾಸಿರಾಜರಿಂದ ಕಪ್ಪಕೊಡಬೇಕೆಂದು ಆದಿಷ್ಟನಾದ ನಂದನು 'ನಿಶ್ಚಿತವಾಗಿ ನಾನು ಅದನ್ನು ಕೊಡುವುದಿಲ್ಲ' ಎಂದು ಹೇಳಿದನು. ಅನಂತರ ಮಂತ್ರಭೇದಪೂರ್ವಕ ನಂದನ ಭೃತ್ಯರನ್ನು ಭ್ರಾಂತ ಸಂಭ್ರಾಂತನ್ನಾಗಿ ಮಾಡಿ ಚಾಣಕ್ಯನು ತನ್ನ ಬುದ್ಧಿಬಲದಿಂದ ನಂದನನ್ನು ಶೀಘ್ರವಾಗಿ ಕೊಂದು, ಕುಸುಮಪುರದಲ್ಲಿ ವಿಪುಲವಾದ ರಾಜ್ಯವಾಳಿದನು. ಬಹುಕಾಲ ರಾಜ್ಯವಾಳಿದ ಅನಂತರ (ರಾಜ್ಯಾಪೇಕ್ಷಿಯಾಗಿ ಪೂರ್ವದಲ್ಲಿ) ಪ್ರಾರ್ಥಿಸಿದ್ದ ತನ್ನನ್ನು ಆ ಮನುಷ್ಯನಿಗೆ ರಾಜ್ಯಪಟ್ಟಕಟ್ಟಿ ಜಿನೇಶ್ವರೋದಿತವಾದ ದೀಕ್ಷೆಯನ್ನು ಸ್ವೀಕರಿಸಿದನು."

ಪರಿಶಿಷ್ಟಪರ್ವದ ಮೇಲ್ಕಂಡ ಹೇಳಿಕೆಯಂತೆ ಚಾಣಕ್ಯನು, ಸಹಾಯಾಪೇಕ್ಷಿಯಾಗಿ ಹಿಮವತ್ಕೂಟ ಸಂನಿವಿಷ್ಟನಾಗಿದ್ದ ಪರ್ವತಕನಬಳಿ ಹೋದನೆಂದಿದೆಯಾದರೆ ಬೃ. ಕ. ಕೋಶದಲ್ಲಿ ಸಮುದ್ರಸಮುದ್ಭೂತವಾದ ಜಲದುರ್ಗನಿವಾಸಿಯಾಗಿದ್ದ ಪ್ರತ್ಯಂತಭೂಪನ ಬಳಿಹೋದನೆಂದು ಹೇಳಿದೆ. ಹೀಗೆ ಚಾಣಕ್ಯನು ಸಹಾಯಾಪೇಕ್ಷಿಯಾಗಿ ಪಯಣಮಾಡಿದ ಸ್ಥಾನ ಮತ್ತು ವ್ಯಕ್ತಿಯನ್ನು ನಿರ್ದೇಶಿಸುವಲ್ಲಿ ಈ ಮೇಲ್ಕಂಡ ಐತಿಹ್ಯಗಳ ಮಧ್ಯೆ ಭಿನ್ನಮತವಿರುವುದು ಸ್ಪಷ್ಟವಿದೆ. 'ಪರ್ವತಕ' ಎಂಬ ಹೆಸರಿನಾಧಾರದಿಂದ, ಈ ಹೆಸರಿನ ರಾಜನು ಹಿಮವತ್ಕೂಟ ಸಂನಿವಿಷ್ಟನಾಗಿದ್ದಿರಬೇಕೆಂಬ ಗ್ರಹಿಕೆಗವಕಾಶವಾಗಿದ್ದು, ಪರಿಶಿಷ್ಟಪರ್ವದಲ್ಲಿ ಈ ಗ್ರಹಿಕೆಯು ಪ್ರತಿಫಲಿತವಾಗಿದೆಯೆಂದು ಕಂಡುಬರುವುದು. ಬೃ. ಕ. ಕೋಶದಲ್ಲಿ ಸೂಚಿತವಾಗಿರುವ ವಾರ್ಧಿಮಧ್ಯದ ಜಲದುರ್ಗವು (ವಾರ್ಧಿ=ಸಿಂಧು) ಸಿಂಧುನದಿಯ ಜಲವನ್ನು ದುರ್ಗವಾಗಿ ಹೊಂದಿದ್ದ ನಗರವಾಗಿರಬಹುದೇ? ಎಂಬ ಪರಿಭಾವನೆಗವಕಾಶವಿದೆ. ಗ್ರೀಕ್ ದೇಶಮೂಲದ ಇತಿಹಾಸದನುಗುಣವಾಗಿ, ಮೌರ್ಯಚಂದ್ರಗುಪ್ತನು ಅಲೆಗ್ಸಾಂಡರನನ್ನು ಸಂದರ್ಶಿಸಿದನೆಂದೂ ಆಗ ಕಾರಣಾಂತರದಿಂದ ಅಲೆಕ್ಸಾಂಡರನು ಕೋಪಗೊಂಡನಾಗಿ, ಚಂದ್ರಗುಪ್ತನು ಓಟಕಿತ್ತು ಪ್ರಾಣಾಪಾಯದಿಂದ ಪಾರಾದನೆಂದೂ ಚರಿತ್ರೆಯ ಕೃತಿಗಳಲ್ಲಿ ಹೇಳಲಾಗಿದೆ.[1] ಇದರಿಂದ ಚಾಣಕ್ಯನು ಸಮುದ್ರ (=ಸಿಂಧು) ಜಲಸಂಭವವಾದ ಜಲದುರ್ಗದಲ್ಲಿದ್ದ ಪ್ರಂತ್ಯಂತವಾಸಿಭೂಪನ ಬಳಿ ಹೋದನೆಂಬ

1 'ಏಜ್ ಆಫ್ ದಿ ನಂದಾಸ್ ಆಂಡ್ ಮೌರ್ಯಾಸ್'_ಪು. ಸಂ. ೧೪೪.

ಬೃ. ಕ. ಕೋಶದ ಮೇಲ್ಕಂಡ ಐತಿಹ್ಯಾಂಶವು, ಚಂದ್ರಗುಪ್ತ ಮತ್ತು ಚಾಣಕ್ಯರು ಅಲೆಕ್ಸಾಂಡರನನ್ನು ಸಂದರ್ಶಿಸಿ ಯುದ್ಧಸಹಾಯಾರ್ಥವಾಗಿ ಸಂಧಾನ ನಡೆಸಿದ ಐತಿಹಾಸಿಕಪ್ರಸಂಗದ ಅವಶೇಷವಾಗಿರಬಹುದೆಂದು ಭಾವಿಸಲವಕಾಶವಾಗುವುದು. ಆದರೆ ಚಾಣಕ್ಯ ಮತ್ತು ಚಂದ್ರಗುಪ್ತರು ಯುದ್ಧಸಹಾಯಾರ್ಥಿಗಳಾಗಿ ಸಂದರ್ಶಿಸಿದ ವ್ಯಕ್ತಿಯನ್ನು 'ಪರ್ವತಕ' ಎಂಬುದಾಗಿ ಪರಿಶಿಷ್ಟಪರ್ವದ ಮೇಲ್ಕಂಡ ಕಥೆಯಲ್ಲಿ ಹೆಸರಿಸಲಾಗಿದೆಯಲ್ಲದೆ, ಈ ಪರ್ವತಕನ ಸಹಾಯದಿಂದಲೇ ಚಂದ್ರಗುಪ್ತನಿಗೆ ಮಗಧ ರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಳ್ಳಲು ಸಾಧ್ಯವಾಯಿತೆಂದು ಈ ಕಥೆಯಿಂದ ಸೂಚಿತವಾಗುವುದು. ಇಂತೆಯೇ ಚಂದ್ರಗುಪ್ತನ ಈ ವಿಜಯಸಾಧನೆಗೆ ಪ್ರಧಾನವಾಗಿ ಪರ್ವತಕನು ಸಹಾಯಕನಾಗಿದ್ದನೆಂದು ಮುದ್ರಾರಾಕ್ಷಸನಾಟಕದ ಕಥಾಯತ್ತ ಐತಿಹ್ಯದಿಂದಲೂ ಸೂಚಿತವಾಗುವುದು. ಇದರಿಂದ ಬೃ. ಕ. ಕೋಶದ ಕಥೆಯಲ್ಲಿ ನಿರ್ದೇಶಿತನಾಗಿರುವ ಜಲದುರ್ಗದಲ್ಲಿದ್ದ ಪ್ರತ್ಯಂತವಾಸಿಭೂಪನು ಈ ಪರ್ವತಕನೇ ಆಗಿರಬೇಕೆಂದು ಪರಿಭಾವಿಸಲವಕಾಶವಾಗುವುದಲ್ಲದೆ, ಈ ಪರಿಭಾವನೆಯು, ಅಸ್ತವ್ಯಸ್ತ ರೀತಿಯಿಂದ ಉಳಿದುಬಂದಿರುವ 'ಪರ್ವತಾಂತಂ ಪರಿಪ್ರಾಪ್ಯ....' ಎಂಬ ಈ ಕೃತಿಯ ಉಕ್ತಿಯಿಂದಲೂ ಪುಷ್ಟೀಕೃತವಾಗುವುದು. ಮುದ್ರಾರಾಕ್ಷಸನಾಟಕದ ಕಥೆಯಲ್ಲಿ ಪರ್ವತಕನ ಸುತನೆನಿಸಿ ನಿರ್ದೇಶಿತನಾಗಿರುವ ಮಲಯಕೇತುವನ್ನು 'ಮ್ಲೇಂಛ'ನೆಂದು ಹೇಳಿದೆ. ಭಾರತೀಯ ಇತಿವೃತ್ತಸಾಹಿತ್ಯದಲ್ಲಿ ವಿದೇಶೀಯ ಧಾಳಿಕಾರರನ್ನು ಸರ್ವಸಾಧಾರಣವಾಗಿ 'ಮ್ಲೇಂಛ'ರೆಂದು ನಿರ್ದೇಶಿಸಲಾಗಿರುವ ಉದಾಹರಣೆಗಳಿವೆ. ಇದರಂತೆ ಚಂದ್ರಗುಪ್ತನು ಮಗಧರಾಜ್ಯವನ್ನು ಸ್ವಾಯತ್ತೆಗೊಳಿಸಿಕೊಳ್ಳಲು ಯತ್ನಿಸುತ್ತಿದ್ದ ಸಮಯದಲ್ಲಿ ವಾರ್ಧಿ (=ಸಿಂಧು) ಜಲದುರ್ಗಸಂನಿವಿಷ್ಟನಾಗಿದ್ದ ಮ್ಲೇಂಛ ರಾಜನು ಅಲೆಕ್ಸಾಂಡರನಲ್ಲದೆ ಮತ್ತಾರೂ ಆಗಿರಲಾರನೆಂಬುದು ನಿಶ್ಚಿತ. ಆದ್ದರಿಂದ ಭಾರತೀಯ ಮೂಲದ ಕಥಾಯತ್ತ ಐತಿಹ್ಯದಲ್ಲಿ ಅಲೆಕ್ಸಾಂಡರನನ್ನು 'ಪರ್ವತಕ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ವ್ಯಕ್ತವಾಗುವುದು. ಅಶೋಕಸಾಮ್ರಾಟನ ಶಾಸನಗಳಲ್ಲಿ 'ಅಲೆಕ್ಸಾಂಡರ್' ಎಂಬ ಹೆಸರು 'ಅಲಿಕಸುಂದರ' ಮತ್ತು 'ಅಲಿಕ್ಯಸುಂದರ' ಎಂದು ರೂಪಾಂತರಹೊಂದಿದೆಯೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಇಂತೆಯೇ ಭಾರತೀಯ ಇತಿವೃತ್ತ ಸಾಹಿತ್ಯದಲ್ಲಿ ಅಲೆಕ್ಸಾಂಡರನನ್ನು ಮೂಲತಃ 'ಗ್ರೀಕರಾಜ' ಎಂದು ನಿರ್ದೇಶಿಸುವ ರೂಢಿಯಿದ್ದು ಕಾಲಾನುಕ್ರಮದಲ್ಲಿ 'ಗ್ರೀಕ' ಎಂಬುದು ಪ್ರಾಕೃತಭಾಷಾನಿಯಮದ ಸ್ವರಭಕ್ತಿಯ ಕಾರಣದಿಂದ 'ಗಿರಿಕ' ಎಂದು ಪರಿವರ್ತನೆಹೊಂದಿದ್ದು, ಇದರ ಸಮಾನಾರ್ಥಕವಾದ 'ಪರ್ವತಕ' ಎಂಬ ಹೆಸರು ಉಳಿದುಬಂದಿರಬಹುದಾದ ಸಂಭವವಿದೆ. ಇಷ್ಟಲ್ಲದೆ ಪರ್ವತಕನು ವಿಷಕನ್ಯೆಯ ಸಂಸರ್ಗದಿಂದ ಮೃತನಾದನೆಂಬ ಭಾರತೀಯ ಕಥಾಯತ್ತವಾದ ಐತಿಹ್ಯದ ಸದೃಶರೂಪವಾಗಿ ಅಲೆಕ್ಸಾಂಡರನ ಬಳಿಗೆ ವಿಷಕನ್ಯೆಯೋರ್ವಳನ್ನು ಭಾರತದೇಶದ ರಾಣಿಯೋರ್ವಳು ಕಳುಹಿದ್ದಳೆಂಬ ಲ್ಯಾಟಿನ್ ಭಾಷೆಯ ಕಥಾಯತ್ತ ಐತಿಹ್ಯವಿರುವುದಾಗಿ ತಿಳಿದುಬರು

ವುದು.[1] ಇದರಿಂದ ಭಾರತೀಯ ಕಥಾಯತ್ತ ಐತಿಹ್ಯದ 'ಪರ್ವತಕ' ಎಂಬ ಹೆಸರು ಅಲೆಕ್ಸಾಂಡರನ ಸೂಚಕವಾಗಿರಬೇಕೆಂಬ ಈ ಮೇಲಿನ ವಿಚಾರಾಂಶವು ಪುಷ್ಟೀಕೃತವಾದಂತಾಗುವುದು. ಇಂತಿದ್ದರೂ ಈ ವಿಚಾರಾಂಶದ ತಥ್ಯವನ್ನು ಪ್ರಶ್ನಿಸುವಂತಿರುವ ಮತ್ತೊಂದು ಪ್ರಮುಖ ಐತಿಹ್ಯಾಂಶವನ್ನು ಗಮನಿಸಬೇಕಾದ ಅವಶ್ಯಕತೆಯಿದೆ: ನಂದರಾಜನನ್ನು ಪರಾಜಯಗೊಳಿಸಿ ಪಾಟಲೀಪುತ್ರನಗರವನ್ನು ಸ್ವಾಧೀನಗೊಳಿಸಿಕೊಂಡ ಯುದ್ಧದಲ್ಲಿ ಚಂದ್ರಗುಪ್ತನಿಗೆ ಪರ್ವತಕನು (ಅಲೆಕ್ಸಾಂಡರನು) ಪ್ರಧಾನಸಹಾಯಕನಾಗಿದ್ದನೆಂದು ಮತ್ತು ಇವನು ವಿಷಕನ್ಯೆಯ ಸಂಸರ್ಗದಿಂದ ಮೃತನಾದನೆಂದು ಭಾರತೀಯ ಕಥಾಯತ್ತವಾದ ಐತಿಹ್ಯದಿಂದ ನಿರ್ದೇಶಿತವಾಗುವುದಾದರೆ ಗ್ರೀಕ್‌ದೇಶಮೂಲದ ಇತಿಹಾಸದನುಗುಣವಾಗಿ ಅಲೆಕ್ಸಾಂಡರನು ಸಿಂಧುಪ್ರಾಂತ್ಯದಿಂದಲೇ ತನ್ನ ತಾಯ್ನಾಡಿನತ್ತ ಹಿಮ್ಮರಳಿ ಮಾರ್ಗಮಧ್ಯೆ ಕ್ರಿ. ಪೂ. ೩೨೩ ರಲ್ಲಿ ಮೃತನಾದನೆಂದು ಚರಿತ್ರೆಗಳಲ್ಲಿ ನಿರೂಪಿಸಲಾಗಿದೆ. ಇದರಿಂದ 'ಪರ್ವತಕ' ಎಂಬ ಹೆಸರು ಅಲೆಕ್ಸಾಂಡರನ ನಿರ್ದೇಶಕವಾಗಿರುವುದೆಂಬ ಮೇಲ್ಕಂಡ ತರ್ಕಿತಾಂಶವು ಬಾಧಿತವಾದಂತಾಗುವುದು. ಇಂತಿದ್ದರೂ ಈ ವಿಷಯಸಂಬಂಧಿಯಾದ ಸಾಧಕಬಾಧಕಾಂಶಗಳನ್ನು ವಿಮರ್ಶಾಪೂರ್ವಕವಾಗಿ ಪುನಃಪರಾಮರ್ಶೆಮಾಡಬೇಕಾದ ಅವಶ್ಯಕತೆಯಿದೆ : ಬಲಿಷ್ಠವೂ ಅಗಾಧವೂ ಆದ ಸೇನಾಸಂಪತ್ತಿಯಿಂದ ಕೂಡಿದ್ದ ನಂದರಾಜನನ್ನು ಪರಾಜಯಗೊಳಿಸಲು ಮೌರ್ಯಚಂದ್ರಗುಪ್ತನು ಯುದ್ಧಕೌಶಲಯುಕ್ತವೂ ಪರಾಕ್ರಮಶಾಲಿಯೂ ಆದ ಸೇನೆಯ ಪ್ರಭುವಾಗಿದ್ದ ವ್ಯಕ್ತಿಯೋರ್ವನ ನೆರವನ್ನು ಪಡೆದಿದ್ದಾನೆಂಬುದರಲ್ಲಿ ಸಂಶಯವಿಲ್ಲ. ಅಲೆಕ್ಸಾಂಡರನು ಇಂತಹ ಪ್ರಬಲಸೇನೆಯ ಆಧಿಪತಿಯಾಗಿದ್ದನೆಂಬುದೂ ನಿಶ್ಚಿತ. ಅಂತೆಯೇ ಇವನನ್ನು ಒಮ್ಮೆ ಮೌರ್ಯಚಂದ್ರಗುಪ್ತನು ಸಂದರ್ಶಿಸಿದನೆಂಬುದಕ್ಕೆ ಗ್ರೀಕ್‌ದೇಶದ ಇತಿಹಾಸಸಾಕ್ಷಿಯೂ ಇದೆ. ಇವರೀರ್ವರ ಈ ಸಂದರ್ಶನವು ಉದ್ದೇಶರಹಿತವಾಗಿದ್ದಿತೆಂದು ಹೇಳಲಾಗುವುದಿಲ್ಲ. ಅಂತಹುದಾವುದಾದರೂ ಉದ್ದೇಶವಿದ್ದಿತೆಂಬುದು ನಿಜವಿದ್ದಲ್ಲಿ ಅದು ಮಗಧರಾಜ್ಯವನ್ನು ಸ್ವಾಯತ್ತೀಗೊಳಿಸಿಕೊಳ್ಳಲು ಚಂದ್ರಗುಪ್ತನಿಗೆ ಅತ್ಯಾವಶ್ಯಕವಿದ್ದ ನೆರವಿನ ಉದ್ದೇಶವಾಗಿರಬೇಕೆಂಬುದು ಸಹಜವೆನಿಸುವುದು. ಆದರೆ ಈ ಸಂದರ್ಶನದ ಉದ್ದೇಶವು ವಿಫಲಗೊಂಡಿದೆಯೆಂಬುದು ಸ್ಪಷ್ಟವಿರುವುದಲ್ಲದೆ ಈ ಸಂದರ್ಶನದ ಸಂದರ್ಭದಲ್ಲಿ ನಡೆದ ಸಂಭಾಷಣೆಯಪರಿಣಾಮವಾಗಿ ಅಲೆಕ್ಸಾಂಡರನು ರೋಷಗೊಂಡು ಚಂದ್ರಗುಪ್ತನನ್ನು ವಧೆಗೊಳಿಸುವಂತೆ ಅಪ್ಪಣೆಮಾಡಿರಬೇಕಾದಲ್ಲಿ ಅವನ ಅಂತಹ ರೋಷಕ್ಕೆ ಚಂದ್ರಗುಪ್ತನ ನುಡಿಗಳು ಕಾರಣವಾಗಿರಬೇಕೆಂಬುದು ಸ್ವಯಂ ಸ್ಪಷ್ಟವಿದೆ. ಇಂತೆಯೇ ಅಲೆಕ್ಸಾಂಡರನು ತೋರಿದ

---

1 ಸನ್ಮಾನ್ಯ ಪ್ರೊಫೆಸರ್ ಕೆ. ಹೆಚ್. ಧ್ರುವ ಅವರಿಂದ ಸಂಪಾದಿತವಾಗಿರುವ 'ಮುದ್ರಾರಾಕ್ಷಸಂ'–ನೋಟ್ಸ್; ಪು. ಸಂ. ೧೦೪–'ಗೆಸ್ಟ ರೋಮನೋರಂ' ಎಂಬ ಕೃತಿಯ ೧೧ ನೇ ಕಥೆಯಲ್ಲಿ ಈ ಅಂಶವು ಉಕ್ತವಾಗಿರುವುದಾಗಿ ಸನ್ಮಾನ್ಯ ಟಾನಿಯವರು ಸೂಚಿಸಿರುವರೆಂದು ಹೇಳಲಾಗಿದೆ.

ಅನಾದರಭಾವ ಹಾಗೂ ಸಂಧಾನದ ವಿಷಯವಾಗಿ ಅವನು ಮುಂದಿಟ್ಟ ನಿಬಂಧನೆಗಳು ಪ್ರಾಯಶಃ ಚಂದ್ರಗುಪ್ತನ ಆತ್ಮಾಭಿಮಾನಕ್ಕೆ ಭಂಗತರುವಂತಹವಾಗಿದ್ದುದರಿಂದ, ಇವರೀರ್ವರ ಈ ಸಂದರ್ಶನವು ವಿರಸದಲ್ಲಿ ಕೊನೆಗೊಂಡಿದೆಯೆಂದು ವ್ಯಕ್ತವಾಗುವುದು. ಹೀಗೆ ಗ್ರೀಕ್‌ದೇಶಮೂಲದ ಇತಿಹಾಸದಲ್ಲಿ ಅಲೆಕ್ಸಾಂಡರನನ್ನು ಚಂದ್ರಗುಪ್ತನು ಸಂದರ್ಶಿಸಿದ ಪ್ರಸಂಗವು ಉಳಿದುಬಂದಿದೆಯಾದರೆ, ಭಾರತೀಯ ಇತಿವೃತ್ತದನುಗುಣವಾಗಿ ಚಾಣಕ್ಯನು ಪರ್ವತಕನನ್ನು ಸಂದರ್ಶಿಸಿ ಮಗಧರಾಜ್ಯವನ್ನು ಸಮಪಾಲಾಗಿ ವಿಭಾಗಮಾಡಿಕೊಳ್ಳುವ ನಿಬಂಧನೆಯ ಮೂಲಕ ಸಂಧಾನವನ್ನು ಸಫಲಗೊಳಿಸಿಕೊಂಡಿದ್ದಾನೆಂದು ಸೂಚಿತವಾಗುವುದು. ಆದರೆ ಈ ಅಂಶವು ಗ್ರೀಕ್‌ದೇಶಮೂಲದ ಇತಿಹಾಸದಿಂದ ಸಮರ್ಥಿತವಾಗುವುದಿಲ್ಲವಾದ್ದರಿಂದ, 'ಪರ್ವತಕ' ಎಂಬ ಹೆಸರು ಅಲೆಕ್ಸಾಂಡರನ ಸೂಚಕವಾಗಿದೆಯೆಂಬ ಪೂರ್ವಪ್ರತಿಪಾದಿತಾಂಶವು ನಿರಾಕೃತವಾದಂತಾಗುವುದು. ಇಂತಿದ್ದರೂ ಅಲೆಕ್ಸಾಂಡರನನ್ನು ಕುರಿತಾದ ಗ್ರೀಕ್‌ದೇಶಮೂಲದ ಐತಿಹ್ಯಾಂಶಗಳೆಲ್ಲವೂ ಯಥಾವತ್ತಾಗಿ ಸತ್ಯನಿಷ್ಠವಾಗಿ ಉಳಿದುಬಂದಿವೆಯೇ? ಎಂಬ ಪ್ರಶ್ನೆಯನ್ನೂ ಪ್ರಕೃತಸಂದರ್ಭದಲ್ಲಿ ಗಮನಿಸಬೇಕಾಗುವುದು. 'ಅಲೆಕ್ಸಾಂಡರನ ಇತಿಹಾಸ ನಿರೂಪಣಕಾರರು, ತಮ್ಮ ಪ್ರಸಿದ್ಧ ಮಹಾಯೋಧನ ಸಾಧನೆಗಳ ಮೇಲ್ಮೆಯನ್ನು ಎತ್ತಿಹಿಡಿಯಲೋಸುಗ ಪಾರಸೀಕರ ಸಾಧನೆಗಳನ್ನು ಲಾಘವಗೊಳಿಸಿ ಚಿತ್ರಿಸಿರಬಹುದಾದ ಸಂಭವವಿದೆ' ಎಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. [ಏಜ್ ಆಫ್ ದಿ ನಂದಾಸ್ ಅಂಡ್ ಮೌರ್ಯಾಸ್; ಪು. ಸಂ. ೩೨] ಪ್ರಾಯಿಕವಾಗಿ ಅವಜ್ಞಾಸ್ಪದವಾದ ತನ್ನ ದೋಷಗಳನ್ನು ಮರೆಮಾಚಿ, ಆತ್ಮಗುಣೋತ್ಕರ್ಷಕವಾದ ಅಂಶಗಳನ್ನು ಎತ್ತಿಹಿಡಿಯುವುದು ಸರ್ವಸಾಧಾರಣವಾದ ಮಾನವಪ್ರಕೃತಿ. ಇಂತಹ ಮಾನವಪ್ರಕೃತಿಯಿಂದ ಗ್ರೀಕ್‌ದೇಶೀಯ ಇತಿಹಾಸಕಾರರು ಅತೀತರಾಗಿದ್ದಾರೆಂದು ಹೇಳಲಾಗುವುದಿಲ್ಲ. ಆದ್ದರಿಂದ ಗ್ರೀಕ್‌ದೇಶೀಯ ಇತಿಹಾಸನಿರೂಪಕರು ತಮ್ಮ ದೇಶದ ಕೀರ್ತಿಪತಾಕೆಯ ಸಂಕೇತಸ್ವರೂಪನಾದ ಅಲೆಕ್ಸಾಂಡರನ ಜೀವಿತಸಂಬಂಧಿಯಾದ ಇತಿಹಾಸವನ್ನು ಪ್ರರೂಪಿಸುವಲ್ಲಿ ಅವನ ಗುಣೋತ್ಕರ್ಷತೆಗೆ ಭಂಗತರುವಂತಹ ಅಂಶಗಳನ್ನು ಮರೆಮಾಚಲು ಯತ್ನಿಸಿದ್ದಲ್ಲಿ ಅಚ್ಚರಿಯೇನಿಲ್ಲ. ಅಂತೆಯೇ ಭಾರತದೇಶದಿಂದ ಅಲೆಕ್ಸಾಂಡರನು ತನ್ನ ತಾಯ್ನಾಡಿನತ್ತ ಹಿಂದಿರುಗುವ ಮುನ್ನ ನಡೆದಿರುವ ಘಟನೆಗಳು ಮಹಾಯೋದ್ಧನಾದ ಅವನ ಉಜ್ವಲ ಜೀವಿತೈತಿಹ್ಯದ ಹಿರಿಮೆಗೆ ಭಂಗತರುವಂತಹವುಗಳಾಗಿದ್ದುದರಿಂದ ಗ್ರೀಕ್‌ದೇಶೀಯ ಚರಿತ್ರಕಾರರು ಅಂತಹ ಘಟನೆಗಳನ್ನು ಮರೆಮಾಚಿರಬಹುದಾದ ಸಂಭವವಿದೆಯೆಂದು ಹೇಳಲವಕಾಶವಾಗುವುದು. ಅಲೆಕ್ಸಾಂಡರನು (ಭಾರತ) ದೇಶದ ಅಧಿಪತಿಯಾಗುವಂತಹ ಅವಕಾಶವು ಸ್ವಲ್ಪಮಾತ್ರದಲ್ಲಿ ತಪ್ಪಿಹೋಯಿತೆಂದು ಸೂಚನೆಗೊಡುವ ಅಂಶವನ್ನು ಗ್ರೀಕ್‌ದೇಶೀಯ ಇತಿಹಾಸಕಾರರು ಉಲ್ಲೇಖಿಸಿರುವುದಾಗಿ ಚರಿತ್ರೆಯ ಕೃತಿಗಳಿಂದ[1] ವಿದಿತ

---

1 ಪೂ. ಸೂ. ಕೃತಿ_ಪು. ಸಂ. ೧೪೪.

ವಾಗುವುದಾದರೂ ಇಂತಹ ಅವಕಾಶವು ಅಲೆಕ್ಸಾಂಡರನ ಕೈತಪ್ಪಿದುದು ಹೇಗೆಂಬು ದಕ್ಕೆ ಸಮಂಜಸವಾದ ವಿವರಣೆಯು ಇಲ್ಲವಾಗಿದೆ. ಆದರೆ ಅಲೆಕ್ಸಾಂಡರನು ಈ ರೀತಿಯಾಗಿ ಭಾರತದೇಶದ ಅಧಿಪತಿಯಾಗುವ ಅವಕಾಶವನ್ನು ಸ್ವಲ್ಪಮಾತ್ರದಲ್ಲಿ ಕಳೆದುಕೊಂಡನೆಂದು ಹೇಳಲಾಗಿರುವ ಐತಿಹ್ಯಾಂಶದ ತಥ್ಯವು ಭಾರತದೇಶೀಯ ಇತಿ ವೃತ್ತಗಳ ಪರ್ವತಕನ ಐತಿಹ್ಯದಲ್ಲಿ ಪ್ರತಿಬಿಂಬಿತವಾಗಿರುವುದನ್ನು ಗಮನಿಸಬಹುದು. ಪರಿಶಿಷ್ಟಪರ್ವದ ಪೂರ್ವೋಲ್ಲಿಖಿತವಾದ ಕಥನದಂತೆ, 'ಅರ್ಧರಾಜ್ಯಹರನಾದವ ನನ್ನು ನಿರ್ಲಕ್ಷಿಸುವವನು ಸ್ವಯಂ ಮೃತ್ಯುವಶನಾಗುವನು' ಎಂದು ಚಾಣಕ್ಯನು ಚಂದ್ರಗುಪ್ತನಿಗೆ ಉಪದೇಶಿಸಿದುದರ ಹಿನ್ನೆಲೆಯಲ್ಲಿ, ಪರ್ವತಕನು ಮಗಧರಾಜ್ಯದ ಪೂರ್ಣಪ್ರಭುತ್ವಪಡೆಯಲು ಯತ್ನಿಸಬಹುದೆಂಬ ಸಂಶಯವು ಚಾಣಕ್ಯನಿಗಿದ್ದಿರ ಬೇಕೆಂದು ವ್ಯಕ್ತವಾಗುವುದಲ್ಲದೆ, ಅರ್ಧರಾಜ್ಯದ ಪ್ರಭುವಾಗುವಂತಹ ಸುಯೋಗ ವನ್ನು ಪರ್ವತಕನು ಸ್ವಲ್ಪಮಾತ್ರದಲ್ಲಿ ಕಳೆದುಕೊಂಡನೆಂಬುದು ಸ್ಪಷ್ಟವಿದೆ. ಹೀಗೆ ಭಾರತೀಯ ಇತಿವೃತ್ತದ ಪರ್ವತಕನ ಐತಿಹ್ಯಾಂಶವು ಅಲೆಕ್ಸಾಂಡರನ ವಿಷಯವಾಗಿ ಉಕ್ತವಾಗಿರುವ ಮೇಲ್ಕಂಡ ಐತಿಹ್ಯಾಂಶದೊಡನೆ ಸಮಾಯೋಜಿತವಾಗುವುದಾದ್ದ ರಿಂದ ಅಲೆಕ್ಸಾಂಡರನು ಸಿಂಧುಪ್ರದೇಶದಿಂದಲೇ ತನ್ನ ತಾಯ್ನಾಡಿನತ್ತ ಹಿಮ್ಮರಳಿರ ಲಾರನೆಂದೂ ಮತ್ತು ಇವನನ್ನು ಚಂದ್ರಗುಪ್ತನು ಸಂದರ್ಶಿಸಿದ ಸಂದರ್ಭದಲ್ಲಿ ಸಂಧಾ ನವು ವಿಫಲಗೊಂಡಿದ್ದರೂ ಪುನಃ ಚಾಣಕ್ಯನ ಸಂಧಾನದ ಫಲವಾಗಿ ಮಗಧರಾಜ್ಯ ವನ್ನು ಸಮಪಾಲಾಗಿ ಹಂಚಿಕೊಳ್ಳುವ ಒಡಂಬಡಿಕೆಯ ಮೂಲಕ ಅಲೆಕ್ಸಾಂಡರನು ಯುದ್ಧದಲ್ಲಿ ಪಾಲ್ಗೊಂಡು, ರಾಜ್ಯದ ಹಂಚಿಕೆಯ ಸಮಯದಲ್ಲಿ ನಡೆದ ಅಹಿತಸೂಚಕ ಘಟನೆಗಳ ಪರಿಣಾಮವಾಗಿ ತನ್ನನ್ನು ಮತ್ತು ತನ್ನ ಜನರನ್ನು ಪ್ರಾಣಾಪಾಯದಿಂದ ರಕ್ಷಿಸಿಕೊಳ್ಳುವ ಸಲುವಾಗಿ ಮಗಧರಾಜ್ಯದಿಂದ ಓಟಕಿತ್ತು ತನ್ನ ತಾಯ್ನಾಡಿನತ್ತ ಪಯಣಮಾಡಿ ದಾರಿಯಲ್ಲಿ ಮೃತನಾಗಿರುವನೆಂದು ಫಲಿತವಾಗುವುದು. ಇಂತಾ ದರೂ ಗ್ರೀಕ್‌ದೇಶೀಯ ಇತಿಹಾಸಕಾರರು ಅಲೆಕ್ಸಾಂಡರನ ಜೀವಿತೈತಿಹ್ಯದ ಕೆಲವಂಶ ಗಳನ್ನು ಮರೆಮಾಚಿ ಮಾರ್ಪಾಡುಗೊಳಿಸಿರಬಹುದಾದ ಸಂಭವವಿದೆಯೆಂಬುದು ಕೇವಲ ಊಹೆಯಾಗಿದ್ದು ಇಂತಹ ಊಹಾಯತ್ತವಾದ ಫಲಿತಾಂಶವನ್ನು ಯಥಾವತ್ತಾದ ತಥ್ಯವೆಂದು ಹೇಳುವುದು ಧಾಷ್ಟ್ಯರ್ವೆನಿಸುವುದಲ್ಲದೆ ಇತಿಹಾಸವಿಷಯದ ಅಪಚಾರ ವೆನಿಸುವುದು. ಆದ್ದರಿಂದ ಭಾರತೀಯ ಇತಿವೃತ್ತಗಳಲ್ಲಿ ಪರ್ವತಕನ ಹೆಸರಿನಿಂದ ಉಳಿದುಬಂದಿರುವ ಐತಿಹ್ಯವು ಅಲೆಕ್ಸಾಂಡರನ ಜೀವಿತಸಂಬಂಧಿಯಾದ ಐತಿಹ್ಯ ವಾಗಿದೆಯೆಂಬ ಮೇಲ್ಕಂಡ ವಿಚಾರಸರಣಿಯು ಇತಿಹಾಸವಿಷಯಪರಿಣಿತರ ಪರಾ ಮರ್ಶೆಯಿಂದ ಖಚಿತಗೊಂಡಲ್ಲದೆ ತಥ್ಯವೆನಿಸುವುದಿಲ್ಲ

ನಂದರಾಜನು ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾದ ೧೮೫ ವರ್ಷಗಳ ತರು ವಾಯ (ವೀ. ನಿ. ಸಂ. ೨೦೬ = ಕ್ರಿ. ಪೂ. ೩೨೨ ರಲ್ಲಿ) ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕವು ನಡೆದಿದೆಯೆಂದೂ ಮತ್ತು ಇದೇ ಸಮಯದಲ್ಲಿ ಸ್ಥೂಲಭದ್ರಾಚಾ

ರ್ಯರು ಸ್ವರ್ಗಸ್ಥರಾಗಿರುವರೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಆದರೆ ಜೈನ ಆಮ್ನಾಯದ ಪಟ್ಟಾವಲಿಗಳಲ್ಲಿ, ಮೌರ್ಯಮನೆತನದ ರಾಜ್ಯಭಾರಾರಂಭ ಹಾಗೂ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯ ಪ್ರಸಂಗಗಳು ವೀ. ನಿ. ಸಂ. ೨೧೫-೨೧೬ ರಲ್ಲಿ ಸಂಘಟಿಸಿದುದಾಗಿ ನಿರ್ದೇಶಿತವಾಗಿದೆ. ಹೀಗೆ ಪಟ್ಟಾವಲಿಗಳ ಐತಿಹ್ಯದನುಗುಣವಾಗಿ ಮೌರ್ಯಮನೆತನದ ರಾಜ್ಯಭಾರಾರಂಭ (ಅರ್ಥಾತ್ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕ ಪ್ರಸಂಗ) ಹಾಗೂ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯ ಪ್ರಸಂಗಗಳ ಕಾಲನಿರ್ದೇಶನದಲ್ಲಿ ೯ ಅಥವಾ ೧೦ ವರ್ಷಗಳ ಮುಂದೂಡಿಕೆಯಾಗಿರಲು ಕಾರಣವೇನೆಂಬುದನ್ನು ಪರಿಷ್ಕರಿಸಬೇಕಾಗಿದೆ.

ಶ್ರು. ಕೇ. ಭದ್ರಬಾಹು ಆಚಾರ್ಯರು ವೀ. ನಿ. ಸಂ. ೧೭೦ ರಲ್ಲಿ ಸ್ವರ್ಗಸ್ಥರಾದರೆಂದೂ ಇವರ ಅನಂತರ ಸ್ಥೂಲಭದ್ರಾಚಾರ್ಯರು ೪೫ ವರ್ಷಕಾಲ ಆಚಾರ್ಯ ಪಟ್ಟಧರರಾಗಿದ್ದು ವೀ. ನಿ. ಸಂ. (೧೭೦+೪೫=)೨೧೫ ರಲ್ಲಿ ಸ್ವರ್ಗಸ್ಥರಾದರೆಂದೂ ಶ್ವೇತಾಂಬರ ಜೈನ ಪಟ್ಟಾವಲಿಗಳಲ್ಲಿ ಹೇಳಲಾಗಿದೆ. [ಇಂಡಿಯನ್ ಆಂಟಿಕ್ವೆರಿ-ಗ್ರಂ. ಭಾ. ೧೧, ಪು. ಸಂ. ೨೫೧. ತಪಾಗಚ್ಛ ಪಟ್ಟಾವಲಿ] ಆದರೆ ಶ್ರು. ಕೇ. ಭದ್ರಬಾಹು ಆಚಾರ್ಯರು ವೀ. ನಿ. ಸಂ. ೧೬೨ ರಲ್ಲಿ ಸ್ವರ್ಗಸ್ಥರಾದರೆಂದು ದಿಗಂಬರ ಜೈನ ಆಮ್ನಾಯದ ಐತಿಹ್ಯದಲ್ಲಿ ನಿರ್ದೇಶಿತವಾಗಿರುವುದಲ್ಲದೆ ಈ ಆಚಾರ್ಯರು ವೀ. ನಿ. ಸಂ. ೧೬೧ ರಲ್ಲಿ ನೂತನವಾಗಿ ದೀಕ್ಷಿತನಾದ ನಂದಚಂದ್ರಗುಪ್ತನಿಂದೊಡಗೂಡಿದ ಮುನಿಸಂಘಸಮೇತರಾಗಿ ಉಜ್ಜಯಿನಿಯಿಂದ ದಕ್ಷಿಣಾಪಥದತ್ತ ಪಯಣ ಮಾಡಿದರೆಂದೂ ಇವರೊಡನೆ ಪಯಣಮಾಡದೆ ಉತ್ತರಾಪಥದಲ್ಲಿಯೇ ನಿಂತ ಮುನಿಸಂಘದ ಆಚಾರ್ಯಪಟ್ಟಧರರಾದ ಸ್ಥೂಲಭದ್ರಾಚಾರ್ಯರು ಮುಂದೆ ೪೫ ವರ್ಷಕಾಲ ಜೀವಿಸಿದ್ದು ವೀ. ನಿ. ಸಂ. (೧೬೧+೪೫=)೨೦೬ ರಲ್ಲಿ ಸ್ವರ್ಗಸ್ಥರಾಗಿರುವರೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಇದರಿಂದ ಸ್ಥೂಲಭದ್ರಾರ್ಯರು ಆಚಾರ್ಯಪಟ್ಟಸ್ಥರಾದ ಸಮಯವನ್ನು ನಿರ್ದೇಶಿಸುವಲ್ಲಿ ಹಾಗೂ ಇವರು ಸ್ವರ್ಗಸ್ಥರಾದ ಸಮಯವನ್ನು ನಿರ್ದೇಶಿಸುವಲ್ಲಿ ೯ ಅಥವಾ ೧೦ ವರ್ಷಗಳ ಅವಧಿಯಿಂದ ಪಟ್ಟಾವಲಿಗಳ ಐತಿಹ್ಯಾನುಸಾರವಾಗಿ ಮುಂದೂಡಿಕೆಯಾಗಿರಲು, ನಂದಚಂದ್ರಗುಪ್ತ ಮತ್ತು ಶ್ರು. ಕೇ. ಭದ್ರಬಾಹು ಆಚಾರ್ಯರ ಐತಿಹ್ಯವಿಷಯಗಳಲ್ಲಿ ಕಾಲಾನುಕ್ರಮವಾಗಿ ಏರ್ಪಟ್ಟ ನ್ಯೂನತಾರೂಪದ ದೋಷವು ಕಾರಣವಾಗಿದೆಯೆಂದು ವ್ಯಕ್ತವಾಗುವುದು. ಇಷ್ಟಲ್ಲದೆ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯ ಸಮಯದ ನಿರ್ದೇಶನದಲ್ಲಿ ಏರ್ಪಟ್ಟಿರುವ ೯ ಅಥವಾ ೧೦ ವರ್ಷಗಳ ಅವಧಿಯು ಮುಂದೂಡಿಕೆಗೆ ನಂದರಾಜನ ರಾಜ್ಯಾಭಿಷೇಕ ಸಮಯದ ವಿಷಯವಾಗಿ ಏರ್ಪಟ್ಟ ಸಂದಿಗ್ಧತೆಯೂ ಕಾರಣವಾಗಿದೆಯೆಂದು ಹೇಳಲವಕಾಶವಿದೆ. ನಂದರಾಜನು ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಸಮಯದ ಸಮಕಾಲೀನವಾದ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕಸಮಯದಿಂದ ೧೫೩ ವರ್ಷಗಳ ಪೂರ್ವದಲ್ಲಿ ಅವಂತೀರಾಜ್ಯಾಧಿಪನಾಗಿಯೂ ೧೪೫ ವರ್ಷಗಳ ಪೂರ್ವದಲ್ಲಿ

ಮಗಧರಾಜ್ಯದ ಪ್ರಭುವಾಗಿ ಅಭಿಷಿಕ್ತನಾಗಿರುವನೆಂಬುದು ವಿದಿತವಿದೆ. ಹೀಗೆ ಎರಡುಬಾರಿ ರಾಜ್ಯಾಭಿಷೇಕಹೊಂದಿದ ಇವನ ಐತಿಹ್ಯವಿಷಯವಾಗಿ ಕಾಲಾನುಕ್ರಮದಲ್ಲಿ ಸಂದಿಗ್ಧತೆಯೇರ್ಪಟ್ಟ ಪರಿಣಾಮವಾಗಿ ಪಟ್ಟಾವಲಿಗಳಲ್ಲಿ ನಂದರಾಜಸಂತತಿಯ ರಾಜ್ಯಭಾರದ ಒಟ್ಟು ಅವಧಿಯನ್ನು ೧೫೫ ವರ್ಷಗಳೆಂದು ನಿರೂಪಿಸಲಾಗಿದೆಯೆಂದು ಕಂಡುಬರುತ್ತದೆ. ಪಟ್ಟಾವಲಿಗಳ ಈ ನಿರೂಪಣೆಯ ಪರಿಣಾಮವಾಗಿ ಮೌರ್ಯಮನೆತನದ ರಾಜ್ಯಭಾರಾರಂಭಸಮಯದ ನಿರ್ದೇಶನದಲ್ಲಿ ೧೦ ವರ್ಷಗಳ ಅವಧಿಯಿಂದ ಮುಂದೂಡಿಕೆಯಾಗಿದೆ. ಈ ರೀತಿಯಾಗಿ ಮೌರ್ಯಚಂದ್ರಗುಪ್ತನ ರಾಜ್ಯಭಾರಾರಂಭಸಮಯದ ಹಾಗೂ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯ ಸಮಯದ ನಿರ್ದೇಶನದಲ್ಲಿ ಪಟ್ಟಾವಲಿಗಳ ಐತಿಹ್ಯಾನುಸಾರವಾಗಿ ೯ ಅಥವಾ ೧೦ ವರ್ಷಗಳ ಮುಂದೂಡಿಕೆಯ ಅಕ್ರಮವೇರ್ಪಟ್ಟಿದೆಯಾದರೆ ಪರಿಶಿಷ್ಟಪರ್ವದಲ್ಲಿ ಪ್ರರೂಪಿತವಾಗಿರುವ ಐತಿಹ್ಯದಲ್ಲಿ ಮತ್ತೊಂದು ರೀತಿಯ ಅಕ್ರಮವೇರ್ಪಟ್ಟಿದೆ. ವೀ. ನಿ. ಪ. ೧೫೫ ನೇ ವರ್ಷದ ತರುವಾಯದಲ್ಲಿ ನಂದಚಂದ್ರಗುಪ್ತನ ರಾಜ್ಯಾಭಿಷೇಕವು ನಡೆದಿರುವುದೆಂದೂ ಆದರೆ ಇವನ ಈ ರಾಜ್ಯಾಭಿಷೇಕಸಮಯವನ್ನು ಪರಿಶಿಷ್ಟಪರ್ವದಲ್ಲಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕಸಮಯವನ್ನಾಗಿ ನಿರ್ದೇಶಿಸಲಾಗಿದೆಯೆಂದೂ ಹಿಂದೆ ವಿವರಿಸಲಾಗಿದೆ. ಇದರಿಂದ ಪರಿಶಿಷ್ಟಪರ್ವದ ಈ ಐತಿಹ್ಯಾನುಗುಣವಾಗಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕಸಮಯದ ಪರಿಗಣನೆಯಲ್ಲಿ (೨೦೬ – ೧೫೬ =) ೫೦ ವರ್ಷಗಳ ಹಿಂದೂಡಿಕೆಯಾಗಿದೆ. ಇಷ್ಟಲ್ಲದೆ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಸಮಯದ ವಿಷಯವಾಗಿ ಪಟ್ಟಾವಲಿಗಳ ನಿರೂಪಣೆಯು ಪರಿಶಿಷ್ಟಪರ್ವಕೃತಿಕಾರರ ದೃಷ್ಟಿಯಲ್ಲಿ ಸಮ್ಮತವೆನಿಸಿ ಅವಿಚಲಿತವಾಗಿ ಉಳಿದುಕೊಂಡಿದೆಯಾದುದರಿಂದ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕಸಮಯ ಮತ್ತು ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಸಮಯಗಳ ಮಧ್ಯೆ (೨೧೫ – ೧೫೬ =) ೫೯ ಅಥವಾ ೬೦ ವರ್ಷಗಳ ಅಂತರವು ಈ ಕೃತಿಯ ಪರಿಗಣನೆಯಲ್ಲಿ ಏರ್ಪಟ್ಟಿದೆ. ಈ ರೀತಿಯಾಗಿ ಪರಿಶಿಷ್ಟಪರ್ವದ ಐತಿಹ್ಯದಲ್ಲಿ ಮೌರ್ಯಚಂದ್ರಗುಪ್ತನ ರಾಜ್ಯಭಾರಾರಂಭ ಮತ್ತು ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಸಮಯಗಳ ಮಧ್ಯೆ ೬೦ ವರ್ಷಗಳ ಅಂತರವನ್ನೇರ್ಪಡಿಸಿರುವುದಕ್ಕೆ ನಂದಚಂದ್ರಗುಪ್ತ ಮತ್ತು ಭದ್ರಬಾಹುಆಚಾರ್ಯಸಂಬಂಧಿಯಾದ ಐತಿಹ್ಯಾಂಶಗಳು ಪ್ರಭ್ರಂಶಹೊಂದಿದ್ದುದು ಕಾರಣವಾಗಿದೆಯೆಂಬುದಲ್ಲದೆ ಮತ್ತೂ ಒಂದು ಅಂಶವು ಕಾರಣವಾಗಿದೆಯೆಂದು ಹೇಳಲವಕಾಶವಿದೆ. ಮೌರ್ಯಮನೆತನದ ರಾಜ್ಯಭಾರಾರಂಭ ಹಾಗೂ ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಪ್ರಸಂಗಗಳು ವೀ. ನಿ. ಪ. ೨೧೫ ರಲ್ಲಿ ಸಂಘಟಿತವಾದಂತೆ ಪಟ್ಟಾವಲೀಮೂಲದ ಐತಿಹ್ಯದಲ್ಲಿ ರೂಪಿತವಾಗಿದ್ದುದಲ್ಲದೆ ಮೌರ್ಯಅಶೋಕಸಾಮ್ರಾಟನ ಮೊಮ್ಮಗನಾದ ಸಂಪ್ರತಿಯು ವೀ. ನಿ. ಪ. ೨೩೫ ರಲ್ಲಿ ರಾಜ್ಯಾಭಿಷಿಕ್ತನಾದುದಾಗಿಯೂ[1] ಮತ್ತು ಇವನು,

1 ಪೂ. ಸೂ. ಖರತರಗಚ್ಛ ಪಟ್ಟಾವಲಿ.

ಸ್ಥೂಲಭದ್ರಾಚಾರ್ಯರ ತರುವಾಯ ಆಚಾರ್ಯಪದವಿಯನ್ನಲಂಕರಿಸಿದವರೀರ್ವರಲ್ಲೊಬ್ಬರಾದ ಸುಹಸ್ತಿ ಆಚಾರ್ಯರ ಸಂದರ್ಶನದ ಪರಿಣಾಮವಾಗಿ ಜಿನಧರ್ಮೋಪಾಸಕನಾಗಿ ವಿಶಿಷ್ಟರೀತಿಯಿಂದ ಜಿನಧರ್ಮದ ಪ್ರಭಾವನೆಮಾಡಿದುದಾಗಿಯೂ ಪ್ರರೂಪಿಸಲಾಗಿದ್ದಿತು.[1] ಈ ಪಟ್ಟಾವಲಿಗಳ ಮೂಲ ಐತಿಹ್ಯದನುಗುಣವಾಗಿ ಯಾವ ವರ್ಷದಲ್ಲಿ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾದರೋ ಅದೇ (ವಿ. ನಿ. ಪ. ೨೧೫ ನೇ) ವರ್ಷದಲ್ಲಿ ಮೌರ್ಯಚಂದ್ರಗುಪ್ತನು ನವಮನಂದನನ್ನು ವಧೆಗೊಳಿಸಿ ಮಗಧರಾಜ್ಯಭಾರದಲ್ಲಿ ಅಭಿಷಿಕ್ತನಾದನೆಂದು ನಿರೂಪಿತವಾಗಿದ್ದುದಲ್ಲದೆ, ಮೌರ್ಯ ಅಶೋಕ ಸಾಮ್ರಾಟನ ಮೊಮ್ಮಗನಾದ ಸಂಪ್ರತಿಯ ರಾಜ್ಯಭಾರವು ವೀ. ನಿ. ಪ. ೨೪೫ ರಲ್ಲಿ ಆರಂಭವಾಯಿತೆಂದೂ ನಿರ್ದೇಶಿತವಾಗಿದ್ದಿತು.[2] ಹೀಗೆ ಪಟ್ಟಾವಲೀ ಮೂಲದ ಐತಿಹ್ಯದಲ್ಲಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕ ಹಾಗೂ ಸಂಪ್ರತಿಯ ರಾಜ್ಯಾಭಿಷೇಕ ಸಮಯಗಳ ಮಧ್ಯೆ ಕೇವಲ (೨೪೫ – ೨೧೫ =) ೩೦ ವರ್ಷಗಳ ಅಂತರವು ನಿರ್ದೇಶಿತವಾಗಿದ್ದು ಈ ೩೦ ವರ್ಷಗಳ ಅಂತರಸಮಯದಲ್ಲಿ ಕನಿಷ್ಠಪಕ್ಷ ಮೂವರು ರಾಜರಾದ ಮೌರ್ಯಚಂದ್ರಗುಪ್ತ, ಬಿಂದುಸಾರ ಮತ್ತು ಅಶೋಕಸಾಮ್ರಾಟರ ಒಟ್ಟು ರಾಜ್ಯಾಭಾರಾವಧಿಯು ಸಮಾಯೋಜಿತವಾಗಬೇಕೆನಿಸಿದ ಅಸಂಗತಾಂಶವನ್ನು ಮನಗಂಡ ಹೇಮಚಂದ್ರಾಚಾರ್ಯರು 'ಏವಂ ಚ ಶ್ರೀ ಮಹಾವೀರಮುಕ್ತೇ-ರ್ವರ್ಷಶತೇಗತೇ। ಪಂಚಪಂಚಾಶದಧಿಕೇ ಚಂದ್ರಗುಪ್ತೋಽಭವನ್ನೃಪಃ' ಎಂಬ ಪರಂಪರಾಗತವಾದ ಐತಿಹ್ಯವನ್ನಾಧರಿಸಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕ ಸಮಯವನ್ನು ೬೦ ವರ್ಷಗಳ ಅವಧಿಯಿಂದ ಹಿಂದೂಡಿದ್ದಾರೆ. ಈ ರೀತಿಯಾದ ಹಿಂದೂಡಿಕೆಯ ಪರಿಣಾಮವಾಗಿ ಇವನ ಈ ರಾಜ್ಯಾಭಿಷೇಕ ಸಮಯದಿಂದ ೬೦ ವರ್ಷಗಳ ಅನಂತರದಲ್ಲಿ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾದಂತೆಯೂ ಮತ್ತು ೮೦ ವರ್ಷಗಳ ಅನಂತರದ ಸಮಯದಲ್ಲಿ ಸಂಪ್ರತಿಯ ರಾಜ್ಯಾಭಿಷೇಕವಾದಂತೆಯೂ ಪ್ರರೂಪಣೆಗೊಂಡಂತಾಯಿತು. ಇದರಿಂದ ಪಟ್ಟಾವಲೀ ಐತಿಹ್ಯದಲ್ಲಿ ಏರ್ಪಟ್ಟಿದ್ದ ಪೂರ್ವೋಕ್ತ ಅಸಂಬದ್ಧತೆಯು ನಿವಾರಿತವಾದುದಲ್ಲದೆ ಸ್ಥೂಲಭದ್ರಾಚಾರ್ಯರ ತರುವಾಯ ಆಚಾರ್ಯಪಟ್ಟಸ್ಥರಾದ ಸುಹಸ್ತಿ ಆಚಾರ್ಯರ ಪಟ್ಟಕಾಲದ ವಿಷಯವಾಗಿ

---

1 ಈಗ ಉಪಲಬ್ಧವಿರುವ ಪಟ್ಟಾವಲಿಗಳು ಪ್ರಾಯಿಕವಾಗಿ ಪರಿಶಿಷ್ಟಪರ್ವದ ರಚನಾಸಮಯದಪೇಕ್ಷೆಯಿಂದ ಅರ್ವಾಚೀನವಾದವುಗಳಾಗಿವೆಯೆಂಬುದು ನಿಜವಾದರೂ ಕ್ರಿ. ಶ. ೫ ಅಥವಾ ೬ ನೇ ಶತಮಾನದಲ್ಲಿ ರಚಿತವಾಗಿದ್ದ ನಂದಿಸೂತ್ರವೇ ಮೊದಲಾದ ಕೃತಿಗಳಲ್ಲಿ ಪ್ರರೂಪಿತವಾಗಿದ್ದ ಗುರ್ವಾವಲಿಯು ಈ ಪಟ್ಟಾವಲಿಗಳ ಐತಿಹ್ಯಪ್ರರೂಪಣೆಗೆ ಮೂಲ ಆಧಾರವಾಗಿದೆಯೆಂದು ಹೇಳಲವಕಾಶವಿದೆ.

2 ಪೂ. ಸೂ. ಇಂಡಿಯನ್ ಆಂಟಿಕ್ವೆರಿ–ತಪಾಗಚ್ಛಪಟ್ಟಾವಲಿಯ ಐತಿಹ್ಯವಿಷಯ–ಅಡಿಟಿಪ್ಪಣಿ ೩೫

(ಹಾಗೂ ಇವರ ಮತ್ತು ಸಂಪ್ರತಿರಾಜನ ಸಮಕಾಲೀನತ್ವದ ಬಗ್ಗೆ) ಪಟ್ಟಾವಲಿಗಳ ಐತಿಹ್ಯದಲ್ಲಿ ಏರ್ಪಟ್ಟಿದ್ದ ಸಂದಿಗ್ಧತೆಯೂ ಪರಿಹೃತವಾದಂತಾಯಿತು.[1] ಆದರೆ ವೀ. ನಿ. ಪ. ೧೫೬ ನೇ (=ಕ್ರಿ. ಪೂ. ೩೭೨ ನೇ) ವರ್ಷದಲ್ಲಿ ನಂದಚಂದ್ರಗುಪ್ತನ ರಾಜ್ಯಾಭಿಷೇಕವು ನಡೆದಿದ್ದು ಈ ಸಮಯದಿಂದ ೫ ವರ್ಷಗಳ ತರುವಾಯದಲ್ಲಿ (ಕ್ರಿ. ಪೂ. ೩೬೭ ರಲ್ಲಿ) ಇವನ ರಾಜ್ಯಭಾರವು ಕೊನೆಗೊಂಡಿದೆಯೆಂದೂ ಹಾಗೂ ಇದೇ ಸಮಯದಲ್ಲಿ ಸ್ಥೂಲಭದ್ರಾಚಾರ್ಯರು ಆಚಾರ್ಯಪಟ್ಟಧರರಾಗಿರುವರೆಂದೂ ಮತ್ತು ವೀ. ನಿ. ಪ. ೨೦೬ (=ಕ್ರಿ. ಪೂ. ೩೨೨ ನೇ) ವರ್ಷದಲ್ಲಿ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕನಡೆದಿದ್ದು ಇದೇ ಸಮಯದಲ್ಲಿ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾಗಿರುವರೆಂದೂ ಆಧಾರಪೂರ್ವಕವಾಗಿ ಹಿಂದೆ ಪ್ರತಿಪಾದಿಸಲಾಗಿದೆ. ಇದರಿಂದ ಸ್ಥೂಲಭದ್ರಾಚಾರ್ಯರ ಅನಂತರ ಆಚಾರ್ಯಪಟ್ಟಧರರಾದರೆಂದು ಹೇಳಲಾಗಿರುವ ಸುಹಸ್ತಿ ಆಚಾರ್ಯರು ಮೌರ್ಯ ಚಂದ್ರಗುಪ್ತನ ಸಮಕಾಲೀನರಾಗಿದ್ದಿರಬೇಕೆಂದೂ ಮತ್ತು ಇವರನ್ನು ಸಂಪ್ರತಿಯ ಸಮಕಾಲೀನರನ್ನಾಗಿ ನಿರ್ದೇಶಿಸುವ ಪಟ್ಟಾವಲೀಮೂಲದ ಹಾಗೂ ಪರಿಶಿಷ್ಟಪರ್ವದ ಐತಿಹ್ಯವು ಲೋಪದೋಷಭಾಗಿಯಾಗಿದೆಯೆಂದೂ ಭಾವಿಸಲವಕಾಶವಾಗುವುದು. ಇಷ್ಟಲ್ಲದೆ ಮೌರ್ಯ ಚಂದ್ರಗುಪ್ತನ ಜೀವಿತಸಂಬಂಧಿಯಾದ ಕೆಲವು ಐತಿಹ್ಯಾಂಶಗಳು ಸಂಪ್ರತಿಯ ಜೀವಿತಸಂಬಂಧಿ ಐತಿಹ್ಯಾಂಶಗಳಾಗಿ ಪರಿವರ್ತಿತವಾಗಿರುವುದನ್ನು ಪಟ್ಟಾವಲಿ ಮತ್ತು ಪರಿಶಿಷ್ಟಪರ್ವಗಳ ಐತಿಹ್ಯಗಳಲ್ಲಿ ಗುರುತಿಸಬಹುದಾಗಿದೆ. ಸಂಪ್ರತಿಯು ದಕ್ಷಿಣಭಾರತಪ್ರದೇಶಸಹಿತವಾದ ಭರತಾರ್ಧದೇಶ (=ತ್ರಿಖಂಡ) ವನ್ನು ಸಾಧಿಸಿ ಸಾಮ್ರಾಟನಾದನೆಂದೂ ಅನಂತರ ಸುಹಸ್ತಿ ಆಚಾರ್ಯರ ಸಂದರ್ಶನದ ಪರಿಣಾಮವಾಗಿ ಜಿನಧರ್ಮದ ಉಪಾಸಕನಾಗಿ, ಅನೇಕ ಜಿನಮಂದಿರಗಳನ್ನು ರಚಿಸಿದುದಾಗಿಯೂ ಅನಾರ್ಯದೇಶದಲ್ಲಿ ವಿಹಾರವನ್ನು ಸ್ಥಾಪಿಸಿ, ಜಿನಧರ್ಮವನ್ನು ಪ್ರಸಾರಮಾಡಿದುದಾಗಿಯೂ ಪರಿಶಿಷ್ಟಪರ್ವ ಮತ್ತು ಪಟ್ಟಾವಲಿಗಳಲ್ಲಿ ಹೇಳಲಾಗಿದೆ.[2] ದಕ್ಷಿಣಭಾರತಪ್ರದೇಶಸಹಿತವಾದ ಭಾರತದೇಶದ ಸಾಮ್ರಾಜ್ಯಸ್ಥಾಪನೆಯ ಯಶಸ್ಸು ಮೌರ್ಯ ಚಂದ್ರಗುಪ್ತನದಾಗಿದೆಯೆಂಬುದಲ್ಲದೆ ಸಂಪ್ರತಿಯು ಇಂತಹ ಮಹತ್ಕಾರ್ಯದ ಯಶೋಭಾಗಿಯಾದನೆಂಬುದಕ್ಕೆ ಆಧಾರಾಂತರಗಳ ಸಾಕ್ಷಿಯಿಲ್ಲವಾಗಿದೆ. ಹಿಂದೆ ಪ್ರತಿಪಾದಿಸಲಾಗಿರುವಂತೆ ಮೌರ್ಯ ಚಂದ್ರಗುಪ್ತನ ತಂದೆಯಾದ ಕುಮುದನಂದನು ದಕ್ಷಿಣಭಾರತ

---

1 ಈ ಸಂದಿಗ್ಧತೆಯ ವಿಷಯವಾಗಿ ತಪಾಗಚ್ಛಪಟ್ಟಾವಲಿಯಲ್ಲಿ ಕೊಡಲಾಗಿರುವ ವಿವರಣೆಯನ್ನು ಗಮನಿಸಬಹುದು. ಪೂ. ಸೂ. ಇಂಡಿಯನ್ ಆಂಟಿಕ್ವೆರಿ.

2 ಪರಿಶಿಷ್ಟಪರ್ವ, ೯ ನೇ ಸರ್ಗ, ಪದ್ಯ ಸಂ. ೫೪ ಹಾಗೂ ೧೧ ನೇ ಸರ್ಗ, ಪದ್ಯ ಸಂ. ೨೩ ರಿಂದ ೧೨೭; ಪೂ. ಸೂ. ಇಂಡಿಯನ್ ಆಂಟಿಕ್ವೆರಿಯಲ್ಲಿ ಉಲ್ಲಿಖಿತವಾಗಿರುವ ಖರತರಗಚ್ಛಪಟ್ಟಾವಲಿ.

ಪ್ರದೇಶದಲ್ಲಿ ಅರಸುತನಗೈಯ್ಯುತ್ತಿದ್ದನಾಗಿ, ಈ ಪ್ರದೇಶದ ಸ್ವಾಮ್ಯವು ಮೌರ್ಯ ಚಂದ್ರಗುಪ್ತನಿಗೆ ದಾಯಾದ್ಯವಾಗಿ ಲಬ್ಧವಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ವಡ್ಡಾರಾಧನೆಯ ಐತಿಹ್ಯದನುಗುಣವಾಗಿ ಮಗಧರಾಜ್ಯವನ್ನು ಸಾಧಿಸಲು ಮೌರ್ಯ ಚಂದ್ರಗುಪ್ತನಿಗೆ ದಕ್ಷಿಣಭಾರತದ ಅರಸರು ನೆರವಾಗಿದ್ದರಿಂದು ಸೂಚಿತವಾಗುವುದು. ಇದರಿಂದ ಮೌರ್ಯಚಂದ್ರಗುಪ್ತನು ಮಗಧರಾಜ್ಯದ ಸಾಮ್ರಾಟನಾಗಿ ಅಭಿಷಿಕ್ತನಾದ ಅನಂತರ ದಕ್ಷಿಣಭಾರತದ ಅರಸರು ಇವನ ಆಪ್ತಸಾಮಂತರಾಜರಾಗಿದ್ದಿರಬೇಕೆಂದು ಗ್ರಹಿಸಬಹುದಾಗಿದೆ. ಇಂತೆಯೇ ಮೌರ್ಯಚಂದ್ರಗುಪ್ತನು ಸೆಲ್ಯೂಕಸನನ್ನು ಜಯಿಸಿ, ಗ್ರೀಕ್‌ದೇಶೀಯರ ಆಧಿಪತ್ಯಕ್ಕೊಳಪಟ್ಟದ್ದ ಉತ್ತರಭಾರತದ ಪ್ರದೇಶಗಳ ಸ್ವಾಮ್ಯವನ್ನು ಪಡೆದಿರುವನೆಂಬುದರಲ್ಲಿ ಸಂಶಯವಿಲ್ಲ. ಈ ರೀತಿಯಾಗಿ ದಕ್ಷಿಣಭಾರತಪ್ರದೇಶಸಹಿತವಾದ ಭರತಾರ್ಧ ದೇಶವನ್ನು ಸಾಧಿಸಿ ಸಾಮ್ರಾಟನೆನಿಸಿಕೊಂಡ ಯಶಸ್ಸು ಮೌರ್ಯಚಂದ್ರಗುಪ್ತನದಾಗಿದೆಯೆಂದು ಖಚಿತವಾಗುವುದು. ಇವನಿಂದ ಸ್ಥಾಪಿತವಾದ ಮಗಧಸಾಮ್ರಾಜ್ಯದ ದಕ್ಷಿಣದಿಶೆಯ ಎಲ್ಲೆಯನ್ನು ದಕ್ಷಿಣಭಾರತಪ್ರದೇಶದಲ್ಲಿರುವ ಅಶೋಕಸಾಮ್ರಾಟನ ಶಾಸನಗಳ ವ್ಯಾಪ್ತಿಯಿಂದ ಗುರುತಿಸಬಹುದಾಗಿದೆ. ಅಶೋಕಸಾಮ್ರಾಟನ ರಾಜ್ಯಭಾರವು ಅಂತ್ಯಗೊಳ್ಳುವ ಸಮಯಕ್ಕಾಗಲೇ ಮಗಧಸಾಮ್ರಾಜ್ಯವು ಪ್ರಬಲಶತ್ರುಗಳ ಧಾಳಿಗೆ ತುತ್ತಾಗಿದ್ದಿತೆಂದು ಬೃ. ಕ. ಕೋಶದ 'ಕೂಪಕಾರಮುನಿಕಥಾನಕ'ದ ಐತಿಹ್ಯದಿಂದ ಸೂಚಿತವಾಗುವುದು.[1] ಇಷ್ಟಲ್ಲದೆ ಅಶೋಕಸಾಮ್ರಾಟನ ತರುವಾಯ ಮಗಧಸಾಮ್ರಾಜ್ಯವು ಕ್ಷೀಣದಶೆಹೊಂದಿತೆಂದು ಚರಿತ್ರೆಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ರೀತಿಯಾಗಿ ಕ್ಷೀಣದಶೆಹೊಂದಿದ್ದ ಮಗಧಸಾಮ್ರಾಜ್ಯವನ್ನು ಅಶೋಕಸಾಮ್ರಾಟನ ಮೊಮ್ಮಗನಾದ ಸಂಪ್ರತಿಯು ಪುನರುತ್ಥಾನಗೊಳಿಸಿದನೆಂಬುದಕ್ಕೆ ಯಾವ ಸಾಕ್ಷ್ಯಾಧಾರಗಳೂ ಇಲ್ಲವಾಗಿವೆ. ಆದ್ದರಿಂದ ಸಂಪ್ರತಿಯು ದಕ್ಷಿಣಭಾರತಪ್ರದೇಶಸಹಿತವಾದ ಭಾರತದೇಶ(=ತ್ರಿಖಂಡ)ವನ್ನು ಸಾಧಿಸಿ ಸಾಮ್ರಾಟನಾದನೆಂಬ ಪರಿಶಿಷ್ಟಪರ್ವ ಮತ್ತು ಪಟ್ಟಾವಲಿಗಳ ಐತಿಹ್ಯವು ವಾಸ್ತವವಾಗಿ ಮೌರ್ಯಚಂದ್ರಗುಪ್ತನ ಜೀವಿತಸಂಬಂಧಿಯಾದ ಇತಿವೃತ್ತವಾಗಿದೆಯೆಂದು ವ್ಯಕ್ತವಾಗುವುದು. ಇಂತೆಯೇ ಹಿಂದೆ ಪ್ರತಿಪಾದಿಸಲಾಗಿರುವಂತೆ ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕ ಸಮಯದಲ್ಲಿ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾಗಿರುವರಾದ್ದರಿಂದ ಇವರ ಅನಂತರ ಆಚಾರ್ಯಪಟ್ಟಸ್ಥರಾದ ಸುಹಸ್ತಿ ಆಚಾರ್ಯರು ಮೌರ್ಯಚಂದ್ರಗುಪ್ತನ ಸಮಕಾಲೀನರಾಗಿದ್ದರೆಂದೂ ಇವರ ಸಂದರ್ಶನದ ಪರಿಣಾಮವಾಗಿ ಮೌರ್ಯಚಂದ್ರಗುಪ್ತನು ಜಿನಧರ್ಮೋಪಾಸಕನಾಗಿ ಜಿನಧರ್ಮದ ಪ್ರಭಾವನೆಮಾಡಿರುವನೆಂದೂ ಮತ್ತು ಇವನ ಈ ಐತಿಹ್ಯಪ್ರಸಂಗವು ಪಟ್ಟಾವಲಿ ಹಾಗೂ ಪರಿಶಿಷ್ಟಪರ್ವಗಳಲ್ಲಿ ಸಂಪ್ರತಿಯ ಐತಿಹ್ಯವೆನಿಸಿ ಪರಿವರ್ತಿತವಾಗಿ ಉಳಿದು

---

1 ಕಥಾ ಸಂಖ್ಯೆ ೯೫.

ಬಂದಿದೆಯೆಂದೂ ಗ್ರಹಿಸಲವಕಾಶವಾಗುವುದು. ಶ್ರವಣಬೆಳಗೊಳದ ಚಂದ್ರಗಿರಿಯ (=ಚಿಕ್ಕಬೆಟ್ಟದ) ಮೇಲಿರುವ ಬಸದಿಗಳಲ್ಲಿ ಅತ್ಯಂತ ಪ್ರಾಚೀನವಾದುದೆನಿಸಿರುವ ಚಂದ್ರಗುಪ್ತಬಸದಿಯನ್ನು ಶ್ರು. ಕೇ. ಭದ್ರಬಾಹುಆಚಾರ್ಯರ ಅಂತೇವಾಸಿಯಾಗಿ ಅವರ ಶುಶ್ರೂಷಾಕಾರ್ಯದಲ್ಲಿ ನಿರತರಾಗಿದ್ದ ಚಂದ್ರಗುಪ್ತಮುನಿಗಳ ಮೊಮ್ಮಗನು ನಿರ್ಮಿಸಿದನೆಂಬ ಪರಂಪರಾಗತ ಐತಿಹ್ಯವಿರುವುದು ವಿದಿತವಿದೆ. ಶ್ರು. ಕೇ. ಭದ್ರಬಾಹು ಆಚಾರ್ಯರು ಮತ್ತು ಚಂದ್ರಗುಪ್ತಮುನಿಗಳು ಶ್ರವಣಬೆಳಗುಳದ ಚಂದ್ರಗಿರಿಯಲ್ಲಿ ನೆಲೆನಿಂತಿದ್ದರೆಂದು ಈ ಬೆಟ್ಟದಲ್ಲಿರುವ ೧೭ ನೇ ಶಾಸನ ಹಾಗೂ ಮತ್ತಿತರ ಮೂರು ಶಾಸನಗಳಿಂದ ಸೂಚಿತವಾಗುವುದಲ್ಲದೆ ಚಂದ್ರಗುಪ್ತಬಸದಿಯ ಮುಂಬಾಗಿಲ ಎರಡು ಪಾರ್ಶ್ವಗಳಲ್ಲಿ ಸಂಯೋಜಿಸಲಾಗಿರುವ ಶಿಲಾಭಿತ್ತಿಚಿತ್ರಫಲಕಗಳಲ್ಲಿ ಈ ಐತಿಹ್ಯವು ಚಿತ್ರಿತವಾಗಿದ್ದು, ಈ ಬಸದಿಯ ನಿರ್ಮಿತಿಯನ್ನು ಕುರಿತಾದ ಐತಿಹ್ಯವೂ ಇಲ್ಲಿ ಚಿತ್ರಿತವಾಗಿದೆ. ಮೌರ್ಯಚಂದ್ರಗುಪ್ತನು (ನಂದ-) ಚಂದ್ರಗುಪ್ತ ಮುನಿಯ ಮೊಮ್ಮಗನಾಗಿರುವನೆಂದು ಹಿಂದೆ ಪ್ರತಿಪಾತಿಸಲಾಗಿರುವುದರನುಗುಣವಾಗಿ ಮತ್ತು (ನಂದ-) ಚಂದ್ರಗುಪ್ತಮುನಿಗಳ ಮೊಮ್ಮಗನಿಂದ ಚಂದ್ರಗುಪ್ತಬಸದಿಯು ನಿರ್ಮಿತವಾಗಿದೆಯೆಂಬ ಪರಂಪರಾಗತವಾದ ಐತಿಹ್ಯದನುಗುಣವಾಗಿ, ಈ ಬಸದಿಯು ಮೌರ್ಯಚಂದ್ರಗುಪ್ತನಿಂದ ನಿರ್ಮಿತವಾದುದಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಈ ರೀತಿಯಾಗಿ ದಿಗಂಬರ ಜೈನಆಮ್ನಾಯದ ಐತಿಹ್ಯಾನುಗುಣವಾಗಿಯೂ ಮೌರ್ಯಚಂದ್ರಗುಪ್ತನು ಜಿನಾಯತನವೊಂದನ್ನು ನಿರ್ಮಿಸಿರುವನೆಂದು ಸೂಚಿತವಾಗುವುದು. ಆದ್ದರಿಂದ ಶ್ವೇತಾಂಬರ ಜೈನ ಸಂಪ್ರದಾಯದ ಪಟ್ಟಾವಲಿಗಳು ಮತ್ತು ಪರಿಶಿಷ್ಟಪರ್ವದಲ್ಲಿ ಈ ಹಿಂದೆ ವಿವರಿಸಲಾಗಿರುವಂತೆ ಸುಹಸ್ತಿ ಆಚಾರ್ಯರ ಸಂದರ್ಶನದ ಪರಿಣಾಮವಾಗಿ ಸಂಪ್ರತಿಯು ಜಿನಧರ್ಮಾವಲಂಬಿಯಾಗಿ ಆಂಧ್ರ, ದ್ರಮಿಲಾದಿ ಅನಾರ್ಯಜನಪದಗಳಲ್ಲಿ ಧರ್ಮಪ್ರಸಾರಮಾಡಿ ಜಿನಚೈತ್ಯಾಲಯ ಮತ್ತು ವಿಹಾರಗಳನ್ನು ನಿರ್ಮಿಸಿದನೆಂದು ಹೇಳಲಾಗಿರುವ ಐತಿಹ್ಯಾಂಶವು ವಾಸ್ತವವಾಗಿ ಮೌರ್ಯಚಂದ್ರಗುಪ್ತನ ಜೀವಿತಸಂಬಂಧಿಯಾದ ಐತಿಹ್ಯವಾಗಿದೆಯೆಂದು ಪುನಸ್ಸಮರ್ಥಿತವಾಗುವುದಲ್ಲದೆ ಈ ರೀತಿಯಾಗಿ ಮೌರ್ಯಚಂದ್ರಗುಪ್ತನು ಜಿನಧರ್ಮೋಪಾಸಕನಾಗಿದ್ದ ಕಾರಣದಿಂದ, ವೈದಿಕಮತಸಂಪ್ರದಾಯದ ಇತಿವೃತ್ತಗಳಲ್ಲಿ ಇವನನ್ನು 'ವೃಷಲ'[1] ನೆಂಬುದಾಗಿ ನಿರ್ದೇಶಿಸುವ ಪರಿಪಾಠವುಂಟಾಗಿದೆಯೆಂದು ವ್ಯಕ್ತವಾಗುವುದು. ಮೌರ್ಯಚಂದ್ರಗುಪ್ತನು ೨೪ ವರ್ಷಕಾಲ ರಾಜ್ಯಭಾರಮಾಡಿದನೆಂದು ವೈ. ಮ. ಸಂ. ಪುರಾಣಗಳಲ್ಲಿ ಹಾಗೂ ಬೌದ್ಧಮತಸಂಪ್ರದಾಯದ ಇತಿವೃತ್ತಗಳಲ್ಲಿ

---

1 ಧರ್ಮಶಾಸ್ತ್ರಗ್ರಂಥಗಳಲ್ಲಿ 'ವೃಷಲ' ಪದವು ವೈದಿಕಧರ್ಮಬಾಹಿರರಾದ ಕ್ಷತ್ರಿಯರ ನಿರ್ದೇಶಕವಾಗಿ ಪ್ರಯುಕ್ತವಾಗಿದೆಯೆಂದು ತಿಳಿದು ಬರುವುದು_ದಿ ಏಜ್ ಆಫ್ ದಿ ನಂದಾಸ್ ಅಂಡ್ ಮೌರ್ಯಾಸ್_ಪು. ಸಂ. ೧೪೦.

ಒಮ್ಮತದ ಹೇಳಿಕೆಯಿರುವುದಾದ್ದರಿಂದ, ಇವನ ರಾಜ್ಯಭಾರವು ಕ್ರಿ. ಪೂ. (೩೨೨-೨೯೮) ೨೯೮ ರಲ್ಲಿ ಕೊನೆಗೊಂಡು ಇವನ ಸುತನಾದ ಬಿಂದುಸಾರನು ರಾಜ್ಯಭಾರದಲ್ಲಿ ಅಧಿಷ್ಠಿತನಾಗಿರುವನೆಂದು ನಿಶ್ಚಿತವಾಗುವುದು.

ಮೌರ್ಯಚಂದ್ರಗುಪ್ತನಿಂದಾದ ಮಗಧರಾಜ್ಯದ ಸಾಧನೆ ಮತ್ತು ಮಹಾಸಾಮ್ರಾಜ್ಯದ ಸ್ಥಾಪನೆಯ ಕಾರ್ಯದ ಮಹಾಶಿಲ್ಪಿಯೆನಿಸಿ ಖ್ಯಾತನಾಗಿರುವ ಚಾಣಕ್ಯನವಿಷಯವಾಗಿ ಜೈನಆಮ್ನಾಯದ ಇತಿವೃತ್ತಸಾಹಿತ್ಯದಲ್ಲಿ ಉಳಿದಬಂದಿರುವ ಐತಿಹ್ಯವನ್ನು ಪ್ರಕೃತಸಂದರ್ಭದಲ್ಲಿ ಪರಾಮರ್ಶಿಸುವುದು ವಿಷಯಾಂತರವೆನಿಸಲಾರದು.

ಬ್ರಾಹ್ಮಣಕುಟುಂಬದಲ್ಲಿ ಜನಿಸಿದ ಚಾಣಕ್ಯನು ಮೌರ್ಯಚಂದ್ರಗುಪ್ತನಿಗೆ ಸಾಮ್ರಾಟಪದವಿಯನ್ನು ಸಾಧಿಸಿಕೊಟ್ಟು ಅತಿಶಯ ಯಶೋಭಾಗಿಯಾದನೆಂದು ಹೇಳುವಲ್ಲಿ ವೈದಿಕ, ಬೌದ್ಧ ಮತ್ತು ಜೈನಮತಸಂಪ್ರದಾಯಗಳ ಇತಿವೃತ್ತಗಳಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲವಾಗಿದೆ. ಆದರೆ ಮಗಧರಾಜನಾಗಿ ಅಭಿಷಿಕ್ತನಾದ ಮೌರ್ಯಚಂದ್ರಗುಪ್ತನ ವಿರುದ್ಧವಾಗಿ ಕಾರ್ಯನಿರತವಾಗಿದ್ದ ಶತ್ರುಬಲವನ್ನು ಮುರಿದು ಮಗಧರಾಜ್ಯದ ಭದ್ರತೆಯನ್ನು ಸಾಧಿಸಿಯಾದ ಅನಂತರಕಾಲದ ಚಾಣಕ್ಯನ ಐತಿಹ್ಯವಿಷಯವನ್ನು ಹೇಳುವಲ್ಲಿ ವೈದಿಕ ಮತ್ತು ಜೈನ ಸಂಪ್ರದಾಯಗಳ ಇತಿವೃತ್ತಗಳು ಭಿನ್ನಮತವುಳ್ಳವಾಗಿವೆ. ಮೌರ್ಯಚಂದ್ರಗುಪ್ತನ ರಾಜ್ಯಾಭಿಷೇಕಾನಂತರ ಇವನ ವಿರುದ್ಧವಾಗಿ ಕಾರ್ಯನಿರತನಾಗಿದ್ದ ಅಮಾತ್ಯರಾಕ್ಷಸನನ್ನು ಚಾಣಕ್ಯನು ಉಪಾಯಪೂರ್ವಕ ವಶಪಡಿಸಿಕೊಂಡು ಅವನಿಗೆ ಅಮಾತ್ಯಪದವಿಯನ್ನು ವಹಿಸಿದನೆಂಬುದಾಗಿ ಮುದ್ರಾರಾಕ್ಷಸನಾಟಕದ ಕಥಾಯತ್ತವಾದ ಐತಿಹ್ಯವಿರುವುದು ವಿದಿತವಿದೆ. ಆದರೆ ಜೈನ ಆಮ್ನಾಯದ ಇತಿವೃತ್ತಗಳ ಕಥನಾನುಸಾರವಾಗಿ ಚಾಣಕ್ಯನು ಮೌರ್ಯಚಂದ್ರಗುಪ್ತನ ರಾಜ್ಯಭಾರಾವಧಿಯಲ್ಲಿ ಮಾತ್ರವಲ್ಲದೆ ಬಿಂದುಸಾರನ ರಾಜ್ಯಭಾರಸಮಯದಲ್ಲಿಯೂ ಕೆಲವರ್ಷಕಾಲ ಪ್ರಧಾನಾಮಾತ್ಯನಾಗಿದ್ದು, ಅಂತಿಮವಾಗಿ ಅಮಾತ್ಯಪದವಿಯನ್ನು ಬಿಟ್ಟು ನಿರ್ಗ್ರಂಥಮುನಿದೀಕ್ಷೆಪಡೆದು ಹಿಂದೆ ಮಗಧರಾಜ್ಯದ ಮೇಲೆ ನಡೆದ ಯುದ್ಧದಲ್ಲಿ ತನ್ನಿಂದ ಪರಾಭವಗೊಂಡ ಕಾರಣ ಮಚ್ಚರಭಾವವನ್ನು ತಳೆದಿದ್ದ ಸುಬಂಧುವಿನಿಂದಾದ ಉಪಸರ್ಗವನ್ನು ಸಹಿಸಿ ಸ್ವರ್ಗಸ್ಥನಾಗಿದ್ದಾನೆ. ಜೈನಆಮ್ನಾಯದ ಈ ಐತಿಹ್ಯವನ್ನು ಸಟೆಯೆಂದು ಹೇಳಿ ಉಪೇಕ್ಷಿಸುವುದು ಯುಕ್ತವೆನಿಸಲಾರದು. ಸದ್ಯ ಉಪಲಬ್ಧವಿರುವ ಜೈನ ಆಮ್ನಾಯದ ಆರಾಧನಾಕಥೆಗಳು ಯಾರಾದರೊಬ್ಬರಾಜನ ಅಥವಾ ರಾಜ್ಯದ ಇತಿಹಾಸವನ್ನು ನಿರೂಪಿಸುವ ಮೂಲೋದ್ದೇಶವುಳ್ಳವಾಗಿರದೆ ಜಿನಧರ್ಮವನ್ನು ನಿರತಿಚಾರವಾಗಿ ಪರಿಪಾಲನೆಮಾಡಿ ಸ್ವರ್ಗಾಪವರ್ಗವನ್ನು ಪಡೆದವರ ಜೀವಿತೈತಿಹ್ಯವನ್ನು ನಿರೂಪಿಸುವ ಮೂಲೋದ್ದೇಶವುಳ್ಳವಾಗಿವೆ. ಇಂತೆಯೇ ಪರಿಶಿಷ್ಟಪರ್ವ ಮತ್ತು ಪಟ್ಟಾವಲಿಗಳು ಶ್ರೀ ವೀರತೀರ್ಥಂಕರನ ನಿರ್ವಾಣಾನಂತರಕಾಲದ ಮುನಿಪರಂಪರೆಯ ಐತಿಹ್ಯವನ್ನು ಪ್ರರೂಪಿಸುವ

ಮೂಲೋದ್ದೇಶವುಳ್ಳವಾಗಿವೆ. ಈ ಮೂಲೋದ್ದೇಶಯುಕ್ತವಾದ ಈ ಕೃತಿಗಳಲ್ಲಿ ಸಂದರ್ಭವಶವಾಗಿ ಇತರ ವ್ಯಕ್ತಿಗಳ ಅಥವಾ ರಾಜರ ಐತಿಹ್ಯವು ಸಂಕಲಿತವಾಗಿ ಉಳಿದುಬಂದಿದೆ. ಆದ್ದರಿಂದ ಉಪಸರ್ಗಜಿತರಾಗಿ ಸ್ವರ್ಗಭಾಜನರಾದರಿಸಿಗಳಲ್ಲೊಬ್ಬರಾದ ಚಾಣಕ್ಯರಿಸಿಗಳ ಐತಿಹ್ಯವು ಪರಂಪರಾನುಗತವಾಗಿ ಜೈನಆಮ್ನಾಯದ ಧಾರ್ಮಿಕ ಕಥೆಗಳಲ್ಲಿ ಉಳಿದುಬಂದಿರುವುದೆಂದು ನಿಶ್ಚಿತವಾಗುವುದು. ಪರಮತಾವಲಂಬಿಯಾದ ಚರಿತ್ರೆಯ ಮಹಾವ್ಯಕ್ತಿಯೋರ್ವನನ್ನು ಜಿನಧರ್ಮಾವಲಂಬಿಯನ್ನಾಗಿ ಪರಿವರ್ತಿಸಿ ಆ ಮೂಲಕ ಜೈನಮತದ ಹೆಗ್ಗಳಿಕೆಯನ್ನು ಸಾಧಿಸುವುದು ಈ ಕಥೆಗಳ ಉದ್ದೇಶವಾಗಿದೆಯೆಂದು ಹೇಳಲಾಗುವುದಿಲ್ಲ. ಜನ್ಮತಃ ಬ್ರಾಹ್ಮಣರಾಗಿದ್ದು ಜಿನಧರ್ಮಾವಲಂಬಿಗಳಾದ ಅನೇಕ ವ್ಯಕ್ತಿಗಳು ಜೈನ ಆಮ್ನಾಯದ ಕಥೆಗಳಲ್ಲಿ ಸಂಸ್ತುತರಾಗಿದ್ದಾರೆ. ಉದಾಹರಣೆಗಾಗಿ ಶ್ರೀ ವೀರತೀರ್ಥಂಕರನ ಪ್ರಧಾನಗಣಧರರಾದ ಗೌತಮ-ಇಂದ್ರಭೂತಿರಿಸಿಗಳು ಹಾಗೂ ಇವರ ಸಹೋದರರು, ಶ್ರು. ಕೇ. ಭದ್ರಬಾಹು ಆಚಾರ್ಯರು ಮತ್ತಿತರ ಅನೇಕ ವ್ಯಕ್ತಿವರ್ಯರು ಜನ್ಮತಃ ಬ್ರಾಹ್ಮಣರಾಗಿದ್ದರೆಂದು ಜೈನ ಆಮ್ನಾಯದ ಸ್ಪಷ್ಟಐತಿಹ್ಯವಿದೆ. ಇವರಂತೆಯೇ ಜನ್ಮತಃ ಬ್ರಾಹ್ಮಣನಾಗಿದ್ದ ಚಾಣಕ್ಯನು ನಿರ್ಗ್ರಂಥಮುನಿದೀಕ್ಷೆಪಡೆದು ಉಪಸರ್ಗಜಿತನಾಗಿ ಸ್ವರ್ಗಸ್ಥನಾದನೆಂಬ ಜೈನಆಮ್ನಾಯದ ಐತಿಹ್ಯವನ್ನು ಸಟೆಯೆಂದು ಹೇಳಲಾಗುವುದಿಲ್ಲ. ಬೃ. ಕ. ಕೋಶದ ಚಾಣಕ್ಯಮುನಿ ಕಥಾನಕದಲ್ಲಿ 'ದಕ್ಷಿಣಾಪಥಸಂಭವವಾದ ವನವಾಸದ ಪಶ್ಚಿಮದಿಗ್ಭಾಗದಲ್ಲಿರುವ ಮಹಾಕ್ರೌಂಚಪುರದ ಗೋಕುಲಸ್ಥಾನದಲ್ಲಿ ಪಂಚಶತಮುನಿಗಣದೊಡನೆ ಕಾಯೋತ್ಸರ್ಗಪೂರ್ವಕ ಧ್ಯಾನಾಸಕ್ತರಾಗಿದ್ದ ಚಾಣಾಕ್ಯರಿಸಿಗಳ ಬಳಿ ಸುಬಂಧುವು ಬೆರಣಿಯ ಉರಿಯಿಕ್ಕಲು, ಆ ಉಪಸರ್ಗವನ್ನು ಸಹಿಸಿ ಚಾಣಾಕ್ಯರಿಸಿಗಳು ಸ್ವರ್ಗಭಾಜನರಾದರಾಗಿ ಇಲ್ಲಿರುವ ಇವರ ನಿಷಿಧಿಯು ಇಂದಿಗೂ ಸಾಧುಗಳಿಂದ ವಂದಿಸಲ್ಪಡುವುದು ಎಂಬ ಐತಿಹ್ಯವು ಉಳಿದುಬಂದಿದೆ. ಇದರಿಂದ ಬೃ. ಕ. ಕೋಶದ ರಚನಾಕಾಲವಾದ ಕ್ರಿ. ಶ. ೧೦ ನೇ ಶತಮಾನದಲ್ಲಿ ಜೈನಸಾಧುಗಳು ಬನವಾಸಿಯ ಪಶ್ಚಿಮದಿಶೆಯಲ್ಲಿ ಕ್ರೌಂಚಪುರದ ಬಳಿಯಿದ್ದ ಚಾಣಕ್ಯಮುನಿಗಳ ನಿಷಿದಿಯನ್ನು ವಂದಿಸುವ ರೂಢಿಯಿದ್ದಿತೆಂದು ವ್ಯಕ್ತವಾಗುವುದು.

ಬಿಂದುಸಾರನ ಜೀವಿತೈತಿಹ್ಯವಿಷಯವಾಗಿ ಇಲ್ಲಿ ವಿಮರ್ಶಿಸಬೇಕಾದಂತಹ ವಿಶಿಷ್ಟಾಂಶಗಳಾವುವೂ ಇರುವುದಿಲ್ಲವಾದರೂ ಇವನ ರಾಜ್ಯಭಾರಾವಧಿಯ ಸಮಯವನ್ನು ಕುರಿತು ವಿಮರ್ಶಿಸಬೇಕಾದ ಆವಶ್ಯಕತೆಯಿದೆ. ಇವನು ೨೫ ವರ್ಷಕಾಲ ರಾಜ್ಯವಾಳಿದನೆಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ. ವಾಯುಪುರಾಣದಲ್ಲಿ 'ಬಿಂದುಸಾರ' ಎಂಬ ಹೆಸರಿನ ಬದಲಾಗಿ 'ಭದ್ರಸಾರ' ಎಂದು ಹೆಸರಿಸಲಾಗಿದ್ದು ಈ ಹೆಸರಿನೊಡನೆ ೨೫ ವರ್ಷಗಳ ರಾಜ್ಯಭಾರಸಮಯವು ನಿರ್ದೇಶಿತವಾಗಿದೆ. ಮತ್ಸ್ಯಪುರಾಣದಲ್ಲಿ ಮೌರ್ಯರಾಜಸಂತತಿಯ ಐತಿಹ್ಯವು ಅಸ್ತವ್ಯಸ್ತಗೊಂಡಿದ್ದು 'ಬಿಂದುಸಾರ' ಎಂಬ ಹೆಸರಾಗಲೀ ಅಥವಾ ಈ ಹೆಸರಿನ ಸದೃಶರೂಪದ ಹೆಸರಾಗಲೀ ಇಲ್ಲವಾಗಿದೆಯೆಂಬು

ದಲ್ಲದೆ ಇವನ ರಾಜ್ಯಭಾರಾವಧಿಸಮಯದ ಬಗ್ಗೆಯೂ ಯಾವ ಸೂಚನೆಯೂ ಉಳಿದು ಬಂದಿರುವುದಿಲ್ಲ. ದಾಕ್ಷಿಣಾತ್ಯ ಬೌದ್ಧಆಮ್ನಾಯದ ಕೃತಿಗಳಾದ ಮಹಾವಂಸೋ ಮತ್ತು ಬರ್ಮೀಇತಿವೃತ್ತಗಳಲ್ಲಿ ಅನುಕ್ರಮವಾಗಿ ಇವನ ರಾಜ್ಯಭಾರವನ್ನು ೨೮ ಮತ್ತು ೨೭ ವರ್ಷಗಳ ಅವಧಿಯುಳ್ಳದ್ದನ್ನಾಗಿ ನಿರ್ದೇಶಿಸಲಾಗಿದೆ. ದೀಪವಂಸೋ ಕೃತಿಯಲ್ಲಿ ಇವನ ರಾಜ್ಯಭಾರಾವಧಿಸಮಯವು ನಿರ್ದೇಶಿತವಾಗಿಲ್ಲ. ಈ ರೀತಿಯಾಗಿ ಇವನ ರಾಜ್ಯಭಾರಾವಧಿಸಮಯವನ್ನು ಕುರಿತು, ಪುರಾಣಗಳ ಮತ್ತು ಬೌದ್ಧ ಆಮ್ನಾಯದಕೃತಿಗಳ ಮಧ್ಯೆ ಒಮ್ಮತವಿಲ್ಲದಿರುವುದು ಸಮಸ್ಯೆಯೆನಿಸಿ ಕಂಡುಬರುವುದಾದರೂ ಅಶೋಕಸಾಮ್ರಾಟನ ರಾಜ್ಯಾಭಿಷೇಕಸಮಯದ ಅಪೇಕ್ಷೆಯಿಂದ ಇವನ ರಾಜ್ಯಭಾರಾವಧಿಸಮಯವು ೨೫ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಗ್ರಹಿಸಬೇಕಾದ ಪ್ರಮೇಯವಿದೆ. ಆದ್ದರಿಂದ ಇವನ ರಾಜ್ಯಭಾರಾವಧಿಯ ಸಮಯವನ್ನು ನಿರ್ದೇಶಿಸುವಲ್ಲಿ ವಾಯು ಮತ್ತು ಬ್ರಹ್ಮಾಂಡಪುರಾಣಗಳ ಹೇಳಿಕೆಗಳು ತಥ್ಯನಿಷ್ಠವಾಗಿವೆಯೆಂದು ವ್ಯಕ್ತವಾಗುವುದಲ್ಲದೆ ಇವನ ರಾಜ್ಯಭಾರವು ಕ್ರಿ. ಪೂ. (೨೯೮ — ೨೫=) ೨೭೩ ರಲ್ಲಿ ಕೊನೆಗೊಂಡಿದೆಯೆಂದು ಫಲಿತವಾಗುವುದು.

ಬಿಂದುಸಾರನ ರಾಜ್ಯಭಾರವು ಅಂತ್ಯಗೊಂಡ ೪ ವರ್ಷಗಳ ತರುವಾಯ ಸುಪ್ರಸಿದ್ಧನಾದ ಅಶೋಕಸಾಮ್ರಾಟನ ರಾಜ್ಯಾಭಿಷೇಕವಾಗಿದೆ. ಇವನು ತನ್ನ ರಾಜ್ಯಾಭಿಷೇಕದ ಪೂರ್ವವರ್ತಿಯಾದ ನಾಲ್ಕು ವರ್ಷಕಾಲ ಉಜ್ಜಯಿನಿ ಅಥವಾ ತಕ್ಷಸಿಲೆಯಲ್ಲಿ ವಾಸಿಸುತ್ತಿದ್ದಿರಬೇಕು. ಈ ಸಮಯದಲ್ಲಿ ಇವನ ಭ್ರಾತೃವಾದ ಸುಸೀಮ (ಅಥವಾ ಸುಮನ) ಎಂಬುವನು ಪಾಟಲೀಪುತ್ರನಗರದ ಸಿಂಹಾಸನಾರೂಢನಾಗಿದ್ದಿರಬೇಕೆಂದೂ ಮತ್ತು ರಾಜ್ಯದ ಪ್ರಭುತ್ವಕ್ಕಾಗಿ ಕಲಹ ನಡೆದು ಅಂತಿಮವಾಗಿ ಜಯಶಾಲಿಯಾದ ಅಶೋಕನು ಮಗಧಸಾಮ್ರಾಜ್ಯದ ಸಾಮ್ರಾಟನಾಗಿ ಅಭಿಷಿಕ್ತನಾಗಿರುವನೆಂದು ಬೌದ್ಧ ಆಮ್ನಾಯದ ಐತಿಹ್ಯದಾಧಾರದಿಂದ ವ್ಯಕ್ತವಾಗುವುದು. ಬಿಂದುಸಾರನ ರಾಜ್ಯಭಾರವು ಈ ಹಿಂದೆ ವಿವರಿಸಲಾಗಿರುವಂತೆ, ಕ್ರಿ. ಪೂ. ೨೭೩ ರಲ್ಲಿ ಅಂತ್ಯಗೊಂಡಿರುವುದಾದ್ದರಿಂದ ಈ ಸಮಯದಿಂದ ೪ ವರ್ಷಗಳ ತರುವಾಯ ಕ್ರಿ. ಪೂ. ೨೬೯ ರಲ್ಲಿ ಅಶೋಕ ಸಾಮ್ರಾಟನ ರಾಜ್ಯಾಭಿಷೇಕವು ನಡೆದಿದೆಯೆಂದು ಫಲಿತವಾಗುವುಧು. ಇವನ ಈ ರಾಜ್ಯಾಭಿಷೇಕಸಮಯವನ್ನಧಿಕರಿಸಿದಂತೆ, ಶ್ರೀ ಗೌತಮಬುದ್ಧನ ನಿರ್ವಾಣಸಮಯದ ವಿಷಯವು ಪುನಃ ಪರಿಶೀಲನೆಗೊಳ್ಳಬೇಕಾದ ಅವಶ್ಯಕತೆಯಿದೆ. ಶ್ರೀ ಗೌತಮಬುದ್ಧನು ಕ್ರಿ. ಪೂ. ೫೨೫ ರಲ್ಲಿ ನಿರ್ವಾಣಹೊಂದಿರುವನೆಂಬ ಪೂರ್ವ ಪ್ರತಿಪಾದನೆಯನುಗುಣವಾಗಿ ಬು. ನಿ. ಪ. (೫೨೫ — ೨೬೯=) ೨೫೬ ನೇ ವರ್ಷದಲ್ಲಿ ಅಶೋಕಸಾಮ್ರಾಟನ ರಾಜ್ಯಾಭಿಷೇಕವು ನಡೆದಿದೆಯೆಂದು ಫಲಿತವಾಗುವುದು. ಆದರೆ ಬೌದ್ಧಆಮ್ನಾಯದ ಕೃತಿಗಳಾದ ದೀಪವಂಸೋ ಮತ್ತು ಮಹಾವಂಸೋ ಕೃತಿಗಳಲ್ಲಿ,

ಶ್ರೀ ಗೌತಮ ಬುದ್ಧನ ನಿರ್ವಾಣಸಮಯದಿಂದ ೨೧೮ ವರ್ಷಗಳ ತರುವಾಯದಲ್ಲಿ[1] ಅರ್ಥಾತ್ ೨೧೯ ನೇ ವರ್ಷದಲ್ಲಿ ಅಶೋಕಸಾಮ್ರಾಟನ ರಾಜ್ಯಾಭಿಷೇಕವು ನಡೆಯಿತೆಂಬ ಹೇಳಿಕೆಯಿದೆ. ಪರಂಪರಾಗತವಾದ ಈ ಹೇಳಿಕೆಯು ಶ್ರದ್ಧಾರ್ಹವಾಗಿರುವುದಾದ್ದರಿಂದಲೂ ಮತ್ತು ಅಶೋಕಸಾಮ್ರಾಟನು ಕ್ರಿ. ಪೂ. ೨೭೩ ಅಥವಾ ೨೭೨ ರಲ್ಲಿ ಮಗಧರಾಜ್ಯದ ಪ್ರಭುತ್ವವನ್ನು ಪಡೆದಿದ್ದು ನಾಲ್ಕು ವರ್ಷಗಳ ತರುವಾಯ ಕ್ರಿ. ಪೂ. ೨೬೯ ಅಥವಾ ೨೬೮ ರಲ್ಲಿ ರಾಜ್ಯಾಭಿಷೇಕಹೊಂದಿರುವನಾದ್ದರಿಂದಲೂ ಶ್ರೀ ಗೌತಮಬುದ್ಧನು ಕ್ರಿ. ಪೂ. ೪೮೭ ಅಥವಾ ೪೮೬ ರಲ್ಲಿ ನಿರ್ವಾಣಹೊಂದಿರುವನೆಂದು ಚರಿತ್ರಕಾರರಲ್ಲಿ ಬಹುಮತದ ಅಭಿಪ್ರಾಯವಿರುವಂತೆ ಕಂಡುಬರುತ್ತದೆ.[2] ಮಗಧರಾಜ್ಯದ ಇತಿಹಾಸ ವಿಷಯವಾಗಿ ದೀಪವಂಸೋ ಮತ್ತು ಮಹಾವಂಸೋ ಕೃತಿಗಳಲ್ಲಿ ಬಹ್ವಂಶವು ಐತಿಹಾಸಿಕತಥ್ಯನಿಷ್ಠವಾಗಿರುವುದೆಂದು ಇದುವರೆವಿಗಿನ ಪರಾಮರ್ಶೆಯಿಂದ ವ್ಯಕ್ತಪಟ್ಟಿರುವಂತೆ ಅನೇಕ ಸಂದರ್ಭಗಳಲ್ಲಿ ಈ ಕೃತಿಗಳಹೇಳಿಕೆಗಳು ತಥ್ಯನಿಷ್ಠವಾಗಿಲ್ಲವೆಂಬುದೂ ವ್ಯಕ್ತಪಟ್ಟಿದೆ. ಆದ್ದರಿಂದ ಶ್ರೀ ಗೌತಮಬುದ್ಧನ ನಿರ್ವಾಣಸಮಯ ಮತ್ತು ಅಶೋಕಸಾಮ್ರಾಟನ ರಾಜ್ಯಾಭಿಷೇಕಸಮಯಗಳ ಮಧ್ಯವರ್ತಿಯಾದ ಅಂತರಕಾಲವನ್ನು ನಿರ್ದೇಶಿಸುವಲ್ಲಿ ಈ ಕೃತಿಗಳ ಪೂರ್ವೋಕ್ತ ಹೇಳಿಕೆಯು ಸರ್ವಥಾ ಶ್ರದ್ಧಾರ್ಹವಿದೆಯೆಂಬ ಅಭಿಮತವು ಸುವಿಚಾರಿತವೆನ್ನಿಸಿಕೊಳ್ಳುವುದಿಲ್ಲ. ಅಶೋಕ ಸಾಮ್ರಾಟನ ಕೆಲವು ಶಾಸನಗಳಲ್ಲಿ ಕಾಲಸೂಚಕವಾದ ೨೫೬ ಎಂಬ ಸಂಖ್ಯೆಯು ಲಿಖಿತವಿದ್ದು ಇದು ಶ್ರೀ ಗೌತಮಬುದ್ಧನ ನಿರ್ವಾಣಸಮಯದ ಸೂಚಕವಾಗಿರಬಹುದಾದ ಸಂಭವದ ಬಗ್ಗೆ ವಿದ್ವಾಂಸರ ವಿಮರ್ಶೆ ನಡೆದು, ಅಂತಿರಲಾರದೆಂಬ ಅಭಿಮತವು ಅಂತಿಮವಾಗಿ ಆರೂಢವಾಗಿರುವಂತೆ ಕಂಡುಬರುತ್ತದೆ. ವಿದ್ವಾಂಸರ ಈ ಅಂತಿಮ ಅಭಿಮತಕ್ಕೆ ದೀಪವಂಸೋ ಮತ್ತು ಮಹಾವಂಸೋ ಕೃತಿಗಳ ಪೂರ್ವೋಕ್ತ ಹೇಳಿಕೆಯು ಕಾರಣವಾಗಿದೆ, ಯೆಂಬುದಲ್ಲದೆ ೨೫೬ ಎಂಬ ಸಂಖ್ಯೆಗನ್ವಿತವಾಗಿ ಶಾಸನದಲ್ಲಿ ಪ್ರಯುಕ್ತವಾಗಿರುವ ಕೆಲವು ಪದಗಳ ಅರ್ಥದ ಅಸ್ಪಷ್ಟತೆಯೂ ಕಾರಣವಾಗಿದೆ. ಈ ರೀತಿಯಾಗಿ ಅರ್ಥದೃಷ್ಟಿಯಿಂದ ಅಸ್ಪಷ್ಟವಾಗಿರುವ ಪದಗಳಲ್ಲೊಂದಾಗಿರುವ 'ಸವನೆ' ಅಥವಾ 'ಸಾವನೆ' ಅಥವಾ 'ಸಾವಣೆ' ಎಂಬುದನ್ನು (ಪ್ರಿಸೆಪ್ಟ್ =) ವಿಧಿ. ನಿಯಮ, ನಿಬಂಧನೆ ಅಥವಾ ಆಣತಿ ಎಂಬುದಾಗಿ ಅರ್ಥವಿಸಿರುವಂತೆ ಕಂಡುಬರುತ್ತದೆ.[3] ಆದರೆ ವೈದಿಕಸಾಹಿತ್ಯ

---

1 ಜಿನನಿಬ್ಬಾಣತೋ ಪಚ್ಛಾ ಪುರಾ ತಸ್ಸಾಭಿಸೇಕತೋ ।
ಸಾಟ್ಠಾರಸಂ ವಸ್ಸಸತದ್ವಯಮೇವಂ ವಿಜಾನೀಯಂ ॥

(ಮಹಾವಂಸೋ)

2 'ಏಜ್ ಆಫ್ ದಿ ನಂದಾಸ್ ಅಂಡ್ ಮೌರ್ಯಾಸ್' ಪು. ಸಂ. ೨೦೬ ಮತ್ತು ೨೦೭; ಮಹಾವಂಸೋ ಆಂಗ್ಲಾನುವಾದ_ಮುನ್ನುಡಿ.

3 ಜೆ. ಆರ್. ಎ. ಎಸ್.–ಗ್ರೇಟ್ ಬ್ರಿಟನ್ ಅಂಡ್ ಐರ್ಲೆಂಡ್_ಪು. ಸಂ. ೪.

ದಲ್ಲಿ 'ಸಾವನ' ಎಂಬ ಪದವು 'ವರ್ಷ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆಯೆಂದು ಸನ್ಮಾನ್ಯ ಬಾಲಗಂಗಾಧರತಿಲಕ್‌ರವರು ಪ್ರತಿಪಾದಿಸಿರುವರಾದ್ದರಿಂದ[1] ಅಶೋಕ ಸಾಮ್ರಾಟನ ಶಾಸನಗಳಲ್ಲಿಯೂ ಈ ಪದವು ಇದೇ ಅರ್ಥದಿಂದ ಪ್ರಯುಕ್ತವಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಇಷ್ಟಲ್ಲದೆ ಈ '೨೫೬' ಎಂಬ ಸಂಖ್ಯೆಗನ್ವಿತವಾಗಿ ಆಹರೌರಾ ಶಾಸನದಲ್ಲಿ 'ಬುಧಸ್ಸ ಶರೀರೇ ಆಲೋಢೇಚ' (ಅರ್ಥಾತ್ ಬುದ್ಧಸ್ಯ ಶರೀರೇ ಆರೂಢೇಚ) ಎಂಬ ಉಕ್ತಿಯಿರುವುದಾದ್ದರಿಂದ[2] ಈ ಸಂಖ್ಯೆಯು ಶ್ರೀ ಗೌತಮಬುದ್ಧನ ನಿರ್ವಾಣಸಮಯದ ಸೂಚಕವಾಗಿರುವುದೆಂದು ಗ್ರಹಿಸುವುದು ಸುಸಂಗತವೆನಿಸುವುದು. ಈ ವಿಚಾರದೃಷ್ಟಿಯಿಂದ ದೀಪವಂಸೋ ಮತ್ತು ಮಹಾವಂಸೋ ಕೃತಿಗಳ ಪೂರ್ವೋಕ್ತ ಹೇಳಿಕೆಯ ತಥ್ಯವನ್ನು ಪುನರ್ವಿಮರ್ಶಿಸಬೇಕಾಗುವುದು. ಬು. ನಿ. ಪ. ೨೧೮ ನೇ ವರ್ಷದಲ್ಲಿ ಜನಿಸಿದ ಅಶೋಕನು ತನ್ನ ೩೮ ನೇ ವರ್ಷದ ವಯೋಮಾನದಲ್ಲಿ ರಾಜ್ಯಾಭಿಷೇಕಹೊಂದಿರುವನೆಂಬ ಮೂಲರೂಪದ ಐತಿಹ್ಯವು ಕಾರಣಾಂತರದಿಂದ ಈ ಕೃತಿಗಳಲ್ಲಿ ವ್ಯತ್ಯಸ್ತರೂಪತಳೆದು ಉಳಿದುಬಂದಿದೆಯೆಂದು ಕಂಡುಬರುತ್ತದೆ. ಈ ಗ್ರಹಿಕೆಯು ಸಂಭಾವಿತವಿದೆಯೆನ್ನಿಸಿಕೊಳ್ಳುವುದಾದಲ್ಲಿ ಬು. ನಿ. ಪ. (೨೧೮ + ೩೮ =) ೨೫೬ ನೇ ವರ್ಷದಲ್ಲಿ ಅಶೋಕಸಾಮ್ರಾಟನ ರಾಜ್ಯಾಭಿಷೇಕವು ನಡೆದಿರುವುದೆಂಬುದು ನಿಸ್ಸಂದಿಗ್ಧವೆನಿಸಿಕೊಳ್ಳುವುದಲ್ಲದೆ ಶ್ರೀ ಗೌತಮಬುದ್ಧನು ಕ್ರಿ. ಪೂ. ೫೨೫ ರಲ್ಲಿ ನಿರ್ವಾಣಹೊಂದಿರುವನೆಂಬ ಪೂರ್ವಪ್ರತಿಪಾದನೆಯು ನಿರಾಬಾಧವೆನಿಸಿ ಸ್ಥಿರೀಕೃತವಾಗುವುದು. ಇಂತೆಯೇ ಪುರಾಣಗಳ ಹೇಳಿಕೆಯಿಂದ ಅಶೋಕ ಸಾಮ್ರಾಟನು ೩೬ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಸೂಚಿತವಾಗುವುದಾದ್ದರಿಂದ ಇವನ ರಾಜ್ಯಭಾರವು ಕ್ರಿ ಪೂ. (೨೬೯−೩೬=) ೨೩೩ ರಲ್ಲಿ ಕೊನೆಗೊಂಡಿದೆಯೆಂದು ಫಲಿತವಾಗುವುದು.

## ಅಶೋಕಸಾಮ್ರಾಟನ ತರುವಾಯ ಕಾಲದ ಮೌರ್ಯರಾಜ ಸಂತತಿಃ

ಮೌರ್ಯಮನೆತನದ ೧೦ ಜನ ಅರಸರು ರಾಜ್ಯಭಾರಮಾಡಿದರೆಂಬ ಏಕಮತದ ಐತಿಹ್ಯವು ವಡ್ಡಾರಾಧನೆಯ ಚಾಣಕ್ಯರಿಸಿಕಥೆ, ಪರಿಶಿಷ್ಟಪರ್ವ ಮತ್ತು ಮತ್ಸ್ಯಪುರಾಣದಲ್ಲಿ ಉಳಿದುಬಂದಿರುವುದಲ್ಲದೆ ಇವರೆಲ್ಲರ ಒಟ್ಟು ರಾಜ್ಯಭಾರಕಾಲವು ೧೩೭ ವರ್ಷಗಳ ಅವಧಿಯುಳ್ಳದ್ದಾಗಿದೆಯೆಂದು ಪುರಾಣಗಳ ಹೇಳಿಕೆಗಳಿಂದ ವಿದಿತವಾಗುವುದು. ಹಿಂದಿನ ಪ್ರತಿಪಾದನೆಯನುಗುಣವಾಗಿ ಈ ಮನೆತನದ ಮೊದಲ ನಾಲ್ವರಾದ ಚಂದ್ರಗುಪ್ತ, ಬಿಂದುಸಾರ, ಸುಸೀಮ ಮತ್ತು ಅಶೋಕ ರಾಜರ ಒಟ್ಟು ರಾಜ್ಯಭಾರಕಾಲವು (೨೪+೨೫+೪+೩೬=) ೮೯ ವರ್ಷಗಳ ಅವಧಿಯುಳ್ಳದ್ದಾಗಿದೆ

---

1 ದಿ ಓರಿಯನ್–ಚ್ಯಾಪ್ಟರ್ II–ಪು. ಸಂ. 14.

2 ಅಶೋಕಕೇ ಅಭಿಲೇಖ–ಸನ್ಮಾನ್ಯ ರಾಜಬಲಿಪಾಂಡೇಯ ಸಂಪಾದಿತ ಕೃತಿ. ಪು. ಸಂ. 130.

ಯೊದುದರಿಂದ ಇವರ ಅನಂತರ ಕಾಲದ ೬ ಜನ ಅರಸರ ಒಟ್ಟು ರಾಜ್ಯಭಾರಕಾಲವು (೧೩೭—೮೯=) ೪೮ ವರ್ಷಗಳ ಅವಧಿಯುಳ್ಳದ್ದಾಗಿರುವುದೆಂದು ಫಲಿತವಾಗುವುದು.

ಅಶೋಕಸಾಮ್ರಾಟನ ತರುವಾಯದ ಮೌರ್ಯರಾಜಸಂತತಿಯ ಅರಸರ ಹೆಸರುಗಳು ಮತ್ತು ರಾಜ್ಯಭಾರವರ್ಷಗಳನ್ನು ವಾಯುಪುರಾಣದಲ್ಲಿ ಈ ಮುಂದಿನಂತೆ ನಿರ್ದೇಶಿಸಲಾಗಿದೆ :

| ಕ್ರಮಸಂಖ್ಯೆ | ರಾಜರ ಹೆಸರುಗಳು | ರಾಜ್ಯಭಾರವರ್ಷಗಳು |
|---|---|---|
| ೧) | ಕುನಾಲ | ೮ |
| ೨) | ಬಂಧುಪಾಲಿತ (ಕುನಾಲಸೂನು) | ೮ |
| ೩) | ಇಂದ್ರಪಾಲಿತ [ಬಂಧುಪಾಲಿತದಾಯಾದ] | ೧೦[1] |
| ೪) | ದೇವವರ್ಮ | ೭ |
| ೫) | ಶತಧರ | ೮ |
| ೬) | ಬೃಹದಶ್ವ | ೭ |
| | ಒಟ್ಟು | ೪೮ |

ಅಶೋಕಸಾಮ್ರಾಟನ ಸುತನಾದ ಕುನಾಲನು ೮ ವರ್ಷಕಾಲ ರಾಜ್ಯವಾಳಿದನೆಂಬ ಪುರಾಣಗಳ ಐತಿಹ್ಯವನ್ನು ಈಗ ಶಂಕಿಸುವಂತಿಲ್ಲ. ಕುಣಾಲನನ್ನು ಕುರುಡುಗೊಳಿಸಲಾಯಿತೆಂದು ವಡ್ಡಾರಾಧನೆಯ ಚಾಣಕ್ಯರಿಸಿ ಕಥೆ, ಪರಿಶಿಷ್ಟಪರ್ವ ಮತ್ತು ದಿವ್ಯಾದದಾನಗಳಲ್ಲಿ ಹೇಳಲಾಗಿರುವ ಐತಿಹ್ಯವು ವಾಸ್ತವವಾಗಿ ಕಾಲಾಶೋಕ-ವೀರಸೇನನ ಸುತನಾದ ಸಿಂಹನನ್ನು ಕುರುಡುಗೊಳಿಸಲಾದ ಪ್ರಸಂಗವಾಗಿದೆಯೆಂದು ಹಿಂದಿನ ಪ್ರತಿಪಾದನೆಯಿಂದ ವ್ಯಕ್ತಪಟ್ಟದೆ. ಆದ್ದರಿಂದ ಕುಣಾಲನು ೮ ವರ್ಷಕಾಲ ರಾಜ್ಯವಾಳಿದನೆಂಬ ಪುರಾಣಗಳ ಐತಿಹ್ಯವು ತಥ್ಯನಿಷ್ಠವಾಗಿರುವುದೆಂಬುದರಲ್ಲಿ ಸಂಶಯವಿಲ್ಲ.

ಕುಣಾಲನ ತರುವಾಯ ಸಂಪ್ರತಿಯೂ ತದನಂತರ ದಶರಥನೂ ರಾಜ್ಯವಾಳಿರಬೇಕೆಂದು ಐತಿಹ್ಯಾಂತರಗಳಿಂದ ಸೂಚಿತವಾಗುವುದು. ಆದರೆ ವಾಯು ಮತ್ತು ಬ್ರಹ್ಮಾಂಡಪುರಾಣಗಳೆರಡರಲ್ಲಿಯೂ ಇವರನ್ನು ಹೆಸರಿಸಿಲ್ಲವಾಗಿರುವುದು ಸಮಸ್ಯೆಯಾಗಿ ಕಾಣುವುದು. ಒಬ್ಬನೇ ವ್ಯಕ್ತಿಯನ್ನು ವೈದಿಕ, ಬೌದ್ಧ ಮತ್ತು ಜೈನ ಸಂಪ್ರ

---

1 ಸಾಧಾರಣವಾಗಿ ವಾಯು, ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ರಾಜರೆಲ್ಲರ ಹೆಸರುಗಳೊಡನೆ ಅವರವರ ರಾಜ್ಯಭಾರವರ್ಷಗಳನ್ನು ಹೇಳಲಾಗಿದ್ದು, 'ಇಂದ್ರಪಾಲಿತ' ಎಂಬ ಹೆಸರಿಗನ್ವಿತವಾಗಿ 'ಬಂಧುಪಾಲಿತದಾಯಾದೋ ದಶಪಾನೀಂದ್ರಪಾಲಿತಃ' ಎಂದು ಹೇಳಿದೆ. ಇಲ್ಲಿ 'ದಶ' ಎಂಬುದರ ಹೊರತಾಗಿ ಮತ್ತಾವ ಪದವೂ ಸಂಖ್ಯಾವಾಚಕವಾಗಿಲ್ಲವಾದುದರಿಂದ ಇದು ಇವನ ರಾಜ್ಯಭಾರವರ್ಷಗಳ ಸೂಚಕವಾದ ಸಂಖ್ಯೆಯಾಗಿದ್ದು 'ದಶವಾನಿ' ಎಂಬ ಭ್ರಂಶರೂಪತಳೆದಿದೆಯೆಂದು ಗ್ರಹಿಸಬೇಕಾಗುವುದು.

ದಾಯಗಳ ಕೃತಿಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ನಿರ್ದೇಶಿಸಲಾಗಿದೆಯೆಂದು ಹಿಂದೆ ಅನೇಕ ಸಂದರ್ಭಗಳಲ್ಲಿ ವ್ಯಕ್ತಪಟ್ಟಿದೆ. ಇಂತೆಯೇ ಪ್ರಕೃತಸಂದರ್ಭದಲ್ಲಿಯೂ ಬಂಧುಪಾಲಿತ ಮತ್ತು ಇಂದ್ರಪಾಲಿತ ಎಂಬ ಹೆಸರುಗಳು ಅನುಕ್ರಮವಾಗಿ ಸಂಪ್ರತಿ ಮತ್ತು ದಶರಥರ ನಾಮಾಂತರಗಳಾಗಿವೆಯೆಂದು ಗ್ರಹಿಸಬೇಕಾಗುವುದು. ಇಷ್ಟಲ್ಲದೆ ಮೇಲ್ಕಂಡ ನಾಮಾವಲಿಯಲ್ಲಿರುವ ಶತಧರ ಮತ್ತು ಬೃಹದಶ್ವ ಎಂಬ ಹೆಸರುಗಳೂ ಭ್ರಂಶರೂಪತಳೆದಿವೆಯೆಂದು ಹೇಳಲವಕಾಶವಿದೆ. ಈ ಹೆಸರುಗಳ ಬದಲಾಗಿ, ಬ್ರಹ್ಮಾಂಡಪುರಾಣದಲ್ಲಿ ಅನುಕ್ರಮವಾಗಿ, ಶತಧನು ಮತ್ತು ಬೃಹದ್ರಥ ಎಂಬಹೆಸರುಗಳಿವೆಯೆಂಬುದಲ್ಲದೆ, ಮೌರ್ಯರಾಜಸಂತತಿಯಲ್ಲಿ ಬೃಹದ್ರಥ ಎಂಬುವನು ಅಂತಿಮ ರಾಜನಾಗಿರುವನೆಂದು ಬಾಣಕವಿಯ ಹೇಳಿಕೆಯಿಂದಲೂ ಸೂಚಿತವಾಗುವುದು. [ಹರ್ಷಚರಿತ-ಉಚ್ಛ್ವಾಸ ೬]. ಆದ್ದರಿಂದ ವಾಯುಪುರಾಣದ 'ಬೃಹದಶ್ವ' ಎಂಬ ಹೆಸರು 'ಬೃಹದ್ರಥ' ಎಂಬುದರ ಭ್ರಂಶರೂಪವಾಗಿದೆಯೆಂದು ನಿಶ್ಚಿತವಾಗುವುದು. ಇದರಿಂದ ಪುರಾಣಗಳಲ್ಲಿ ಹಾಗೂ ಇತರ ಐತಿಹ್ಯಾಂಶಗಳಲ್ಲಿ ಈ ಅರಸರುಗಳನ್ನು ನಾಮಾಂತರಗಳಿಂದ ನಿರ್ದೇಶಿಸಲಾಗಿದೆಯೆಂಬುದು ಮಾತ್ರವಲ್ಲದೆ, ಕೆಲವೊಮ್ಮೆ ಇವರ ನಿಜವಾದ ಹೆಸರುಗಳು ಭ್ರಂಶರೂಪತಳೆದು ಉಳಿದುಬಂದಿವೆಯೆಂದೂ ವ್ಯಕ್ತವಾಗುವುದು. ಆದ್ದರಿಂದ ಮೇಲ್ಕಂಡ ನಾಮಾವಲಿಯಲ್ಲಿ ನಿರ್ದೇಶಿತವಾಗಿರುವಂತೆ ಅಶೋಕ ಸಾಮ್ರಾಟನ ತರುವಾಯ ಮೌರ್ಯಮನೆತನದ ಆರು ಜನ ಅರಸರು ೪೮ ವರ್ಷಕಾಲ ರಾಜ್ಯಭಾರಮಾಡಿರುವರೆಂದು ನಿಶ್ಚಿತವಾಗುವುದು.

ಮೌರ್ಯರಾಜಸಂತತಿಯ ರಾಜ್ಯಭಾರಾನುಕ್ರಮದ ಚೌಬಂಧ :

| ಅನುಕ್ರಮಸಂಖ್ಯೆ | ರಾಜರ ಹೆಸರುಗಳು | ರಾಜ್ಯಭಾರವರ್ಷಗಳು |
|---|---|---|
| ೧ | ಚಂದ್ರಗುಪ್ತ | ೨೪ |
| ೨ | ಬಿಂದುಸಾರ | ೨೫ |
| ೩ | ಸುಸೀಮ ಅಥವಾ ಸುಮನ | ೪ |
| ೪ | ಅಶೋಕ | ೩೬ |
| ೫ | ಕುನಾಲ | ೮ |
| ೬ | ಬಂಧುಪಾಲಿತ–ಸಂಪ್ರತಿ | ೮ |
| ೭ | ಇಂದ್ರಪಾಲಿತ–ದಶರಥ | ೧೦ |
| ೮ | ದೇವವರ್ಮ ಅಥವಾ ದೇವಧರ್ಮ | ೭ |
| ೯ | ಶತಧರ ಅಥವಾ ಶತಧನು | ೮ |
| ೧೦ | ಬೃಹದ್ರಥ | ೭ |
| | ಒಟ್ಟು | ೧೩೭ |

## ಶುಂಗ, ಕಣ್ವ ಮತ್ತು ಆಂಧ್ರಭೃತ್ಯರಾಜಮನೆತನಗಳು

ಪುರಾಣಗಳ ಐತಿಹ್ಯ ಹಾಗೂ ಬಾಣಕವಿಯ ಹೇಳಿಕೆಯಾಧಾರದಿಂದ[1] ಮೌರ್ಯರಾಜಮನೆತನದ ಅಂತಿಮ ಅರಸನಾದ ಬೃಹದ್ರಥನನ್ನು ಶುಂಗಮನೆತನದ ಸೇನಾನಿ ಪುಷ್ಯಮಿತ್ರನು ಕೊಂದು, ಸಿಂಹಾಸನವನ್ನು ಆಕ್ರಮಣಮಾಡಿದನೆಂಬುದು ನಿಶ್ಚಿತವಿದೆ. ಇದರಂತೆ ಇವನ ರಾಜ್ಯಭಾರವು ಕ್ರಿ. ಪೂ. (೩೨೨ — ೧೩೭) ೧೮೫-೪ ರಲ್ಲಿ ಆರಂಭವಾಗಿದೆಯೆಂದು ಫಲಿತವಾಗುವುದು.

ಪುಷ್ಯಮಿತ್ರನ ಸಮಕಾಲೀನನಾಗಿ ಕಲಿಂಗರಾಜ್ಯದಲ್ಲಿ ಖಾರವೇಲನು ರಾಜ್ಯವಾಳುತ್ತಿದ್ದಿರಬೇಕೆಂದು ಹಾಥಿಗುಂಫ-ಶಾಸನದ ಹೇಳಿಕೆಯಿಂದ ಸೂಚಿತವಾಗುವುದೆಂದು ಅನೇಕ ಪುರಾತತ್ತ್ವಸಂಶೋಧಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನದ ಆರನೇ ಪಂಕ್ತಿಯ 'ನಂದರಾಜತಿವಸಸತ ಓಘಾಡಿತಂ ತನಸುಲಿಯ ವಾಟಾ-ಪನಾಡಿಂ ನಗರಂ ಪವೇಸ(ಯ)ತಿ' ಎಂಬ ಉಕ್ತಿಯನ್ನು 'ನಂದರಾಜವರ್ಷ-೧೦೩ ರಲ್ಲಿ ನಿರ್ಮಿತವಾದ ಕಾಲುವೆಯನ್ನು ಖಾರವೇಲನು ತನ್ನ ರಾಜಧಾನಿಯ ಸಮೀಪವರ್ತಿಯಾದದ್ದನ್ನಾಗಿ ಪರಿವರ್ಧಿಸಿದನು' ಎಂದು ತಜ್ಞರು ಅರ್ಥವಿಸಿದ್ದಾರೆ.[2] ಇದರಂತೆ ಖಾರವೇಲನಿಂದ ಕಾಲುವೆಯು ಪರಿವರ್ಧಿತವಾದ ಸಮಯದಲ್ಲಿ ಆ ಕಾಲುವೆಯು ನಿರ್ಮಿತವಾದ ಕಾಲದ ಬಗ್ಗೆ ಸ್ಪಷ್ಟವಾದ ಐತಿಹ್ಯಾಧಾರವಿದ್ದಿರಬೇಕೆಂದು ಸೂಚಿತವಾಗುವುದಾದ್ದರಿಂದ ನಂದರಾಜನ ಹೆಸರಿನಲ್ಲಿ ಪ್ರಚಲಿತವಿದ್ದ ಶಕೆಯಾಧಾರದಿಂದ ಆ ಕಾಲವು ನಿರ್ದೇಶಿತವಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ನಂದರಾಜನು ಅವಂತೀರಾಜ್ಯಾಧಿಪನಾಗಿ ಅಭಿಷಿಕ್ತನಾದ (ಕ್ರಿ. ಪೂ ೪೭೫ ನೇ) ವರ್ಷದ ಆಧಾರದಿಂದ ಇವನ ಹೆಸರಿನಲ್ಲಿ (ವಿಜಯಾಭಿನಂದನ) ಶಕೆಯು ಪ್ರವರ್ತಿತವಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಖಾರವೇಲನಿಂದ ಪರಿವರ್ಧಿತವಾದ ಕಾಲುವೆಯು ಕ್ರಿ. ಪೂ. (೪೭೫ — ೧೦೩=) ೩೭೨ ರಲ್ಲಿ[3] ನಿರ್ಮಿತವಾಗಿರುವುದೆಂದು

---

1 ಪ್ರಜ್ಞಾದುರ್ಬಲಂ ಚ ಬಲದರ್ಶನವ್ಯಪದೇಶದರ್ಶಿತಾಶೇಷಸೈನ್ಯಃ ಸೇನಾನೀರನಾರ್ಯೋ ಮೌರ್ಯಂ ಬೃಹದ್ರಥಂ ಪಿಪೇಷ ಪುಷ್ಪತ್ರಮಿತ್ರಃ। ಹರ್ಷಚರಿತ, ಷಷ್ಠ ಉಚ್ಛ್ವಾಸ.

2 ಜೈನ ಕಲ್ಚರಲ್ ರಿಸರ್ಚ್ ಸೊಸೈಟಿ—ಜೈನಿಜಂ ಇನ್ ಕಲಿಂಗ ದೇಶ—ಡಾಕ್ಟರ್ ಬೂಲ್‌ಚಂದ್ ; ಬುಲೆಟಿನ್ ನಂ. ೭ ; ಪು. ಸಂ. ೮.

3 ನಂದಚಂದ್ರಗುಪ್ತನು ಕ್ರಿ. ಪೂ. ೩೭೨ ರಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಹಿಂದೆ ಪ್ರತಿಪಾದಿಸಲಾಗಿದೆ. ಇದರಿಂದ ಇವನ ಈ ರಾಜ್ಯಾಭಿಷೇಕದ ವರ್ಷದಲ್ಲಿ, ಹಾಥಿಗುಂಫ ಶಾಸನದಲ್ಲಿ ಸೂಚಿತವಾಗಿರುವ ಕಾಲುವೆಯು ನಿರ್ಮಿತವಾಗಿರುವುದೆಂದು ಫಲಿತವಾಗುವುದು.

ಪರಿಗಣಿತವಾಗುವುದು. ಆದ್ದರಿಂದ ನಂದರಾಜನ ಹೆಸರಿನಲ್ಲಿ ಶಕೆಯೊಂದು ಪ್ರವರ್ತಿತವಾಗಿರುವುದೆಂಬ ಹಿಂದಿನ ಪ್ರತಿಪಾದನೆಯು ಖಾರವೇಲನ ಶಾಸನದ ಮೇಲ್ಕಂಡ ಹೇಳಿಕೆಯಿಂದ ಪುನಃ ಸಮರ್ಥಿತವಾಗುವುದು.

ಶುಂಗಮನೆತನದ ರಾಜ್ಯಭಾರದ ಒಟ್ಟು ಕಾಲಾವಧಿಯನ್ನು ನಿರ್ದೇಶಿಸುವಲ್ಲಿ ಪುರಾಣಗಳ ಹೇಳಿಕೆಗಳು ಅಸ್ಪಷ್ಟವಿವೆ: ಈ ರಾಜಸಂತತಿಯ ಒಟ್ಟು ರಾಜ್ಯಭಾರ ಕಾಲವನ್ನು ಮತ್ಸ್ಯಪುರಾಣದಲ್ಲಿ 'ಶತಂ ಪೂರ್ಣಂ ಶತೇದ್ವೇಚ' ಎಂಬುದಾಗಿಯೂ ವಾಯುಪುರಾಣದಲ್ಲಿ 'ಶತಂಪೂರ್ಣಂ ದಶದ್ವೇ ಚ' ಎಂಬುದಾಗಿಯೂ ನಿರ್ದೇಶಿಸಲಾಗಿದೆ. ಶುಂಗರ ಅನಂತರ ರಾಜ್ಯವಾಳಿದ ಕಣ್ವರ ಒಟ್ಟು ರಾಜ್ಯಭಾರಾವಧಿಯನ್ನು ಹೇಳುವಲ್ಲಿಯೂ ಪುರಾಣಗಳಲ್ಲಿ ಒಮ್ಮತವಿರುವುದಿಲ್ಲ. ಮತ್ಸ್ಯಪುರಾಣದಲ್ಲಿ ಇವರ ರಾಜ್ಯಭಾರಾವಧಿಯನ್ನು ೪೫ ವರ್ಷಗಳೆಂದು ಹೇಳಿದೆಯಾದರೆ ವಾಯುಪುರಾಣದಲ್ಲಿ ೫೫ ವರ್ಷಗಳೆಂದು ಹೇಳಿದೆ. ಇಂತೆಯೇ ಕಣ್ವರ ಅನಂತರ ರಾಜ್ಯವಾಳಿದರೆಂದು ಹೇಳಲಾಗಿರುವ ಆಂಧ್ರಭೃತ್ಯರ ರಾಜ್ಯಭಾರಕಾಲ ನಿರ್ದೇಶಕವಾದ ಪುರಾಣಗಳ ಹೇಳಿಕೆಗಳು ವಿವಾದಾಸ್ಪದವಾಗಿವೆ. ಪುರಾಣಗಳ ಈ ಹೇಳಿಕೆಗಳು (ವೆಂಗಿಮಂಡಲದ?) 'ಶ್ರೀಪರ್ವತೀಯ' ಎಂಬ ಆಂಧ್ರಮನೆತನದ ರಾಜಸಂತತಿ, ಗೌತಮೀಪುತ್ರಶಾತಕರ್ಣಿಯ ವಂಶಜರಾದ ಆಂಧ್ರಮನೆತನದ ರಾಜಸಂತತಿ ಹಾಗೂ ಪಾಟಲೀಪುತ್ರನಗರದಲ್ಲಿ ಕಣ್ವರ ತರುವಾಯ ರಾಜ್ಯವಾಳಿದ ಆಂಧ್ರಭೃತ್ಯ ರಾಜಸಂತತಿಗಳ ರಾಜ್ಯಭಾರಕಾಲಗಳ ನಿರ್ದೇಶಕವಾಗಿವೆಯೆಂದು ಹೇಳಲವಕಾಶವಿದೆ. ಈ ವಿಷಯವಾಗಿ ಮತ್ಸ್ಯಪುರಾಣದ ಈ ಮುಂದಿನ ಹೇಳಿಕೆಗಳನ್ನು ಗಮನಿಸಬಹುದು.

ತೇಷಾಂ ವರ್ಷಶತಾನಿ ಸ್ಯುಶ್ಚತ್ವಾರಿಷಷ್ಠಿರೇವ ಚ[1] । ಶ್ಲೋ. ಸಂ. ೧೭
ಶತಾನಿ ತ್ರೀಣಿ ಭೋಕ್ಷ್ಯಂತೇ ವರ್ಷಾಣ್ಯೇಕಾದಶೈವ ತು ।
ಆಂಧ್ರಾಶ್ರೀಪರ್ವತೀಯಾಶ್ಚ ತೇ ದ್ವಿಪಂಚಾಶತಂ ಸಮಾಃ ॥೨೩॥ [ಅಧ್ಯಾಯ ೨೭೩]

ಅಜಾತಶತ್ರುವಿನ ರಾಜ್ಯಾಭಿಷೇಕಸಮಯದಿಂದ ೮೩೬ ವರ್ಷಗಳ ತರುವಾಯದಲ್ಲಿ (=೮೩೬ — ೫೩೨=ಕ್ರಿ. ಶ. ೩೦೪ ರಲ್ಲಿ) ಆಂಧ್ರಭೃತ್ಯರ ರಾಜ್ಯಭಾರವು ಅಂತ್ಯಗೊಂಡಿರುವುದೆಂದು ಹಿಂದೆ ವಿವರಿಸಲಾಗಿದೆ. ಇದರಂತೆ ಶುಂಗ, ಕಣ್ವ ಮತ್ತು ಆಂಧ್ರಭೃತ್ಯರ ಅನುಕ್ರಮ ರಾಜ್ಯಭಾರಕಾಲಗಳನ್ನು ಮುಂದಿನಂತೆ ರೂಪಿಸಬಹುದಾಗಿದೆ.

ಶುಂಗರು—೧೨೨ ವರ್ಷ (ಅಥವಾ ೧೩೨ ವರ್ಷ) }
ಕಣ್ವರು — ೫೫ ವರ್ಷ (ಅಥವಾ ೪೫ ವರ್ಷ) } =ಒಟ್ಟು ೧೭೭ ವರ್ಷಗಳು.

ಆಂಧ್ರಭೃತ್ಯರು—೩೧೧ ವರ್ಷ[2]

---

1 ವಿಷ್ಣುಪುರಾಣದಲ್ಲಿ 'ಈ ಮೂವತ್ತುರಾಜರು ೪೫೬ ವರ್ಷಕಾಲ ರಾಜ್ಯವಾಳುವರು' ಎಂದು ಹೇಳಿದೆ.

2 ಮತ್ಸ್ಯಪುರಾಣದ ಮೇಲ್ಕಂಡ ೨೩ ನೇ ಪದ್ಯದ ಪೂರ್ವಾರ್ಧದ ಹೇಳಿಕೆ.

ಈ ಮೇಲ್ಕಂಡ ಫಲಿತಾಂಶದನುಗುಣವಾಗಿ ಆಂಧ್ರಭೃತ್ಯರ ರಾಜ್ಯಭಾರವು ಕ್ರಿ. ಶ. ೩೦೪ ರಲ್ಲಿ ಅಂತ್ಯಗೊಂಡು ಮುಂದೆ ಗುಪ್ತಮನೆತನದ ರಾಜ್ಯಭಾರವು ಆರಂಭವಾಗಿರುವುದೆಂದು ಮತ್ತು ಕ್ರಿ. ಶ. ೩೪೬ ರಲ್ಲಿ ದ್ವಿತೀಯ ಚಂದ್ರಗುಪ್ತನು ರಾಜ್ಯಭಾರಾಧಿಷ್ಠಿತನಾಗಿರಬೇಕೆಂದು ಪರಿಗಣಿತವಾಗುವುದು.[2]

2 ದ್ವಿತೀಯ ಚಂದ್ರಗುಪ್ತನು ಕ್ರಿ. ಶ. ೩೭೫ ರಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಚರಿತ್ರಕಾರರು ನಿರ್ಣಯಿಸಿದ್ದಾರೆ.



## ಶ್ರೀ ವೀರನಿರ್ವಾಣಇತಿವೃತ್ತಾನುಬಂಧಿ ಗಂಧರ್ವಸೇನಾದಿ ರಾಜಸಂತತಿ

ಶ್ರೀ ವೀರತೀರ್ಥಂಕರನ ನಿರ್ವಾಣಸಮಯನಿರೂಪಕ ಇತಿವೃತ್ತದಲ್ಲಿ ಶುಂಗಮನೆತನದ ಪುಷ್ಯಮಿತ್ರಾದಿ ಮೂವರು ರಾಜರ ೯೫ (ಅಥವಾ ೯೦) ವರ್ಷಗಳ ಆಳ್ವಿಕೆಯ ತರುವಾಯ ಗಂಧರ್ವಸೇನ ಅಥವಾ ನಭಃಸೇನನೇ ಮೊದಲಾದ ರಾಜಸಂತತಿಯ ಅನುಕ್ರಮವು ಉಕ್ತವಾಗಿದೆ. ವೈ. ಮ. ಸಂ. ಪುರಾಣಗಳ ಐತಿಹ್ಯದನುಗುಣವಾಗಿ ಶುಂಗಮನೆತನದ ೧೦ ಜನ ಅರಸರು ೧೧೨ ಅಥವಾ ೧೩೨ ವರ್ಷಗಳ ಕಾಲ ರಾಜ್ಯಭಾರಮಾಡಿರುವರೆಂಬುದು ಹಿಂದಿನ ಪ್ರತಿಪಾದನೆಯಿಂದ ವ್ಯಕ್ತಪಟ್ಟಿದೆ. ಇದರಿಂದ ಶ್ರೀ ನಿರ್ವಾಣಸಮಯನಿರೂಪಕ ಇತಿವೃತ್ತದಲ್ಲಿ, ಶುಂಗಮನೆತನದ ಮೂವರು ರಾಜರ ೯೫ ವರ್ಷಗಳ ರಾಜ್ಯಭಾರಾನಂತರದಲ್ಲಿ ಹೆಸರಿಸಲಾಗಿರುವ ಗಂಧರ್ವಸೇನಾದಿ ರಾಜರು ಮಗಧರಾಜ್ಯದ ಪರಮಾಧಿಕಾರದಿಂದ ಸ್ವಾತಂತ್ರ್ಯ ಪಡೆದ ಅವಂತೀರಾಜ್ಯದ ಅರಸರಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಶ್ರೀ ವೀರನಿರ್ವಾಣಸಮಯದಿಂದ ಮೊದಲ ೬೦ ವರ್ಷಗಳ ಪರ್ಯಂತ ಸ್ವತಂತ್ರವಾಗಿದ್ದ ಅವಂತೀರಾಜ್ಯವು ನಂದ ಮತ್ತು ಮೌರ್ಯಮನೆತನಗಳ ರಾಜ್ಯಭಾರಕಾಲದಲ್ಲಿ ಮಗಧರಾಜ್ಯದ ಪರಮಾಧಿಕಾರಕ್ಕೊಳಪಟ್ಟಿದ್ದಿತೆಂಬುದು ವಿದಿತವಿದೆ. ಮೌರ್ಯಮನೆತನದ ರಾಜ್ಯಭಾರಾನಂತರ ಶುಂಗಮನೆತನದ ಮೂವರು ಅರಸರ ರಾಜ್ಯಭಾರಸಮಯದ ೯೫ ವರ್ಷಗಳ ಪರ್ಯಂತ ಅವಂತೀರಾಜ್ಯವು ಮಗಧರಾಜ್ಯದ ಪರಮಾಧಿಕಾರಕ್ಕೊಳಪಟ್ಟಿದ್ದಿತಾಗಿ, ಶ್ರೀ ವೀರನಿರ್ವಾಣಸಮಯ ನಿರೂಪಕ ಇತಿ

ವೃತ್ತದಲ್ಲಿ, ಶುಂಗಮನೆತನದ ಈ ರಾಜ್ಯಭಾರಾವಧಿಯನ್ನು ಮಾತ್ರ ಹೇಳಲಾಗಿದೆ. ಈ ಸಮಯದಿಂದ ರಾಜ್ಯವಾಳಿದರೆಂದು, ಮುಂದೆ ಈ ಇತಿವೃತ್ತದಲ್ಲಿ ಹೆಸರಿಸಲಾಗಿರುವ ಗಂಧರ್ವಸೇನಾದಿ ರಾಜರು ಸ್ವತಂತ್ರ ಅವಂತೀರಾಜ್ಯದ ಅರಸರಾಗಿದ್ದಿರಬೇಕೆಂದು ಅವಗತವಾಗುವುದಲ್ಲದೆ, ಈ ಇತಿವೃತ್ತದಲ್ಲಿ ಹೆಸರಿಸಲಾಗಿರುವ ನಂದಾದಿ ರಾಜರ ಐತಿಹಾಸಿಕತೆಯು ತಥ್ಯನಿಷ್ಠವಾಗಿರುವಂತೆ, ಗಂಧರ್ವಸೇನಾದಿರಾಜರ ಐತಿಹಾಸಿಕತೆಯೂ ತಥ್ಯನಿಷ್ಠನಾಗಿರುವುದೆಂದು ನಿರ್ದಿಷ್ಟವಾಗುವುದು. ಆದರೆ, ನಂದ ಮತ್ತು ಮೌರ್ಯಮನೆತನಗಳ ರಾಜ್ಯಭಾರಕಾಲಗಳನ್ನು ನಿರ್ದೇಶಿಸುವಲ್ಲಿ ಈ ಇತಿವೃತ್ತದ ಬೇರೆ ಬೇರೆ ಮೂಲಗಳಲ್ಲಿ ಸಹಮತವಿಲ್ಲವಾಗಿದ್ದು ಅನೇಕ ಲೋಪದೋಷಗಳೇರ್ಪಟ್ಟಿರುವಂತೆ, ಗಂಧರ್ವಸೇನಾದಿ ರಾಜಸಂತತಿಯ ಹೆಸರುಗಳು ಮತ್ತು ರಾಜ್ಯಭಾರಕಾಲಗಳನ್ನು ಹೇಳುವಲ್ಲಿಯೂ ಅನೇಕ ಲೋಪದೋಷಗಳೇರ್ಪಟ್ಟವೆ.

ಶುಂಗಮನೆತನದ ರಾಜ್ಯಭಾರದ ೯೫ ವರ್ಷಗಳ (=ವೀ. ನಿ. ಪ. ೪೩೮ ನೇ ವರ್ಷದ) ತರುವಾಯಕಾಲೀನವಾದ ರಾಜಸಂತತಿಯಲ್ಲಿ ಮೊದಲನೆಯ ಅರಸನನ್ನು ಜೈನಆಮ್ನಾಯದ ಕೃತಿಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ನಿರ್ದೇಶಿಸಲಾಗಿದೆ. ಆದರೆ, ತಿಲೋಯಪಣ್ಣತ್ತಿಯಲ್ಲಿ ಶುಂಗರಾಜತ್ರಯದ ರಾಜ್ಯಭಾರಾನಂತರ ಗಂಧರ್ವರಾಜಮನೆತನದ ರಾಜ್ಯಭಾರವನ್ನು ಹೇಳಿರುವುದರಿಂದಲೂ[1] ಭವಿಷ್ಯಪುರಾಣದಲ್ಲಿ ಹೇಳಲಾಗಿರುವ ಗಂಧರ್ವಸೇನ ಮತ್ತು ವೀರಮತಿಯರ ಸುತನಾದ ವಿಕ್ರಮನ ಐತಿಹ್ಯವು ದಿಗಂಬರ ಜೈನಸಂಪ್ರದಾಯದ ನಂದಿಆಮ್ನಾಯದ ಪಟ್ಟಾವಲಿಯಲ್ಲಿ ಉಲ್ಲಿಖಿತವಾಗಿರುವ ವಿಕ್ರಮನ ಐತಿಹ್ಯದೊಡನೆ ಸಾದೃಶ್ಯತೆಯುಳ್ಳದ್ದಾಗಿರುವುದರಿಂದಲೂ ಶುಂಗರಾಜತ್ರಯದ ರಾಜ್ಯಭಾರಾನಂತರ ವೀ. ನಿ. ಪ. ೪೩೮ ನೇ ವರ್ಷದಲ್ಲಿ ಗಂಧರ್ವಸೇನನು ಅವಂತಿಯ ಸ್ವತಂತ್ರರಾಜನಾಗಿ ರಾಜ್ಯವಾಳಲು ಆರಂಭಿಸಿರುವನೆಂದು ಗ್ರಹಿಸಲವಕಾಶವಾಗುವುದು. ಶುಂಗರಾಜತ್ರಯದ ಅನಂತರಕಾಲೀನರಾದ ಮೂವರು ರಾಜರ ರಾಜ್ಯಭಾರಕಾಲಪರಿಮಾಣಗಳನ್ನು ನಿರ್ದೇಶಿಸುವಲ್ಲಿ ತೀರ್ಥೋದ್ಧಾರಪ್ರಕರಣದ ಐತಿಹ್ಯವು ತಥ್ಯನಿಷ್ಠವಾಗಿರುವುದೆಂದು ಹೇಳಲವಕಾಶವಿದೆ. ಇದರಂತೆ ಈ ಮೂವರು ರಾಜರ ರಾಜ್ಯಭಾರಾನುಕ್ರಮವು ಮುಂದಿನಂತಾಗುವುದು.

| | | | |
|---|---|---|---|
| ೧) | ಗಂಧರ್ವಸೇನ–ರಾಜ್ಯಭಾರವರ್ಷಗಳು | ೪೦ ; | ವೀ. ನಿ. ಪ. ೪೩೮ ರಿಂದ ೪೭೮ ನೇ ವರ್ಷ ಪರ್ಯಂತ. |
| ೨) | ಗರ್ದಭಿಲ್ಲ–ರಾಜ್ಯಭಾರವರ್ಷಗಳು | ೧೩ ; | ವೀ. ನಿ. ಪ. ೪೭೮ ರಿಂದ ೪೯೧ ನೇ ವರ್ಷ ಪರ್ಯಂತ. |
| ೩) | ಶಕ–ರಾಜ್ಯಭಾರವರ್ಷಗಳು | ೪ ; | ವೀ. ನಿ. ಪ. ೪೯೧ ರಿಂದ ೪೯೫ ನೇ ವರ್ಷ ಪರ್ಯಂತ |

---

1 ಗಂಧವ್ವಯಾ ಹಿ ಸಯಮೇಕ್ಕಂ। ಗಾಹೆ ೧೫೦೭.

ಶಕಪುರುಷನಾದ ವಿಕ್ರಮಾದಿತ್ಯನು ಶಕರಾಜನನ್ನು ಪರಾಜಯಗೊಳಿಸಿ ಉಜ್ಜಯಿನಿಯಲ್ಲಿ ರಾಜ್ಯವಾಳಿದನೆಂಬ ಐತಿಹ್ಯವು ಪ್ರಸಿದ್ಧವಿದೆ. ಈ ಮೇಲೆ ನಿರೂಪಿಸಲಾಗಿರುವಂತೆ ಶಕರಾಜನ ರಾಜ್ಯಭಾರವು ವೀ. ನಿ. ಪ. ೪೯೫ ನೇ ವರ್ಷದಲ್ಲಿ ಅಂತ್ಯಗೊಂಡಿದೆಯಾಗಿ ಇದೇ ವರ್ಷದಲ್ಲಿ ವಿಕ್ರಮಾದಿತ್ಯನ ರಾಜ್ಯಭಾರವು ಆರಂಭವಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಆದರೆ ಶ್ವೇತಾಂಬರ ಜೈನ ಆಮ್ನಾಯದ ಪಟ್ಟಾವಲಿಗಳೇ ಮೊದಲಾದ ಇತಿವೃತ್ತಕೃತಿಗಳಲ್ಲಿ ವಿಕ್ರಮಾದಿತ್ಯನ ರಾಜ್ಯಭಾರವು ವೀ. ನಿ. ಪ. ೪೭೦ ನೇ ವರ್ಷದಲ್ಲಿ ಆರಂಭವಾಗಿರುವುದೆಂಬ ಐತಿಹ್ಯವು ಉಳಿದುಬಂದಿರುವುದಲ್ಲದೆ[1] ಸದ್ಯ ಪ್ರಚಲಿತವಿರುವ ವಿಕ್ರಮಶಕೆಯು ಕ್ರಿ. ಪೂ. ೫೭-೮ ರಲ್ಲಿ ಆರಂಭವಾಗಿದೆಯೆಂಬ ನಿರ್ಣಯದನುಗುಣವಾಗಿಯೂ ಇವನ ರಾಜ್ಯಭಾರವು ವೀ. ನಿ. ಪ. (೫೨೭ – ೫೭=) ೪೭೦ ನೇ ವರ್ಷದಲ್ಲಿ ಆರಂಭವಾಗಿರುವುದೆಂದು ಸಮರ್ಥಿತವಾಗುವುದಾದ ಕಾರಣ, ವೀ. ನಿ. ಪ. ೪೯೫ ನೇ ವರ್ಷದಲ್ಲಿ ಇವನ ರಾಜ್ಯಭಾರವು ಆರಂಭವಾಗಿದೆಯೆಂಬ ಮೇಲ್ಕಂಡ ಫಲಿತಾಂಶವು ಬಾಧಿತವಾದಂತಾಗುವುದು. ಆದ್ದರಿಂದ ಈ ವಿಷಯದ ತಥ್ಯಾತಥ್ಯವನ್ನು ಪರಿಷ್ಕರಿಸಬೇಕಾದ ಅವಶ್ಯಕತೆಯಿದೆ.

ಶುಂಗಮನೆತನದ ರಾಜ್ಯಭಾರವು ವೀ. ನಿ. ಪ. ೩೪೩ ರಲ್ಲಿ (ಕ್ರಿ. ಪೂ. ೧೮೫ ರಲ್ಲಿ ಆರಂಭವಾಗಿದೆಯೆಂದು ಹಿಂದೆ ಪ್ರತಿಪಾದಿಸಲಾಗಿದೆ. ಆದರೆ ತೀರ್ಥೋದ್ಧಾರ ಪ್ರಕರಣದಲ್ಲಿ ಶುಂಗಮನೆತನದ ರಾಜ್ಯಭಾರವು ವೀ. ನಿ. ಪ. ೬೦ + ೧೫೫ + ೧೦೮ = ೩೨೩ (=ಕ್ರಿ. ಪೂ. ೨೦೫) ರಲ್ಲಿ ಆರಂಭವಾಗಿದೆಯೆಂದು ನಿರ್ದೇಶಿತವಾಗಿದೆಯಾಗಿ ಇಲ್ಲಿ ೨೦ ವರ್ಷಗಳ ಅವಧಿಯಿಂದ ನ್ಯೂನತೆಯೇರ್ಪಟ್ಟಿದೆ. ಇಂತೆಯೇ ತಿತ್ಥೋಗಾಲೀಪಇನ್ನಯದಲ್ಲಿ ಶುಂಗರಾಜತ್ರಯದ ರಾಜ್ಯಭಾರಾವಧಿಯನ್ನು ೯೫ ವರ್ಷಗಳೆಂದು ಹೇಳಲಾಗಿದೆಯಾದರೆ ತೀರ್ಥೋದ್ಧಾರ ಪ್ರಕರಣದಲ್ಲಿ ೯೦ ವರ್ಷಗಳೆಂದು ಹೇಳಲಾಗಿದ್ದು ಇಲ್ಲಿ ಪುನಃ ೫ ವರ್ಷಗಳ ಅವಧಿಯಿಂದ ನ್ಯೂನತೆಯೇರ್ಪಟ್ಟಿದೆ. ಈ ರೀತಿಯಾಗಿ ತೀರ್ಥೋದ್ಧಾರಪ್ರಕರಣದ ಐತಿಹ್ಯದಲ್ಲಿ (೨೦+೫=) ೨೫ ವರ್ಷಗಳ ಅವಧಿಯಿಂದ ನ್ಯೂನತೆಯೇರ್ಪಟ್ಟಿರುವುದರ ಪರಿಣಾಮವಾಗಿ ಶಕರಾಜನ ರಾಜ್ಯಭಾರವು ವೀ. ನಿ. ಪ. ೪೭೦ ನೇ ವರ್ಷದಲ್ಲಿ ಅಂತ್ಯಗೊಂಡಿದೆಯೆಂಬ ಪರಿಗಣನೆಯಾಗಿದೆ. ಈ ಪರಿಗಣನೆಯಂತೆ ಶ್ವೇತಾಂಬರ ಜೈನ ಆಮ್ನಾಯದ ಕೃತಿಗಳಲ್ಲಿ ಶಕವಿಜೇತನಾದ ವಿಕ್ರಮಾದಿತ್ಯನ ರಾಜ್ಯಭಾರವು ವೀ. ನಿ. ಪ. ೪೭೦ ನೇ ವರ್ಷದಲ್ಲಿ ಆರಂಭವಾಗಿದೆಯೆಂಬ ಐತಿಹ್ಯವು ರೂಪಿತವಾಗಿದೆಯೆಂದು ವ್ಯಕ್ತವಾಗುವುದು.

ದ್ವಿತೀಯ ಭದ್ರಬಾಹು ಆಚಾರ್ಯರು ಪಟ್ಟಸ್ಥರಾದ ಸಮಯವನ್ನು ನಿರ್ದೇಶಿಸುವ ಪ್ರಸಂಗವಶವಾಗಿ ದಿಗಂಬರ ಜೈನ ಸಂಪ್ರದಾಯದ ನಂದಿ ಆಮ್ನಾಯಪಟ್ಟಾವಲಿ

---

1 ಸುನ್ನಮುಣಿವೇಯಜುತ್ತಾ ಜಿಣಕಾಲಾ ವಿಕ್ಕಮೋ ವರಿಸಸಟ್ಠೀ। –ತಪಾಗಚ್ಛ ಪಟ್ಟಾವಲಿ–ಪೂರ್ವಸೂಚಿತ.

ಯಲ್ಲಿ ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಪ್ರಮುಖ ಐತಿಹ್ಯಾಂಶಗಳನ್ನೊಳಗೊಂಡ ಈ ಮುಂದಿನ ಗಾಹೆಗಳು ಉಲ್ಲೇಖಗೊಂಡಿವೆ.[1]

೧) ಸತ್ತರಿಚದುಸದಜುತ್ತೋ ತಿಣಕಾಲಾ ವಿಕ್ಕಮೋ ಹವಇ ಜಮ್ಮೋ ||
ಅಠವರಸಬಾಲಲೀಲಾ ಸೋಡಸವಾಸೇ ಹಿ ಭಮ್ಮಿಏ ದೇಸೇ || ೧೮ ||

೨) ರಸಪಣವಾಸೇ ರಜ್ಜಂ ಕುಣಂತಿ ಮಿಚ್ಛೋಪದೇಸಸಂಜುತ್ತೋ |
ಚಾಲೀಸವರಸಜಿಣವರಧಮ್ಮಂ ಪಾಲೀಯ ಸುರಪಯಂ ಲಹಿಯಂ || ೧೯ ||

ಈ ಗಾಹೆಗಳಲ್ಲಿ ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಐದು ಪ್ರಮುಖ ಐತಿಹ್ಯಾಂಶಗಳು ಉಕ್ತವಾಗಿವೆ :

೧) ವಿಕ್ರಮನು ವೀ. ನಿ. ಪ. ೪೭೦ ನೇ ವರ್ಷದಲ್ಲಿ ಜನಿಸಿದನು.

೨) ಇವನ ಬಾಲಲೀಲೆ ೮ ವರ್ಷಕಾಲ (ವೀ. ನಿ. ಪ. ೪೭೮ ನೇ ವರ್ಷ ಪರ್ಯಂತ)

೩) ಹದಿನಾರುವರ್ಷಕಾಲ ದೇಶಭ್ರಮಣೆಮಾಡಿದನು. (ವೀ. ನಿ. ಪ. ೪೯೪ನೇ ವರ್ಷ ಪರ್ಯಂತ)

೪) ಐವತ್ತಾರು ವರ್ಷಕಾಲ ರಾಜ್ಯಭಾರಮಾಡಿದನು. (ವೀ. ನಿ. ಪ. ೫೫೦-೧ ನೇ ವರ್ಷ ಪರ್ಯಂತ)

೫) ನಲವತ್ತು ವರ್ಷಕಾಲ ಮಿಥ್ಯೋಪದೇಶಯುಕ್ತನಾಗಿದ್ದು (ಅನಂತರ) ಜಿನಧರ್ಮವನ್ನು ಪಾಲಿಸಿ ಸ್ವರ್ಗಸ್ಥನಾದನು.

ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಮೇಲ್ಕಂಡ ಐತಿಹ್ಯಾಂಶಗಳು ಪೂರ್ವಪ್ರತಿಪಾದಿತವಾಗಿರುವ ಗಂಧರ್ವಸೇನಾದಿ ಶಕಪರ್ಯಂತ ರಾಜರ ರಾಜ್ಯಭಾರಾನುಕ್ರಮದ ಐತಿಹ್ಯದೊಡನೆ ಸುಸಂಗತರೀತಿಯಿಂದ ಸಮಾಯೋಜಿತವಾಗುವುದು: ವೀ. ನಿ. ಪ. ೪೭೦ ನೇ ವರ್ಷದಲ್ಲಿ ಜನಿಸಿದ ವಿಕ್ರಮನು ೮ ವರ್ಷಕಾಲ (ವೀ. ನಿ. ಪ. ೪೭೮ ನೇ ವರ್ಷ ಪರ್ಯಂತ) ಬಾಲಲೀಲೆಯಲ್ಲಿದ್ದುದಾಗಿಯೂ ತದನಂತರ ೧೬ ವರ್ಷ ಕಾಲ (ವೀ. ನಿ. ಪ. ೪೯೪ ನೇ ವರ್ಷ ಪರ್ಯಂತ) ದೇಶಾಟನೆಯಲ್ಲಿದ್ದುದಾಗಿಯೂ

---

1 ಸನ್ಮಾನ್ಯ ಪ್ರೊಫೆಸರ್ ಎ. ಎಫ್. ರುಡೋಲ್ಫ್ ಹೋಏರ್ನಲ್‌ರವರು ನಂದಿ ಆಮ್ನಾಯ-ಸರಸ್ವತೀಗಚ್ಛಪಟ್ಟಾವಲಿಯ ಐದು ಪ್ರತಿಗಳಲ್ಲಿ ನಿರೂಪಿಸಲಾಗಿರುವ ವಿಷಯ ಹಾಗೂ ಈ ಪಟ್ಟಾವಲಿಯಲ್ಲಿ ಉಲ್ಲೇಖಿಸಿರುವ ವಿಕ್ರಮಾದಿತ್ಯನ ಜೀವಿತೈತಿಹ್ಯಾಂಶಗಳಿಂದ ಕೂಡಿದ ಗಾಹೆಗಳನ್ನಧಿಕರಿಸಿ ವಿಸ್ತೃತ ವಿಮರ್ಶೆಯನ್ನು ಇಂಡಿಯನ್ ಆಂಟಿಕ್ವೆರಿ ಗ್ರಂ. ಭಾ. ೨೦-ಅಕ್ಟೋಬರ್ ೧೮೯೧ ರಲ್ಲಿ ಪ್ರಕಟಪಡಿಸಿದ್ದಾರೆ.

ಹೇಳಿದೆ.[1] ಪೂರ್ವಪ್ರತಿಪಾದನೆಯನುಗುಣವಾಗಿ ವೀ. ನಿ. ಪ. ೪೭೮ ರಲ್ಲಿ ಗಂಧರ್ವಸೇನನ ರಾಜ್ಯಭಾರವು ಅಂತ್ಯಗೊಂಡು ಗರ್ದಭಿಲ್ಲನ ರಾಜ್ಯಭಾರವು ಆರಂಭವಾಗಿದೆ. ಇದರಂತೆ ಗರ್ದಭಿಲ್ಲನಿಂದ ಗಂಧರ್ವಸೇನನು ಪರಾಜಿತನಾದ ಕಾರಣ ಈ ಸಮಯಕ್ಕೆ ಎಂಟುವರ್ಷವಯೋಮಾನದವನಾಗಿದ್ದ ಗಂಧರ್ವಸೇನಸುತನಾದ ವಿಕ್ರಮನಿಗೆ ದೇಶಾಟನೆಮಾಡಬೇಕಾದ ಪ್ರಸಂಗವು ಸಂಘಟಿತವಾಗಿರುವುದೆಂದು ಸೂಚಿತವಾಗುವುದು.

ಕಾಲಕಾಚಾರ್ಯರ ಭಗಿನಿಯನ್ನು ಬಲಾತ್ಕಾರದಿಂದ ಗರ್ದಭಿಲ್ಲನು ತನ್ನ ಅಂತಃಪುರದಲ್ಲಿರಿಸಿಕೊಂಡುದರ ಪ್ರತೀಕಾರವಾಗಿ ಕಾಲಕಾಚಾರ್ಯರು ಸೌರಾಷ್ಟ್ರದಿಂದ ಶಕರಾಜನನ್ನು ಕರೆತಂದು ಗರ್ದಭಿಲ್ಲನನ್ನು ರಾಜ್ಯಭಾರಚ್ಯುತನನ್ನಾಗಿ ಮಾಡಿದರೆಂದು ಹಿಂದೆ ಉಲ್ಲೇಖಿಸಲಾಗಿರುವ ಕಾಲಕಾಚಾರ್ಯಕಥಾಯತ್ತವಾದ ಐತಿಹ್ಯದಿಂದ ಸೂಚಿತವಾಗುವುದು. ಗರ್ದಭಿಲ್ಲನರಾಜ್ಯಭಾರವು ವೀ. ನಿ. ಪ. ೪೯೧ ನೇ ವರ್ಷದಲ್ಲಿ ಕೊನೆಗೊಂಡಿರುವುದೆಂದು ಹಿಂದೆ ಹೇಳಿದೆ. ಇವನ ತರುವಾಯ ಉಜ್ಜಯಿನಿಯ ಸಿಂಹಾಸನದಲ್ಲಿ ಅಧಿಷ್ಠಿತನಾದ ಶಕರಾಜನನ್ನು ವಿಕ್ರಮಾದಿತ್ಯನು ವೀ. ನಿ. ಪ. (೪೯೧+೪=) ೪೯೫ ನೇ ವರ್ಷದಲ್ಲಿ ಪರಾಜಯಗೊಳಿಸಿ ಪೈತೃಕವಾಗಿ ತನ್ನದಾದ ರಾಜ್ಯವನ್ನು ಪುನಃ ಸ್ವಾಯತ್ತೆಗೊಳಿಸಿಕೊಂಡಿದ್ದಾನೆಂದೂ ಮತ್ತು ಮುಂದೆ ೫೬ ವರ್ಷಕಾಲ ರಾಜ್ಯವಾಳಿ (ವೀ. ನಿ. ಪ. ೪೯೪+೫೬=೫೫೦-೧ ನೇ ವರ್ಷ=) ಕ್ರಿ. ಶ. ೨೨-೨೩ ರಲ್ಲಿ ಸ್ವರ್ಗಸ್ಥನಾಗಿರುವನೆಂದೂ ಪೂರ್ವೋಲ್ಲಿಖಿತ ಗಾಹೆಗಳ ಐತಿಹ್ಯಾದಾಧಾರದಿಂದ ಅಧಿಗತವಾಗುವುದು.

ಈಗ ಪ್ರಚಲಿತವಿರುವ ವಿಕ್ರಮಶಕೆಯು, ಮೇಲ್ಕಂಡ ಪ್ರತಿಪಾದನೆಯನುಗುಣವಾಗಿ, ವಿಕ್ರಮಾದಿತ್ಯನ ಜನ್ಮಸಮಯದಾಧಾರದಿಂದ ಪ್ರವರ್ತಿತವಾಗಿರುವುದೆಂದು ವ್ಯಕ್ತವಾಗುವುದು. ಶ್ರೀ ವೀರತೀರ್ಥಂಕರನು ಕಾರ್ತಿಕಮಾಸದಲ್ಲಿ ನಿರ್ವಾಣಹೊಂದಿ

---

[1] 'ಶಕರ ವಿನಾಶಾರ್ಥವಾಗಿ ಮತ್ತು ಆರ್ಯಧರ್ಮವೃದ್ಧಿಗಾಗಿ ಶಿವಾಜ್ಞೆಯಿಂದ ಜನಿಸಿದನು. (ಆ ಶಿಶುವಿಗೆ ಗಂಧರ್ವಸೇನನು) ವಿಕ್ರಮಾದಿತ್ಯ ಎಂದು ನಾಮಕರಣ ಮಾಡಿದನು. ಬಾಲಕನಾಗಿದ್ದರೂ ಮಹಾಪ್ರಾಜ್ಞನಾಗಿದ್ದ ಅವನು ಐದನೇ ವರ್ಷದ ವಯೋಮಾನದವನಾಗಿರುವಾಗಲೇ ತಪಸ್ಸಿಗಾಗಿ ಕಾಡಿಗೆ ಹೋದನು. ಅಲ್ಲಿ ೧೨ ವರ್ಷಕಾಲ ತಪಸ್ಸುಮಾಡಿದನು. ಅನಂತರ ಅವಂತಿಯ ಅಂಬಾವತಿಗೆ ಬಂದನು. ೧೦೦ ವರ್ಷಕಾಲ ರಾಜ್ಯವಾಳಿದನು.' ಇದು ಭವಿಷ್ಯಪುರಾಣದ ಹೇಳಿಕೆ. ಪ್ರತಿಸರ್ಗಪರ್ವ-ಖಂಡ ೧-ಅಧ್ಯಾಯ ೭-ಶ್ಲೋ. ಸಂ. ೧೫ ರಿಂದ ೧೮ ಮತ್ತು ಖಂಡ ೪, ಅಧ್ಯಾಯ ೧ ಶ್ಲೋ. ಸಂ. ೨೨. ವಿಕ್ರಮನು ೧೬ ವರ್ಷಕಾಲ ದೇಶಾಟನೆಮಾಡಿದನೆಂಬ ಮೇಲ್ಕಂಡ ಐತಿಹ್ಯದ ಬದಲಾಗಿ ಇಲ್ಲಿ ವಿಕ್ರಮಾದಿತ್ಯನು ೧೨ ವರ್ಷಕಾಲ ತಪಸ್ಸುಮಾಡಿದನೆಂಬ ಐತಿಹ್ಯಾಂತರವಿದೆ.

ರುವನೆಂಬ ಪರಂಪರಾಗತವಾದ ಐತಿಹ್ಯವಿದೆ.[1] ಇಂತೆಯೇ ಸದ್ಯ ಪ್ರಚಲಿತವಿರುವ ವಿಕ್ರಮಶಕೆಯು ಕಾರ್ತಿಕಮಾಸದಲ್ಲಿ ಆರಂಭವಾಗಿರುವುದಾಗಿ ಪಂಚಾಂಗಗಳ ಹೇಳಿಕೆಯಿಂದ ಸೂಚಿತವಾಗುವುದು. ಹೀಗೆ ವರ್ಷಾರಂಭದ ಅಪೇಕ್ಷೆಯಿಂದ ಶ್ರೀ ವೀರ ತೀರ್ಥಂಕರನ ನಿರ್ವಾಣಪ್ರಸಂಗ ಮತ್ತು ವಿಕ್ರಮಾದಿತ್ಯನ ಜನನ ಪ್ರಸಂಗಗಳು ಏಕಸಮಯಾಧಿಷ್ಠಿತವಾಗಿರುವುವಾದ್ದರಿಂದ ಜೈನ ಆಮ್ನಾಯದಲ್ಲಿ ಶ್ರೀ ವೀರತೀರ್ಥಂಕರನ ನಿರ್ವಾಣಸಮಯವನ್ನು ವಿಕ್ರಮನ ಜನ್ಮಸಮಯದಾಧಾರದಿಂದ ನಿರ್ದೇಶಿಸುವ ರೂಢಿಯುಂಟಾಗಿದೆಯೆಂದು ಹೇಳಲವಕಾಶವಾಗುವುದು.

ಜೈನ ಆಮ್ನಾಯದ ಕೃತಿಗಳಲ್ಲಿ ಮೇಲ್ಕಂಡಂತೆ ವಿಕ್ರಮನ ಜನ್ಮಸಮಯದಾಧಾರದಿಂದ ಕಾಲನಿರ್ದೇಶನಮಾಡುವ ರೂಢಿಯಿರುವುದು ಕಂಡುಬರುವುದಲ್ಲದೆ ಪೂರ್ವ ಪ್ರತಿಪಾದಿತವಾಗಿರುವ ಇವನ ರಾಜ್ಯಭಾರಾರಂಭಸಮಯವನ್ನೇ ಇವನ ಮರಣ ಸಮಯವನ್ನಾಗಿ ಪರಿಗಣಿಸಿ, ಇದರ ಆಧಾರದಿಂದಲೂ ಕಾಲನಿರ್ದೇಶನಮಾಡುವ ರೂಢಿಯು ಪ್ರಚಲಿತವಿದ್ದಿತೆಂದು ಹೇಳಲವಕಾಶವಿದೆ. ಈ ವಿಷಯವಾಗಿ ದೇವಸೇನಾಚಾರ್ಯರ ದರ್ಶನಸಾರದಲ್ಲಿ ಕಂಡುಬರುವ ಈ ಮುಂದಿನ ಹೇಳಿಕೆಗಳನ್ನು ಗಮನಿಸಬಹುದು.[2]

ಛತ್ತೀಸೇ ವರಿಸಸಏ ವಿಕ್ಕಮರಾಯಸ್ಸ ಮರಣಪತ್ತಸ್ಸ !
ಸೋರಟ್ಠೇ ವಲಹೀಏ ಉಪ್ಪಣ್ಣೋ ಸೇವಡೋ ಸಂಘೋ ‖ ೧೧ ‖

ಪಂಚಸಏ ಛವ್ವೀಸೇ ವಿಕ್ಕಮರಾಯಸ್ಸ ಮರಣಪತ್ತಸ್ಸ ।
ದಕ್ಖಿಣಮಹುರಾಜಾದೋ ದಾವಿಡಸಂಘೋ ಮಹಾಮೋಹೋ ‖ ೨೮ ‖

ಮೇಲ್ಕಂಡ ೧ ನೇ ಪದ್ಯದಲ್ಲಿ 'ವಿಕ್ರಮರಾಯನ ಮರಣಸಮಯದಿಂದ ೧೩೬ ನೇ ವರ್ಷದಲ್ಲಿ ಶ್ವೇತಾಂಬರ (ಯತಿ) ಸಂಘದ ಉದಯವಾಯಿತು' ಎಂದು ಹೇಳಿದೆ. ಇಂತೆಯೇ ನಂದಿ ಆಮ್ನಾಯಪಟ್ಟಾವಲಿಯ 'ಇ' ಪ್ರತಿಯಲ್ಲಿ[3] ಶ್ವೇತಾಂಬರ ಸಂಘವು ಮೂರನೇ ಭದ್ರಬಾಹು ಆಚಾರ್ಯರ ಕಾಲದಲ್ಲಿ ಉದಯವಾಯಿತೆಂದು ಸೂಚಿಸಲಾಗಿದ್ದು, ದರ್ಶನಸಾರದಲ್ಲಿ ಭದ್ರಹಾಹು ಆಚಾರ್ಯರ ಪ್ರಶಿಷ್ಯನಾದ ಜಿನಚಂದ್ರ ಮುನಿಯು ಶ್ವೇತಾಂಬರ ಆಮ್ನಾಯದ ಆಗಮವನ್ನು ಪ್ರರೂಪಿಸಿದನೆಂದು ವಿವರಿಸ

---

1 ಕತ್ತಿಯಮಾಸಸ್ಸ ಕಿಣ್ಣ ಚಉದಸಿಯೇ.... ಸಿದ್ಧಿಂ ಗದೋ ಭಗವದೋ ಮಹದಿ ಮಹಾವೀರೋ.

2 ಈ ಹೇಳಿಕೆಗಳನ್ನು ಷಟ್ಖಂಡಾಗಮ–ಜೀವಸ್ಥಾನ–ಸತ್ಪ್ರರೂಪಣಾ–ಖಂಡ ೧, ಭಾಗ ೧ ರ ಪ್ರಸ್ತಾವನೆ, ಪು. ಸಂ. ೩೪, ಅ. ಟಿ. ೨ ರಿಂದ ಉಲ್ಲೇಖಿಸಲಾಗಿದೆ.

3 ಇಂಡಿ ಆಂಟಿ ಗ್ರಂ. ಭಾ. ೨೧, ಫೆ. ಮಾರ್ಚಿ 1892, ಪು. ಸಂ. ೫೭.

ಲಾಗಿದೆ.[1] ಶ್ರೀ ವೀರತೀರ್ಥಂಕರನ ನಿರ್ವಾಣಾನಂತರದ ೬೮೩ ವರ್ಷಗಳ ಅವಧಿ ಯಲ್ಲಿ 'ಭದ್ರಬಾಹು' ಎಂಬ ಹೆಸರಿನ ಮೂವರು ಆಚಾರ್ಯರಿದ್ದರೆಂದು ಗುರುತಿಸಲವ ಕಾಶವಿದೆ.[2] ಈ ಮೂವರಲ್ಲಿ ಮೊದಲನೆಯವರು, ಹಿಂದೆ ವಿವರಿಸಲಾಗಿರುವಂತೆ ವೀ. ನಿ. ಪ. ೧೬೨ ನೇ ವರ್ಷದಲ್ಲಿ ಶ್ರವಣಬೆಳಗುಳದ ಚಂದ್ರಗಿರಿಯ ಮೇಲೆ ಸಮಾಧಿ ಮರಣಹೊಂದಿದ್ದಾರೆ. ನಂದಿ ಆಮ್ನಾಯಪಟ್ಟಾವಲಿಯ 'ಎ' ಪ್ರತಿಯಲ್ಲಿ, ಅಷ್ಟ ಅಂಗಶ್ರುತಧರರಾದ ಭದ್ರಬಾಹು ಆಚಾರ್ಯರಿದ್ದರೆಂದು ಹೇಳಿದೆ. 'ಭದ್ರಬಾಹು' ಎಂಬ ಹೆಸರಿನ ಎರಡನೇ ಆಚಾರ್ಯರಾದ ಇವರು ವಿಕ್ರಮನ ರಾಜ್ಯಭಾರಾರಂಭ ಸಮಯದಿಂವ ೧೮ ನೇ ವರ್ಷದಲ್ಲಿ ಆಚಾರ್ಯಪಟ್ಟಧರರಾಗಿ ೫೨ ವರ್ಷಕಾಲ ಆಚಾ ರ್ಯಪಟ್ಟಸ್ಥರಾಗಿದ್ದು ವೀ. ನಿ. ಪ. ೪೯೫+೧೮+೫೨=೫೬೫ ನೇ ವರ್ಷ=ವಿಕ್ರಮನ ರಾಜ್ಯಭಾರಾರಂಭ ಸಮಯದಿಂದ ೭೦ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿದ್ದಾರೆ. ಮೂರನೇ ಭದ್ರಬಾಹು ಆಚಾರ್ಯರು ಆಚಾರಾಂಗವೆಂಬ ಒಂದು ಅಂಗಶ್ರುತಧರರಾಗಿ ದ್ದರು. ಶ್ರವಣಬೆಳಗುಳದ ಚಂದ್ರಗಿರಿಯ ಮೇಲಿನ ಶಾಸನ-ಅಂಕ ೧ ರ ಐತಿಹ್ಯವು ಈ ಆಚಾರ್ಯರನ್ನಧಿಕರಿಸಿದ್ದಾಗಿದೆ. ಇವರು ವೀ. ನಿ. ಪ. ೬೩೩ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿದ್ದಾರೆ. ಈ ಮೂರನೇ ಭದ್ರಬಾಹು ಆಚಾರ್ಯರು ಪಟ್ಟಸ್ಥರಾಗಿದ್ದ ಸಮಯದಲ್ಲಿ ಶ್ವೇತಾಂಬರ ಯತಿಪಂಥದ ಉದಯವಾಗಿದೆಯೆಂದು ಪೂರ್ವೋಲ್ಲಿಖಿತ ವಾದ ಐತಿಹ್ಯಗಳಾಧಾರದಿಂದ ಸೂಚಿತವಾಗುವುದು. ವಿಕ್ರಮರಾಯನು ವೀ. ನಿ. ಪ. ೫೫೦-೧ ನೇ ವರ್ಷದಲ್ಲಿ (=ಕ್ರಿ. ಶ. ೨೨-೩ ರಲ್ಲಿ) ದಿವಂಗತನಾಗಿರುವನೆಂದು ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟದೆ. ಈ ಸಮಯದಿಂದ ೧೩೬ ವರ್ಷಗಳ ಸಮಯ ಅರ್ಥಾತ್ (ವೀ. ನಿ. ಪ. ೫೫೦+೧೩೬=) ೬೮೬ ನೇ ವರ್ಷದ ಸಮಯಕ್ಕೆ ಮೂರನೇ ಭದ್ರಬಾಹು ಆಚಾರ್ಯರು ಸ್ವರ್ಗಸ್ಥರಾಗಿ ೫೩ ವರ್ಷಗಳು ಕಳೆದಿದ್ದುವಾದ್ದರಿಂದ ಇವರ ಪಟ್ಟಕಾಲದಲ್ಲಿ ಶ್ವೇತಾಂಬರ ಯತಿಪಂಗಡದ ಉದಯವಾಯಿತೆಂಬ ಐತಿಹ್ಯವು ಅಸಂಗತವೆನಿಸಿದಂತಾಗುವುದು. ಇದರಿಂದ 'ಮೂರನೇ ಭದ್ರಬಾಹು ಆಚಾರ್ಯರ ಕಾಲದಲ್ಲಿ ಶ್ವೇತಾಂಬರ ಯತಿಪಂಥದ ಉದಯವಾಯಿತು' ಎಂಬ ಐತಿಹ್ಯಾಂಶ ಮತ್ತು 'ವಿಕ್ರಮರಾಯನ ಮರಣಸಮಯದಿಂದ ೧೩೬ ನೇ ವರ್ಷದಲ್ಲಿ ಶ್ವೇತಾಂಬರ ಯತಿ ಪಂಗಡದ ಉದಯವಾಯಿತು' ಎಂಬ ಐತಿಹ್ಯಾಂಶಗಳೆರಡರಲ್ಲಿ ಯಾವುದಾದರೊಂದು ದೋಷಭಾಗಿಯಾಗಿದೆಯೆಂದು ಸೂಚಿತವಾಗುವುದಲ್ಲದೆ ಈ ಎರಡರಲ್ಲಿ ಎರಡನೆಯ ಐತಿಹ್ಯಾಂಶವೇ ದೋಷಭಾಗಿಯಾಗಿದೆಯೆಂದು ಹೇಳಲವಕಾಶವಿದೆ: ಉತ್ತರಭಾರತ ಪ್ರದೇಶದಲ್ಲಿ ಹನ್ನೆರಡುವರ್ಷಕಾಲ ಕ್ಷಾಮ ಉಂಟಾಗುವುದನ್ನು ನಿಮಿತ್ತದಾಧಾರದಿಂದ

---

1 ಜೆ. ಆರ್. ಎ. ಎಸ್.-ಬಾಂಬೆ ಬ್ರ್ಯಾಂಚ್-ಗ್ರಂ. ಭಾ. ೧೭-1887-ಪು. ಸಂ. ೩೭೪.

2 ಈ ವಿಷಯವನ್ನು ಮುಂದೆ ವಿಶದೀಕರಿಸಲಾಗುವುದು.

ತಿಳಿದ ಭದ್ರಬಾಹು ಆಚಾರ್ಯರು ನಿರ್ಗ್ರಂಥ ಮುನಿಸಂಘದೊಡನೆ ದಕ್ಷಿಣಭಾರತದತ್ತ ಪಯಣಮಾಡಿದ ಸಂದರ್ಭದಲ್ಲಿ ಇವರೊಡನೆ ಪಯಣಮಾಡದೆ ಉತ್ತರಭಾರತದಲ್ಲಿಯೇ ನಿಂತ ಅರ್ಧಗಪ್ಪಡಿಗ ಮುನಿಗಣವು ಶ್ವೇತಾಂಬರ ಪಂಥವಾಗಿ ಉದಯಗೊಂಡು ಮೂಲಸಂಘದಿಂದ ಬೇರ್ಪಟ್ಟಿತೆಂಬ ಐತಿಹ್ಯವಿದೆ. ಶ್ರವಣಬೆಳಗೊಳದ ಚಂದ್ರಗಿರಿಯ ಶಾಸನ, ಅಂಕ ೧ ರಿಂದ ಸೂಚಿತವಾಗುವಂತೆ ಮೂರನೇ ಭದ್ರಬಾಹು ಆಚಾರ್ಯರು ಉತ್ತರಭಾರತಪ್ರದೇಶದಲ್ಲಿ ದ್ವಾದಶ ವರ್ಷಕಾಲ ಕ್ಷಾಮವು ಸಂಭವಿಸಲಿರುವುದನ್ನು ನಿಮಿತ್ತದಿಂದ ತಿಳಿದು ದಕ್ಷಿಣಾಪಥದತ್ತ ಪಯಣಮಾಡಿ ಬಂದಿದ್ದಾರೆ. ಈ ಭದ್ರಬಾಹು ಆಚಾರ್ಯರು ದಕ್ಷಿಣಾಪಥದತ್ತ ಪಯಣಮಾಡಿದ ಸಂದರ್ಭದಲ್ಲಿ ಇವರೊಡನೆ ಪಯಣಮಾಡದೆ ಉತ್ತರಾಪಥದಲ್ಲಿಯೇ ನಿಂತ ಮುನಿಗಣದಲ್ಲಿ ಕ್ಷಾಮಗಾಲದ ಪರಿಣಾಮವಾಗಿ ಆಚಾರ-ನಿಯಮಗಳ ಶೈಥಿಲ್ಯವೇರ್ಪಟ್ಟು ಕಾಲಕ್ರಮದಲ್ಲಿ ಶ್ವೇತವಸ್ತ್ರ ಪ್ರಯೋಗದ ರೂಢಿಯುಂಟಾಗಿದೆಯೆಂದು ಸೂಚಿತವಾಗುವುದು. ಇದರಂತೆ ಮೂರನೇ ಭದ್ರಬಾಹು ಆಚಾರ್ಯರು ದಕ್ಷಿಣಾಪಥದತ್ತ ಪಯಣಮಾಡಿದ ಪ್ರಸಂಗವಶವಾಗಿ ನಿರ್ಗ್ರಂಥಮುನಿಸಂಘದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಪಂಥಗಳು ಉದಯಗೊಂಡಿವೆಯೆಂದು ವ್ಯಕ್ತವಾಗುವುದು. ಹಿಂದೆ ಹೇಳಿರುವಂತೆ ಮೂರನೇ ಭದ್ರಬಾಹು ಆಚಾರ್ಯರು ವೀ. ನಿ. ಪ. ೬೩೩ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರುವರಾದ್ದರಿಂದ ಈ ಸಮಯದೊಳಗಾಗಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಪಂಥಭೇದದ ಅಂಕುರಾರ್ಪಣವಾಗಿರಬೇಕೆಂಬುದು ಸಹಜವೆನಿಸುವುದು. ಆದ್ದರಿಂದ 'ವಿಕ್ರಮರಾಯನ ಮರಣಾನಂತರ ೧೩೬ ನೇ ವರ್ಷದಲ್ಲಿ (ವೀ. ನಿ. ಪ. ೬೦೬ ನೇ ವರ್ಷದಲ್ಲಿ) ಶ್ವೇತಾಂಬರ ಪಂಥದ ಉದಯವಾಯಿತು' ಎಂಬ ಐತಿಹ್ಯವು ದೋಷಭಾಗಿಯಾಗಿರುವುದೆಂದು ವ್ಯಕ್ತವಾಗುವುದು. ಈ ಐತಿಹ್ಯಾಂಶವು ಈ ರೀತಿಯಾಗಿ ದೋಷಭಾಗಿಯಾಗಲು ವಿಕ್ರಮನ ಹೆಸರಿನೊಡನೆ ಸಂಕಲಿತವಾದ 'ಶಕ' ಪದವು ಕಾರಣವಾಗಿದೆಯೆಂದು ಹೇಳಲವಕಾಶವಿದೆ. ವಿಕ್ರಮನ ಹೆಸರಿನೊಡನೆ ಸಂಕಲಿತವಾಗಿರುವ 'ಶಕ' ಪದವು 'ಶಕಾರಿ' (ಶಕರನ್ನು ಪರಾಜಯಗೊಳಿಸಿದ ಶಕನೃಪ) ಎಂಬ ಅರ್ಥವುಳ್ಳದ್ದಾಗಿರುವುದೆಂದು ಬೃಹತ್ಸಂಹಿತೆಯ ಟೀಕಾಕಾರನು ವಿವರಿಸಿರುವುದಾಗಿ ಹಿಂದೆ ಹೇಳಿದೆ. ಆದರೆ 'ಶಕ' ಪದವು ಕುಲಸೂಚಕವಾಗಿರುವುದೆಂಬ ಅರ್ಥಗ್ರಹಣೆಯ ವಶವಾಗಿ ವೀ. ನಿ. ಪ. ೪೭೫ ರಲ್ಲಿ ವಿಕ್ರಮನಿಂದ ಹತನಾದ ಶಕರಾಜನಿಗೇ 'ವಿಕ್ರಮ' ಎಂಬ ಹೆಸರಿದ್ದಿತೆಂಬ ಪ್ರತ್ಯಯದ ವಶವಾಗಿ ಮೇಲ್ಕಂಡ ದೋಷಪೂರ್ಣವಾದ ಐತಿಹ್ಯವು ರೂಢಿಗತವಾಗಿದೆ ಎಂದು ಹೇಳಲವಕಾಶವಿದೆ. ವಿಕ್ರಮರಾಜನ ಜೀವಿತಸಂಬಂಧಿಯಾದ ಇತಿವೃತ್ತವು ಕಾಲಾನುಕ್ರಮದಲ್ಲಿ ಅಸ್ತವ್ಯಸ್ತಗೊಂಡಕಾರಣದಿಂದ ಶಕರಾಜನೇ ವಿಕ್ರಮರಾಯನಾಗಿರಬೇಕೆಂಬ ಪ್ರತ್ಯಯವೇರ್ಪಟ್ಟಿದೆಯೆಂದು ಕಂಡುಬರುತ್ತದೆ. ಶಕಕಾರನಾದ ವಿಕ್ರಮಾದಿತ್ಯನಿಂದ ವೀ. ನಿ. ಪ. ೪೭೫ ರಲ್ಲಿ ಮರಣವನ್ನೈದಿದ ಶಕನೇ ವಿಕ್ರಮರಾಯನಿರಬೇಕೆಂಬ ಅಭಿಮತವು ಕಾಲಾಂತರದಲ್ಲಿ ಏರ್ಪಟ್ಟದ್ದಲ್ಲಿ ಆಶ್ಚರ್ಯ

ವಿಲ್ಲ. ಇದರಂತೆ ಈ ಶಕರಾಜನ ಮರಣಾನಂತರ (=ವಿಕ್ರಮರಾಯನ ರಾಜ್ಯಭಾರವು ಆರಂಭವಾದ ಸಮಯ ವೀ. ನಿ. ಪ. ೪೯೫ ನೇ ವರ್ಷದಿಂದ ಮುಂದೆ) ೧೩೬ ನೇ ವರ್ಷದಲ್ಲಿ (=ವೀ. ನಿ. ಪ. ೪೯೫+೧೩೬=೬೩೧ ನೇ ವರ್ಷದಲ್ಲಿ) ಶ್ವೇತಾಂಬರ ಯತಿಪಂಥದ ಉದಯವಾಗಿರಬೇಕೆಂದು ಪರಿಗಣಿತವಾಗುವುದು. ಪ್ರಾಯಶಃ ಇದೇ ವರ್ಷದಲ್ಲಿ ಮೂರನೇ ಭದ್ರಬಾಹು ಆಚಾರ್ಯರು ಉಜ್ಜಯಿನಿಯಿಂದ ದಕ್ಷಿಣಾಪಥ ದತ್ತ ಪಯಣಮಾಡಿ, ವೀ. ನಿ. ಪ. ೬೩೩ ನೇ ವರ್ಷದಲ್ಲಿ ಶ್ರವಣಬೆಳಗುಳದ ಚಂದ್ರ ಗಿರಿಯಮೇಲೆ ಸಮಾಧಿಮರಣಹೊಂದಿದ್ದಾರೆ.

ನಿರ್ಗ್ರಂಥ ಯತಿಗಣವು ದಿಗಂಬರ ಮತ್ತು ಶ್ವೇತಾಂಬರ ಎಂಬ ಪಂಗಡಗಳಾಗಿ ಶಾಖೆಗೊಂಡ ಸಮಯದ ವಿಷಯವಾಗಿ ಮೇಲ್ಕಂಡ ನಿರ್ಣಯವನ್ನು ಪ್ರಶ್ನಾಯತ್ತ ವಾಗಿಸುವ ಮತ್ತೊಂದು ಐತಿಹ್ಯಾಂಶವನ್ನೂ ಪ್ರಕೃತಸಂದರ್ಭದಲ್ಲಿ ಪರಿಷ್ಕರಿಸಬೇಕಾದ ಆವಶ್ಯಕತೆಯಿದೆ. ವೀ. ನಿ. ಪ. ೬೦೯ ನೇ ವರ್ಷದಲ್ಲಿ ದಿಗಂಬರ ಪಂಗಡದ ಉದಯ ವಾಯಿತೆಂಬ ಐತಿಹ್ಯವು ಶ್ವೇತಾಂಬರ ಆಮ್ನಾಯದ ಇತಿವೃತ್ತಕೃತಿಗಳಲ್ಲಿ ಉಳಿದು ಬಂದಿದೆ. ಇದರಿಂದ ವೀ. ನಿ. ಪ. ೬೩೧ ನೇ ವರ್ಷದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಪಂಥಭೇದಗಳಾಗಿವೆಯೆಂಬ ಮೇಲ್ಕಂಡ ನಿರ್ಣಯವು ಬಾಧಿತವಾದಂತಾಗು ವುದು. ಶ್ವೇತಾಂಬರ ಆಮ್ನಾಯದ ಇತಿವೃತ್ತ ಕೃತಿಗಳಲ್ಲಿ, ಸ್ಥೂಲಭದ್ರಾಚಾರ್ಯರ ಜೀವಿತಾಂತ್ಯಸಮಯ ಮತ್ತು ಸುಹಸ್ತಿ ಆಚಾರ್ಯರ ಜೀವಿತಕಾಲವನ್ನು ನಿರ್ದೇಶಿಸು ವಲ್ಲಿ, ಅಕ್ರಮವೇರ್ಪಟ್ಟಿರುವ ಅಂಶವು ಹಿಂದೆ ಕೊಡಲಾಗಿರುವ ವಿವರಣೆಯಿಂದ ವ್ಯಕ್ತ ಪಟ್ಟಿದೆ. ಇಂತೆಯೇ ವಿಕ್ರಮಾದಿತ್ಯನ ರಾಜ್ಯಭಾರವು ವೀ. ನಿ. ಪ. ೪೭೦ ನೇ ವರ್ಷ ದಲ್ಲಿ ಆರಂಭವಾಗಿದೆಯೆಂಬ ಗಣನೆಯು ಪರಿಣಾಮವಾಗಿ ಶ್ವೇತಾಂಬರ ಪಂಥದ ಆಚಾ ರ್ಯಾನುಕ್ರಮದ ಕಾಲಮಾನಗಳನ್ನು ನಿರ್ದೇಶಿಸುವಲ್ಲಿ ೨೦ ರಿಂದ ೩೦ ವರ್ಷಗಳ ಅವಧಿಯಿಂದ ಹಿಂದೂಡಿಕೆ ಏರ್ಪಟ್ಟಿರುವುದನ್ನು ಗುರುತಿಸಲವಕಾಶವಿದೆ. ಗರ್ದಭಿಲ್ಲರಾಜನನ್ನು ಉಜ್ಜಯಿನಿಯಿಂದ ಉಚ್ಚಾಟನಗೊಳಿಸಿದ ಕಾಲಕಾಚಾರ್ಯರು ಆರ್ಯಖಪುಟಸೂರಿಗಳ ಸಮಕಾಲೀನರಾಗಿದ್ದರೆಂದೂ ಮತ್ತು ಜೀರ್ಣಪಟ್ಟಾವಲಿ ಯೊಂದರ ಹೇಳಿಕೆಯಂತೆ ಆರ್ಯಖಪುಟಸೂರಿಗಳು ವೀ. ನಿ. ಪ. ವರ್ಷ ೪೫೩ ರಲ್ಲಿ ಜೀವಿತರಿದ್ದರೆಂದು ನಿರ್ದೇಶಿತವಾಗಿದೆಯಾದರೆ, ಪ್ರಭಾವಕಚರಿತದ ಹೇಳಿಕೆಯಂತೆ ಇವರು ವೀ. ನಿ. ಪ. ವರ್ಷ ೪೮೪ ರಲ್ಲಿ ಜೀವಿತರಿದ್ದರೆಂದು ನಿರ್ದೇಶಿತವಾಗಿರುವು ದಾಗಿಯೂ (ಪೂರ್ವಸೂಚಿತ) ತಪಾಗಚ್ಛಪಟ್ಟಾವಲಿಯಲ್ಲಿ ಹೇಳಲಾಗಿದೆ. ಕಾಲಕಾ ಚಾರ್ಯರು ಪೂರ್ವಪ್ರತಿಪಾದನೆಯನುಗುಣವಾಗಿ ಗರ್ದಭಿಲ್ಲರಾಜನ ಸಮಕಾಲೀನ ರಾಗಿ ವೀ. ನಿ. ಪ. ವರ್ಷ ೪೭೮ ರಿಂದ ೪೯೧ ನೇ ವರ್ಷದ ಪರ್ಯಂತ ಜೀವಿತರಿದ್ದಿರ ಬೇಕೆಂಬುದು ನಿಶ್ಚಿತ. ಇದರಂತೆ ಕಾಲಕಾಚಾರ್ಯರ ಸಮಕಾಲೀನರಾಗಿದ್ದ ಆರ್ಯ ಖಪುಟರು ವೀ. ನಿ. ಪ. ವರ್ಷ ೪೮೪ ರಲ್ಲಿ ಜೀವಿತರಿದ್ದರೆಂಬ ಪ್ರಭಾವಕಚರಿತದ ಹೇಳಿಕೆಯು ತಥ್ಯನಿಷ್ಠವಾಗಿದೆಯೆಂದು ವ್ಯಕ್ತವಾಗುವುದು. ಇದರಿಂದ ಆರ್ಯಖ

ಪುಟಸೂರಿಗಳ ಜೀವಿತಕಾಲ ನಿರ್ದೇಶನಮಾಡುವಲ್ಲಿ ಪ್ರಭಾವಕಚರಿತದ ನಿರ್ದೇಶನಾಪೇಕ್ಷೆಯಿಂದ ಪಟ್ಟಾವಲಿಗಳ ಐತಿಹ್ಯದಲ್ಲಿ (೪೮೪ – ೪೫೩=) ೩೧ ವರ್ಷಗಳ ಅವಧಿಯಿಂದ ಹಿಂದೂಡಿಕೆಯಾಗಿದೆಯೆಂಬುದು ಸ್ಪಷ್ಟವಿರುವುದಲ್ಲದೆ ಈ ಹಿಂದೂಡಿಕೆಗೆ ಕಾರಣವೇನೆಂಬುದೂ ಸ್ಪಷ್ಟವಿದೆ. ವಿಕ್ರಮಾದಿತ್ಯನ ರಾಜ್ಯಭಾರಾರಂಭಸಮಯದ ಪರಿಗಣನೆಯಲ್ಲಿ (೪೯೫ – ೪೭೦=) ೨೫ ವರ್ಷ ಪ್ರಮಾಣದಿಂದ ಹಿಂದೂಡಿಕೆಯೇರ್ಪಟ್ಟ ಕಾರಣದಿಂದ, ಇವನ ಸಮಕಾಲೀನ ಮತ್ತು ಅನಂತರಕಾಲೀನರಾದ ಆಚಾರ್ಯರ ಹಾಗೂ ಐತಿಹ್ಯಪ್ರಸಂಗಗಳ ಕಾಲನಿರ್ದೇಶನಮಾಡುವಲ್ಲಿ ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳಲ್ಲಿ ಎರಡು ಅಥವಾ ಮೂರು ದಶಕ ವರ್ಷಗಳ ಪರಿಮಿತಿಯಿಂದ ಹಿಂದೂಡಿಕೆಯೇರ್ಪಟ್ಟದೆಯೆಂದು ವ್ಯಕ್ತವಾಗುವುದು.[1] ಇಂತೆಯೇ ವೀ. ನಿ. ಪ. ೬೦೯ ನೇ ವರ್ಷದಲ್ಲಿ ದಿಗಂಬರ ಪಂಥದ ಉದಯವಾಯಿತೆಂಬ ಶ್ವೇತಾಂಬರ ಆಮ್ನಾಯದ ಪರಿಗಣನೆಯಲ್ಲಿಯೂ ೨೨ ವರ್ಷಗಳ ಪರಿಮಿತಿಯಿಂದ ಹಿಂದೂಡಿಕೆಯೇರ್ಪಟ್ಟದೆಯೆಂದು ಗ್ರಹಿಸಲವಕಾಶವಾಗುವುದು. ಆದ್ದರಿಂದ 'ದಿಗಂಬರ' ಮತ್ತು 'ಶ್ವೇತಾಂಬರ' ಎಂಬ ಪಂಥಭೇದವು ವೀ. ನಿ. ಪ. ೬೩೧ ನೇ ವರ್ಷದಲ್ಲಿ ಅಂಕುರಗೊಂಡಿದೆಯೆಂಬ ಪೂರ್ವಪ್ರತಿಪಾದನೆಯು ನಿರಾಬಾಧಿತವಾಗಿ ಸ್ಥಿರೀಕೃತವಾಗುವುದಲ್ಲದೆ, ವಿಕ್ರಮಾದಿತ್ಯನ ರಾಜ್ಯಭಾರಾಂಭಸಮಯದಾಧಾರದಿಂದಲೂ ಕಾಲಮಾನವನ್ನು ನಿರ್ದೇಶಿಸುವ ರೂಢಿಯಿದ್ದಿತೆಂದು ವ್ಯಕ್ತವಾಗುವುದು.

ಪೂರ್ವೋಲ್ಲಿಖಿತವಾದ ೨ ನೇ ಗಾಹೆಯ ಹೇಳಿಕೆಯನುಗುಣವಾಗಿ ವಿಕ್ರಮರಾಯನ ಮರಣಸಮಯದಿಂದ ೫೨೬ ನೇ ವರ್ಷದಲ್ಲಿ ದ್ರಾವಿಡ ಸಂಘದ ಉದಯವಾಯಿತೆಂದು ಸೂಚಿತವಾಗುವುದು. ಈ ದ್ರಾವಿಡ ಸಂಘವು ಶ್ರೀ ಪೂಜ್ಯಪಾದ ಆಚಾರ್ಯರ ಶಿಷ್ಯರಾದ ವಜ್ರನಂದಿ ಆಚಾರ್ಯರಿಂದ ಸ್ಥಾಪಿತವಾಯಿತೆಂದು ದರ್ಶನಸಾರದ ಹೇಳಿಕೆಯಿದೆ [ಗಾಹೆ ೨೪]. ವಜ್ರನಂದಿಆಚಾರ್ಯರು ಗುಣನಂದಿ ಆಚಾರ್ಯರ ತರುವಾಯ ಆಚಾರ್ಯಪಟ್ಟಧರರಾಗಿದ್ದರೆಂದು ನಂದಿಆಮ್ನಾಯದ ಪಟ್ಟಾವಲಿಯ ಆಚಾರ್ಯಾನುಕ್ರಮದಿಂದ ಸೂಚಿತವಾಗುವುದು. ಇಂತೆಯೇ ವಜ್ರನಂದಿಆಚಾರ್ಯರಿಂದ ಪೂರ್ವಭಾವಿಯಾಗಿ ಆಚಾರ್ಯಪಟ್ಟಧರರಾಗಿದ್ದ ಗುಣನಂದಿಆಚಾರ್ಯರಿಗೆ 'ಪೂಜ್ಯಪಾದ' ಎಂಬ ಮತ್ತೊಂದು ಹೆಸರಿದ್ದಿತೆಂದು ಪಾಕ್ಷಿಕಪ್ರತಿಕ್ರಮಣಕ್ರಿಯಾಂತರ್ಗತವಾದ ಗುರುನಾಮಾವಲಿಯಲ್ಲಿ ಮುಂದಿನಂತೆ ಹೇಳಿದೆ:

---

1 ಆರ್ಯಖಪುಟಸೂರಿಗಳ ಜೀವಿತಕಾಲದ ನಿರ್ದೇಶನ ವಿಷಯವಾಗಿ ಮತಭೇದವೇರ್ಪಟ್ಟಿರುವುದು ಕಂಡುಬರುವಂತೆ, ಭದ್ರಗುಪ್ತಾಚಾರ್ಯ, ಆರ್ಯರಕ್ಷಿತಸೂರಿ ಮತ್ತು ಶ್ರೀ ಗುಪ್ತಾಚಾರ್ಯರ ಜೀವಿತಕಾಲ ನಿರ್ದೇಶನದ ವಿಷಯವಾಗಿಯೂ ಮತಭೇದವೇರ್ಪಟ್ಟಿರುವುದು ಕಂಡುಬರುತ್ತದೆ. ಪ್ರಕೃತಸಂದರ್ಭದ ದೃಷ್ಟಿಯಿಂದ ಈ ಮತಭೇದಗಳು ಗಮನಾರ್ಹವಾಗಿವೆ. ಪೂ. ಸೂ. ತಪಾಗಚ್ಛಪಟ್ಟಾವಲಿ.

ಉಮಾಸ್ವಾಮಿ ಆಚಾರ್ಯರ ಅನಂತರ :

ಲೋಹಾಚಾರ್ಯಸ್ತತೋ ಜಾತೋ ಜಾತರೂಪಧರೋಮರೈಃ |
ಸೇವನೀಯಃ ಸಮಸ್ತಾರ್ಥವಿಬೋಧನವಿಶಾರದಃ || ೬ ||
ತತಃ ಪಟ್ಟದ್ವಯೀಜಾತಾ ಪ್ರಾಚ್ಯುದೀಚ್ಯುಪಲಕ್ಷಣಾತ್ |
ತೇಷಾಂ ಯತೀಶ್ವರಾಣಾಂ ಸ್ಯುರ್ನಾಮಾನೀಮಾನಿ ತತ್ತ್ವತಃ || ೭ ||
ಯಶಃಕೀರ್ತಿರ್ಯಶೋನಂದೀ ದೇವನಂದೀ ಮಹಾಮತಿಃ |
ಪೂಜ್ಯಪಾದಾಪಾರಾಖ್ಯೇಯೋ ಗುಣನಂದೀ ಗುಣಾಕರಃ || ೮ ||
ವಜ್ರನಂದೀ ವಜ್ರವೃತ್ತಿಸ್ತಾರ್ಕಿಕಾಣಾಂ ಮಹೇಶ್ವರಃ |

[ಎಕ್ಸ್‌ಟ್ರಾ ನಂ. ಆಫ್ ದಿ ಜೆ. ಆರ್. ಎ. ಎಸ್. ಬಾಂಬೆ ಬ್ರಾಂಚ್-೧೮೮೩ ಪು. ಸಂ., ೧೬೩]

ಇದರಂತೆ 'ಪೂಜ್ಯಪಾದ' ಎಂಬ ಖ್ಯಾತಿನಾಮವನ್ನು ಹೊಂದಿದ್ದ ಗುಣನಂದಿ ಆಚಾರ್ಯರ ತರುವಾಯ ವಜ್ರನಂದಿ ಆಚಾರ್ಯರು ಆಚಾರ್ಯಪಟ್ಟಧರರಾಗಿರುವರೆಂದು ಅಧಿಗತವಾಗುವುದು.[1] ಮರ್ಕರಾತಾಮ್ರಪತ್ರಶಾಸನಲ್ಲಿ,[2] ಕೌಂಡಕುಂದಾನ್ವಯದ ಆರುಜನ ಆಚಾರ್ಯಾನುಕ್ರಮದಲ್ಲಿ ಅಂತಿಮವಾಗಿ ಹೆಸರಿಸಲಾಗಿರುವ ವಂದಣಂದಿ[3] ಎಂಬ ಆಚಾರ್ಯರು ಗುಣನಂದಿ ಎಂಬ ಆಚಾರ್ಯರ ಶಿಷ್ಯರಾಗಿ ನಿರ್ದೇಶಿತರಾಗಿದ್ದಾರೆ. ಈ ವಂದಣಂದಿ ಮತ್ತು ನಂದಿಆಮ್ನಾಯಪಟ್ಟಾವಲಿ ಹಾಗೂ ಪಾಕ್ಷಿಕ ಪ್ರತಿಕ್ರಮಣಕ್ರಿಯಾಂತರ್ಗತ ಗುರುನಾಮಾವಲಿಗಳಲ್ಲಿ ನಿರ್ದೇಶಿತವಾಗಿರುವ 'ವಜ್ರನಂದಿ' ಎಂಬ ಹೆಸರುಗಳು ಏಕವ್ಯಕ್ತ್ಯಧಿಕೃತವಾಗಿವೆಯೆಂಬುದರಲ್ಲಿ ಸಂಶಯವಿಲ್ಲ.

---

1 ವಜ್ರನಂದಿಆಚಾರ್ಯರ ಗುರುಗಳಿಗೆ 'ದೇವನಂದಿ' ಎಂಬ ಹೆಸರಿದ್ದು ಇವರಿಗೆ 'ಪೂಜ್ಯಪಾದ' ಎಂಬ ಖ್ಯಾತಿನಾಮವಿದ್ದಿತೆಂಬುದಾಗಿಯೂ ಮತ್ತು ಇವರು ದುರ್ವಿನೀತ ಕೊಂಗುಣಿರಾಜನ ವಿದ್ಯಾಗುರುಗಳಾಗಿದ್ದರೆಂಬುದಾಗಿಯೂ ಅಭಿಮತವಿದೆ. ಆದರೆ, ಸನ್ಮಾನ್ಯ ರುಡೋಲ್ಫ್ ಹೋಎರ್ನಲ್‌ರವರಿಂದ (ಇಂಡಿಯನ್ ಅಂಟಿ ಗ್ರ. ಭಾ. ೨೦ ಅಕ್ಟೋಬರ್ 1891 ಮತ್ತು ಗ್ರಂ. ಭಾ. ೨೧, ಮಾರ್ಚಿ 1892) ಸವಿಮರ್ಶವಾಗಿ ಪ್ರಕಟವಾಗಿರುವ ನಂದಿಆಮ್ನಾಯದಪಟ್ಟಾವಲಿಗಳ ಭಿನ್ನಪ್ರತಿಗಳು ಹಾಗೂ ಮರ್ಕರಾ ತಾಮ್ರಪತ್ರಶಾಸನಗಳ ತುಲಾನಾತ್ಮಕ ಪರಿಶೀಲನದಿಂದ ವಜ್ರನಂದಿಆಚಾರ್ಯರ ಮತ್ತು ದುರ್ವಿನೀತ ಕೊಂಗುಣಿರಾಜನ ವಿದ್ಯಾಗುರುಗಳಾಗಿದ್ದ ಆಚಾರ್ಯರಿಗೆ 'ದೇವನಂದಿ' ಎಂಬ ಹಸರಿದ್ದಿರಲಿಲ್ಲವೆಂದು ಹೇಳಲವಕಾಶವಿದೆ. ಗ್ರಂಥವಿಃತಿದೃಷ್ಟಿಯಿಂದ ಈ ವಿಷಯದ ವಿಮರ್ಶೆಯನ್ನು ಇಲ್ಲಿ ಕೊಡಲವಕಾಶವಿಲ್ಲವಾಗಿದೆ.

2 ಕುರ್ಗ್ ಇನ್ಸ್ಕ್ರಿಪ್ಷನ್ಸ್.

3 ಕುರ್ಗ್ ಇನ್ಸ್ಕ್ರಿಪ್ಷನ್‌ನ ಪರಿಷ್ಕೃತಗ್ರಂಥ ಪ್ರತಿಯಲ್ಲಿ ಈ ಹೆಸರಿನ ಬದಲಾಗಿ 'ಚಂದನಂದಿ' ಎಂಬ ಹೆಸರಿದೆ.

ಮರ್ಕರಾ ತಾಮ್ರಪತ್ರಶಾಸನವು (ಶಾ. ಶಕ 388=) ಕ್ರಿ. ಶ. ೪೬೭ ನೇ ಇಸವಿಯಲ್ಲಿ ರಚಿತವಾಗಿರುವುದಾದ್ದರಿಂದ ವಜ್ರನಂದಿ ಆಚಾರ್ಯರು ಈ ಸಮಯದಲ್ಲಿ ಆಚಾರ್ಯ ಪಟ್ಟಧರರಾಗಿದ್ದರೆಂದು ನಿಶ್ಚಿತವಾಗುವುದು. ಇಂತೆಯೇ ಇವರಿಂದ ದ್ರಾವಿಡ ಸಂಘವು, (ವಿಕ್ಕಮಸ್ಸ ಮರಣ ಪತ್ತಸ್ಸ........) ಹಿಂದೆ ವಿವರಿಸಲಾಗಿರುವಂತೆ, ವಿಕ್ರಮರಾಯ ನಿಂದ ಹತನಾದ ಶಕರಾಜನ ಮರಣಸಮಯದಿಂದ ೫೨೬ ನೇ ವರ್ಷದಲ್ಲಿ, ಅರ್ಥಾತ್ ಕ್ರಿ. ಶ. (೫೨೬ – ೩೩) ೪೯೩ ರಲ್ಲಿ ಸ್ಥಾಪಿತವಾಗಿದೆಯೆಂದು ಪರಿಗಣಿತವಾಗುವುದು. ವಜ್ರನಂದಿಆಚಾರ್ಯರನ್ನು ಕುರಿತು ದರ್ಶನಸಾರದಲ್ಲಿ 'ದಾವಿಡಸಂಘಸ್ಸ ಕಾರಕೋ ದುಟ್ಠೋ' ಎಂಬ ನಿಂದಾವಚನವಿರುವುದಾದರೂ 'ಪಾಹುಡವೇದೀ ಮಹಾಸತ್ಥೋ' ಎಂಬ ಸ್ತುತಿಪರ ವಾಕ್ಯವೂ ಇದೆ. ಇಂತೆಯೇ 'ಪಾಕ್ಷಿಕಪ್ರತಿಕ್ರಮಣ ಕ್ರಿಯಾಂತ ರ್ಗತ' ಗುರುನಾಮಾವಲಿಯಲ್ಲಿ ಈ ಆಚಾರ್ಯರನ್ನು ಕುರಿತು 'ವಜ್ರನಂದೀ ವಜ್ರ ವೃತ್ತಿಸ್ತಾರ್ಕಿಕಾಣಾಂ ಮಹೇಶ್ವರಃ' ಎಂಬ ಸ್ತುತಿವಚನವಿದೆ. ಇದರಿಂದ ವಜ್ರ ನಂದಿಆಚಾರ್ಯರು ತಮ್ಮ ಜೀವನದಲ್ಲಿ ಕೆಲವರ್ಷಕಾಲಪರ್ಯಂತ 'ಆಗಮಕೋವಿದ' ಮತ್ತು 'ತಾರ್ಕಿಕ ಮಹೇಶ್ವರ' ಎಂಬ ಖ್ಯಾತಿಗಳಿಸಿದವರಾಗಿದ್ದು, ಅಂತಿಮವಾಗಿ ಪರಂಪರಾಗತವಾದ ಮುನಿಸಂಘವನ್ನು ತೊರೆದು, ಸ್ವತಂತ್ರವಾದ ಸಂಘವನ್ನು ಸ್ಥಾಪಿಸಿ, ಆಚಾರನಿಯಮಗಳ ವಿಷಯವಾಗಿ ಆಗಮವಿರೋಧವಾದ ಕೆಲವಂಶ ಗಳನ್ನು ಪ್ರತಿಪಾದಿಸಿ,[1] ನಿಂದಾಭಾಜನರಾಗಿರುವರೆಂದು ಗ್ರಹಿಸಲವಕಾಶವಾಗು ವುದು. ಅಂತೆಯೇ ಮರ್ಕರಾ ತಾಮ್ರಪತ್ರಶಾಸನದಿಂದ ಸೂಚಿತವಾಗುವಂತೆ ಈ ಶಾಸನವು ರಚಿತವಾದಸಮಯದಲ್ಲಿ ಈ ಆಚಾರ್ಯರು ಪರಂಪರಾಗತ ಮುನಿಸಂಘದ ಆಚಾರ್ಯಪದವಿಯನ್ನಲಂಕರಿಸಿದ್ದು ಯತಿಗಳಿಂದ ಸನ್ಮಾನಿತರಾಗಿದ್ದುದಲ್ಲದೆ ರಾಜ ಸನ್ಮಾನವನ್ನೂ ಗಳಿಸಿದ್ದರೆಂಬುದರಲ್ಲಿ ಸಂಶಯವಿಲ್ಲ. ಆದರೆ ಮುಂದೆ ಇವರು ಆಗಮ ವಿರುದ್ಧವಾದ ಕೆಲವು ಆಚಾರ ನಿಯಮಗಳನ್ನು ರೂಪಿಸಿ ಸ್ವತಂತ್ರ ಮುನಿಸಂಘವನ್ನು ಸ್ಥಾಪಿಸಿದರಾಗಿ ಪರಂಪರಾಗತ ಮುನಿಸಂಘಗಳಿಂದ ಬಹಿಷ್ಕೃತರಾಗಿ ನಿಂದಾಭಾಜನ ರಾಗಿದ್ದಾರೆಂದು ವ್ಯಕ್ತವಾಗುವುದು. ವಜ್ರನಂದಿ ಆಚಾರ್ಯರ ಪೂರ್ವಭಾವಿಯಾಗಿ ಆಚಾರ್ಯಪಟ್ಟಧರರಾಗಿದ್ದ (ಗುಣನಂದಿ=) ಪೂಜ್ಯಪಾದಾಚಾರ್ಯರು ಅವಿನೀತ ಕೊಂಗುಣಿರಾಜನ ಸುತನಾದ ದುರ್ವಿನೀತಕೊಂಗುಣಿರಾಜನ ವಿದ್ಯಾಗುರುಗಳಾಗಿದ್ದ ರೆಂಬ ಐತಿಹಾಸಿಕಾಂಶವನ್ನಾಧರಿಸಿ ಅನೇಕ ಪುರಾತತ್ತ್ವ ಸಂಶೋಧಕ ವಿದ್ವಾಂಸರು ವಿಮರ್ಶೆನಡೆಸಿದ್ದಾರೆ. ಈ ವಿಷಯವಾಗಿ ಸನ್ಮಾನ್ಯ ಜ್ಯೋತಿಪ್ರಸಾದ್ ಜೈನ್‌ರವರ ವಿಮರ್ಶೆಯು ಪ್ರಕೃತ ಸಂದರ್ಭದ ದೃಷ್ಟಿಯಿಂದ ಅವಶ್ಯ ಗಮನಾರ್ಹವಾಗಿದೆ.[2]

---

1 ದರ್ಶನಸಾರ_ಗಾಹಾ ಸಂ. ೨೫ ರಿಂದ ೨೭.

2 ದಿ ಜೈನ ಆಂಟಿಕ್ವೆರಿ–ಗ್ರಂ. ಭಾ. ೧೮ ; ವಿಭಾಗ ೨ ; ಡಿಸೆಂಬರ್ 1952. ಪು. ಸಂ. ೧_೧೧.

ಇವರ ಅಭಿಮತದಂತೆ ದುರ್ವಿನೀತ ಕೊಂಗುಣಿ ರಾಜನು ಕ್ರಿ. ಶ. ೪೮೦-೫೨೦ರ ಮಧ್ಯವರ್ತಿಸಮಯದಲ್ಲಿ ರಾಜ್ಯವಾಳಿದ್ದಾನೆ. ಇದರಂತೆ ಈ ದುರ್ವಿನೀತಕೊಂಗುಣಿ ರಾಜನ ರಾಜ್ಯಭಾರವು ಆರಂಭವಾಗುವ ಮುನ್ನವೇ ಪೂಜ್ಯಪಾದಾಚಾರ್ಯರು ಸ್ವರ್ಗ ಸ್ಥರಾಗಿದ್ದರೆಂದು ಹೇಳಲವಕಾಶವಿದೆ: ವಜ್ರನಂದಿ ಆಚಾರ್ಯರು (ಗುಣನಂದಿ=) ಪೂಜ್ಯಪಾದಾಚಾರ್ಯರ ತರುವಾಯ ಆಚಾರ್ಯಪಟ್ಟಸ್ಥರಾಗಿರುವರೆಂಬುದು ನಿಶ್ಚಿತ ವಾದುದರಿಂದ ಮತ್ತು ಮರ್ಕರಾ ಶಾಸನದಿಂದ ಸೂಚಿತವಾಗುವಂತೆ ಇವರು ಕ್ರಿ. ಶ. ೪೬೭ ನೇ ವರ್ಷದಲ್ಲಿ ಆಚಾರ್ಯಪಟ್ಟಧರರಾಗಿದ್ದುದರಿಂದ ಈ ಸಮಯಕ್ಕಾಗಲೇ ಪೂಜ್ಯಪಾದಾಚಾರ್ಯರು ಸ್ವರ್ಗಸ್ಥರಾಗಿದ್ದಿರಬೇಕೆಂದು ಅಧಿಗತವಾಗುವುದು. ಇದ ರಿಂದ ದುರ್ವಿನೀತಕೊಂಗುಣಿರಾಜ ಮತ್ತು ವಜ್ರನಂದಿ ಆಚಾರ್ಯರು ಪ್ರಾಯಿಕವಾಗಿ ಸಮಾನ ವಯಸ್ಕರಾಗಿದ್ದರೆಂದೂ ಮತ್ತು ಪೂಜ್ಯಪಾದಾಚಾರ್ಯರು ಇವರೀರ್ವರ ಹಿರಿಯ ಸಮಕಾಲೀನರಿದ್ದರೆಂದೂ ವ್ಯಕ್ತವಾಗುವುದು. ಈ ರೀತಿಯಾಗಿ, ಪೂಜ್ಯ ಪಾದಾಚಾರ್ಯರು ದುರ್ವಿನೀತ ಕೊಂಗುಣಿರಾಜ ಮತ್ತು ವಜ್ರನಂದಿ ಆಚಾರ್ಯರ ಜೀವಿತಕಾಲ ಸಂಬಂಧಿಯಾದ ಐತಿಹ್ಯಾಂಶವು ಹಿಂದೆ ವಿವರಿಸಿರುವಂತೆ, 'ವಿಕ್ಕಮ. ರಾಯಸ್ಸ ಮರಣಪತ್ತಸ್ಸ....' ಎಂಬುದನ್ನು ವಿಕ್ರಮರಾಯನಿಂದ ಹತನಾದ ಶಕ ರಾಜನ ಮರಣಸಮಯದ ಸೂಚಕವನ್ನಾಗಿ ಗ್ರಹಿಸಿ ಕಾಲಗಣನೆಮಾಡಿದಲ್ಲಿ ಮಾತ್ರ ಸುಸಂಗತರೀತಿಯಿಂದ ಸಮಾಯೋಜಿತವಾಗುವುದು. ಆದ್ದರಿಂದ ಮೂಲತಃ ಶಕ ರಾಜನ ಮರಣಸಮಯ ಅಥವಾ ವಿಕ್ರಮಾದಿತ್ಯನ ರಾಜ್ಯಭಾರಾರಂಭ ಸಮಯದಾ ಧಾರದಿಂದ ಕಾಲಗಣನೆಮಾಡುವ ರೂಢಿಯಿದ್ದು, ವಿಕ್ರಮಾದಿತ್ಯನ ಜೀವಿತಸಂಬಂಧಿ ಯಾದ ಐತಿಹಾಸಿಕ ಪ್ರಸಂಗಳು ಅಸ್ತವ್ಯಸ್ತಗೊಂಡ ಪರಿಣಾಮವಾಗಿ ವಿಕ್ರಮಾದಿತ್ಯ ನಿಂದ ಹತನಾದ ಶಕರಾಜನನ್ನೇ ವಿಕ್ರಮರಾಯನೆಂದು ಕಾಲಾಂತರದಲ್ಲಿ ಪರಿಭಾವಿಸ ಲಾಗಿದೆ ಎಂದು ವ್ಯಕ್ತವಾಗುವುದು. ವಿಕ್ರಮಾದಿತ್ಯನು ತನ್ನ ರಾಜ್ಯಭಾರಾರಂಭ ಸಮಯದಾಧಾರದಿಂದ ಶಕೆಯನ್ನು ಪ್ರವರ್ತನಗೊಳಿಸಿದನೆಂಬ ಅಭಿಪ್ರಾಯವಿದೆ. ಆದರೆ ಸದ್ಯ ಪ್ರಚಲಿತವಿರುವ ವಿಕ್ರಮಶಕೆಯು ವಿಕ್ರಮಾದಿತ್ಯನ ಜನನಸಮಯದಾ ಧಾರದಿಂದ ಪ್ರವರ್ತಿತವಾಗಿರುವುದೆಂದು ಹಿಂದಿನ ವಿಮರ್ಶೆಯಿಂದ ವ್ಯಕ್ತಪಟ್ಟದೆಯಲ್ಲದೆ ಈ ಶಕೆಯು ಸ್ವಯಂ ವಿಕ್ರಮಾದಿತ್ಯನಿಂದ ಪ್ರವರ್ತಿತವಾಗಿರದೆ ಕಾಲಾಂತರದಲ್ಲಿ ಇದರ ಬಳಕೆಯು ರೂಢಿಗತವಾಗಿರಬೇಕೆಂದು ಹೇಳಲವಕಾಶವಿದೆ.

ಶ್ರೀ ವೀರತೀರ್ಥಂಕರರ ನಿರ್ವಾಣಸಮಯವನ್ನು ಗುರುತಿಟ್ಟುಕೊಳ್ಳುವ ಸಲು ವಾಗಿ ಅವಂತೀರಾಜಸಂತತಿಯ ರಾಜ್ಯಭಾರಾನುಕ್ರಮದ 'ಪಾಲಯರಣ್ಣಂ ಛಟ್ಠೇ....' ಎಂಬ ಐತಿಹ್ಯವು ರೂಪಿತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಶ್ರೀ ವೀರತೀರ್ಥಂಕ ರನು ಕಾರ್ತಿಕಮಾಸದಲ್ಲಿ ನಿರ್ವಾಣಹೊಂದಿರುವನೆಂಬ ಪರಂಪರಾಗತ ಐತಿಹ್ಯವು

ಉಳಿದುಬಂದಿದೆ.[1] ಇಂತೆಯೇ ಸದ್ಯ ಪ್ರಚಲಿತವಿರುವ ವಿಕ್ರಮಶಕೆಯು ಕಾರ್ತಿಕಮಾಸ ದಾದಿಯಾಗಿ ಆರಂಭವಾಗುವುದೆಂದು ಪಂಚಾಂಗಗಳ ಹೇಳಿಕೆಯಿಂದ ಸೂಚಿತವಾಗು ವುದು. ಈ ರೀತಿಯಾಗಿ ಶ್ರೀ ವೀರತೀರ್ಥಂಕರನ ನಿರ್ವಾಣ ಪ್ರಸಂಗ ಮತ್ತು ವಿಕ್ರ ಮಾದಿತ್ಯನ ಜನನ ಪ್ರಸಂಗಗಳೆರಡೂ ಕಾರ್ತಿಕಮಾಸದಲ್ಲಿಯೇ ಸಂಘಟಿತವಾಗಿದ್ದು, ವಿಕ್ರಮಾದಿತ್ಯನ ಜನ್ಮಸಮಯವು ಶ್ರೀ ವೀರತೀರ್ಥಂಕರನ ನಿರ್ವಾಣಸಮಯದಿಂದ ೪೭೦ ವರ್ಷಗಳ ಪರಿಪೂರ್ಣ ಅವಧಿಯ ವಿಶಿಷ್ಟಗುರುತಾಗಿ ಪರಿಗಣಿತವಾಗಿದ್ದು ಕಾಲಾನುಕ್ರಮದಲ್ಲಿ ಶಕೆಯ ರೂಪದಲ್ಲಿ ಬಳಕೆಗೊಂಡಿದೆಯೆಂದು ಕಂಡುಬರುತ್ತದೆ. ಆದರೆ ಲೌಕಿಕ ವ್ಯವಹಾರಗಳಲ್ಲಿ ವಿಕ್ರಮಶಕೆಯ ಬಳಕೆಯು ವಿಕ್ರಮಾದಿತ್ಯನ ಕಾಲ ದಲ್ಲಿಯೇ ರೂಢಿಗತವಾಗಿರದೆ ಕಾಲಾಂತರದಲ್ಲಿ ರೂಢಿಗತವಾಗಿರಬೇಕೆಂದು ಹೇಳಲವ ಕಾಶವಿದೆ. ಕ್ರಿ. ಶ. ೧೫೦ ರಲ್ಲಿ ಉಜ್ಜಯಿನಿಯಲ್ಲಿ ರಾಜ್ಯಭಾರಮಾಡುತ್ತಿದ್ದ ರುದ್ರ ದಾಮನ ಶಾಸನಗಳಲ್ಲಿ ಶಾಲಿವಾಹನ ಶಕೆಯ ಆಧಾರದಿಂದ ಕಾಲನಿರ್ದೇಶನಮಾಡ ಲಾಗಿದೆಯೆಂದು ಚರಿತ್ರಕಾರರು ನಿರ್ಣಯಿಸಿದ್ದಾರೆ. ಇವನಿಂದ ಸುಮಾರು ೧೫೦ ವರ್ಷಗಳ ಮುನ್ನ ಇದೇ ಉಜ್ಜಯಿನಿಯಲ್ಲಿ ರಾಜ್ಯಭಾರಮಾಡಿದ ವಿಕ್ರಮಾದಿತ್ಯನಿಂದ ಶಕೆಯೊಂದು ಪ್ರವರ್ತಿತವಾಗಿದ್ದು ಅದು ಲೌಕಿಕ ವ್ಯವಹಾರಗಳಲ್ಲಿ ಬಳಕೆಗೊಂಡಿದ್ದಿ ತಾದಲ್ಲಿ ರುದ್ರದಾಮನು ಈ ಶಕೆಯ ಆಧಾರದಿಂದ ಕಾಲನಿರ್ದೇಶನ ಮಾಡದೆ ಶಾಲಿ ವಾಹನ ಶಕೆಯನ್ನು ಉಪಯೋಗಿಸಿದುದೇಕೆಂಬುದು ಪ್ರಶ್ನೆಯಾಗುವುದು. ಇಂತೆಯೇ ವಿಕ್ರಮಾದಿತ್ಯನ ಸಮಕಾಲೀನರಾದ ಅಥವಾ ಅನಂತರಕಾಲೀನರಾದ ಜ್ಯೋತಿಶ್ಶಾಸ್ತ್ರ ಗ್ರಂಥಕರ್ತೃಗಳಿಂದ ವಿಕ್ರಮಶಕೆಯ ಬಳಕೆಯಾಗಿಲ್ಲವಾದುದರಿಂದ ಈ ಶಕೆಯು ವಿಕ್ರಮಾದಿತ್ಯನಿಂದ ಪ್ರವರ್ತಿತವಾಗಿರಲಾರದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿ ದ್ದಾರೆ.[2] ಇದರಿಂದ ವಿಕ್ರಮಶಕೆಯು ಸ್ವಯಂ ವಿಕ್ರಮನಿಂದ ಪ್ರವರ್ತಿತವಾಗಿರದೆ ಅವನ ಅನುಪಮವಾದ ಸಾಹಸ, ಪರಾಕ್ರಮ, ಪ್ರಜಾಹಿತಸಾಧಕ, ರಾಜ್ಯಾಡಳಿತ ಗಳೇ ಮೊದಲಾದ ಐತಿಹಾಸಿಕ ಸಂಗತಿಗಳು ಜನರ ಸ್ಮೃತಿಯಲ್ಲಿದ್ದು, ದೀಪಾವಲೀ ಹಬ್ಬದೊಡನೇ ಅವನ ಜನ್ಮದಿನದ ನೆನಪು ಉಳಿದುಬಂದಿದ್ದಿತಾಗಿ, ಕಾಲಾಂತರದಲ್ಲಿ ಈ ಜನ್ಮಸಮಯದಾಧಾರದಿಂದ ಶಕೆಯ ಬಳಕೆಯು ರೂಢಿಗತವಾಗಿರಬೇಕೆಂದು ಪರಿ ಭಾವಿಸಲವಕಾಶವಾಗುವುದು.

ವಿಕ್ರಮಾದಿತ್ಯನ ಆಸ್ಥಾನದ ನವವಿದ್ವನ್ಮಣಿಗಳಲ್ಲೊಬ್ಬರಾದ ವರಾಹಮಿಹಿರಾ ಚಾರ್ಯರು :-ವಿಕ್ರಮಾದಿತ್ಯನು ಐತಿಹಾಸಿಕವ್ಯಕ್ತಿಯಾಗಿರದೆ ಕೇವಲ ದಂತಕಥೆಗಳ ಕಲ್ಪನಾವ್ಯಕ್ತಿಯಾಗಿರುವನೆಂಬ ಪುರಾತತ್ತ್ವಸಂಶೋಧಕಪ್ರಮುಖರ ಅಭಿಮತದ

---

1 ಕತ್ತಿಯಮಾಸಸ್ಸ ಕಿಣ್ಣಚಉದಸೀಏ ರತ್ತೀಏ ಸಾದೀಏ ಣಕ್ಖತ್ತೇ ಪಚ್ಚೂಸೇ ಭಯವದೋ ಮಹದಿ ಮಹಾವೀರೋ ಸಿದ್ಧಿಂಗದೋ.... ನಿರ್ವಾಣಭಕ್ತಿ.

2 ನೋ. ನೂ. 'ವಿಕ್ರಮಾದಿತ್ಯ ಆಫ್ ಉಜ್ಜೈನ್', ಪು. ಸಂ. ೨.

ವಶವಾಗಿ ಇವನ ಆಸ್ಥಾನದ ನವಮಣಿಗಳೆಂದು ಪರಂಪರಾನುಕ್ರಮದಿಂದ ಖ್ಯಾತಿ ಭಾಜನರಾದ ಧನ್ವಂತರಿಯೇ ಮೊದಲಾದ ವಿದ್ವನ್ಮಣಿಗಳಲ್ಲಿ ಪ್ರಸಿದ್ಧನಾದ ಕಾಳಿ ದಾಸನು, 'ವಿಕ್ರಮಾದಿತ್ಯ' ಎಂಬ ಬಿರುದನ್ನು ಹೊಂದಿದ್ದ ಎರಡನೇ ಚಂದ್ರಗುಪ್ತನ ಆಸ್ಥಾನಕವಿಯಾಗಿಯೂ ಮತ್ತು ವರಾಹಮಿಹರಾಚಾರ್ಯರು ಕ್ರಿ. ಶ. ೬ ನೇ ಶತ ಮಾನಕಾಲದಲ್ಲಿದ್ದ 'ವಿಕ್ರಮಾದಿತ್ಯ' ಎಂಬ ಹೆಸರಿನ ಮತ್ತೊಬ್ಬ ರಾಜನ ಸಮ ಕಾಲೀನರಾಗಿಯೂ ಇದ್ದಿರಬೇಕೆಂಬ ವಾದಗಳು ಮೂಡಿ ಪ್ರಾಯಿಕವಾಗಿ ಈ ವಾದ ಗಳು ಐತಿಹಾಸಿಕ ತಥ್ಯದ ಮೆರುಗನ್ನು ಪಡೆದಿವೆ. ಆದರೆ ವಿಕ್ರಮಾದಿತ್ಯನು ಕಥಾ ಯತ್ತಕಲ್ಪನೆಯ ವ್ಯಕ್ತಿಯಾಗಿರದೆ ಐತಿಹಾಸಿಕ ವ್ಯಕ್ತಿಯಾಗಿರುವನೆಂಬುದು ಅಂಗೀ ಕಾರಾರ್ಹವೆನಿಸುವುದಾದಲ್ಲಿ ಇವನ ಆಸ್ಥಾನದ ನವವಿದ್ವನ್ಮಣಿಗಳಿಗೆ 'ವಿಕ್ರಮಾದಿತ್ಯ' ಎಂಬ ಬಿರುದನ್ನು ಹೊಂದಿದ್ದ ಅರ್ವಾಚೀನಕಾಲದ ರಾಜರ ಆಸ್ಥಾನಗಳಲ್ಲಿ ಸ್ಥಾನ ಕಲ್ಪನೆಮಾಡಬೇಕಾದ ಅವಶ್ಯಕತೆಯುಳಿಯುವುದಿಲ್ಲ. ಈ ವಿಷಯವಾಗಿ ವಿದ್ವಾಂಸ ರಿಂದ ವಿಪುಲವಿಮರ್ಶೆ ನಡೆದಿದ್ದು ಇಲ್ಲಿ ಇದರ ಪುನರ್ವಿಮರ್ಶೆಯ ಆಗತ್ಯವಿರುವುದಿಲ್ಲ. ಆದರೆ ನವಮಣಿಗಳಲ್ಲೊಬ್ಬರಾಗಿ ಪರಿಗಣಿತರಾಗಿರುವ ವರಾಹಮಿಹಿರಾಚಾರ್ಯರ ಐತಿಹ್ಯವಿಷಯವಾಗಿ ಸಂಶೋಧಕ ವಿದ್ವಾಂಸರ ಗಮನವನ್ನು ಸೆಳೆಯದಿರುವ ಒಂದೆ ರಡು ಅಂಶಗಳನ್ನು ಇಲ್ಲಿ ಮಂಡಿಸಲಾಗುವುದು.

ಜ್ಯೋತಿಷವಿದ್ಯಾವಿಶಾರದರೂ ಮತ್ತು ಗ್ರಂಥಕರ್ತೃಗಳೂ ಆದ ವರಾಹಮಿಹಿರಾ ಚಾರ್ಯರು ವೀ. ನಿ. ಸ. ೧೬೦ ನೇ ವರ್ಷದಲ್ಲಿ (ಕ್ರಿ. ಪೂ. ೩೬೭ ರಲ್ಲಿ) ಸ್ವರ್ಗಸ್ಥ ರಾದ ಶ್ರು. ಕೇ. ಭದ್ರಬಾಹು ಆಚಾರ್ಯರ ಸಹೋದರರಾಗಿದ್ದರೆಂಬ ಐತಿಹ್ಯವು ಶ್ವೇತಾಂಬರ ಜೈನ ಆಮ್ನಾಯದಲ್ಲಿ ಉಳಿದುಬಂದಿದೆ. ಆದರೆ 'ವರಾಹಮಿಹಿರ' ಎಂಬ ಹೆಸರಿನ ಜ್ಯೋತಿಶ್ಶಾಸ್ತ್ರಗ್ರಂಥಕರ್ತೃಗಳು ಕ್ರಿ. ಪೂ. ೧ ನೇ ಶತಮಾನದಿಂದ ಪೂರ್ವವರ್ತಿಸಮಯದಲ್ಲಿ ಜೀವಿಸಿದ್ದರೆಂದು ಸಮರ್ಥನೆಗೊಡುವ ಆಧಾರಾಂತರಗಳಿಲ್ಲ ವಾದುದರಿಂದ, ಇವರು ಕ್ರಿ. ಪೂ. ೪ ನೇ ಶತಮಾನಕಾಲದಲ್ಲಿ ಜೀವಿಸಿದ್ದ ಶ್ರು. ಕೇ. ಭದ್ರಬಾಹು ಆಚಾರ್ಯರ ಸಹೋದರರಾಗಿದ್ದರೆಂಬ ಐತಿಹ್ಯಾಂಶವು ಕೇವಲ ಅಸಂಗತ ವಿರುವುದೆಂದು ಹೇಳಬೇಕಾದ ಪ್ರಮೇಯವಿಲ್ಲ. ಇಂತಿದ್ದರೂ ಈ ಐತಿಹ್ಯದಲ್ಲಿ ಮರೆ ಗೊಂಡಿರುವ ತಥ್ಯವನ್ನು ಆವಿಷ್ಕಾರಗೊಳಿಸುವ ಮತ್ತೊಂದು ಐತಿಹ್ಯಾಂಶವನ್ನು ಗಮ ನಿಸಬೇಕಾಗಿದೆ. ವಿಕ್ರಮಾದಿತ್ಯನ ಸಮಕಾಲೀನರಾಗಿ 'ಭದ್ರಬಾಹು' ಎಂಬ ಹೆಸರಿನ ಅಷ್ಟಅಂಗಶ್ರುತಧರರಾದ ಆಚಾರ್ಯರಿದ್ದರೆಂಬ ಐತಿಹ್ಯವು ದಿಗಂಬರ ಜೈನಸಂಪ್ರದಾ ಯದ ಪೂರ್ವನಿರ್ದೇಶಿತವಾದ ನಂದಿ ಆಮ್ನಾಯಪಟ್ಟಾವಲಿಯಲ್ಲಿ ಉಳಿದುಬಂದಿದೆ. ಸದ್ಯ ಉಪಲಬ್ಧವಿರುವ ಶ್ರು. ಕೇ. ಭದ್ರಬಾಹು ಆಚಾರ್ಯರ ಜೀವಿತಸಂಬಂಧಿಯಾದ ಐತಿಹ್ಯದಲ್ಲಿ ಇದೇ ಹೆಸರಿನ ಇತರ ಈರ್ವರು ಆಚಾರ್ಯರ ಜೀವಿತಸಂಬಂಧಿಯಾದ ಐತಿಹ್ಯಾಂಶಗಳು ಸಂಮಿಶ್ರವಾಗಿರುವುದನ್ನು ಗುರುತಿಸಲವಕಾಶವಿದೆಯಾದುದರಿಂದ ವಿಕ್ರಮಾದಿತ್ಯನ ಸಮಕಾಲೀನರಾದ ಎರಡನೇ ಭದ್ರಬಾಹು ಆಚಾರ್ಯರ ಐತಿಹ್ಯಾಂ

ಶವು ಶ್ವೇತಾಂಬರ ಜೈನ ಆಮ್ನಾಯದ ಶ್ರು. ಕೇ. ಭದ್ರಬಾಹು ಆಚಾರ್ಯರ ಐತಿಹ್ಯ ದಲ್ಲಿ ಸಂಮಿಶ್ರವಾಗಿರುವುದೆಂದು ಗುರುತಿಸಬಹುದಾಗಿದೆ.[1] ಇದರಿಂದ ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲೊಬ್ಬರಾಗಿ ಪರಿಗಣಿತರಾಗಿರುವ ವರಾಹಮಿಹಿರಾ ಚಾರ್ಯರು ದ್ವಿತೀಯ ಭದ್ರಬಾಹು ಆಚಾರ್ಯರ ಸಹೋದರರಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು.

ಜ್ಯೋತಿಶ್ಶಾಸ್ತ್ರದ ಗಣಿತದಾಧಾರದಿಂದ ಹಾಗೂ ಬ್ರಹ್ಮಗುಪ್ತವಿರಚಿತ 'ಖಂಡನ ಖಾದ್ಯ'ದ ಟೀಕಾಕಾರನಾದ ಆಮರಾಜನು, 'ಶಕ್‌ಸಂವತ್' ೫೦೯ ರಲ್ಲಿ ವರಾಹ ಮಿಹಿರಾಚಾರ್ಯರು ಸ್ವರ್ಗಸ್ಥರಾದರು' ಎಂದು ಹೇಳಿರುವನೆಂಬ ಆಧಾರದಿಂದ, ಈ ಆಚಾರ್ಯರು ಕ್ರಿ. ಶ. ೬ ನೇ ಶತಮಾನಕಾಲದಲ್ಲಿ ಜೀವಿಸಿದ್ದರೆಂದು ಚರಿತ್ರಕಾರರು ನಿರ್ಣಯಿಸಿದ್ದಾರೆ.[2] ಇದರಿಂದ ವರಾಹಮಿಹಿರಾಚಾರ್ಯರು ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲೊಬ್ಬರಾಗಿದ್ದರೆಂಬ ಪರಂಪರಾಗತ ಐತಿಹ್ಯವು ಅವಿಶ್ವಸ ನೀಯವೆನಿಸಿ ನಿರಾಕೃತವಾಗಿರುವುದಲ್ಲದೆ ವರಾಹಮಿಹಿರಾಚಾರ್ಯರು ದ್ವಿತೀಯ ಭದ್ರಬಾಹು ಆಚಾರ್ಯರ ಸಹೋದರರಾಗಿದ್ದರೆಂಬ ಈ ಹಿಂದಿನ ವಿಮರ್ಶಿತಾಂಶವು ಅಸಂಬದ್ಧ ಮತ್ತು ಅಸಂಗತವೆನಿಸಿದಂತಾಗುವುದು. ಆದರೆ ವರಾಹಮಿಹಿರಾಚಾರ್ಯರ ಜೀವಿತಾಂತ್ಯಸಮಯ ನಿರ್ದೇಶಕವಾಗಿ ಖಂಡನಖಾದ್ಯದ ಟೀಕಾಕಾರನಾದ ಆಮರಾಜ ನಿಂದ ಪ್ರಯುಕ್ತವಾಗಿರುವ 'ಶಕ' ಪದವು ಶಾಲಿವಾಹನ ಶಕೆಯ ಸೂಚಕವಾಗಿದೆಯೆ? ಅಥವಾ ಮತ್ತಾವುದಾದರೊಂದು ಶಕೆಯ ಸೂಚಕವಾಗಿರುವುದೇ? ಎಂಬುದು ನಿಶ್ಚಿತ ವಿಲ್ಲ. ಈ ವಿಷಯವಾಗಿ ಆಮರಾಜನು ವರಾಹಮಿಹಿರಾಚಾರ್ಯರ ಜೀವಿತಾಂತ್ಯ ಸಮಯವನ್ನು ಸ್ವಯಂ ಗಣನೆಮಾಡಿ ಹೇಳಿರುವನೇ? ಅಥವಾ ಪ್ರಾಚೀನ ಪರಂಪರಾ ಗತವಾದ ಐತಿಹ್ಯವು ಈತನಿಗುಪಲಬ್ಧವಿದ್ದು ಅದನ್ನು ತದ್ವತ್ತಾಗಿ ಹೇಳಿರುವನೇ? ಎಂಬುದು ಅವಧಾರಣಾರ್ಹವಾಗಿದೆ. ಆಮರಾಜನು ಸ್ವಯಂ ಗಣನೆಮಾಡಿ ಹೇಳಿ ರುವನೆಂದಾದರೆ ಈತನು ತನ್ನ ಕಾಲದಲ್ಲಿ ಬಳಕೆಯಲ್ಲಿದ್ದ ಶಾಲಿವಾಹನಶಕೆಯಾಧಾರ ದಿಂದಾಗಲೀ ಅಥವಾ ವಿಕ್ರಮಶಕೆಯಾಧಾರದಿಂದಾಗಲೀ ವರಾಹಮಿಹಿರಾಚಾರ್ಯರ ಜೀವಿತಾಂತ್ಯಸಮಯವನ್ನು ನಿರ್ದೇಶಿಸಿರುವನೆಂಬುದು ವಿಹಿತವೆನಿಸುವುದು. ಇಂತ ಲ್ಲದೆ ಆಮರಾಜನ ಹೇಳಿಕೆಯು ಪ್ರಾಚೀನ ಪರಂಪರಾಗತ ಐತಿಹ್ಯವನ್ನವಲಂಬಿಸಿರು ವುದೆಂದಾದರೆ, ಪ್ರಕೃತ ಸಂದರ್ಭದಲ್ಲಿ ಪ್ರಯುಕ್ತವಾಗಿರುವ 'ಶಕ' ಪದವು ಮೇಲ್ಕಂಡ ಎರಡು ಶಕೆಗಳ ಸೂಚಕವಾಗಿರಬಹುದೆಂಬುದಲ್ಲದೆ ವಿಜಯಾಭಿನಂದನ (=ನಂದ ರಾಜನ) ಶಕೆಯ ಸೂಚಕವಾಗಿಯೂ ಇರಬಹುದೆಂದು ಹೇಳಲವಕಾಶವಾಗುವುದು.

---

1 ಈ ವಿಷಯವನ್ನು ಮುಂದೆ ವಿವರಿಸಲಾಗುವುದು.

2 ಪೂ. ಸೂ. 'ವಿಕ್ರಮಾದಿತ್ಯ ಆಫ್ ಉಜ್ಜಯಿನಿ', ಪು. ಸಂ. ೬೮ ಮತ್ತು ೨೦೪.

ಗರ್ಗಾಚಾರ್ಯರ ಅಭಿಮತವೆಂದು ವರಾಹಮಿಹಿರಾಚಾರ್ಯರಿಂದ ಉಲ್ಲಿಖಿತವಾಗಿರುವ (ಪೂರ್ವೋಲ್ಲಿಖಿತ) ಶ್ಲೋಕದಲ್ಲಿ ಪ್ರಯುಕ್ತವಾಗಿರುವ ಶಕಪದವು ನಂದರಾಜನ ಸೂಚಕವಾಗಿರುವುದೆಂದೂ ಮತ್ತು ಇವನ ರಾಜ್ಯಾಭಿಷೇಕವು ಕ್ರಿ. ಪೂ. ೪೭೫ ರಲ್ಲಿ ನಡೆದಿದ್ದು ಈ ಸಮಯದಾಧಾರದಿಂದ ವಿಜಯಾಭಿನಂದನ ಶಕೆಯು ಪ್ರವರ್ತಿತವಾಗಿರುವುದೆಂದೂ ಹಿಂದೆ ವಿವರಿಸಲಾಗಿದೆ. ಈ ಶಕೆಯ ಗಣನೆಯಾಧಾರದಂತೆ, ವರಾಹ ಮಿಹಿರಾಚಾರ್ಯರು ಕ್ರಿ. ಶ. (೫೦೯ — ೪೭೫ =) ೩೪ ರಲ್ಲಿ ಸ್ವರ್ಗಸ್ಥರಾಗಿರುವರೆಂದು ಪರಿಗಣಿತವಾಗುವುದು. ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಪೂರ್ವೋಲ್ಲಿಖಿತ ಐತಿಹ್ಯದನುಗುಣವಾಗಿ ಇವನು ವೀ. ನಿ. ಪ. ೫೫೦ ರಲ್ಲಿ (=ಕ್ರಿ. ಶ. ೨೩ ರಲ್ಲಿ) ದಿವಂಗತನಾಗಿರುವನೆಂದು ವ್ಯಕ್ತಗೊಂಡಿದೆ. ಇದರಂತೆ ವಿಕ್ರಮಾದಿತ್ಯನ ಜೀವಿತಾಂತ್ಯಸಮಯದಿಂದ ೧೨ ವರ್ಷಗಳ ತರುವಾಯದಲ್ಲಿ ವರಾಹಮಿಹಿರಾಚಾರ್ಯರು ಸ್ವರ್ಗಸ್ಥರಾಗಿರುವರೆಂದು ಅಧಿಗತವಾಗುವುದು. ಆದ್ದರಿಂದ ವರಾಹಮಿಹಿರಾಚಾರ್ಯರು ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲೊಬ್ಬರಾಗಿದ್ದರೆಂಬ ಪರಂಪರಾಗತ ಐತಿಹ್ಯವು ತಥ್ಯನಿಷ್ಠವಾಗಿರುವುದೆಂಬುದಲ್ಲದೆ ದ್ವಿತೀಯ ಭದ್ರಬಾಹು ಆಚಾರ್ಯರು ಮತ್ತು ವರಾಹಮಿಹಿರಾಚಾರ್ಯರು ಸಹೋದರರಾಗಿದ್ದರೆಂಬ ಪೂರ್ವಪ್ರತಿಪಾದನೆಯು ಅಬಾಧಿತವೆನಿಸಿ ಸ್ಥಿರೀಕೃತವಾಗುವುದು. ವರಾಹಮಿಹಿರಾಚಾರ್ಯರು ಸ್ವರ್ಗಸ್ಥರಾದ ಸಮಯದ ವಿಷಯವಾಗಿ ಮೇಲ್ಕಂಡ ನಿರ್ಣಯದ ಸಾಧುತ್ವವು ಶ್ವೇತಾಂಬರ ಜೈನ ಆಮ್ನಾಯದ ಶ್ರು. ಕೇ. ಭದ್ರಬಾಹು ಆಚಾರ್ಯರ ಐತಿಹ್ಯಾಂತರ್ಗತವಾದ ಈ ಮುಂದಿನ ಅಂಶದಿಂದಲೂ ಪರೋಕ್ಷರೀತಿಯಿಂದ ಸಮರ್ಥಿತವಾಗುವುದು. ಶ್ರು. ಕೇ. ಭದ್ರಬಾಹು ಆಚಾರ್ಯರ ವಿಷಯವಾಗಿ ವರಾಹಮಿಹಿರಾಚಾರ್ಯರು ತೀವ್ರ ಅಸೂಯಾಭಾವಯುಕ್ತರಾಗಿದ್ದು ಮೃತರಾಗಿ ವ್ಯಂತರದೇವನಾಗಿ ಜನಿಸಿ ಜೈನಸಂಘಕ್ಕೆ ಉಪಸರ್ಗ ಉಂಟುಮಾಡಿದರೆಂದೂ ಆಗ ಶ್ರು. ಕೇ, ಭದ್ರಬಾಹು ಆಚಾರ್ಯರು ಉವಸಗ್ಗಹರ ಸ್ತೋತ್ರವನ್ನು ರಚಿಸಿ ವ್ಯಂತರಕೃತವಾದ ಉಪಸರ್ಗಬಾಧೆಯನ್ನು ನಿವಾರಿಸಿದರೆಂದೂ ಶ್ವೇತಾಂಬರ ಆಮ್ನಾಯದ ಐತಿಹ್ಯವಿದೆ. ಈ ಐತಿಹ್ಯವು ವಾಸ್ತವವಾಗಿ ದ್ವಿತೀಯ ಭದ್ರಬಾಹು ಆಚಾರ್ಯರನ್ನಧಿಕರಿಸಿದ್ದಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಈ ದ್ವಿತೀಯ ಭದ್ರಬಾಹು ಆಚಾರ್ಯರು ವಿಕ್ರಮಾದಿತ್ಯನ ರಾಜ್ಯಭಾರಾರಂಭ ಸಮಯದ ತರುವಾಯ ೭೦ ನೇ ವರ್ಷ = ವೀ. ನಿ. ಪ. ೫೬೫ ನೇ ವರ್ಷ (= ಕ್ರಿ. ಶ. ೩೭ ರಲ್ಲಿ) ಸ್ವರ್ಗಸ್ಥರಾಗಿದ್ದಾರೆ.[1] ವರಾಹಮಿಹಿರಾಚಾರ್ಯರು, ಈ ಹಿಂದೆ ನಿರ್ಣಯಿಸಲಾಗಿರುವಂತೆ, ಕ್ರಿ. ಶ. ೩೪ ರಲ್ಲಿ ಸ್ವರ್ಗಸ್ಥರಾಗಿರುವರಾದ್ದರಿಂದ, ಈ ಸಮಯದಿಂದ ಮೂರುವರ್ಷಗಳ ತರುವಾಯದಲ್ಲಿ ದ್ವಿತೀಯ ಭದ್ರಬಾಹು ಆಚಾರ್ಯರು ಸ್ವರ್ಗಸ್ಥರಾಗಿರುವರೆಂಬುದು ಸ್ಪಷ್ಟವಿದೆ. ಈ ಐತಿಹ್ಯಾಂಶವು ಶ್ವೇತಾಂಬರ ಜೈನ ಆಮ್ನಾಯದಲ್ಲಿ ಶ್ರು. ಕೇ. ಭದ್ರಬಾಹು ಆಚಾರ್ಯರ ಐತಿಹ್ಯವಾಗಿ ಪರಿವರ್ತನೆ ಹೊಂದಿದ್ದು

1 ಮುಂದೆ ವಿಶದೀಕರಿಸಲಾಗುವುದು.

ದ್ವಿತೀಯ ಭದ್ರಬಾಹು ಆಚಾರ್ಯರು ದಿವಂಗತರಾಗುವ ಮುನ್ನವೇ ವರಾಹಮಿಹಿರಾಚಾರ್ಯರು ಸ್ವರ್ಗಸ್ಥರಾಗಿರುವರೆಂಬ ತಥ್ಯವು ಅಭಿವ್ಯಕ್ತವಾಗುವುದು. ಈ ರೀತಿಯಾಗಿ ಶ್ವೇತಾಂಬರ ಆಮ್ನಾಯದ ಶ್ರು. ಕೇ. ಭದ್ರಬಾಹು ಆಚಾರ್ಯರ ಐತಿಹ್ಯದ ಪರಾಮರ್ಶೆಯಿಂದ ವರಾಹಮಿಹಿರಾಚಾರ್ಯರು ವಿಕ್ರಮಾದಿತ್ಯನ ಸಮಕಾಲೀನರಾಗಿದ್ದರೆಂದು ಫಲಿತವಾಗುವುದಾದ್ದರಿಂದ ಪರಂಪರಾಗತವಾಗಿ ನವಮಣಿಗಳೆನಿಸಿ ಖ್ಯಾತರಾಗಿರುವ ವಿದ್ವನ್ಮಣಿಗಳೆಲ್ಲರೂ ವಿಕ್ರಮಾದಿತ್ಯನ ಸಮಕಾಲೀನರಾಗಿದ್ದರೆಂಬುದರಲ್ಲಿ ಸಂಶಯಪಡುವಂತಿಲ್ಲ.

ವಿಕ್ರಮಾದಿತ್ಯನ ವಂಶ: ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಪೂರ್ವೋಲ್ಲಿಖಿತ ಗಾಹೆಗಳಾಧಾರದಿಂದ ವಿಶದೀಕೃತವಾಗಿರುವಂತೆ ಇವನು ಗಂಧರ್ವಸೇನನ ಸುತನಾಗಿರುವನೆಂದು ವ್ಯಕ್ತಪಟ್ಟಿದೆ. ಇಂತೆಯೇ 'ಸೇನ' ಎಂಬ ಪದದಿಂದ ಅಂತ್ಯಗೊಳ್ಳುವ ಹೆಸರು ಪ್ರದ್ಯೋತ ಮಹಾಸೇನನ ವಂಶಾನುಕ್ರಮದಲ್ಲಿ ಮನೆತನದ ಹೆಸರಾಗಿ ಬಳಕೆಗೊಂಡಿದ್ದಿತೆಂದೂ ಮತ್ತು ವಂಶಾನುಕ್ರಮದಿಂದ ಇದೇ ಮನೆತನದವರಾದ ನಂದರಾಜಸಂತತಿಯ ಅರಸರು 'ಸೇನ' ಎಂಬ ಪದದಿಂದ ಅಂತ್ಯಗೊಳ್ಳುವ ಹೆಸರುಗಳನ್ನು ಹೊಂದಿದ್ದರೆಂದೂ ಹಿಂದೆ ವಿವರಿಸಲಾಗಿದೆ. ಇದರಿಂದ ಗಂಧರ್ವಸೇನನೂ ಪರಂಪರಾಗತವಾದ ಅವಂತೀರಾಜಮನೆತನದ ಅರಸನಾಗಿರಬಹುದೇ ? ಎಂಬ ಪರಾಮರ್ಶೆಗವಕಾಶವಾಗುವುದು.

ಕರ್ನಾಟಕಪ್ರದೇಶಗಳಲ್ಲಿ ಮಹಾಮಂಡಲೇಶ್ವರರೆನಿಸಿ ಕ್ರಿ. ಶ. ೧೨ ಮತ್ತು ೧೩ ನೇ ಶತಮಾನಕಾಲದಲ್ಲಿ ರಾಜ್ಯವಾಳುತ್ತಿದ್ದ ಗುತ್ತಕುಲದ ಅರಸರ ಶಾಸನಗಳ ಹೇಳಿಕೆಯಾಧಾರದಿಂದ ವಿಕ್ರಮಾದಿತ್ಯನು ಚಂದ್ರಗುಪ್ತನ ವಂಶಜನಾಗಿರುವನೆಂದು ಸೂಚಿತವಾಗುವುದಾಗಿ ಸನ್ಮಾನ್ಯ ರೈಸ್‌ರವರು ಹೇಳಿದ್ದಾರೆ. [ಶ್ರವಣಬೆಳಗುಳದ ಶಾಸನಗಳು; ಮುನ್ನುಡಿ–ಪು. ಸಂ. ೧೩-೧೪] ಗುತ್ತಕುಲದ ಅರಸರ ಈ ಶಾಸನಗಳು ಅರ್ವಾಚೀನ ಕಾಲದವುಗಳಾಗಿವೆಯೆಂಬ ಕಾರಣದಿಂದ ಚಂದ್ರಗುಪ್ತ ಮತ್ತು ವಿಕ್ರಮಾದಿತ್ಯರ ಅನ್ವಯಾನುಕ್ರಮದ ಬಗ್ಗೆ ಇವುಗಳ ಹೇಳಿಕೆಗಳನ್ನು ಉಪೇಕ್ಷಿಸುವಂತಿಲ್ಲ. 'ಪಾಟಲೀಪುತ್ರ ಪುರವರಾಧೀಶ್ವರ' ಮತ್ತು 'ಉಜ್ಜಯಿನೀ ಪುರವರಾಧೀಶ್ವರ' ಎಂಬ ಬಿರುದಾಂಕಿತರಾದ ಗುತ್ತಕುಲದ ಅರಸರು ಪರಂಪರಾಗತವಾದ ಐತಿಹ್ಯದಾಧಾರವಿಲ್ಲದೆ ತಮ್ಮನ್ನು ಚಂದ್ರಗುಪ್ತಮಹಾರಾಜಾಧಿರಾಜನ ಅನ್ವಯಕ್ರಮದವನಾದ ವಿಕ್ರಮಾದಿತ್ಯನ ವಂಶಸಂಜಾತರನ್ನಾಗಿ ಹೇಳಿಕೊಂಡಿರಲಾರರು. ಇದರಂತೆ ವಿಕ್ರಮಾದಿತ್ಯನು ನಂದಚಂದ್ರಗುಪ್ತನ ಹಾಗೂ ಮೌರ್ಯಚಂದ್ರಗುಪ್ತನ ವಂಶಸಂಜಾತನಾಗಿರುವನೆಂದು ಅಧಿಗತವಾಗುವುದು. ಆದ್ದರಿಂದ ವಿಕ್ರಮಾದಿತ್ಯನ ತಂದೆಯಾದ ಗಂಧರ್ವಸೇನನಿಗೆ ಅವಂತೀರಾಜ್ಯದ ಪ್ರಭುತ್ವವು ಪಿತೃಪರಂಪರೆಯನುಕ್ರಮದಿಂದ ಲಬ್ಧವಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ನಂದಚಂದ್ರಗುಪ್ತನು ಶ್ರು. ಕೇ. ಭದ್ರಬಾಹು ಆಚಾ

ರ್ಯರ ಬಳಿ ಮುನಿದೀಕ್ಷೆಪಡೆಯುವ ಮುನ್ನ ತನ್ನ ಮಗನಾದ ಸಿಂಹಸೇನನಿಗೆ ರಾಜ್ಯಾಭಿಷೇಕಮಾಡಿದುದಾಗಿ ವಡ್ಡಾರಾಧನೆಯ ಭದ್ರಬಾಹು ಭಟ್ಟಾರಕರ ಕಥಾಯತ್ತವಾದ ಐತಿಹ್ಯವಿರುವುದು ವಿದಿತವಿದೆ. ಆದರೆ ನಂದಚಂದ್ರಗುಪ್ತನ ಮುನಿದೀಕ್ಷಾ ಪ್ರಸಂಗದ ಸಮಕಾಲೀನವಾಗಿ ಮಹಾಪದ್ಮನಂದನು ಮಗಧರಾಜ್ಯದ ಸಾರ್ವಭೌಮನೆನಿಸಿ ಅಧಿಕಾರಾರೂಢನಾಗಿರುವನಾದ್ದರಿಂದ ಸಿಂಹಸೇನನು ಪರಿಸ್ಥಿತಿಗನುಗುಣವಾಗಿ ಮಹಾಪದ್ಮನ ಸಾರ್ವಭೌಮತ್ವದ ಅಧಿಕಾರವನ್ನೊಪ್ಪಿ ವಂಶಾನುಕ್ರಮಲಬ್ಧವಾದ ಉಜ್ಜಯಿನೀ ಪ್ರಭುತ್ವವನ್ನುಳಿಸಿಕೊಂಡು ಸಾಮಂತರಾಜನಾಗಿ ಬದುಕುಳಿದನೇ? ಅಥವಾ ಕ್ಷತ್ರಿಯಾಂತಕನಾದ ಮಹಾಪದ್ಮನಿಂದ ಹತವಾದ ಕ್ಷತ್ರಿಯಕೋಟಿಯಲ್ಲಿ ಇವನೂ ಒಬ್ಬನಾಗಿರುವನೇ ? ಎಂಬುದನ್ನು ನಿಸ್ಸಂದಿಗ್ಧವಾಗಿ ಸ್ಪಷ್ಟಗೊಳಿಸುವ ವಿಶ್ವಸನೀಯವಾದ ಐತಿಹ್ಯಾಧಾರಗಳಿರುವುದಿಲ್ಲ. ದೇವಚಂದ್ರನ ರಾಜಾವಲೀ ಕಥೆಯಲ್ಲಿ ಸಿಂಹಸೇನನ ಸುತನಾದ ಭಾಸ್ಕರನು ಶ್ರವಣಬೆಳಗುಳದ ಚಂದ್ರಗಿರಿಗೆ ಸೈನ್ಯಸಮೇತನಾಗಿ ಬಂದು ಭದ್ರಬಾಹುಸ್ವಾಮಿಗಳ ನಿಷಧಿಸ್ಥಾನವನ್ನರ್ಚಿಸಿ, ತನ್ನ ಅಜ್ಜನಾದ ಚಂದ್ರಗುಪ್ತಗುರುವಿಗೆ ವಂದನೆಮಾಡಿ, ಬೆಟ್ಟದ ಮೇಲೆ ಚೈತ್ಯಾಲಯಗಳನ್ನು ಕಟ್ಟಿಸಿ, ಬೆಳಗುಳಗ್ರಾಮವನ್ನು ರಚಿಸಿದನೆಂದು ಹೇಳಿರುವುದಾಗಿ ಸನ್ಮಾನ್ಯ ರೈಸ್‌ರವರು ಉಲ್ಲೇಖಿಸಿದ್ದಾರೆ.[1] ದೇವಚಂದ್ರನ ಈ ಹೇಳಿಕೆಯು ಐತಿಹ್ಯಾಂತರದಾಧಾರದಿಂದ ಸಮರ್ಥಿವಾದಲ್ಲದೆ ತಥ್ಯನಿಷ್ಠವಾಗಿದೆಯೆಂದು ಗ್ರಾಹ್ಯವಾಗುವುದಿಲ್ಲ. ಇಂತಿದ್ದರೂ ಈ ಹೇಳಿಕೆಯನ್ನಾಧರಿಸಿ, ಸಿಂಹಸೇನ ಮತ್ತು ಅವನ ಸಂತತಿಯ ಅರಸರು ಮಗಧರಾಜ್ಯದ ಸಾಮಂತರಾಜರೆನಿಸಿ ವಂಶಾನುಕ್ರಮಾಗತವಾದ ಉಜ್ಜಯಿನೀ ಪ್ರಭುತ್ವದಲ್ಲಿ ಮುಂದುವರಿದಿರಬಹುದೆಂದು ತರ್ಕಿಸಬಹುದು. ಆದರೆ ಬಿಂದುಸಾರನ ರಾಜ್ಯಭಾರಕಾಲದಲ್ಲಿ ಅಶೋಕನು ಉಜ್ಜಯಿನಿಯಲ್ಲಿ ರಾಜಪ್ರತಿನಿಧಿಯಾಗಿದ್ದನೆಂಬ ಬೌದ್ಧಆಮ್ನಾಯದ ಐತಿಹ್ಯವಿದೆಯಾದುದರಿಂದ ಕನಿಷ್ಠಪಕ್ಷ ಈ ಸಮಯದಲ್ಲಿ ಸಿಂಹಸೇನನ ಸಂತತಿಯ ರಾಜನು ಉಜ್ಜಯಿನಿಯ ಪ್ರಭುತ್ವದಲ್ಲಿ ಅಧಿಷ್ಠಿತನಾಗಿರಲಿಲ್ಲೆಂದು ಗ್ರಹಿಸಲವಕಾಶವಾಗುವುದು. ಆದರೆ ಬೌದ್ಧ ಆಮ್ನಾಯದ ಈ ಐತಿಹ್ಯವೂ ಸಂಶಯಾತೀತವಾಗಿದೆಯೆಂದು ಹೇಳಲಾಗುವುದಿಲ್ಲ. ಮೌರ್ಯ ಅಶೋಕಸಾಮ್ರಾಟನನ್ನಧಿಕರಿಸಿದ ಬೌದ್ಧ ಆಮ್ನಾಯದ ಐತಿಹ್ಯದಲ್ಲಿ ಕಾಲಾಶೋಕನ ಜೀವಿತಸಂಬಂಧಿಐತಿಹ್ಯಾಂಶಗಳು ಸಂಮಿಶ್ರವಾಗಿವೆಯೆಂಬುದು ವಿದಿತವಿದೆ. ಕಾಲಾಶೋಕನ ರಾಜ್ಯಭಾರವು ಆರಂಭವಾದ ಅನಂತರದ ಹಲವು ವರ್ಷಗಳ ಪರ್ಯಂತ ಉಜ್ಜಯಿನಿಯು ಇವನ ರಾಜ್ಯಭಾರದ ಕೇಂದ್ರವಾಗಿದ್ದಿತೆಂದೂ ತದನಂತರ ಇವನು ಪಾಟಲೀಪುತ್ರನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನೆಂದೂ ಹಿಂದೆ ವಿಶದೀಕರಿಸಲಾಗಿದೆ. ಇದರಿಂದ ಕಾಲಾಶೋಕನ ಜೀವಿತಸಂಬಂಧಿಯಾದ ಈ ಐತಿಹ್ಯವು ಅಶೋಕಸಾಮ್ರಾಟನ ಐತಿಹ್ಯ

---

1 ಎಪಿಗ್ರಾಫಿಕ ಕರ್ನಾಟಕ ಗ್ರಂ. ಭಾ. ೨, ಪು. ಸಂ. ೫.

ವಾಗಿ ಪರಿವರ್ತನೆಹೊಂದಿರಬಹುದಾದ ಸಂಭವವಿದೆಯೆಂದು ಗ್ರಹಿಸಲವಕಾಶವಾಗು ವುದು. ಬಿಂದುಸಾರನ ತರುವಾಯ ಅಶೋಕಸಾಮ್ರಾಟನ ಭ್ರಾತೃವೊಬ್ಬನು (ಸುಮ ನನು?) ನಾಲ್ಕುವರ್ಷಕಾಲ ರಾಜ್ಯಭಾರಮಾಡಿರುವನೆಂಬುದು ಸ್ಪಷ್ಟವಿದೆ. ಅಶೋ ಕನು ತನ್ನ ಭ್ರಾತೃವನ್ನು ಪದಚ್ಯುತನನ್ನಾಗಿ ಮಾಡಲು ಸಮರ್ಥವಾದ ಸೈನ್ಯದ ಬೆಂಬಲಪಡೆದಿದ್ದರಬೇಕೆಂಬುದು ಸಹಜವೆನಿಸುವುದು. ಮಗಧಸಾಮ್ರಾಜ್ಯದ ವಿರುದ್ಧ ತಕ್ಷಶಿಲೆಯಲ್ಲಿ ನಡೆದ ದಂಗೆಯನ್ನಡಗಿಸಲೋಸುಗ ಸೈನ್ಯಸಮೇತನಾಗಿ ಹೋದ ಅಶೋ ಕನನ್ನು ತಕ್ಷಶಿಲೆಯ ಪೌರರು ಯಾವ ವಿರೋಧವೂ ಇಲ್ಲದೆ ಸನ್ಮಾನಿಸಿದರೆಂಬ ಐತಿಹ್ಯ ವಿದೆ. ಪ್ರಾಯಶಃ ಇದೇ ಸಮಯದಲ್ಲಿ ಬಿಂದುಸಾರನು ಸ್ವರ್ಗಸ್ಥನಾದನಾಗಿ ಅಶೋ ಕನ ಭ್ರಾತೃವು ಮಗಧರಾಜ್ಯದ ಸಾಮ್ರಾಟನಾಗಿ ಅಭಿಷಿಕ್ತನಾಗಿದ್ದಾನೆ. ತಕ್ಷಶಿಲೆ ಯನ್ನು ಸ್ವಾಧೀನಗೊಳಿಸಿಕೊಳ್ಳಲು ಬೆಂಬಲವಾಗಿದ್ದ ಸೈನ್ಯದ ನೆರವಿನೊಡನೆ ಪೂರ್ವ ಸಿದ್ಧತೆಗಳನ್ನು ನಡೆಸಿ ಅಶೋಕನು ತನ್ನ ಭ್ರಾತೃವನ್ನು ಪದಚ್ಯುತನನ್ನಾಗಿ ಮಾಡಿ ಮಗಧರಾಜ್ಯದ ಸಾಮ್ರಾಟನಾಗಿ ಅಭಿಷಿಕ್ತನಾಗಿರುವನೆಂಬುದು ಸಹಜವೆನಿಸುವುದು. ಇದರಂತೆ ಅಶೋಕಸಾಮ್ರಾಟನು ತನ್ನ ರಾಜ್ಯಾಭಿಷೇಕದ ಮುನ್ನ ಉಜ್ಜಯಿನಿಯಲ್ಲಿ ರಾಜಪ್ರತಿನಿಧಿಯಾಗಿದ್ದನೆಂಬ ಐತಿಹ್ಯಾಂಶವು ಕಾಲಾಶೋಕನ ಜೀವಿತೈತಿಹ್ಯದ ಪರಿ ವರ್ತಿತ ಐತಿಹ್ಯಾಂಶವಾಗಿರುವುದೆಂದು ಸಂಭಾವಿತವಾಗುವುದಲ್ಲದೆ ಬಿಂದುಸಾರನ ರಾಜ್ಯಭಾರಕಾಲದಲ್ಲಿಯೂ ಸಿಂಹಸೇನನ ಸಂತತಿಯ ಅರಸರು ಉಜ್ಜಯಿನಿಯ ಪ್ರಭು ತ್ವದಲ್ಲಿ ಅಧಿಷ್ಠಿತರಾಗಿದ್ದಿರಬೇಕೆಂದು ಗ್ರಹಿಸಲವಕಾಶವಾಗುವುದು. ಈ ರೀತಿಯಾಗಿ ಸಿಂಹಸೇನನ ರಾಜ್ಯಾಭಿಷೇಕಸಮಯ ಮತ್ತು ಗಂಧರ್ವಸೇನನ ಸ್ವತಂತ್ರ ರಾಜ್ಯ ಭಾರಾರಂಭಸಮಯಗಳ ಮಧ್ಯವರ್ತಿಕಾಲದಲ್ಲಿ ಉಜ್ಜಯಿನಿಗೆ ಸಂಬಂಧಿಸಿದ ರಾಜ ಕೀಯ ಪ್ರಸಂಗವು ಅಸ್ಪಷ್ಟವಿದೆಯೆಂಬುದು ನಿಜವಾದರೂ ಗಂಧರ್ವಸೇನನು ಪರಂಪ ರಾಗತವಾದ ಅವಂತೀರಾಜಮನೆತನದ ಅರಸನಾಗಿರುವನೆಂಬುದವಲ್ಲಿ ಸಂಶಯವಿಲ್ಲ.

ಪೂರ್ವೋಲ್ಲಿಖಿತವಾದ ಗಾಹೆಗಳಲ್ಲಿ ಸಂಗೃಹೀತವಾಗಿರುವ ವಿಕ್ರಮಾದಿತ್ಯನ ಜೀವಿತದ ಘಟನೆಗಳು ಐತಿಹಾಸಿಕತಥ್ಯನಿಷ್ಠವಾಗಿವೆಯೆಂದು ಹಿಂದಿನ ಪರಾಮರ್ಶೆ ಯಿಂದ ವ್ಯಕ್ತಪಟ್ಟಿದೆ. ವಿಕ್ರಮಾದಿತ್ಯನು ರಾಜಮನೆತನವೊಂದರಲ್ಲಿ ಜನಿಸಿರುವ ನೆಂದು ಇವನ ಜೀವಿತಸಂಬಂಧಿಯಾದ ಎಲ್ಲಾ ಕಥಾಮೂಲಗಳ ಐತಿಹ್ಯದಿಂದಲೂ ಖಚಿತಪಡುವುದು. ಪೂರ್ವೋಲ್ಲಿಖಿತವಾದ ಗಾಹೆಗಳಲ್ಲಿ ಇವನ ವಯೋಮಾನದ ಮೊದಲ ಎಂಟುವರ್ಷಗಳ ಬಾಲಲೀಲೆಯನ್ನೂ ತದನಂತರ ೧೬ ವರ್ಷಕಾಲದ ದೇಶ ಭ್ರಮಣೆಯನ್ನೂ ಹೇಳಲಾಗಿದೆ. ಆದುದರಿಂದ ಇವನ ಎಂಟನೇ ವರ್ಷ ವಯೋ ಮಾನದ ಸಮಯದಲ್ಲಿ ಯಾವುದೋ ಒಂದು ದುರ್ಘಟನೆ ನಡೆದಿರಬೇಕೆಂದು ಗುರುತಿಸ ಲವಕಾಶವಾಗುವುದು. ಹಿಂದೆ ವಿಶದೀಕರಿಸಲಾಗಿರುವಂತೆ ಇವನ ಎಂಟನೇ ವರ್ಷ ವಯೋಮಾನದ ಸಮಯಕ್ಕೆ ಸರಿಯಾಗಿ ಗರ್ಧಭಿಲ್ಲನ ರಾಜ್ಯಭಾರವು ಆರಂಭವಾಗಿದೆ ಯಾಗಿ ಈ ಗರ್ದಭಿಲ್ಲನಿಂದಾದ ಆಕ್ರಮಣದಲ್ಲಿ ವಿಕ್ರಮನ ತಂದೆಯಾದ ಗಂಧರ್ವ

ಸೇನನು ಪರಾಜಿತನಾಗಿರುವನೆಂದೂ ಮತ್ತು ಇದರ ಪರಿಣಾಮವಾಗಿ ವಿಕ್ರಮನಿಗೆ ದೇಶಾಟನೆಮಾಡಬೇಕಾದ ಪರಿಸ್ಥಿತಿಯೊದಗಿದೆಯೆಂದೂ ಪರಿಭಾವಿಸಲವಕಾಶವಾಗುವುದು. ಗರ್ದಭಿಲ್ಲನು ಭಿಲ್ಲಜನಾಂಗದವನಾಗಿದ್ದಲ್ಲಿ ಆಶ್ಚರಿಯಿಲ್ಲ. ವಣಿಗ್ವೃತ್ತಿನಿರತರಾಗಿದ್ದವರು ವ್ಯಾಪಾರನಿಮಿತ್ತವಾಗಿ ಕಾಡುಪ್ರದೇಶಗಳಲ್ಲಿ ಪ್ರಯಾಣಮಾಡಬೇಕಾದ ಸಂದರ್ಭಗಳಲ್ಲಿ ಭಿಲ್ಲಜನಾಂಗದವರ ಆಕ್ರಮಣಕ್ಕೆ ಗುರಿಯಾದ ಪ್ರಸಂಗಗಳನ್ನು ಚಿತ್ರಿಸುವ ಅನೇಕ ಕಥೆಗಳಿವೆ. ಇದರಿಂದ ಭಿಲ್ಲಜನಾಂಗದವರೂ ಸುಸಂಘಟಿತರೀತಿಯಿಂದ ಆಕ್ರಮಣ ನಡೆಸಿ, ಜಯಶೀಲರಾಗಲು ಸಮರ್ಥರಿದ್ದರೆಂದು ಸ್ಪಷ್ಟವಾಗುವುದು. ಆದ್ದರಿಂದ ಪ್ರಬಲ ಭಿಲ್ಲಾಳುಗಳ ನಾಯಕನಾಗಿದ್ದ ಗರ್ದಭಿಲ್ಲನು ಗಂಧರ್ವಸೇನನನ್ನು ಪರಾಜಯಗೊಳಿಸಿ, ಉಜ್ಜಯಿನಿಯನ್ನು ಸ್ವಾಧೀನಗೊಳಿಸಿಕೊಂಡಿರಬಹುದೆಂದು ಭಾವಿಸಲವಕಾಶವಿದೆ.

ಶಕರಾಜನು ಗರ್ದಭಿಲ್ಲನನ್ನು ಪರಾಜಯಗೊಳಿಸಿ ಉಜ್ಜಯಿನಿಯನ್ನು ಸ್ವಾಧೀನಪಡಿಸಿಕೊಂಡ ಸಮಯಕ್ಕಾಗಲೇ ಜವ್ವನದ ವಯೋಮಾನದವನಾಗಿದ್ದ ವಿಕ್ರಮಾದಿತ್ಯನು ಪೈತೃಕವಾದ ತನ್ನ ರಾಜ್ಯವನ್ನು ಪುನಃ ಸ್ವಾಧೀನಗೊಳಿಸಿಕೊಳ್ಳಲು ಯತ್ನೋನ್ಮುಖನಾಗಿದ್ದಿರಬೇಕು. ಗರ್ದಭಿಲ್ಲನ ಉಚ್ಚಾಟನೆಗಾಗಿ ನಡೆದ ಇವನ ಪ್ರಯತ್ನವು ಶಕರಾಜನ ಉಚ್ಚಾಟನೆಯಲ್ಲಿ ಪರ್ಯವಸಾನಗೊಂಡಿದೆಯೆಂದು ಕಂಡುಬರುತ್ತದೆ. ಶ್ರೀ ವೀರನಿರ್ವಾಣಸಮಯಸಂಬಂಧಿ ಐತಿಹ್ಯದಲ್ಲಿ ಶುಂಗಮನೆತನದ ಮೂವರು ಅರಸರ ರಾಜ್ಯಭಾರದ ತರುವಾಯ ಅವಂತಿಯ ಸ್ವತಂತ್ರರಾಜ್ಯಭಾರದಲ್ಲಿ ಪ್ರತಿಷ್ಠಿತನಾದ ವ್ಯಕ್ತಿಯನ್ನು ಹೆಸರಿಸುವಲ್ಲಿ ಮತಭೇದಗಳಿವೆ. ತಿತ್ಥೋಗಾಲೀಪಇನ್ನಯ ಮತ್ತು ತೀರ್ಥೋದ್ಧಾರ ಪ್ರಕರಣಗಳಲ್ಲಿ ಇವನನ್ನು ಅನುಕ್ರಮವಾಗಿ ನಹಸೇಣ (=ನಭಸೇನ) ಮತ್ತು ನರವಹಣ (=ನರವಾಹನ) ಎಂದು ಹೆಸರಿಸಲಾಗಿದೆ. ತಿಲೋಯಪಣ್ಣತ್ತಿಯಲ್ಲಿ ಗಂಧವ್ವರ ೧೦೦ ವರ್ಷಗಳ ರಾಜ್ಯಭಾರಾನಂತರ ನರವಾಹನನು ೪೦ ವರ್ಷ ರಾಜ್ಯಭಾರಮಾಡಿದನೆಂಬ ಹೇಳಿಕೆಯಿದೆ. ಕಸಾಯಪಾಹುಡದ ಪ್ರಸ್ತಾವನಾಕಾರರು ಈ ವಿಷಯವನ್ನು ಪರಿಶೀಲಿಸಿ ಗರ್ದಭಿಲ್ಲನ ತರುವಾಯವೇ ನರವಾಹನನು (ಅಥವಾ ನಹಪಾನನು) ರಾಜ್ಯಭಾರಾಧಿಷ್ಠಿತನಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[1] ಇದರಂತೆ 'ನರವಾಹನ' ಅಥವಾ 'ನಹಾಪಾನ' ಎಂಬುದು ಶಕರಾಜನ ಹೆಸರಾಗಿದ್ದಿರಬೇಕೆಂದು ಅಭಿಪ್ರಾಯವಾಗುವುದು.

ವಿಕ್ರಮನು ೧೬ ವರ್ಷಕಾಲ ದೇಶಭ್ರಮಣೆಮಾಡಿ, ಮುಂದೆ ೫೬ ವರ್ಷಕಾಲ ರಾಜ್ಯಭಾರಮಾಡಿದನೆಂದೂ (ಈ ರಾಜ್ಯಭಾರದ ಅವಧಿಯಲ್ಲಿ) ೪೦ ವರ್ಷಕಾಲ ಮಿಥ್ಯೋಪದೇಶಯುಕ್ತನಾಗಿದ್ದು ಅಂತಿಮವಾಗಿ ೧೬ ವರ್ಷಕಾಲ ಜಿನಧರ್ಮವನ್ನು

---

1 ಕಸಾಯಪಾಹುಡಂ—ಪ್ರಥಮೋಧಿಕಾರಃ—ಪೆಜ್ಜದೋಸವಿಹತ್ತೀ—ಪ್ರಸ್ತಾವನಾ—ಪು. ಸಂ. ೫೨.

ಪಾಲಿಸಿ ಸ್ವರ್ಗಭಾಗಿಯಾದನೆಂದು ಪೂರ್ವೋಲ್ಲಿಖಿತ ಗಾಹೆಗಳಲ್ಲಿ ಹೇಳಲಾಗಿದೆ. ವಿಕ್ರಮನು ಜಿನಧರ್ಮಾವಲಂಬಿಯಾದ ಪ್ರಸಂಗವು ಜೈನಆಮ್ನಾಯದ ಇತರ ಕೃತಿಗಳಲ್ಲಿ ಕಥಾರೂಪತಳೆದು ಉಳಿದುಬಂದಿದೆ. ಇವನ ರಾಜ್ಯಭಾರವು (ವೀ. ನಿ. ಪ. ೫೫೦ ನೇ ವರ್ಷ=) ಕ್ರಿ. ಶ. ೨೨ ರಲ್ಲಿ ಕೊನೆಗೊಂಡಿರುವುದೆಂದು ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟಿದೆ.

ವಿಕ್ರಮಾದಿತ್ಯನ ತರುವಾಯ ಧಮ್ಮಾಇಚ್ಚ (=ಧರ್ಮಾದಿತ್ಯ?), ಗಾಇಲ ಮತ್ತು ನಾಹಡರು ಅನುಕ್ರಮವಾಗಿ ೪೦, ೨೫ ಮತ್ತು ೮ ವರ್ಷಕಾಲ ರಾಜ್ಯಭಾರ ಮಾಡಿದರೆಂದೂ ಮತ್ತು ವಿಕ್ರಮನ ಕಾಲದಿಂದ (ವೀ. ನಿ. ಪ. ೪೭೦ ರಿಂದ) ಮುಂದೆ ೧೩೫ ವರ್ಷಗಳ ತರುವಾಯ ಶಾಕರ ವತ್ಸರವು ಪುನಃ ಸಂಜಾತವಾಯಿತೆಂದೂ ಈ ಮುಂದಿನ ಎರಡು ಗಾಹೆಗಳಿಂದ ಸೂಚಿತವಾಗುವುದು.

೧. ಸುನ್ನಮುಣಿವೇಯಜುತ್ತಾ
ಜಿಣಕಾಲಾ ವಿಕ್ಕಮೋ ವರಿಸ ಸಟ್ಠೀ।
ಧಮ್ಮಾಇಚ್ಚೋಚಾಲೀಸ
ಗಾಇಲಪಣವೀಸ ನಾಹಡೇ ಅಟ್ಠ॥

೨. ಇಕ್ಕಂಮಿ ವಾಸಸಏ
ಗಯಂಮಿ ಪಣತೀಸವಚ್ಚರ ಸದಿಏ।
ವಿಕ್ಕಮಕಾಲಾಉ ಸಾಗಾ-
ಣ ವಚ್ಛರೋ ಪುಣವಿ ಸಂಜಾಓ॥

[ಪೂ. ಸೂ. ತಪಾಗಚ್ಛ ಪಟ್ಟಾವಲಿ]

ಮೇಲ್ಕಂಡ ೧ ನೇ ಗಾಹೆಯಲ್ಲಿ, ವಿಕ್ರಮಾದಿತ್ಯನ ಅನುಕ್ರಮದಲ್ಲಿ ಹೆಸರಿಸಲಾಗಿರುವ ಧರ್ಮಾದಿತ್ಯ, ಗಾಇಲ ಮತ್ತು ನಾಹಡರು ವಿಕ್ರಮಾದಿತ್ಯನ ಸಂತತಿಯ ಅರಸರಾಗಿರುವರೆಂದು ಗ್ರಹಿಸಬೇಕಾಗುವುದು. ಇಂತೆಯೇ ಈ ಗಾಹೆಯಿಂದ ಸೂಚಿತವಾಗಿರುವಂತೆ, ವಿಕ್ರಮಾದಿತ್ಯನ ರಾಜ್ಯಭಾರವು ವೀ. ನಿ. ಪ. ೪೭೦ ನೇ ವರ್ಷದಲ್ಲಿ ಆರಂಭವಾಗಿದೆಯೆಂಬ ಗಣನೆಯನುಗುಣವಾಗಿ ವೀ. ನಿ. ಪ. (೪೭೦+೬೦+೪೦+೨೫+೮=) ೬೦೩ ರಲ್ಲಿ ಇವನ ವಂಶಜರ ರಾಜ್ಯಭಾರವು ಪರ್ಯವಸಾನಹೊಂದಿರುವುದೆಂದು ಪರಿಗಣಿತವಾಗುವುದು. ಮೇಲ್ಕಂಡ ೨ ನೇ ಗಾಹೆಯಲ್ಲಿ, 'ವಿಕ್ರಮನ ಕಾಲದಿಂದ ೧೩೫ ವರ್ಷಗಳು ಗತಿಸಿರಲು ಶಕರ ಸಂವತ್ಸರವು ಪುನಃ ಮೂಡಿತು' ಎಂದು ಹೇಳಲಾಗಿದ್ದು ಈ ಶಕಕಾಲವು ವೀ. ನಿ. ಪ. ೬೦೫ ವರ್ಷಗಳ ತರುವಾಯದಲ್ಲಿ ಆರಂಭವಾದ ಶಾಲಿವಾಹನಶಕೆಯಾಗಿರುವುದೆಂಬುದರಲ್ಲಿ ಸಂಶಯವಿಲ್ಲ. ವಿಕ್ರಮಾದಿತ್ಯನ ವಂಶಜರ ರಾಜ್ಯಭಾರವು, ಮೊದಲ ಗಾಹೆಯ ಹೇಳಿಕೆಯಂತೆ, ವೀ. ನಿ. ಪ.

೭೦೩ ರಲ್ಲಿ ಅಂತ್ಯಗೊಂಡಿರುವುದಾದ್ದರಿಂದ ಈ ಸಮಯದಿಂದ ೨ ವರ್ಷಗಳ ತರುವಾಯದಲ್ಲಿ ಶಾಲಿವಾಹನಶಕೆಯು ಆರಂಭವಾಗಿರುವುದೆಂದು ಪರಿಗಣಿತವಾದಂತಾಗುವುದು. ಆದರೆ ೧ ನೇ ಗಾಹೆಯ ಐತಿಹ್ಯವು ತಥ್ಯನಿಷ್ಠವಾಗಿರುವುದೇ ? ಎಂಬ ಪ್ರಶ್ನೆಗವಕಾಶವಿದೆ. ವೀ. ನಿ. ಪ. ೫೮೪ ರಲ್ಲಿ (ಅಥವಾ ಮತ್ತೊಂದು ಐತಿಹ್ಯದನುಗುಣವಾಗಿ ವೀ. ನಿ. ಪ. ೬೨೦ ರಲ್ಲಿ) ಸ್ವರ್ಗಸ್ಥರಾದ ವಜ್ರಸೇನ ಸೂರಿಗಳ ತರುವಾಯ ಚಂದ್ರಸೇನಸೂರಿಗಳೂ, ಇವರ ಅನಂತರ ಸಾಮಂತಭದ್ರಸೂರಿಗಳೂ ಪಟ್ಟಸ್ಥರಾಗಿದ್ದು ತದನಂತರ ಪಟ್ಟಸ್ಥರಾದ ವೃದ್ಧದೇವಸೂರಿಗಳು ನಾಹಡನ ಮಂತ್ರಿಯ ಗುರುಗಳಾಗಿದ್ದರೆಂದೂ, ಈ ನಾಹಡನ ಮಂತ್ರಿಯಿಂದ ನಿರ್ಮಾಪಿತವಾದ ಪ್ರಾಸಾದದಲ್ಲಿ ಶ್ರೀ ಮಹಾವೀರಜಿನಬಿಂಬವನ್ನು ವೃದ್ಧದೇವಸೂರಿಗಳು ಪ್ರತಿಷ್ಠಾಪನೆಮಾಡಿದುದಾಗಿಯೂ ಶ್ವೇತಾಂಬರ ಆಮ್ನಾಯದ ಐತಿಹ್ಯವಿದೆ. ಇಷ್ಟಲ್ಲದೆ ವೀ. ನಿ. ಪ. ೮೮೨ ರಲ್ಲಿ ಯತಿಗಳು ಚೈತ್ಯಗಳಲ್ಲಿ ವಾಸಿಸುವ ಪ್ರವೃತ್ತಿಯುಳ್ಳವರಾದರೆಂದೂ ಈ ಚೈತ್ಯವಾಸಿಗಳಲ್ಲಿ ವೃದ್ಧದೇವಸೂರಿಗಳು ಮೊದಲನೆಯವರಾಗಿರುವರೆಂದೂ ಶ್ವೇತಾಂಬರ ಆಮ್ನಾಯದ ಕಥನವಿದೆ.[1] ಇದರಿಂದ ವೀ. ನಿ. ಪ. ೮೮೨ ನೇ ವರ್ಷದ ಸಮಯದಲ್ಲಿ ಕೋರಂಟಕದಲ್ಲಿ ರಾಜ್ಯವಾಳುತ್ತಿದ್ದ ನಾಹಡನ ಐತಿಹ್ಯವು ಮೇಲ್ಕಂಡ ೧ ನೇ ಗಾಹೆಯಲ್ಲಿ ವಿಕ್ರಮಾದಿತ್ಯನ ಪ್ರಪೌತ್ರನ ಐತಿಹ್ಯವಾಗಿ ಸಮಾವಿಷ್ಟವಾಗಿರಬಹುದೇ ? ಎಂಬ ಸಂದೇಹಕ್ಕೆಡೆಯಾಗುವುದು. ಆದ್ದರಿಂದ ಮೇಲ್ಕಂಡ ೧ ನೇ ಗಾಹೆಯ ಐತಿಹ್ಯದ ತಥ್ಯವು ಪ್ರಶ್ನವಶವಾಗುವುದು.

ವಿಕ್ರಮಾದಿತ್ಯನು ಶಾಲಿವಾಹನನಿಂದ ಪರಾಜಯವನ್ನನುಭವಿಸಿದನೆಂಬ ಅಭಿಪ್ರಾಯದ ಕಥೆಯನ್ನು ಸನ್ಮಾನ್ಯ ರಾಜಬಲಿಪಾಂಡೆಯವರು ಉಲ್ಲೇಖಿಸಿದ್ದಾರೆ.[2] ಆದರೆ ವಿಕ್ರಮಾದಿತ್ಯನ ರಾಜ್ಯಭಾರವು ಕ್ರಿ. ಶ. ೨೨ ರಲ್ಲಿ ಕೊನೆಗೊಂಡಿದ್ದು ಶಾಲಿವಾಹನನು ತನ್ನ ೧೮ ನೇ ವರ್ಷದ ವಯೋಮಾನದಲ್ಲಿ ಕ್ರಿ. ಶ. ೭೯ ನೇ ವರ್ಷದ ಏಪ್ರಿಲ್ ಮಾಹೆಯ ಆರಂಭ ಸಮಯದಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಸೂಚನೆಗೊಡುವ ಐತಿಹ್ಯಾಧಾರವಿದೆಯಾದುದರಿಂದ ವಿಕ್ರಮಾದಿತ್ಯನು ಶಾಲಿವಾಹನನಿಂದ ಪರಾಜಯವನ್ನನುಭವಿಸಿದನೆಂಬ ಐತಿಹ್ಯವು ಪರಿಭ್ರಮಾಯತ್ತವಾದುದಾಗಿದೆಯೆಂದು ವ್ಯಕ್ತವಾಗುವುದು. ಪ್ರಾಯಶಃ ವಿಕ್ರಮಾದಿತ್ಯನ ವಂಶಜನಾದ ಅರಸನನ್ನು ಶಾಲಿವಾಹನನು ಪರಾಜಯಗೊಳಿಸಿದ ಮೂಲ ಐತಿಹ್ಯವು ಪರಿವರ್ತಿತವಾಗಿ ಮೇಲೆ ಹೇಳಿದ ಕಥಾರೂಪವನ್ನು ತಳೆದಿವೆಯೆಂದು ಕಂಡುಬರುತ್ತದೆ. ಇಷ್ಟಲ್ಲದೆ ಶಾಲಿವಾಹನ ಶಕೆಯಾಧಾರದಿಂದ ಕಾಲಗಣನೆಮಾಡಲಾಗಿರುವ ಕೆಲವು ಸಂದರ್ಭಗಳಲ್ಲಿ

---

1 ಪೊ. ಸೂ. ತಪಾಗಚ್ಛ ಪಟ್ಟಾವಲಿ ಮತ್ತು 'ಶ್ರಮಣಭಗವಾನ್ ಮಹಾವೀರ, ಗ್ರಂ. ಭಾ. ೫, ವಿಭಾಗ ೧, ಪು. ಸಂ. ೩೦೨.

2 'ವಿಕ್ರಮಾದಿತ್ಯ ಆಫ್ ಉಜ್ಜಯಿನಿ', ಪು. ಸಂ. ೨೫೨–೨೫೪.

ಶಾಲಿವಾಹನ ಶಕೆಯನ್ನು 'ವಿಕ್ರಮಾಂಕ' ಶಕೆ ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆ ಯಾದುದರಿಂದ ವಿಕ್ರಮಾಂಕ ಎಂಬುದು ಶಾಲಿವಾಹನನ ಬಿರುದಾಗಿದ್ದಿರಬೇಕೆಂದೂ ಮತ್ತು ವಿಕ್ರಮನ ವಂಶಜನನ್ನು ಪರಾಜಯಗೊಳಿಸಿದ ಪ್ರಸಂಗವಶವಾಗಿ ಇವನಿಗೆ ಈ ಬಿರುದುಂಟಾಗಿರಬಹುದೆಂದೂ ತರ್ಕಿಸಲವಕಾಶವಾಗುವುದು. ಇದರಂತೆ ವಿಕ್ರಮಾದಿ ತ್ಯನ ತರುವಾಯ ಅವನ ವಂಶಜರಾದ ಇಬ್ಬರು ಅಥವಾ ಮೂವರು ರಾಜರು ಮಾಲ ವಾಧೀಶರೆನಿಸಿ ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದಿರಬೇಕೆಂದು ಪರಿಭಾವಿಸಲವಕಾಶ ವಾಗುವುದು.

ಶಾಲಿವಾಹನ ಶಕೆ: ವಿಕ್ರಮಾದಿತ್ಯನ ಜೀವಿತಸಂಬಂಧಿಯಾದ ಐತಿಹಾಸಿಕ ಘಟನೆಗಳು ಕಥೆಗಳ ಮುಸುಕಿನಲ್ಲಿ ಮರೆಯಾಗಿರುವಂತೆ ಶಾಲಿವಾಹನನ ಜೀವಿತೈತಿ ಹ್ಯವೂ ಕಥಾಯತ್ತ ಕಲ್ಪನೆಗಳಲ್ಲಿ ವಿಕಲ್ಪಗೊಂಡಿದೆ. ಸದ್ಯ ಉಪಲಬ್ಧವಿರುವ ಕಥೆ ಗಳನ್ನು ಪರಿಶೋಧಿಸಿ ಇವನ ಐತಿಹಾಸಿಕ ಸಂಗತಿಗಳನ್ನು ರೂಪಿಸಲು ಸಾಧ್ಯವಿದೆ. ಕ್ರಿ. ಶ. ೧೫೦ ನೇ ಇಸವಿಯ ಪರಿಸರದಲ್ಲಿ ರಚಿತವಾಗಿದೆಯೆಂದು ನಿರ್ಧರಿಸಲಾಗಿರುವ ರುದ್ರದಾಮನ ಶಾಸನದಲ್ಲಿ ಶಾಲಿವಾಹನ ಶಕೆಯಾಧಾರದಿಂದ ಕಾಲನಿರ್ದೇಶನಮಾಡ ಲಾಗಿದೆಯೆಂದು ಗುರುತಿಸಲಾಗಿದೆ. ಕರ್ನಾಟಕ ಪ್ರದೇಶದ ಶಾಸನಗಳಲ್ಲಿ ಪ್ರಾಯಿಕ ವಾಗಿ ಶಾಲಿವಾಹನ ಶಕೆಯಾಧಾರದಿಂದ ಕಾಲನಿರ್ದೇಶನಮಾಡಲಾಗಿದೆ. 'ಶ್ರೀ ವೀರತೀರ್ಥಂಕರನ ನಿರ್ವಾಣಪಶ್ಚಾತ್ ೬೦೫ ವರ್ಷ ೫ ತಿಂಗಳುಗಳು ಗತಿಸಿರಲು ಶಕ ರಾಜನಾದನು' ಎಂಬ ದಿಗಂಬರ ಆಮ್ನಾಯದ ಪರಂಪರಾಗತ ಐತಿಹ್ಯವಿದೆ.[1] ಹಿಂದೆ ವಿಶದೀಕರಿಸಲಾಗಿರುವಂತೆ ಶ್ರೀ ವೀರತೀರ್ಥಂಕರನು ಕ್ರಿ. ಪೂ. ೫೨೭ ವರ್ಷ ೨ ತಿಂಗಳು ಗಳ ಪರಿಸರದಲ್ಲಿ ನಿರ್ವಾಣಹೊಂದಿರುವನೆಂದು ಸ್ಪಷ್ಟಗೊಂಡಿದೆ. ಆದ್ದರಿಂದ ದಿಗಂ ಬರ ಆಮ್ನಾಯದಲ್ಲಿ ನಿರ್ದೇಶಿತವಾಗಿರುವ ಮೇಲ್ಕಂಡ ಶಕಕಾಲವು (೬೦೫ ವ.೫ ತಿಂ. —೫೨೭ ವ. ೨ ತಿಂ.=) ಕ್ರಿ. ಶ. ೭೮ ವರ್ಷ ೩ ತಿಂಗಳು ಗತಿಸಿದ್ದ ಸಮಯದಲ್ಲಿ ಆರಂಭವಾಗಿರುವುದೆಂದು ಫಲಿತವಾಗುವುದು. ಈ ಶಕವರ್ಷಾರಂಭದ ಗಣನೆಯು ಅದ್ಯಕಾಲೀನ ಪಂಚಾಂಗಗಳಲ್ಲಿ ನಿರ್ದೇಶಿತವಾಗಿರುವ ಶಾಲಿವಾಹನ ಶಕೆಯೊಡನೆ ಸಮಾಯುಕ್ತವಾಗುವುದು. ೧೯೬೯ ನೇ ಇಸವಿಯ ಪಂಚಾಂಗಗಳಲ್ಲಿ ಶಾಲಿವಾಹನ ಶಕೆಯು ೧೮೯೧ ವರ್ಷಗಳು ಗತವಾಗಿರುವುದಾಗಿ ನಿರ್ದೇಶಿತವಾಗಿದೆ. ಈ ಶಕೆಯು ಸಾಧಾರಣವಾಗಿ ಮಾರ್ಚಿ ಮಾಹೆಯ ಅಂತ್ಯ ಅಥವಾ ಏಪ್ರಿಲ್ ಮಾಹೆಯ ಆದಿ ಭಾಗದಲ್ಲಿ ಆರಂಭವಾಗುವುದು. ಆದ್ದರಿಂದ, ಈ ಶಕೆಯು ಕ್ರಿ. ಶ. ೭೮ ವರ್ಷ, ೩ ತಿಂಗಳುಗಳ ಪರಿಸರದಲ್ಲಿ, ಅರ್ಥಾತ್ ೭೯ ನೇ ಇಸವಿಯ ಮಾರ್ಚಿ ಮಾಹೆ ಅಂತ್ಯ

---

1 ಣಿವ್ವಾಣೆ ವೀರಜಿಣೆ ಛವ್ವಾಸ-ಸದೇಸು ಪಂಚವರಿಸೇಸು ।
ಪಣಮಾಸೇಸುಂಗದೇಸು ಸಂಜಾದೋ ಸಗಣಿಓ ಅಹವಾ ॥ ೧೪೯೯ ॥

[ತಿಲೋಯಪಣ್ಣತ್ತಿ—ಅಧಿಕಾರ ೪]

ಅಥವಾ ಏಪ್ರಿಲ್ ಮಾಹೆಯ ಆದಿಯಲ್ಲಿ ಆರಂಭವಾಗಿರುವುದೆಂದು ಪರಿಗಣಿತವಾಗುವುದು. ಇದರಿಂದ 'ಶ್ರೀ ವೀರನಿರ್ವಾಣಪಶ್ಚಾತ್ ೬೦೫ ವರ್ಷ ೫ ತಿಂಗಳುಗಳು ಗತಿಸಿರಲು ಶಕರಾಜನಾದನು' ಎಂಬ ಮೇಲ್ಕಂಡ ಐತಿಹ್ಯದಿಂದ ಸೂಚಿತವಾಗುವ ಶಕಕಾಲವು ಶಾಲಿವಾಹನಶಕೆಯಾಗಿರುವುದೆಂದು ಫಲಿತವಾಗುವುದು. ಇಂತೆಯೇ ಹಿಂದೆ ವಿವರಿಸಲಾಗಿರುವಂತೆ, ವಿಕ್ರಮಾದಿತ್ಯನ ಜನ್ಮಸಮಯದಾಧಾರದಿಂದ ಪ್ರವರ್ತಿತವಾಗಿರುವ ವಿಕ್ರಮಶಕೆಯು ಕ್ರಿ. ಪೂ. ೫೭ ವರ್ಷ ೨ ತಿಂಗಳುಗಳ ಪರಿಸರದಲ್ಲಿ, ಅರ್ಥಾತ್ ಕ್ರಿ. ಪೂ. ೫೮ ನೇ ಇಸವಿ ನವೆಂಬರ್ ಮಾಹೆಯ ಆದಿಯಲ್ಲಿ ಆರಂಭವಾಗಿರುವುದೆಂದು ಮತ್ತು ಈ ಸಮಯದಿಂದ ೧೩೫ ವರ್ಷ ೫ ತಿಂಗಳುಗಳ ಅನಂತರದಲ್ಲಿ[1] ಶಾಲಿವಾಹನಶಕೆಯು ಆರಂಭವಾಗಿದೆಯೆಂದು ಅಭಿವ್ಯಕ್ತವಾಗುವುದು. ಶಾಸನಗಳಲ್ಲಿ ಈ ಶಾಲಿವಾಹನಶಕೆಯನ್ನು ಸಾಧಾರಣವಾಗಿ 'ಶಕವರ್ಷಂಗಳು' ಅಥವಾ 'ಶಕಕಾಲ' ಎಂದು ನಿರ್ದೇಶಿಸಲಾಗಿದೆಯೇ ಹೊರತಾಗಿ 'ಶಾಲಿವಾಹನ' ಎಂಬ ಅಂಕಿತದೊಡನೆ ನಿರ್ದೇಶಿಸಲಾಗಿಲ್ಲ.[2]

ದಿಗಂಬರ ಆಮ್ನಾಯದಲ್ಲಿ ಶಾಲಿವಾಹನಶಕೆಯನ್ನು 'ವಿಕ್ರಮಾಂಕಶಕೆ' ಎಂಬುದಾಗಿಯೂ ನಿರ್ದೇಶಿಸುವ ಪರಿಪಾಠವಿದ್ದಿತೆಂದು ಕಂಡುಬರುತ್ತದೆ. ಷಟ್ಖಂಡಾಗಮದ ಪ್ರಸಿದ್ಧ 'ಧವಲಾ' ಟೀಕಾಕಾರರಾದ ವೀರಸೇನಾಚಾರ್ಯರು ಧವಲಾಟೀಕೆಯ ರಚನೆಯು ಪೂರ್ಣಗೊಂಡ ಕಾಲವನ್ನು 'ಅಟ್ಠತೀಸಮ್ಹಿ ಸತ್ತಸಏ (=೭೩೮) ವಿಕ್ಕಮರಾಯಂಕಿಏ ಸುಸಗಣಾಮೇ' ಎಂದು ನಿರ್ದೇಶಿಸಿದ್ದಾರೆ.[3] ಈ ರೀತಿಯಾಗಿ ದಿಗಂಬರಜೈನಆಮ್ನಾಯದಲ್ಲಿ ಬಳಕೆಗೊಂಡಿರುವ ವಿಕ್ರಮಾಂಕಿತ ಶಕಕಾಲವು ವೀ. ನಿ. ಪ. ೬೦೫ ವರ್ಷ ೫ ತಿಂಗಳುಗಳ ತರುವಾಯದಲ್ಲಿ ಆರಂಭವಾಗಿರುವುದೆಂದು ತ್ರಿಲೋಕಸಾರದ ಟೀಕಾಕರ್ತೃಗಳಾದ ಮಾಧವಚಂದ್ರತ್ರೈವಿದ್ಯದೇವರ ಈ ಮುಂದಿನ ಹೇಳಿಕೆಯಿಂದ ಸೂಚಿತವಾಗುವುದು :

"ಶ್ರೀ ವೀರನಿರ್ವೃತೇಃ ಸಕಾಶಾತ್ ಪಂಚೋತ್ತರಷಟ್ಛತವರ್ಷಾಣಿ ಪಂಚ-

---

1 ೧೩೫ ವ. ೫ ತಿಂ. — ೫೭ ವ. ೨ ತಿಂ. = ಕ್ರಿ. ಶ. ೭೮ ವ. ೩ ತಿಂ. = ೭೯ ನೇ ಇಸವಿ ಮಾರ್ಚಿ ಅಥವಾ ಏಪ್ರಿಲ್ ಮಾಹೆ.

2 ಐಹೊಳೆ ಶಾಸನದಲ್ಲಿ ಈ ಶಕೆಯನ್ನು 'ಶಾಕಾನಾಮಪಿಭೂಭುಜಾಂ' ಎಂಬ ಅಭಿಧಾನದಿಂದ ಸೂಚಿಸಲಾಗಿದೆ. ಶ್ರವಣಬೆಳಗುಳದ ಪ್ರಾಚೀನಕಾಲದ ಶಾಸನಗಳಲ್ಲಿ 'ಶಕ' ಪದಮಾತ್ರದಿಂದ ಈ ಶಕೆಯನ್ನು ಸೂಚಿಸಲಾಗಿದ್ದು ಕ್ರಿ. ಶ. ೧೯ ನೇ ಶತಮಾನ ಕಾಲದ ಶಾಸನ (ಅಂಕ ೧೪೦ ರಲ್ಲಿ) ಹಾಗೂ ಈ ಸಮಯದಿಂದಿತ್ತೀಚಿನಕಾಲದ ಶಾಸನಗಳಲ್ಲಿ 'ಶಾಲಿವಾಹನ' ಎಂಬ ಅಂಕಿತನಾಮದೊಡನೆ ಈ ಶಕೆಯು ಬಳಕೆಗೊಂಡಿದೆ.

3 ಷಟ್ಖಂಡಾಗಮ-ಸತ್ಪ್ರರೂಪಣಾ ೧ ಮುನ್ನುಡಿ ಪು. ಸಂ. ೪೫.

ಮಾಸಯುತಾನಿಗತ್ವಾ (೬೦೫ ವ. ೫ ತಿಂ.) ಪಶ್ಚಾತ್ ವಿಕ್ರಮಾಂಕ ಶಕರಾಜೋ ಜಾಯತೇ...." [ಗಾಹೆ ೮೫೦ ರ ಅರ್ಥಾನುವಾದ]. ಆದರೆ ಮೇಲ್ಕಂಡ 'ವಿಕ್ಕಮ-ರಾಯಂಕಿಏ ಸುಸಗಣಾಮೇ' ಎಂಬ ಉಕ್ತಿ ಹಾಗೂ 'ವಿಕ್ರಮಾಂಕ ಶಕರಾಜೋ ಜಾಯತೇ' ಎಂಬ ಉಕ್ತಿಗಳಿಂದ ವಿಕ್ರಮಶಕೆಯು ಸೂಚಿತವಾಗಿರುವುದಲ್ಲದೆ ಶಾಲಿವಾಹನಶಕೆಯು ಸರ್ವಥಾ ಸೂಚಿತವಾಗಿರುವುದಿಲ್ಲ ಎಂಬ ಅಭಿಮತವೇರ್ಪಟ್ಟಿದೆ.[1] ಈ ಅಭಿಮತದನುಗುಣವಾಗಿ ಶ್ರೀ ವೀರತೀರ್ಥಂಕರನು ವಿಕ್ರಮಶಕಪೂರ್ವ ೬೦೫-೬ ರಲ್ಲಿ (ಕ್ರಿ. ಪೂ. ೬೬೨-೩ ರಲ್ಲಿ) ನಿರ್ವಾಣಹೊಂದಿರುವನೆಂದು ಗಣನೆಮಾಡಲಾಗಿದೆ. ಈ ರೀತಿಯಾದ ಗಣನೆಯು ಪ್ರಪ್ರಥಮವಾಗಿ ಕ್ರಿ. ಶ. ೧೯ ನೇ ಶತಮಾನದಲ್ಲಿ ಮೂಡಿದೆಯೆಂದು ಹೇಳಲವಕಾಶವಿದೆ. ಶ್ರವಣಬೆಳಗುಳದ ಶ್ರೀಮಠದಲ್ಲಿರುವ ೧೮೩೦ ನೇ ಇಸವಿಯ ಸನ್ನದಿನಲ್ಲಿ ಶ್ರೀ ವೀರನಿರ್ವಾಣಶಕೆ, ವಿಕ್ರಮಶಕೆ ಮತ್ತು ಶಾಲಿವಾಹನಶಕೆಗಳಾಧಾರದಿಂದ ಕಾಲನಿರ್ದೇಶನಮಾಡಲಾಗಿದ್ದು, ವಿಕ್ರಮಶಕಪೂರ್ವ ೬೦೫ ಮತ್ತು ಶಾಲಿವಾಹನಶಕಪೂರ್ವ ೭೪೧ ರಲ್ಲಿ ಶ್ರೀ ವೀರತೀರ್ಥಂಕರನು ನಿರ್ವಾಣ ಹೊಂದಿದಂತೆ ಗಣನೆಮಾಡಲಾಗಿದೆ.[2] ಈ ಪರಿಗಣನೆಯ ದೃಷ್ಟಿಯಿಂದ, ಶ್ರೀ ವೀರ ತೀರ್ಥಂಕರನು ಕ್ರಿ. ಪೂ. ೫೨೮ ರಲ್ಲಿ (ಶಾ. ಶಕಪೂರ್ವ ೬೦೬ ನೇ ವರ್ಷದಲ್ಲಿ) ನಿರ್ವಾಣ ಹೊಂದಿರುವನೆಂಬ ಪೂರ್ವಪ್ರತಿಪಾದನೆಯು ಪ್ರಶ್ನವಶವಾಗುವುದು. ಆದ್ದರಿಂದ ಮೇಲ್ಕಂಡ ಪರಿಗಣನೆಯ ತಥ್ಯಾತಥ್ಯವನ್ನು ಪರಿಷ್ಕರಿಸಬೇಕಾಗುವುದು.

ಷಟ್ಖಂಡಾಗಮದ ಪ್ರಸಿದ್ಧ ಧವಲಾಟೀಕಾಕರ್ತೃಗಳಾದ ವೀರಸೇನಾಚಾರ್ಯರು ಧವಲಾಟೀಕೆಯನ್ನು ಪೂರ್ಣಗೊಳಿಸಿದ ತರುವಾಯ ಕಷಾಯಪ್ರಾಭೃತಕದ ನಾಲ್ಕು ವಿಭಕ್ತಿಗಳಿಗೆ ಇಪ್ಪತ್ತು ಸಹಸ್ರಗ್ರಂಥಸಂಯುಕ್ತವಾದ ಜಯಧವಲಾಟೀಕೆಯನ್ನು ರಚಿಸಿ ಸ್ವರ್ಗಸ್ಥರಾದರೆಂದೂ ಅನಂತರ ಈ ಆಚಾರ್ಯರ ಶಿಷ್ಯರಾದ

1 'ಶ್ರೀ ಮಹಾವೀರನಿರ್ವಾಣಕಾಲನಿರ್ಣಯ'– ಸ್ವಸ್ತಿ ಶ್ರೀ ಆರ್ಯಪ್ರತೀ ಕುಲಭೂಷಣಜೀ ಮಹಾರಾಜ್– ಶ್ರೀ ದಿಗಂಬರ ಜೈನಸ್ಯಾದ್ವಾದಗ್ರಂಥಮಾಲಾ, ಚತುರ್ಥ ಪುಷ್ಪ.

2 ಸ್ವಸ್ತಿಶ್ರೀವರ್ಧಮಾನಾಖ್ಯೇ ಜಿನೇ ಮುಕ್ತಿಂಗತೇ ಸತಿ ।
ವಹ್ನಿರಂಧ್ರಾಬ್ಧಿನೇತ್ರೈ (೨೪೯೩) ಶ್ಚ ವತ್ಸರೇಷು ಮಿತೇಷು ವೈ ॥
ವಿಕ್ರಮಾಂಕಸಮಾಸ್ವಿಂದು ಗಜಸಾಮಜಹಸ್ತಿಭಿಃ (೧೮೮೮) ।
ಸತೀಷು ಗಣನೀಯಾಸು ಗಣಿತಜ್ಞೈರ್ಬುಧೈಸ್ತದಾ ॥
ಶಾಲಿವಾಹನ ವರ್ಷೇಷುನೇತ್ರಬಾಣನಗೇಂದುಭಿಃ (೧೭೫೨)
ಪ್ರಮಿತೇಷು ವಿಕೃತ್ಯಬ್ದೇ ಶ್ರಾವಣೇ ಮಾಸಿ ಮಂಗಲೇ ॥

[ಎಪಿಗ್ರಾಫಿಕಾ ಕರ್ನಾಟಕಾ, ವಾಲ್ಯೂಂ ೨, ಶಾಸನಾಂಕ ೧೪೧]

ಜಿನಸೇನಾಚಾರ್ಯರು ಜಯಧವಲಾಟೀಕೆಯನ್ನು ಮುಂದುವರಿಸಿ ನಲವತ್ತುಸಹಸ್ರ ಗ್ರಂಥಪ್ರಮಾಣದ ಟೀಕೆಯನ್ನು ರಚಿಸಿದರೆಂದೂ ಇಂದ್ರನಂದಿ ಆಚಾರ್ಯರಿಂದ ರಚಿತ ವಾಗಿರುವ ಶ್ರುತಾವತಾರದಲ್ಲಿ ಹೇಳಿದೆ.[1] ಧವಲಾಟೀಕೆಯು ಪೂರ್ಣಗೊಂಡ ಸಮಯದ ವಿಷಯವಾಗಿ ವೀರಸೇನಾಚಾರ್ಯರ ಹೇಳಿಕೆಯನ್ನು ಹಿಂದೆ ಉಲ್ಲೇಖಿಸ ಲಾಗಿದೆ. ಜಯಧವಲಾಟೀಕೆಯ ಅಂತಿಮಪ್ರಶಸ್ತಿಯಲ್ಲಿ ಈ ಟೀಕೆಯು ಪರಿಸಮಾಪ್ತ ವಾದ ಸಮಯದ ವಿಷಯವಾಗಿ ಜಿನಸೇನಾಚಾರ್ಯರು ಈ ಮುಂದಿನಂತೆ ಹೇಳಿದ್ದಾರೆ:

ಏಕಾನ್ನಷಷ್ಟಿಸಪ್ತಶತಾಬ್ದೇಷು (=೭೫೯) ಶಕನರೇಂದ್ರಸ್ಯ ।
ಸಮತೀತೇಷು ಸಮಾಪ್ತಾ ಜಯಧವಲಾ ಪ್ರಾಭೃತವ್ಯಾಖ್ಯಾ ॥

ಇದರಂತೆ ವೀರಸೇನಾಚಾರ್ಯರಿಂದ ರಚಿತವಾದ ಧವಲಾಟೀಕೆಯು ಪರಿಸಮಾಪ್ತಿ ಗೊಂಡ ಅನಂತರದ (೭೫೯ – ೭೩೮=) ೨೧ ನೇ ವರ್ಷದಲ್ಲಿ ಜಿನಸೇನಾಚಾರ್ಯರು ಜಯಧವಲಾಟೀಕೆಯ ರಚನೆಯನ್ನು ಪೂರ್ಣಗೊಳಿಸಿರುವರೆಂದು ವ್ಯಕ್ತವಾಗುವುದಲ್ಲದೆ ವೀರಸೇನಾಚಾರ್ಯರು ಯಾವ ಶಕೆಯಾಧಾರದಿಂದ ಧವಲಾಟೀಕೆಯ ರಚನೆಯು ಪೂರ್ಣಗೊಂಡ ಸಮಯವನ್ನು ನಿರ್ದೇಶಿಸಿರುವರೋ ಅದೇ ಶಕೆಯಾಧಾರದಿಂದ ಜಿನ ಸೇನಾಚಾರ್ಯರು ಜಯಧವಲಾಟೀಕಾರಚನೆಯು ಪೂರ್ಣಗೊಂಡ ಸಮಯವನ್ನು ನಿರ್ದೇಶಿಸಿರುವರೆಂಬುದರಲ್ಲಿ ಸಂಶಯಪಡಲವಕಾಶವಿರುವುದಿಲ್ಲ. ಆದ್ದರಿಂದ 'ವಿಕ್ಕಮ ರಾಯಂಕಿತ' ವೆಂದು ವೀರಸೇನಾಚಾರ್ಯರಿಂದ ನಿರ್ದೇಶಿತವಾಗಿರುವ ಶಕೆಯನ್ನೇ ಜಿನಸೇನಾಚಾರ್ಯರು 'ಶಕನೃಪನ ಅಬ್ದ' ವೆಂಬುದಾಗಿ ನಿರ್ದೇಶಿಸಿರುವರೆಂದು ನಿಶ್ಚಿತ ವಾಗುವುದು. ಇಂತೆಯೇ ಜಿನಸೇನಾಚಾರ್ಯರು ಮಹಾಪುರಾಣವನ್ನು ರಚಿಸ ಲಾರಂಭಿಸಿ ಆದಿತೀರ್ಥಂಕರನ ಪುರಾಣಭಾಗವು ಪೂರ್ಣವಾಗುವಷ್ಟರಲ್ಲಿ ಸ್ವರ್ಗಸ್ಥ ರಾದರಾಗಿ, ಅವರ ಶಿಷ್ಯರಾದ ಗುಣಭದ್ರಾಚಾರ್ಯರು ಆ ಪುರಾಣದ ರಚನೆಯನ್ನು ಮುಂದುವರಿಸಿ, ಅದರ ರಚನೆಯು ಶಕನೃಪಕಾಲಾಭ್ಯಂತರವಿಂಶತ್ಯಧಿಕಾಷ್ಟಶತ-ಮಿತಾಬ್ದಾಂತವಾದ (=ಶಕನೃಪಕಾಲ ೮೨೦) ಪಿಂಗಲನಾಮಸಂವತ್ಸರದಲ್ಲಿ ಪೂರ್ಣ ಗೊಂಡುದಾಗಿ ಹೇಳಿದ್ದಾರೆ. ಇದರಂತೆ ಜಿನಸೇನಾಚಾರ್ಯರಿಂದ ಜಯಧವಲದ ರಚನೆಯು ಪೂರ್ಣಗೊಂಡ ಅನಂತರದ (೮೨೦ – ೭೫೯ =) ೬೧ ನೇ ವರ್ಷದಲ್ಲಿ ಗುಣಭದ್ರಾಚಾರ್ಯರಿಂದ ಮಹಾಪುರಾಣದ ರಚನೆಯು ಪೂರ್ಣಗೊಂಡಿರುವುದೆಂದು ಫಲಿತವಾಗುವುದು. ಇಷ್ಟಲ್ಲದೆ ಗುಣಭದ್ರಾಚಾರ್ಯರು ತಮ್ಮ ಪ್ರಾಚಾರ್ಯ ಮತ್ತು ಆಚಾರ್ಯರಾದ ವೀರಸೇನಾಚಾರ್ಯರು ಮತ್ತು ಜಿನಸೇನಾಚಾರ್ಯರಿಂದ ಬಳಕೆಗೊಂಡಿರುವ ಶಕೆಯಾಧಾರದಿಂದಲೇ ಮಹಾಪುರಾಣದ ರಚನೆಯು ಪೂರ್ಣ

---

1 ಈ ವಿಷಯದ ವಿಶೇಷಪರಾಮರ್ಶೆಯನ್ನು 'ಕಸಾಯಪಾಹುಡ' ಭಾಗ ೧ರ ಪ್ರಸ್ತಾವನೆ–ಪು. ಸಂ. ೬೯-೭೭ ರಲ್ಲಿ ಕಾಣಬಹುದು.

ಗೊಂಡ ಸಮಯವನ್ನು ನಿರ್ದೇಶಿಸಿರುವರೆಂಬುದು ನಿಶ್ಚಿತ. ಇಂತೆಯೇ ಪೂರ್ವಾ ಚಾರ್ಯರ ಈ ಪದ್ಧತಿಯನ್ನನುಸರಿಸಿ, ದಿಗಂಬರಜೈನಸಂಪ್ರದಾಯದ ಆಚಾರ್ಯರು ಮತ್ತು ಕವಿಗಳು ತಮ್ಮ ತಮ್ಮ ಕೃತಿಗಳ ರಚನಾಕಾಲಗಳನ್ನು ಈ ಶಕನೃಪಾಬ್ದದಾ ಧಾರದಿಂದ ನಿರ್ದೇಶಿಸಿರುವರೆಂಬುದರಲ್ಲಿ ಸಂಶಯವಿಲ್ಲ. ಇದೇ ರೀತಿಯಾಗಿ ಶ್ರವಣ ಬೆಳಗೊಳದ ಶಾಸನಗಳಲ್ಲಿ ಅಂಕಿತಗೊಂಡಿರುವ ದಿಗಂಬರಜೈನಸಂಪ್ರದಾಯಸಂಬಂಧಿ ಯಾದ ಅನೇಕ ಘಟನಾವಲಿಗಳ ಸಮಯಗಳನ್ನೂ ಇದೇ ಶಕನೃಪಾಬ್ದದಾಧಾರದಿಂದ ನಿರೂಪಿಸಲಾಗಿದೆಯೆಂಬುದು ನಿಶ್ಚಿತವಿದೆ. ಪ್ರಾಯಿಕವಾಗಿ ಶಾಸನಗಳಲ್ಲಿ ಅಂಕಿತ ಗೊಂಡಿರುವ ವಿಷಯಗಳು ಅವಿಚಲಿತರೀತಿಯಿಂದ ಯಥಾವತ್ತಾಗಿ ಉಳಿದುಬಂದಿರು ವುವು. ಆದ್ದರಿಂದ ಶ್ರವಣಬೆಳಗೊಳದ (ಕ್ರಿ. ಶ. ೧೯ ನೇ ಶತಮಾನ ಪೂರ್ವವರ್ತಿ ಕಾಲದ) ಯಾವುದಾದರೊಂದು ಶಾಸನದಲ್ಲಿ ಅಂಕಿತಗೊಂಡಿರುವ ಶಕನೃಪಾಬ್ದವು ವಿಕ್ರಮಶಕೆಯಾಗಿರುವುದೇ? ಅಥವಾ ಶಾಲಿವಾಹನಶಕೆಯಾಗಿರುವುದೇ? ಎಂಬು ದನ್ನು ಪೂರ್ವೋಕ್ತವಾದ ಶ್ರೀಮಠದಸನ್ನದಿನಲ್ಲಿ ನಿರ್ದೇಶಿತವಾಗಿರುವ ಶಕೆಗಳಾಧಾರ ದಿಂದ ನಿರ್ಣಯಿಸಿದಲ್ಲಿ ಪ್ರಸಕ್ತವಿಷಯದ ಸಮಸ್ಯೆಯು ಪರಿಹೃತವಾಗುವುದು.

ಮೇಘಚಂದ್ರತ್ರೈವಿದ್ಯದೇವರು ಸಕವರ್ಷ ೧೦೩೭ ನೆಯ ಮನ್ಮಥಸಂವತ್ಸರದ ಮಾರ್ಗಸಿರ ಸುದ್ಧ ಬೃಹವಾರದಂದು ದಿವಂಗತರಾದರಾಗಿ ಅವರಗ್ರಶಿಷ್ಯರಶೇಷ ಪದಾರ್ಥತತ್ವವಿದರು ಸಕಳಶಾಸ್ತ್ರಪಾರಾವಾರಪಾರಗರುಂ ಗುರುಕುಳ ಸಮುದ್ಧರಣ- ರುಮಪ್ಪ ಶ್ರೀ ಪ್ರಭಾಚಂದ್ರದೇವರ್ತಮ್ಮ ಗುರುಗಳ್ಗೆ ಪರೋಕ್ಷವಿನಯಂ ಕಾರಣ- ಮಾಗಿ.... ವಿಷ್ಣುವರ್ಧನನ ಹೊಯ್ಸಳಭೂಪಾಳನ ಮಹಾದಂಡನಾಯಕನಾದ ಗಂಗ ರಾಜನ ಧರ್ಮಪತ್ನಿ ಲಕ್ಷ್ಮೀಮತಿದಂಡನಾಯಕಿಯಿಂದ ನಿಷಿಧಿಗೆಯನ್ನು ಪ್ರತಿಷೆ ಮಾಡಿಸಿದುದಾಗಿ ಶ್ರ. ಬೆಳಗುಳದ ಶಾಸನಾಂಕ ೪೭ ರಲ್ಲಿ ಹೇಳಿದೆ. ಈ ಶಾಸನದಲ್ಲಿ ನಿರ್ದೇಶಿತವಾಗಿರುವ ಮೇಲ್ಕಂಡ ಸಕವರ್ಷವು ವಿಕ್ರಮಶಕೆಯಾಗಿದ್ದಲ್ಲಿ ಈ ಶಾಸನ ರಚನಾಸಮಯದಿಂದ ಮುಂದೆ (೧೮೮೮−೧೦೩೭=) ೮೫೧ ನೇ ವರ್ಷದಲ್ಲಿ ಪೂರ್ವೋಕ್ತವಾದ ಶ್ರೀಮಠದ ಸನ್ನದು ರಚಿತವಾಗಿರುವುದೆಂದು ಗಣನೆಯಾಗುವುದು. ಮೇಲ್ಕಂಡ ಶಾಸನವು ಮನ್ಮಥನಾಮಸಂವತ್ಸರದಲ್ಲಿ ರಚಿತವಾಗಿರುವುದಾಗಿ ಈ ಸಮಯದಿಂದ ಮುಂದೆ ೮೪೦ ನೇ ವರ್ಷವು ಮನ್ಮಥನಾಮಸಂವತ್ಸರವೂ ತದನಂತರದ (೮೫೧−೮೪೦=) ೧೧ ನೇ ವರ್ಷವು ಪರಾಭವಸಂವತ್ಸರವೂ ಆಗುವುದಾದ್ದರಿಂದ ಶ್ರೀಮಠದ ಸನ್ನದು ಪರಾಭವಸಂವತ್ಸರದಲ್ಲಿ ರಚಿತವಾಗಿರುವುದೆಂಬ ಗಣನೆಯಾಗು ವುದು. ಆದರೆ ಸನ್ನದಿನ ಹೇಳಿಕೆಯಂತೆಯೇ ಅದು ವಿಕೃತಿನಾಮಸಂವತ್ಸರದಲ್ಲಿ ರಚಿತವಾಗಿರುವುದಾದ್ದರಿಂದ ಈ ಗಣನೆಯು ಅಸಂಗತವಿರುವುದೆಂದು ವ್ಯಕ್ತ ವಾಗುವುದಲ್ಲದೆ ಮೇಲ್ಕಂಡ ಶಾಸನದ ಸಕವರ್ಷವು ವಿಕ್ರಮಶಕೆಯಾಗಿರಲಾರದೆಂದು ಅಧಿಗತವಾಗುವುದು. ಆದ್ದರಿಂದ ಮೇಲ್ಕಂಡ ಶಾಸನದ ಸಕವರ್ಷವು ಶಾಲಿವಾಹನ ಶಕೆಯಾಗಿರುವುದೆಂದು ಗಣನೆಮಾಡಬೇಕಾಗುವುದು. ಇದರಂತೆ ಈ ಶಾಸನದ

ರಚನಾಕಾಲದಿಂದ ಮುಂದೆ (೧೭೫೨ — ೧೦೩೭=) ೭೧೫ ನೇ ವರ್ಷದಲ್ಲಿ ಶ್ರೀಮಠದ ಸನ್ನದು ರಚಿತವಾಗಿರುವುದೆಂದು ಗಣನೆಯಾಗುವುದು. ಶಾಸನವು ಮನ್ಮಥನಾಮ ಸಂವತ್ಸರದಲ್ಲಿ ರಚಿತವಾಗಿದ್ದು ಈ ಸಮಯದಿಂದ ಮುಂದೆ ೬೬೦ ನೇ ವರ್ಷವು ಮನ್ಮಥನಾಮಸಂವತ್ಸರವಾಗಿಯೂ ತದನಂತರದ (೭೧೫ — ೬೬೦ =) ೫೫ ನೇ ವರ್ಷವು ವಿಕೃತಿನಾಮಸಂವತ್ಸರವಾಗಿಯೂ ಇರುವುದು. ಈ ಗಣನೆಯಂತೆ ಶಾಸನದಲ್ಲಿ ಮತ್ತು ಸನ್ನದಿನಲ್ಲಿ ನಿರ್ದೇಶಿತವಾಗಿರುವ ಸಂವತ್ಸರಗಳು ಯಥಾವತ್ತಾಗಿರುವುವಾದ್ದರಿಂದ ಶಾಸನದಲ್ಲಿ ಅಂಕಿತಗೊಂಡಿರುವ ಸಕವರ್ಷವು ಶಾಲಿವಾಹನಶಕೆಯಾಗಿರುವುದೆಂದು ನಿಶ್ಚಿತವಾಗುವುದು. ಇಂತೆಯೇ ಗುಣಭದ್ರಾಚಾರ್ಯರು, ಜಿನಸೇನಾಚಾರ್ಯರು ಮತ್ತು ವೀರಸೇನಾಚಾರ್ಯರ ಕೃತಿಗಳ ರಚನಾಕಾಲನಿರ್ದೇಶಕಗಳಾದ ಪೂರ್ವೋಲ್ಲಿಖಿತ ಶಕಾಬ್ದಗಳೂ ಶಾಲಿವಾಹನಶಕೆಯನ್ನಧಿಕರಿಸಿದವುಗಳಾಗಿವೆಯೆಂದು ಪ್ರಮಾಣೀಕೃತವಾಗುವುದಲ್ಲದೆ, ಈ ಶಕಕಾರನಾದ ಶಾಲಿವಾಹನನ್ನೇ ವೀರಸೇನಾಚಾರ್ಯರು 'ವಿಕ್ಕಮರಾಯಂಕಿತ ಶಕ' ಎಂಬುದಾಗಿಯೂ, ಮಾಧವಚಂದ್ರತ್ರೈವಿದ್ಯದೇವರು 'ವಿಕ್ರಮಾಂಕಶಕರಾಜೋ ಜಾಯತೇ' ಎಂಬುದಾಗಿಯೂ ನಿರ್ದೇಶಿಸಿರುವರೆಂದು ನಿಶ್ಚಿತವಾಗುವುದು. ಆದ್ದರಿಂದ 'ಶ್ರೀ ವೀರನಿರ್ವಾಣ ಪಶ್ಚಾತ್ ೬೦೫ ವರ್ಷ ೫ ತಿಂಗಳುಗಳ ತರುವಾಯದಲ್ಲಿ ವಿಕ್ರಮಾಂಕ ಶಕರಾಜನಾಗುವನು' ಎಂಬ ತ್ರೈವಿದ್ಯದೇವರ ಹೇಳಿಕೆಯು ಶಾಲಿವಾಹನ ಶಕೆಯ ಆರಂಭಸಮಯದ ಸೂಚಕವಾಗಿರುವುದೆಂದು ಪ್ರಮಾಣೀಕೃತವಾಗುವುದಲ್ಲದೆ ಶ್ರೀ ವೀರತೀರ್ಥಂಕರನು ಶಾಲಿವಾಹನಶಕಪೂರ್ವ ೬೦೬ ರಲ್ಲಿ (ಕ್ರಿ. ಪೂ. ೫೨೮ ರಲ್ಲಿ) ನಿರ್ವಾಣಹೊಂದಿರುವನೆಂಬುದಾಗಿಯೂ ಅಧಿಗತವಾಗುವುದು. ಇಂತೆಯೇ ಶ್ರೀ ವೀರತೀರ್ಥಂಕರನು ಶಾ. ಶಕಪೂರ್ವ ೬೦೫ ವರ್ಷಗಳ ಮುನ್ನ ನಿರ್ವಾಣಹೊಂದಿರುವನೆಂಬ ಅಂಶವನ್ನು ಸ್ಥಿರೀಕರಿಸುವ ಮಾಘನಂದಿಸಿದ್ಧಾಂತದೇವರ ಈ ಮುಂದಿನ ಹೇಳಿಕೆಗಳನ್ನು ಗಮನಿಸಬಹುದು :

೧) 'ಮತ್ತಂ ಈ ಆಚಾರಾಂಗಧರರ ಬಳಿಕಂ ೧೦೮೨ ನೇ ಹೇಮಣಂಬಿಯಂದೀ ಶಾಸ್ತ್ರಸಾರಸಮುಚ್ಚಯಂ ಪುಟ್ಟಿತು. ಇಲ್ಲಿಂದ ಮುಂದೆ ೧೯೨೩೫ ವರ್ಷಕಾಲ (ಶ್ರೀ ವೀರತೀರ್ಥಂಕರನ ತೀರ್ಥವು) ಪ್ರವರ್ತಿಸುವುದು.' [ಶಾಸ್ತ್ರಸಾರ-ಪು. ಸಂ. ೨೭]

೨) 'ವರ್ಧಮಾನತೀರ್ಥಂಕರನಿರ್ವಾಣದ ಬಳಿಕ ೬೮೩ ವರ್ಷಪರ್ಯಂತ ಶ್ರುತಧರಆಚಾರ್ಯರು........ ಮತ್ತಮೀಯಾಚಾರಾಂಗಧರರಿಂ ಬಳಿಕ್ಕ ಸಾಸಿರದ ತೊಂಭತ್ತಏಳನೆಯ (೧೦೯೭) ಪರಿಧಾವಿಸಂವತ್ಸರದ ಜ್ಯೇಷ್ಠ ಶುದ್ಧ ಪಂಚಮಿಯ ದಿನಮೀ ಶ್ರಾವಕಾಚಾರಶೃತಂ ಪ್ರತಿಷ್ಠಿತಮಾಯ್ತು ಅಂತು ಸಾಸಿರದೇಳ್ನೂರಂಭತ್ತು ವರ್ಷಮುಕ್ಕುಂ ಮುಂದಿನ್ನು ವೀರಸ್ವಾಮಿಯ ಕಾಲಂ ಪತ್ತೊಂಭತ್ತುಸಾಸಿರದ ಇನ್ನೂರಿಪ್ಪತ್ತು (೧೯೨೨೦) ವರ್ಷಂ ಪ್ರವರ್ತಿಸಿಗುಂ'

[ಮೈಸೂರು ಓರಿಯಂಟಲ್ ಲೈಬ್ರರಿ–ಕೈಬರಹದ ಪ್ರತಿ–ಕೆ. ಬಿ. 96]

ಮೇಲ್ಕಂಡ ಹೇಳಿಕೆಗಳಿಗನುಗುಣವಾಗಿ ಶಾಸ್ತ್ರಸಾರವು ಶ್ರೀ ವೀರನಿರ್ವಾಣ ಪಶ್ಚಾತ್ (೬೮೩+೧೦೮೨=) ೧೭೬೫ ನೇ ಹೇಮಲಂಬಿ ಸಂವತ್ಸರದಲ್ಲಿಯೂ, ಶ್ರಾವಕಾಚಾರವು ವೀ. ನಿ. ಪ. (೬೮೩+೧೦೯೭=) ೧೭೮೦ ನೇ ಪರಿಧಾವಿಸಂವತ್ಸರ ದಲ್ಲಿಯೂ ರಚಿತವಾಗಿರುವುವೆಂದು ಪರಿಗಣಿತವಾಗುವುದು. ಶಾ. ಶಕ ೧೧೬೦ ನೇ ವರ್ಷವು ಹೇಮಲಂಬಿನಾಮಸಂವತ್ಸರವಾಗಿಯೂ ಮತ್ತು ಶಾ. ಶಕ ೧೧೭೫ ನೇ ವರ್ಷವು ಪರಿಧಾವಿನಾಮಸಂವತ್ಸರವಾಗಿಯೂ ಇವೆ. ಇದರಂತೆ ಮಾಘನಂದಿ ಸಿದ್ಧಾಂತಾಚಾರ್ಯರು, ಶಾ. ಶಕಪೂರ್ವ (೧೭೬೫–೧೧೬೦ ; ೧೭೮೦–೧೧೭೫=) ೬೦೫ ವರ್ಷಗಳ ಮುನ್ನ ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿರುವನೆಂಬ ಅಭಿಮತವುಳ್ಳವರಾಗಿರುವರೆಂದು ವ್ಯಕ್ತವಾಗುವುದು.[1] ಈ ರೀತಿಯಾಗಿ ಶ್ರೀ ವೀರ ತೀರ್ಥಂಕರನು ಶಾ. ಶಕಪೂರ್ವ ೬೦೫ ವರ್ಷಗಳ ಮುನ್ನ ನಿರ್ವಾಣಹೊಂದಿರುವ ನೆಂಬ ದಿಗಂಬರಜೈನಸಂಪ್ರದಾಯದ ಆಚಾರ್ಯರ ಪರಂಪರಾನುಬದ್ಧವಾದ ಅಭಿಮತವಿರುವುದು ಸ್ಪಷ್ಟವಿರುವುದಾದ್ದರಿಂದ, ವಿಕ್ರಮಶಕಪೂರ್ವ ೬೦೬ ರಲ್ಲಿ (ಹಾಗೂ ಶಾ. ಶಕಪೂರ್ವ ೭೪೧ ರಲ್ಲಿ) ನಿರ್ವಾಣಹೊಂದಿರುವನೆಂಬ ತರ್ಕವು ನಿರಾಧಾರವಾದು ದಾಗಿದೆಯೆಂದು ಅಧಿಗತವಾಗುವುದಲ್ಲದೆ, ಶ್ರೀ ವೀರತೀರ್ಥಂಕರನು ಶಾ. ಶಕಪೂರ್ವ ೬೦೬ ರಲ್ಲಿ (ಕ್ರಿ. ಪೂ. ೫೨೮ ರಲ್ಲಿ) ನಿರ್ವಾಣಹೊಂದಿರುವನೆಂಬ ಪೂರ್ವಪ್ರತಿಪಾದ ನೆಯು ನಿರಾಬಾಧವೆನಿಸಿ, ಸ್ಥಿರೀಕೃತವಾಗುವುದು.

ಕಲ್ಕಿಶಕೆ : ಶ್ರೀ ವೀರತೀರ್ಥಂಕರನ ನಿರ್ವಾಣಾನಂತರದ ೧೦೦೦ ವರ್ಷಗಳ ಸಮಯದಲ್ಲಿ 'ಕಲ್ಕಿ' ಎಂಬ ಹೆಸರಿನ ರಾಜನು ದೈವಾಧೀನನಾದನೆಂಬ ಪರಂಪರಾನು ಗತವಾದ ಐತಿಹ್ಯವು ದಿಗಂಬರ ಜೈನ ಸಂಪ್ರದಾಯದ ಕೃತಿಗಳಲ್ಲಿ ಉಳಿದುಬಂದಿದೆ. ಇಂತೆಯೇ ಜ್ಯೋತಿರ್ಮಯೂಖದಿಂದ ಹಿಂದೆ ಉಲ್ಲೇಖಿಸಲಾಗಿರುವ ಶ್ಲೋಕದಲ್ಲಿ ಕಲ್ಕಿಯನ್ನು ಆರುಜನ ಶಕಕಾರರಲ್ಲೊಬ್ಬನನ್ನಾಗಿ ಹೆಸರಿಸಿದೆ. ಇದರಿಂದ ಶಕಕಾರ ನಾದ 'ಕಲ್ಕಿ' ಎಂಬ ಹೆಸರಿನ ರಾಜನೊಬ್ಬನಿದ್ದಿರಬೇಕೆಂದು ಭಾವಿಸಲವಕಾಶವಾಗು ವುದು. ಆದರೆ ಶಕಪುರುಷರೆನಿಸಿದ ರಾಜರನ್ನು ಕುರಿತ ಐತಿಹ್ಯಾಂಶಗಳು ಅಸ್ತವ್ಯಸ್ತ ರೂಪತಳೆದು ಉಳಿದುಬಂದಿವೆಯಾದುದರಿಂದ ಈ ಕಲ್ಕಿ ಎಂಬ ಹೆಸರಿನಿಂದ ನಿರ್ದೇ ಶಿತನಾಗಿರುವ ರಾಜನಾರೆಂಬುದನ್ನು ಖಚಿತಪಡಿಸಲು ಸಾಧ್ಯವಿರುವುದಿಲ್ಲ. ಇಂತಿ ದ್ದರೂ ಈ ವಿಷಯವಾಗಿ ಊಹನೀಯವಾದ ಕೆಲವಂಶಗಳನ್ನು ಪ್ರಾಜ್ಞರಾದ ಪುರಾ ತತ್ತ್ವವೇತ್ತರ ಪರಿಶೀಲನೆಗಾಗಿ ಇಲ್ಲಿ ಪ್ರಸ್ತಾವಿಸಲಾಗುವುದು.

---

1 ಶಾ. ಶಕ ೧೨೦೫ ನೇ ವರ್ಷದಲ್ಲಿ ರಚಿತವಾಗಿರುವ ಶಾಸನಾಂಕ ೧೨೯ ರಲ್ಲಿ 'ಹೊಯ್ಸಳರಾಜಗುರುಗಳುಮಪ್ಪ' ಎಂದು ಪ್ರಸ್ತಾವಿಸಲಾಗಿರುವ ಶ್ರೀ ಮಾಘನಂದಿ ಸಿದ್ಧಾಂತಚಕ್ರವರ್ತಿಗಳು ಈ ಕೃತಿಗಳ ಕರ್ತೃಗಳಾಗಿರುವರೆಂದು ಹೇಳಲವಕಾಶವಿದೆ.

ಕಲ್ಕಿಯ ಐತಿಹ್ಯವಿಷಯವಾಗಿ ತಿಲೋಯಪಣ್ಣತ್ತಿಯ ಚತುರ್ಥಾಧಿಕಾರದಲ್ಲಿ ಈ ಮುಂದಿನ ಮೂರು ಮತಗಳಿವೆ :

೧

ಣಿವ್ವಾಣಗದೇ ವೀರೇ ಚಉಸದಇಗಿಸಟ್ಠಿವಾಸವಿಚ್ಛೇದೇ |
ಜಾದೋ ಯ ಸಗಣರಿಂದೋ ರಜ್ಜಂ ವಂಸಸ್ಸದುಸಯ ಬಾದಾಲಾ || ೧೫೦೩ ||
ದೋಣ್ಣಿಸದಾ ಪಣವಣ್ಣಾ ಗುತ್ತಾಣಂ ಚಉಮುಹಸ್ಸ ಬಾದಾಲಂ |
ವಸ್ಸಂ ಹೋದಿ ಸಹಸ್ಸಂ ಕೇಈ ಏವಂ ಪರೂವಂತಿ || ೧೫೦೪ ||

ತಾತ್ಪರ್ಯ : ಶ್ರೀವೀರನಿರ್ವಾಣಪಶ್ಚಾತ್ ೪೬೧ ವರ್ಷಗಳ ತರುವಾಯ ಶಕನರೇಂದ್ರನಾದನು. ವಂಶದ ರಾಜ್ಯಭಾರವು ೨೪೨ ವರ್ಷಗಳು. ಗುಪ್ತರಕಾಲ ೨೫೫ ವರ್ಷಗಳು, ಚತುರ್ಮುಖನ (=ಕಲ್ಕಿಯ) ರಾಜ್ಯಭಾರ ೪೨ ವರ್ಷಗಳು—ಈ ರೀತಿಯಾಗಿ (೪೬೧+೨೪೨+೨೫೫+೪೨=) ೧೦೦೦ ವರ್ಷಗಳೆಂದು ಕೆಲವರು ಪ್ರರೂಪಿಸುವರು.

೨

[ಪಾಲಕ, ವಿಜಯ (=ನಂದ) ವಂಶ, ಮುರುದಯ (=ಮೌರ್ಯ) ವಂಶ, ಪುಷ್ಯಮಿತ್ರ, ವಸುಮಿತ್ರ, ಅಗ್ನಿಮಿತ್ರ, ಗಂಧರ್ವರು ಮತ್ತು ನರವಾಹನ] ಅನಂತರ :

ವಸುಮಿತ್ತ ಅಗ್ಗಿಮಿತ್ತಾ ಸಟ್ಠಿ ಗಂಧವ್ವಯಾ ವಿ ಸಯಮೇಕ್ಕಂ |
ಣರವಾಹಣಾ ಯ ಚಾಲಂ ತತ್ತೋ ಭತ್ಥಟ್ಠಣಾ ಜಾದಾ || ೧೫೦೭ ||
ಭತ್ಥಟ್ಠಣಾಣ ಕಾಲೋ ದೋಣ್ಣಿ ಸಯಾಇಂ ಹವಂತಿ ಬಾದಾಲಾ |
ತತ್ತೋ ಗುತ್ತಾ ತಾಣಂ ರಜ್ಜೋ ದೋಣ್ಣಿಯ ಸಯಾಣಿ ಇಗತೀಸಾ ||೧೫೦೮||
ತತ್ತೋ ಕಕ್ಕೀ ಜಾದೋ ಇಂದಸುದೋ ತಸ್ಸ ಚಉಮುಹೋಣಾಮು |
ಸತ್ತರಿವರಿಸಾ ಆಊ ವಿಗುಣಿಯ ಇಗವೀಸ ರಜ್ಜಂತೋ || ೧೫೦೯ ||

ತಾತ್ಪರ್ಯ : [ಮೇಲೆ ಹೇಳಿರುವಂತೆ ಪಾಲಕಾದಿ ನರವಾಹನಾಂತ್ಯರಾದ ಅರಸರ] ಅನಂತರ ಭೃತ್ಯಾಂಧ್ರರಾದರು. ಭೃತ್ಯಾಂಧ್ರರ ಕಾಲ ೨೪೨ ವರ್ಷಗಳು. ಇವರ ತರುವಾಯ ಗುಪ್ತರು. ಅವರ ರಾಜ್ಯಭಾರಕಾಲವು ೨೩೧ ವರ್ಷಗಳು. ಅನಂತರ ಚತುರ್ಮುಖ ಎಂಬ ಹೆಸರಿನ ಇಂದ್ರಸುತ ಕಲ್ಕಿಯಾದನು. ಚತುರ್ಮುಖ ಎಂಬ ಹೆಸರಿನ (ಈ ಕಲ್ಕಿಯ) ಆಯುಷ್ಯ ೭೦ ವರ್ಷಗಳು; ೪೨ ವರ್ಷಕಾಲ ರಾಜ್ಯವಾಳಿದನು. [೬೦ + ೧೫೫ + ೪೦ + ೩೦ + ೬೦+೧೦೦+೪೦+೨೪೨+೨೩೧ + ೪೨=೧೦೦೦ ವರ್ಷಗಳು.]

೩

ಆಚಾರಂಗಧರಾದೋ ಪಣಹತ್ತರಿಜುತ್ತದುಸಯ ವಾಸೇಸುಂ |
ವೋಲೀಣೇಸುಂ ಬದ್ಧೋ ಪಟ್ಟೋ ಕಕ್ಕಿಸ್ಸ ಣರವಇಣೋ || ೧೫೧೦ ||

ತಾತ್ಪರ್ಯ : [ಶ್ರೀ ವೀರನಿರ್ವಾಣಾನಂತರಕಾಲದ ಶ್ರುತಧರ ಆಚಾರ್ಯ ಪರಂಪರೆಯಲ್ಲಿ ಕೊನೆಯವರಾದ ಆಚಾರಾಂಗ ಶ್ರುತಧರರ ಕಾಲವು ವೀ. ನಿ. ಪ. ೬೮೩ ರಲ್ಲಿ ಕೊನೆಗೊಂಡಿತು.] ಆಚಾರಾಂಗ ಶ್ರುತಧರರ ಕಾಲದಿಂದ ೨೭೫ ವರ್ಷಗಳು ಕಳೆದಿರಲು ಕಲ್ಕಿರಾಜನಿಗೆ ಪಟ್ಟಬಂಧವಾಯಿತು. [೬೮೩ + ೨೭೫ = ೯೫೮ + ೪೨ = ೧೦೦೦]

ಮೇಲ್ಕಂಡ ಗಾಹೆಗಳಾಧಾರದಿಂದ ಸಂಭಾವ್ಯವೆನಿಸುವ ಅಂಶಗಳು :

೧) ಕಲ್ಕಿರಾಜನ ರಾಜ್ಯಭಾರಸಮಯವನ್ನು ನಿರೂಪಿಸುವಲ್ಲಿ ಮೇಲ್ಕಂಡಂತೆ ಪ್ರಧಾನವಾದ ಎರಡು ಭಿನ್ನಮತಗಳಿರುವುದು ಸ್ಪಷ್ಟವಿದೆ. ಇದರಿಂದ ತಿಲೋಯಪಣ್ಣತ್ತಿಯಲ್ಲಿ ನಿರೂಪಿತವಾಗುವ ಸಮಯಕ್ಕಾಗಲೇ ಈ ಕಲ್ಕಿರಾಜನ ಐತಿಹ್ಯ ವಿಷಯವು ಅಸ್ತವ್ಯಸ್ತರೂಪತಳೆದಿದ್ದು ಭಿನ್ನಮತಗಳೇರ್ಪಡಲವಕಾಶವಾಗಿದ್ದಿತೆಂದು ವ್ಯಕ್ತವಾಗುವುದು.

೨) ವೀ. ನಿ. ಪ. ೪೬೧ ವರ್ಷಗಳ ತರುವಾಯದಲ್ಲಿ ಶಕರಾಜನೊಬ್ಬನಾದನೆಂದೂ ಮತ್ತು ಈ ಶಕರಾಜಸಂತತಿಯು ಗುಪ್ತಮನೆತನದ ರಾಜ್ಯಭಾರದ ಮುನ್ನ ೨೪೨ ವರ್ಷಕಾಲ ರಾಜ್ಯಭಾರಮಾಡಿದುದಾಗಿಯೂ ಮೊದಲ ಮತದ ಗಾಹೆಗಳಲ್ಲಿ ಹೇಳಿದೆ. ಇಂತೆಯೇ ವೀ. ನಿ. ಪ. ೪೮೫ ರಲ್ಲಿ ಅಂತ್ಯಗೊಂಡ ನರವಾಹನನ ರಾಜ್ಯಭಾರದ ತರುವಾಯ ಮತ್ತು ಗುಪ್ತಮನೆತನದ ರಾಜ್ಯಭಾರದ ಮುನ್ನ ಆಂಧ್ರಭೃತ್ಯರು ೨೪೨ ವರ್ಷಕಾಲ ರಾಜ್ಯಭಾರಮಾಡಿದರೆಂದು ಎರಡನೇ ಮತದ ಗಾಹೆಗಳಲ್ಲಿ ಹೇಳಿದೆ. ಇದರಿಂದ ಮೊದಲ ಮತದಲ್ಲಿ ಯಾವುದು ಶಕರಾಜಸಂತತಿಯೆಂದು ನಿರ್ದೇಶಿತವಾಗಿರುವುದೋ ಅದನ್ನೇ ಎರಡನೇ ಮತದಲ್ಲಿ ಆಂಧ್ರಭೃತ್ಯರಾಜಸಂತತಿಯೆಂದು ನಿರ್ದೇಶಿಸಲಾಗಿದೆಯೆಂದು ಭಾವಿಸಲವಕಾಶವಾಗುವುದು. ಶಕರಾಜನ ರಾಜ್ಯಭಾರಾರಂಭಸಮಯ ಮತ್ತು ಆಂಧ್ರಭೃತ್ಯರ ರಾಜ್ಯಭಾರಾರಂಭಸಮಯಗಳ ಮಧ್ಯೆ (ವೀ. ನಿ. ಪ. ೪೮೫ – ವೀ. ನಿ. ಪ. ೪೬೧) = ೨೪ ವರ್ಷಗಳ ಅಂತರವೇರ್ಪಟ್ಟಿದೆ. ಈ ಅಂತರ ಕಾಲವನ್ನು ಗುಪ್ತರಾಜಮನೆತನದ ರಾಜ್ಯಭಾರಕಾಲನಿರ್ದೇಶನದಲ್ಲಿ[1] ಕ್ರಮಗೊಳಿಸಲು ಯತ್ನಿಸಿರುವಂತೆ ಕಂಡುಬರುತ್ತದೆ. ಶುಂಗಮನೆತನದ ೯೫ ವರ್ಷಗಳ ರಾಜ್ಯಭಾರದ ತರುವಾಯ ಅವಂತೀರಾಜ್ಯವು ಮಗಧರಾಜ್ಯದ ಪರಮಾಧಿಕಾರದ ಅಂಕಿತದಿಂದ ಸ್ವತಂತ್ರಗೊಂಡಿತೆಂದೂ ಅನಂತರ ಅನುಕ್ರಮವಾಗಿ ಗಂಧರ್ವಸೇನ, ಗರ್ದಭಿಲ್ಲ, ನರವಾಹನ ಶಕರಾಜರ ರಾಜ್ಯಭಾರವು ನಡೆದು, ಈ ಶಕರಾಜನನ್ನು ವಿಕ್ರಮಾದಿತ್ಯನು ವೀ. ನಿ. ಪ. ೪೯೫ ರಲ್ಲಿ ಪರಾಜಯಗೊಳಿಸಿ, ಅನಂತರ ಇವನು ೫೬ ವರ್ಷಕಾಲ

---

1 ಒಂದನೇಮತದಂತೆ ಗುಪ್ತರ ಕಾಲವು ೨೫೫ ವರ್ಷಗಳಾಗಿದ್ದು ಎರಡನೇ ಮತದಂತೆ ೨೩೧ ವರ್ಷಗಳಾಗಿವೆ. ಈ ರೀತಿಯಾಗಿ ಇಲ್ಲಿ ೨೫೫ – ೨೩೧ = ೨೪ ವರ್ಷಗಳ ಅಂತರವೇರ್ಪಟ್ಟಿದೆ.

ರಾಜ್ಯಭಾರವಮಾಡಿರುವನೆಂದೂ ಹಿಂದೆ ಪ್ರತಿಪಾದಿಸಲಾಗಿದೆ. ಇಂತೆಯೇ ಅವಂತಿ ಯಲ್ಲಿ ಗಂಧರ್ವಸೇನಾದಿ ವಿಕ್ರಮಾದಿತ್ಯಪರ್ಯಂತರಾದ ರಾಜರ ರಾಜ್ಯಭಾರವು ನಡೆದಿದ್ದ ಸಮಯದಲ್ಲಿ ಮಗಧರಾಜ್ಯದಲ್ಲಿ ಶುಂಗ, ಕಣ್ವ ಮತ್ತು ಆಂಧ್ರಭೃತ್ಯರ ರಾಜ್ಯಭಾರವು ನಡೆದಿದ್ದಿತೆಂಬುದೂ ನಿಶ್ಚಿತವಿದೆ. ಆದ್ದರಿಂದ ಎರಡನೇ ಮತದ ಗಾಹೆ ಗಳಲ್ಲಿ ನರವಾಹನ (ಶಕ) ರಾಜನ ತರುವಾಯ ಆಂಧ್ರಭೃತ್ಯರ ರಾಜ್ಯಭಾರವನ್ನು ನಿರ್ದೇಶಿಸಿರುವುದು ಸರ್ವಥಾ ಅಸಂಬದ್ಧ ಮತ್ತು ಅಸಂಗತವಾಗಿರುವುದೆಂದು ಸ್ಫುಟ ಗೊಳ್ಳುವುದು. ಈ ರೀತಿಯಾಗಿ ಈ ಎಲ್ಲಾ ವಿಚಾರವಿಮರ್ಶೆಯಿಂದ, ಮೊದಲಮತದ ಗಾಹೆಗಳಲ್ಲಿ ಹೇಳಲಾಗಿರುವ ನರವಾಹನ (=ಶಕ) ವಿಜಯಿಯಾದ (ಶಕಾರಿ) ವಿಕ್ರ ಮಾದಿತ್ಯನ ಉದಯಕಾಲದ ಅರ್ಥಾತ್ ವೀ. ನಿ. ಪ. ೪೭೫ ನೇ ವರ್ಷದ ಸೂಚಕವಾಗಿರಬೇಕೆಂದೂ ಮತ್ತು ಈ ಸಮಯದಾಧಾರದಿಂದ ವೀ. ನಿ. ಪ. ೧೦೦೦ ವರ್ಷಗಳ ಪರಿಸರದಲ್ಲಿ ಆದ ಕಲ್ಕಿಶಕೋದಯವು ಮೇಲ್ಕಂಡ ಎರಡುಮತಗಳಿಗಾಧಾರ ವಾದ ಮೂಲ ಐತಿಹ್ಯದಲ್ಲಿ ನಿರೂಪಿತವಾಗಿದ್ದಿರಬೇಕೆಂದೂ ತರ್ಕಿಸಲವಕಾಶವಾಗು ವುದು.

೩) ಮೇಲ್ಕಂಡ ಮೊದಲ ಎರಡು ಮತಗಳ ಗಾಹೆಗಳಲ್ಲಿಯೂ ಗುಪ್ತರಾಜ ಮನೆತನದ ರಾಜ್ಯಭಾರಸಮಯವನ್ನು ಹೇಳಿ ಅನಂತರ ಕಲ್ಕಿರಾಜನ ಐತಿಹ್ಯವಿಷಯ ವನ್ನು ಹೇಳಿದೆ. ಇದರಿಂದ 'ಕಲ್ಕಿ' ಎಂಬುದು ಗುಪ್ತಮನೆತನದ ಅರಸರಲ್ಲೊಬ್ಬನ ಉಪನಾಮವಾಗಿಯಾಗಲೀ ಅಥವಾ ಈ ರಾಜಮನೆತನದ ಅನಂತರ ರಾಜ್ಯಭಾರಾ ಧಿಷ್ಠಿತನಾದ ರಾಜನೊಬ್ಬನ ಉಪನಾಮವಾಗಿಯಾಗಲೀ ಇರಬೇಕೆಂದು ಭಾವಿಸ ಲವಕಾಶವಾಗುವುದು.

ವೈದಿಕಮತಸಂಪ್ರದಾಯದ ಕಲ್ಕಿ ಅವತಾರ ವಿಷಯಕಥನದಲ್ಲಿ ಪೂರ್ವೋಕ್ತ ನಾದ ಕಲ್ಕಿರಾಜನ ಐತಿಹ್ಯದ ಕೆಲವಂಶಗಳಾದರೂ ಸಂಕಲಿತವಾಗಿವೆಯೆಂದು ಹೇಳ ಲವಕಾಶವಿದೆ. ಆದ್ದರಿಂದ ಈ ವಿಷಯವಾಗಿ ವಾಯುಪುರಾಣದ ಈ ಮುಂದಿನ ಕಥನವನ್ನು ಗಮನಿಸಬೇಕಾಗಿದೆ.

ಏವಂ ಸಂಧ್ಯಾಂಶಕಾಲೇ ಸಂಪ್ರಾಪ್ತೇ ತು ಯುಗಾಂತಿಕೇ ।
ತೇಷಾಂ ಶಾಸ್ತ್ರಾಹ್ಯಸಾಧೂನಾಂ ಭೃಗೂಣಾಂ ನಿಧನೋತ್ಥಿತಃ ॥ ೭೫ ॥
ಗೋತ್ರೇಣ ವೈ ಚಂದ್ರಮಸೋ ನಾಮ್ನಾ ಪ್ರಮಿತಿರುಚ್ಯತೇ ।
ಮಾಧವಸ್ಯತು ಸೋಂಶೇನ ಪೂರ್ವಂ ಸ್ವಾಯಂಭುವೇಂತರೇ ॥ ೭೬ ॥
.................................................................
.................................................................
ಗೋತ್ರೇಣ ವೈ ಚಂದ್ರಮಸಃ ಪೂರ್ವೇ ಕಲಿಯುಗೇ ಪ್ರಭುಃ ।
ದ್ವಾತ್ರಿಂಶೇಭ್ಯುದಿತೇ ವರ್ಷೇ ಪ್ರಕ್ರಾಂತೇ ವಿಂಶತಿಂ ಸಮಾಃ ॥ ೮೫ ॥

[ಅಧ್ಯಾಯ ೫೮]

ಕಲ್ಕಿರ್ವಿಷ್ಣುಯಶಾನಾಮಾ ಪಾರಾಶರ್ಯಃ ಪ್ರತಾಪವಾನ್ ।
ದಶಮೋಭಾವ್ಯಸಂಭೂತೋ ಯಾಜ್ಞ್ಯವಲ್ಕ್ಯಪುರಸ್ಸರಃ ॥ ೧೦೪ ॥

..........................................................................................

..........................................................................................

ಮಾನವಃ ಸ ತು ಸಂಜಜ್ಞೇ ದೇವಸ್ಯಾಂಶೇನ ಧೀಮತಃ ।
ಪೂರ್ವಜನ್ಮನಿ ವಿಷ್ಣುರ್ಯಃ ಪ್ರಮಿತಿರ್ನಾಮ ವೀರ್ಯವಾನ್ ॥ ೧೧೦ ॥

ಗಾತ್ರೇಣ ವೈ ಚಂದ್ರಮಸಃ ಪೂರ್ಣೇ ಕಲಿಯುಗೇಽಭವತ್ ।
ಇತ್ಯೇತಾಸ್ತಸ್ಯದೇವಸ್ಯ ದಶಸಂಭೂತಯಃ ಸ್ಮೃತಾಃ ॥ ೧೧೧ ॥

[ಅಧ್ಯಾಯ ೩೬]

ಕಲ್ಕಿಅವತಾರವಿಷಯನಿರೂಪಕವಾದ ಮೇಲ್ಕಂಡ ಕಥನದಲ್ಲಿ ಗತಕಾಲದ ರಾಜನೊಬ್ಬನ ಐತಿಹ್ಯಾಂಶಗಳು ಸಂಕಲಿತವಾಗಿವೆಯೆಂಬುದನ್ನು ಗುರುತಿಸಲವಕಾಶವಿದೆಯೆಂಬುವಲ್ಲದೆ, ಈ ರಾಜನು ಚಂದ್ರಮಸನ ಗೋತ್ರಜನಾಗಿರುವನೆಂಬ ಹೇಳಿಕೆಯಾಧಾರದಿಂದ, ಇವನು ಗುಪ್ತಮನೆತನದ ಪ್ರಥಮ ಚಂದ್ರಗುಪ್ತನ ಗೋತ್ರಜನಾದ ರಾಜನಾಗಿರಬೇಕೆಂದು ಗ್ರಹಿಸಲವಕಾಶವಾಗುವುದು. ಇದರಿಂದ 'ಕಲ್ಕಿ' ಎಂಬುದು ದ್ವಿತೀಯ ಚಂದ್ರಗುಪ್ತನ ಉಪನಾಮವಾಗಿದ್ದಿರಬೇಕೆಂದೂ ಮತ್ತು ಪೂರ್ವೋಲ್ಲಿಖಿತವಾದ ತಿಲೋಯಪಣ್ಣತ್ತಿಯ ಗಾಹೆಗಳ ಮೂಲ ಐತಿಹ್ಯವು ಇವನ ರಾಜ್ಯಭಾರದ ಆರಂಭ ಮತ್ತು ಅಂತ್ಯಸಮಯಗಳ ನಿರ್ದೇಶಕವಾಗಿದ್ದಿರಬೇಕೆಂದೂ ಪರಿಭಾವಿಸಲವಕಾಶವಾಗುವುದು.

ಕಲ್ಕಿಶಕೆಯಾಧಾರದಿಂದ ಕಾಲಗಣನೆಮಾಡಲಾಗಿರುವ ಪ್ರಾಚೀನೋಲ್ಲೇಖಗಳಾವುವೂ ಇರುವಂತೆ ಕಂಡುಬರುವುದಿಲ್ಲ. ಆದರೆ ಅರ್ವಾಚೀನಕಾಲದ ಕೃತಿಯೊಂದರಲ್ಲಿ, ಶ್ರವಣಬೆಳಗುಳದ ಸುಪ್ರಸಿದ್ಧ ಗೋಮಟೇಶ್ವರಮೂರ್ತಿಯು ಪ್ರತಿಷ್ಠಿತವಾದ ಕಾಲವನ್ನು ಕಲ್ಕಿಶಕೆಯ ಗಣನೆಯಾಧಾರದಿಂದ ಈ ಮುಂದಿನಂತೆ ಹೇಳಿದೆ.

ಕಲ್ಯಬ್ದೇ[1] ಷಟ್‌ಛತಾಖ್ಯೇ ವಿನುತವಿಭವಸಂವತ್ಸರೇ ಮಾಸಿಚೈತ್ರೇ
ಪಂಚಮ್ಯಾಂ ಶುಕ್ಲಪಕ್ಷೇ ದಿನಮಣಿದಿವಸೇ ತ್ವಷ್ಟ್ಯಯೋಗೇ ಸುಲಗ್ನೇ ।
ಸೌಭಾಗ್ಯೇ ಹಸ್ತನಾಮ್ನಿ ಪ್ರಕಟಿತಭಗಣೇ ಸುಪ್ರಶಸ್ತಾಂ ಚಕಾರ
ಶ್ರೀಮಚ್ಚಾಮುಂಡರಾಜೋ ಬೆಳುಗುಳನಗರೇ ಗೋಮಟೇಶಪ್ರತಿಷ್ಠಾಂ ॥

[ಎಪಿಗ್ರಾಫಿಕಾ ಕರ್ನಾಟಿಕಾ–ವಾಲ್ಯೂಂ ೨ ; ಪು. ಸಂ. ೨೩]

---

1 ಪಾಠಾಂತರ 'ಕಲ್ಕ್ಯಬ್ದೇ'

ಕಲಿ ಅಥವಾ ಕಲ್ಕಿ ವರ್ಷ ೬೦೦ ನೇ ವಿಭವ ಸಂವತ್ಸರದ ಚೈತ್ರಮಾಸದಲ್ಲಿ [ಮಾರ್ಚಿ ಮಾಹೆಯ ಅಂತ್ಯ ಅಥವಾ ಏಪ್ರಿಲ್ ಮಾಹೆಯ ಆದಿಭಾಗದಲ್ಲಿ] ಚಾಮುಂಡರಾಯನು ಶ್ರೀ ಗೋಮಟೇಶ್ವರಮೂರ್ತಿಯ ಪ್ರತಿಷ್ಠಾಪನೆಮಾಡಿರುವನೆಂಬುದು ಈ ಪದ್ಯದ ತಾತ್ಪರ್ಯವಾಗಿದೆ. ಈ ಪದ್ಯದ ಹೇಳಿಕೆ ಹಾಗೂ ಇತರ ಐತಿಹಾಸಿಕಸಾಕ್ಷ್ಯಾಧಾರದಿಂದ ಶ್ರೀಗೋಮಟೇಶ್ವರಮೂರ್ತಿಪ್ರತಿಷ್ಠಾಪಕನಾದ ಚಾವುಂಡರಾಯನು ಗಂಗರಾಜಮನೆತನದ ರಾಚಮಲ್ಲ (ಅಥವಾ ರಾಜಮಲ್ಲ) ನ ಮಂತ್ರಿಯಾಗಿದ್ದುದಾಗಿಯೂ ಶಾ. ಶಕ ೯೦೦ ರಲ್ಲಿ (ಕ್ರಿ. ಶ. ೯೭೮ ರಲ್ಲಿ) ರಚಿಸಿರುವ ಚಾಮುಂಡರಾಯಪುರಾಣದಲ್ಲಿ ಇವನು ತನ್ನ ಕಾರ್ಯಸಾಧನೆಗಳ ಸೂಚಕವಾದ ಬಿರುದುಗಳೆಲ್ಲವನ್ನೂ ಹೇಳಿಕೊಂಡಿರುವನಾದರೂ ಶ್ರೀ ಗೋಮಟೇಶ್ವರಮೂರ್ತಿಪ್ರತಿಷ್ಠಾಪನಾಕಾರ್ಯದ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲವಾದ್ದರಿಂದ ಈ ಮೂರ್ತಿಯ ಪ್ರತಿಷ್ಠೆಯು ಕ್ರಿ. ಶ. ೯೭೮ ರ ತರುವಾಯ ಆಗಿರಬೇಕೆಂದೂ ಮತ್ತು ಸುಪ್ರಸಿದ್ಧನಾದ ರನ್ನಕವಿಯಿಂದ ಕ್ರಿ. ಶ. ೯೯೩ ರಲ್ಲಿ ರಚಿತವಾಗಿರುವ ಅಜಿತನಾಥಪುರಾಣದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯು ಈ ಭವ್ಯಮಹಾಮೂರ್ತಿಯ ದರ್ಶನಮಾಡಿದಳೆಂಬ ಉಲ್ಲೇಖವಿರುವುದರಿಂದ ಈ ಸಮಯದ ಪೂರ್ವಭಾವಿಯಾಗಿಯೇ ಈ ಮೂರ್ತಿಯು ಪ್ರತಿಷ್ಠಿತವಾಗಿರಬೇಕೆಂದೂ ಪುರಾತತ್ತ್ವ ಸಂಶೋಧಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕ್ರಿ. ಶ ೯೭೮ ನೇ ವರ್ಷ ಮತ್ತು ೯೯೩ ನೇ ವರ್ಷಗಳ ಮಧ್ಯವರ್ತಿ ಸಮಯದಲ್ಲಿ ಯಾವ ವರ್ಷವೂ ಪದ್ಯದಲ್ಲಿ ಹೇಳಿರುವಂತೆ ವಿಭವಸಂವತ್ಸರವಾಗಿರಲು ಅವಕಾಶವಿಲ್ಲವಾದ್ದರಿಂದ ಈ ಒಂದು ಅಂಶವನ್ನು ಕುರಿತು ಪದ್ಯದ ಹೇಳಿಕೆಯು ದೋಷಭಾಗಿಯಾಗಿರುವುದೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇದರಂತೆ ಶ್ರೀ ಗೋಮಟೇಶ್ವರಮೂರ್ತಿಯ ಪ್ರತಿಷ್ಠಾಪನಾಕಾರ್ಯವು ಶಾ. ಶಕ ವರ್ಷ ೯೦೦ (=ಕ್ರಿ. ಶ. ೯೭೮ ) ಮತ್ತು ಶಾ. ಶಕ ವರ್ಷ ೯೧೫ ರ (=ಕ್ರಿ. ಶ. ೯೯೩ ರ) ಮಧ್ಯವರ್ತಿಕಾಲದಲ್ಲಿ ನಡೆದಿರುವುದೆಂದು ಅಧಿಗತವಾದಂತಾಗುವುದು. ಇಂತಿದ್ದರೂ ಶ್ರೀಗೋಮಟೇಶ್ವರಮೂರ್ತಿಪ್ರತಿಷ್ಠೆಯ ಕಾಲನಿರ್ದೇಶಕವಾಗಿ ಮೇಲ್ಕಂಡ ಪದ್ಯದಲ್ಲಿ ಬಳಸಲಾಗಿರುವ ಕಲಿ ಅಥವಾ ಕಲ್ಕಿ ಶಕೆಯು ಯಾವುದೆಂಬುದು ಇಂದಿಗೂ ಸಮಸ್ಯೆಯಾಗಿಯೇ ಉಳಿದಿದೆ. ಈ ಹಿಂದೆ ಹೇಳಿರುವಂತೆ ಗುಪ್ತರಾಜಮನೆತನದ ದ್ವಿತೀಯ ಚಂದ್ರಗುಪ್ತನಿಗೆ ಕಲ್ಕಿ ಎಂಬ ಉಪನಾಮವು ಇದ್ದಿರಬಹುದೆಂಬುದು ಸಂಭಾವಿತವೆನಿಸುವುದಾದಲ್ಲಿ ಇವನ ರಾಜ್ಯಭಾರಾರಂಭ ಸಮಯದಾಧಾರದಿಂದ ಕಲ್ಕಿ ಶಕೆಯು ಪ್ರವರ್ತಿತವಾಗಿದೆಯೆಂದು ಹೇಳಲವಕಾಶವಾಗುವುದು. ಗುಪ್ತರಾಜಮನೆತನದ ರಾಜ್ಯಭಾರವು ಕ್ರಿ. ಶ. ೩೦೪ ರಲ್ಲಿ ಆರಂಭವಾಗಿದ್ದು ಈ ಸಮಯದಿಂದ ಮುಂದೆ ೮೨ ನೇ ವರ್ಷದಲ್ಲಿ (ಕ್ರಿ. ಶ. ೩೮೬ ರಲ್ಲಿ) ದ್ವಿತೀಯ ಚಂದ್ರಗುಪ್ತನ ರಾಜ್ಯಾಭಿಷೇಕವು ನಡೆದಿದೆಯೆಂದು ಹಿಂದೆ ಹೇಳಿದೆ. ಇದರಂತೆ ಶ್ರೀ ಗೋಮಟೇಶ್ವರಮೂರ್ತಿಪ್ರತಿಷ್ಠೆಯು ಕ್ರಿ. ಶ (೩೮೬+೬೦೦=) ೯೮೬ ನೇ ವ್ಯಯ

ನಾಮಸಂವತ್ಸರದಲ್ಲಿ ನಡೆದಿದೆಯೆಂದು ಪರಿಗಣಿತವಾಗುವುದು. ಈ ಪರಿಗಣನೆಯಂತೆ ಕಲ್ಕಿಶಕೆಯು ವೀ. ನಿ. ಪ. ವರ್ಷ (೫೨೮ + ೩೮೬=) ೯೧೪ ರಲ್ಲಿ ಆರಂಭವಾಗಿರಬೇಕೆಂದು ಫಲಿತವಾಗುವುದು. ಇಂತೆಯೇ ಪೂರ್ವೋಲ್ಲಿಖಿತವಾದ ಕಲ್ಕಿ ಐತಿಹ್ಯ ನಿರೂಪಕಗಾಹೆಗಳಲ್ಲಿ ಕಲ್ಕಿಯು ೪೨ ವರ್ಷಕಾಲ ರಾಜ್ಯಭಾರಮಾಡಿರುವನೆಂದು ಹೇಳಲಾಗಿರುವುದರಿಂದ ದ್ವಿತೀಯಚಂದ್ರಗುಪ್ತ-ಕಲ್ಕಿಯ ರಾಜ್ಯಭಾರವು ವೀ. ನಿ. ಪ. ೯೫೬ ರಲ್ಲಿ (=ಕ್ರಿ. ಶ. ೪೨೮ ರಲ್ಲಿ) ಅಂತ್ಯಗೊಂಡಿರುವುದೆಂದು ಸೂಚಿತವಾಗುವುದು. ಇದರಂತೆ ಶ್ರೀ ವೀರನಿರ್ವಾಣಪಶ್ಚಾತ್ ೧೦ ನೇ ಶತಮಾನದಲ್ಲಿ ಅರ್ಥಾತ್ ಸ್ಥೂಲಮಾನದಿಂದ ಸಹಸ್ರವರ್ಷಗಳ ಸಮಯದಲ್ಲಿ ಕಲ್ಕಿಯು ಆದನೆಂಬ ಮೂಲ ಐತಿಹ್ಯವಿದ್ದಿರಬೇಕೆಂದು ಮತ್ತು ಇದನ್ನು ಸಹಸ್ರವರ್ಷಗಳ ಪೂರ್ಣತೆಗೆ ಅನ್ವಿತವಾಗುವಂತೆ ಮಾಡಲು ಕಾಲಾಂತರದಲ್ಲಿ ಯತ್ನಿಸಲಾಗಿದೆಯೆಂದು ಪೂರ್ವೋಲ್ಲಿಖಿತ ಗಾಹೆಗಳ ಪರಿಶೀಲನದಿಂದ ವ್ಯಕ್ತವಾಗುವುದು.

ಕಲ್ಕಿಯ ಐತಿಹ್ಯವಿಷಯವಾಗಿ ಹಿಂದೆ ಉಲ್ಲೇಖಿಸಲಾಗಿರುವ ಮೊದಲೆರಡು ಮತಗಳ ಗಾಹೆಗಳಲ್ಲಿ ಕಂಡುಬರುವ ಅಸಂಗತಾಂಶಗಳೇನೆಂಬುದನ್ನು ಹಿಂದೆ ವಿವರಿಸಲಾಗಿದೆ. ಮೊದಲಮತದ ಗಾಹೆಯಲ್ಲಿ ಗುಪ್ತರಾಜಮನೆತನದ ರಾಜ್ಯಭಾರಕಾಲವನ್ನು ೨೫೫ ವರ್ಷಗಳೆಂದು ಹೇಳಲಾಗಿದ್ದು, ಎರಡನೇ ಮತದ ಗಾಹೆಯಲ್ಲಿ ೨೩೧ ವರ್ಷಗಳೆಂದು ಹೇಳಿರುವುದು ವಿದಿತವಿದೆ. ಇಂತೆಯೇ ಮೂರನೇ ಮತದ ಗಾಹೆಯಲ್ಲಿ ವೀ. ನಿ ಪ. ೬೮೩ ನೇ ವರ್ಷದಲ್ಲಿ ಅಂತ್ಯಗೊಂಡ ಆಚಾರಾಂಗಧರರ ಕಾಲದಿಂದ ಮುಂದೆ ೨೭೫ ನೇ ವರ್ಷದ ತರುವಾಯದಲ್ಲಿ ಕಲ್ಕಿಯು ರಾಜಪಟ್ಟಸ್ಥನಾಗಿರುವನೆಂದು ಹೇಳಿದೆ. ಈ ಎರಡು ಸಂಖ್ಯೆಗಳ ಮೊತ್ತಕ್ಕೆ ಕಲ್ಕಿಯ ರಾಜ್ಯಭಾರಾವಧಿಯ ೪೨ ವರ್ಷಗಳನ್ನು ಸೇರಿಸಿದಲ್ಲಿ ವೀ. ನಿ. ಪ. (೬೮೩ + ೨೭೫ + ೪೨=) ೧೦೦೦ ದ ವರ್ಷದಲ್ಲಿ ಕಲ್ಕಿಯು ವಿಧಿವಶವಾಗಿರುವನೆಂದು ಗಣನೆಯಾದಂತಾಗುವುದು. ಇದರಿಂದ ಆಚಾರಾಂಗಧರರ ಸಮಯ ಮತ್ತು ಕಲ್ಕಿಯ ಪಟ್ಟಸಮಯಗಳ ಮಧ್ಯವರ್ತಿ ಕಾಲಸೂಚಕವಾದ ೨೭೫ ವರ್ಷಾಂಕ ಸಂಖ್ಯೆಯನ್ನು ೧೦೦೦ ವರ್ಷಗಳ ಪೂರಕವಾಗಿ ಅನ್ವಿತಗೊಳಿಸಲಾಗಿದೆಯೆಂದು ಗ್ರಹಿಸಲವಕಾಶವಾಗುವುದು. ಆದರೆ ಗುಪ್ತರಾಜರ ರಾಜ್ಯಭಾರಕಾಲಸೂಚಕವಾದ ಪೂರ್ವೋಕ್ತವಾದ ಎರಡು ಸಂಖ್ಯೆಗಳಲ್ಲೊಂದಾದ ೨೩೧ ನ್ನು ಆಚಾರಾಂಗಧರರ ಸಮಯನಿರ್ದೇಶಕವಾದ ೬೮೩ ಕ್ಕೆ ಸೇರಿಸಿದಲ್ಲಿ ಮೊತ್ತವು (೬೮೩+೨೩೧=) ೯೧೪ ಆಗುವುದು. ಇದರಿಂದ ಮೂಲಐತಿಹ್ಯದನುಗುಣವಾಗಿ ವೀ. ನಿ. ಪ. ೯೧೪ ರಲ್ಲಿ ದ್ವಿತೀಯ ಚಂದ್ರಗುಪ್ತ-ಕಲ್ಕಿಯ ರಾಜ್ಯಾಭಿಷೇಕವಾಗಿದೆಯೆಂಬ ಪೂರ್ವಪ್ರತಿಪಾದನೆಯು ಸಮರ್ಥಿತವಾದಂತಾಗುವುದು. ಇಂತೆಯೇ ಪೂರ್ವೋಲ್ಲಿಖಿತವಾದಗಾಹೆಗಳಲ್ಲಿ ಉಕ್ತವಾಗಿರುವ ಶಕೋತ್ಪತ್ತಿಸಮಯನಿರ್ದೇಶಕವಾದ ಸಂಖ್ಯೆಯು ದ್ವಿತೀಯ ಚಂದ್ರಗುಪ್ತ-ಕಲ್ಕಿಯು ವಿಧಿವಶನಾದ ಸಮಯದ ಸೂಚಕವಾಗಿರುವುದೆಂದು ನಿರೂಪಿಸಬಹುದಾಗಿದೆ. ಮೊದಲೆರಡು ಮತಗಳ ಗಾಹೆಗಳಲ್ಲಿ ಶಕೋತ್ಪತ್ತಿ

ಸಮಯಸೂಚಕವಾಗಿ ಉಕ್ತವಾಗಿರುವ ಅಂಶಗಳು ವಾಸ್ತವವಾಗಿ ನರವಾಹನಶಕನ ರಾಜ್ಯಭಾರಾಂತ್ಯಸಮಯ ಅಥವಾ ಶಕಕಾರನಾದ ವಿಕ್ರಮಾದಿತ್ಯನ ರಾಜ್ಯಭಾರಾರಂಭಸಮಯವಾದ ವೀ. ನಿ. ಪ. ೪೯೫ ನೇ ವರ್ಷದ ಸೂಚಕವಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಈ ವೀ. ನಿ. ಪ. ವರ್ಷ ಸಂಖ್ಯೆ ೪೯೫ ಕ್ಕೆ ಮೊದಲ ಮತದ ಗಾಹೆಯಲ್ಲಿ ಶಕೋತ್ಪತ್ತಿಸಮಯವೆಂದು ಹೇಳಲಾಗಿರುವ ವೀ. ನಿ. ಪ. ವರ್ಷ ಸಂಖ್ಯೆ ೪೬೧ ನ್ನು ಸೇರಿಸಿದಲ್ಲಿ ವೀ. ನಿ. ಪ. (೪೯೫ + ೪೬೧=) ೯೫೬ ರಲ್ಲಿ ಕಲ್ಕಿಯು ವಿಧಿವಶನಾಗಿರುವನೆಂದು ಪರಿಗಣಿತವಾಗುವುದು. ಇದರಿಂದ ಮೂಲಐತಿಹ್ಯದನುಗುಣವಾಗಿ ಕ್ರಿ. ಶ. (೯೫೬ – ೫೨೮=) ೪೨೮ ರಲ್ಲಿ ದ್ವಿತೀಯ ಚಂದ್ರಗುಪ್ತ-ಕಲ್ಕಿಯ ರಾಜ್ಯಭಾರವು ಅಂತ್ಯಗೊಂಡಿರುವುದೆಂಬ ಪೂರ್ವಪ್ರತಿಪಾದನೆಯು ಸಮರ್ಥಿತವಾತಾಗುವುದು.

ಶ್ರೀ ಗೋಮಟೇಶ್ವರ ಮೂರ್ತಿಯ ಪ್ರತಿಷ್ಠಾಪನಾ ಕಾರ್ಯವು ಕ್ರಿ. ಶ. (೩೮೬+೬೦೦=) ೯೮೬ ನೇ ವ್ಯಯನಾಮಸಂವತ್ಸರದಲ್ಲಿ ನಡೆದಿದೆಯೆಂದು ಹಿಂದೆ ವಿವರಿಸಲಾಗಿದೆ. ಆದರೆ ಈ ಮೂರ್ತಿಯು ಪ್ರತಿಷ್ಠೆಯಾದ ಕಾಲವನ್ನು ನಿರ್ದೇಶಿಸುವ ಪೂರ್ವೋಲ್ಲಿಖಿತವಾದ 'ಕಲ್ಕ್ಯಬ್ದೇ ಷಟ್ ಶತಾಖ್ಯೇ ವಿನುತ ವಿಭವ ಸಂವತ್ಸರೇ....' ಎಂಬ ಪದ್ಯದಲ್ಲಿ ವ್ಯಯನಾಮ ಸಂವತ್ಸರದ ಬದಲಾಗಿ ವಿಭವನಾಮ ಸಂವತ್ಸರವೆಂದು ಹೆಸರಿಸುವಂತಹ ಪ್ರಮಾದವೇರ್ಪಟ್ಟಿರಲು ಕಾರಣವೇನೆಂಬುದನ್ನು ಊಹಿಸಬಹುದಾಗಿದೆ. ಪ್ರಾಯಶಃ ಈ ಪದ್ಯಕಾರನು ಕಲ್ಕಿಶಕೆಯ ಆರಂಭವನ್ನು ಕಲ್ಕಿಯ (=ದ್ವಿ. ಚಂದ್ರಗುಪ್ತನ) ರಾಜ್ಯಭಾರಾರಂಭ ಸಮಯದಾಧಾರದಿಂದ ಗಣನೆಮಾಡಿರದೆ, ಇವನ ರಾಜ್ಯಭಾರಾಂತ್ಯ ಸಮಯವಾದ ಕ್ರಿ. ಶ. ೪೨೮ ನೇ ವಿಭವ ಸಂವತ್ಸರದ ಆಧಾರದಿಂದ ಗಣನೆಮಾಡಿರುವನಾಗಿ ಶ್ರೀ ಗೋಮಟೇಶ್ವರಮೂರ್ತಿಯು ಪ್ರತಿಷ್ಠಾಪನೆಯಾದ ಸಂವತ್ಸರವನ್ನು ಹೆಸರಿಸುವಲ್ಲಿ ಪ್ರಮಾದವೇರ್ಪಟ್ಟಿದೆಯೆಂದು ಕಂಡುಬರುತ್ತದೆ. ಈ ರೀತಿಯಾಗಿ ಸದ್ಯಉಪಲಬ್ಧವಿರುವ ಐತಿಹ್ಯಗಳಾಧಾರದಿಂದ ಗುಪ್ತರಾಜಮನೆತನದ ದ್ವಿತೀಯ ಚಂದ್ರಗುಪ್ತನಿಗೆ 'ಕಲ್ಕಿ' ಅಥವಾ 'ಕಲಿ' ಎಂಬ ಉಪನಾಮವು ರೂಢಿಗತವಾಗಿರಬೇಕೆಂದೂ ಮತ್ತು ವೀ. ನಿ. ಪ. ೯೧೪ ನೇ ವರ್ಷ(=ಕ್ರಿ. ಶ. ೩೮೬ ನೇ ಇಸವಿ) ವ್ಯಯನಾಮಸಂವತ್ಸರದಲ್ಲಿ ನಡೆದ ಇವನ ರಾಜ್ಯಾಭಿಷೇಕ ಪ್ರಸಂಗದಾಧಾರದಿಂದ ಕಲ್ಕಿಶಕೆಯ ಗಣನೆಯು ಪ್ರವರ್ತಿತವಾಗಿರಬೇಕೆಂದೂ ತರ್ಕಿತವಾಗುವುದು.

# ಶ್ರೀ ವಿ ಹಾ ರ

→❦←

ಶ್ರೀ ವೀರತೀರ್ಥಂಕರನ ಜನನ, ಪ್ರವ್ರಜ್ಯೆ, ಕೇವಲಬೋಧ ಮತ್ತು ಧರ್ಮ ತೀರ್ಥಪ್ರವರ್ತನಾರ್ಥವಾದ ಶ್ರೀವಿಹಾರಪ್ರಸಂಗಗಳ ಕಾಲಾನುಕ್ರಮಣಿಕೆಯನ್ನು, ಪುರಾಣೋಕ್ತವಾದ ಐತಿಹ್ಯಾಧಾರ ಹಾಗೂ ಪೂರ್ವಪ್ರತಿಪಾದಿತವಾದ ನಿರ್ವಾಣ ಸಮಯದಾಧಾರದಿಂದ, ಪ್ರರೂಪಿಸಬಹುದಾಗಿದೆ.

ಪೂರ್ವಪ್ರತಿಪಾದನೆಯಂತೆ ಶ್ರೀವೀರತೀರ್ಥಂಕರನ ಆಯುರ್ಮಾನವು ೭೧ ವರ್ಷ ೬ ತಿಂಗಳುಗಳ ಪ್ರಮಾಣವುಳ್ಳದ್ದಾಗಿದೆ. ಇದರಂತೆ ನಿರ್ವಾಣಸಮಯ ದಿಂದ ೭೧ ವರ್ಷ ೬ ತಿಂಗಳುಗಳ ಪೂರ್ವದಲ್ಲಿ (= ಕ್ರಿ. ಪೂ. ೫೨೭ ವ. ೨ ತಿಂ. + ೭೧ ವ. ೬ ತಿಂ. = ೫೯೮ ವ. ೯ ತಿಂ. = ೫೯೯ ನೇ ಇಸವಿ ಏಪ್ರಿಲ್ ಮಾಹೆಯಲ್ಲಿ) ಶ್ರೀ ವೀರತೀರ್ಥಂಕರನು ಜನಿಸಿರುವನೆಂದು ಅಧಿಗತವಾಗುವುದು. ಇಂತೆಯೇ ಶ್ರೀ ವೀರತೀರ್ಥಂಕರನು ತನ್ನ ೩೦ ವರ್ಷ ವಯೋಮಾನದಲ್ಲಿ ಮಾರ್ಗಶಿರಮಾಸದಲ್ಲಿ ಪ್ರವ್ರಜಿತನಾಗಿ ೧೨ ವರ್ಷಗಳ ತಪೋಧ್ಯಾನಾಚರಣೆಯ ಅನಂತರ ವೈಶಾಖಮಾಸ ದಲ್ಲಿ ಕೇವಲಬೋಧಸಂಪನ್ನನಾದನೆಂದು ಗುಣಭದ್ರಾಚಾರ್ಯರು ಹೇಳಿದ್ದಾರೆ.[1] ಈ ಐತಿಹ್ಯದನುಗುಣವಾಗಿ ಶ್ರೀ ವೀರತೀರ್ಥಂಕರನು ತನ್ನ ೨೯ ವರ್ಷ ೮ ತಿಂಗಳುಗಳ ವಯೋಮಾನದಲ್ಲಿ ಕ್ರಿ. ಪೂ. (೫೯೮ ವ. ೯ ತಿಂ. — ೨೯ ವ. ೮ ತಿಂ. = ೫೬೯ ವ. ೧ ತಿಂ.=) ೫೭೦ ನೇ ಇಸವಿ ಡಿಸೆಂಬರ್ ಮಾಹೆಯಲ್ಲಿ ಪ್ರವ್ರಜಿತನಾಗಿರುವನೆಂದೂ ಈ ಸಮಯದಿಂದ ೧೨ ವರ್ಷ ೫ ತಿಂಗಳುಗಳ ಕಾಲದ ತಪೋಧ್ಯಾನಾಚರಣೆಯ ಅನಂತರ ತನ್ನ ೪೨ ವರ್ಷ ೧ ತಿಂಗಳ ವಯೋಮಾನದಲ್ಲಿ ಕ್ರಿ. ಪೂ. (೫೯೮ ವ. ೯ ತಿಂ. — ೪೨ ವ. ೧ ತಿಂ. = ೫೫೬ ವ. ೮ ತಿಂ.=) ೫೫೭ ನೇ ಇಸವಿ ಮೇ ಮಾಹೆ ಯಲ್ಲಿ ಕೇವಲಬೋಧಸಂಪನ್ನನಾಗಿರುವನೆಂದೂ ಮತ್ತು ಮುಂದೆ ೨೯ ವರ್ಷ ೬ ತಿಂಗಳುಗಳ ಅನಂತರ ಕ್ರಿ. ಪೂ. (೫೨೭ ವ. ೨ ತಿಂ.=) ೫೨೮ ನೇ ಇಸವಿ ನವೆಂಬರ್ ಮಾಹೆಯಲ್ಲಿ ನಿರ್ವಾಣಹೊಂದಿರುವನೆಂದೂ ಪರಿಗಣಿತವಾಗುವುದು. ಈ ಪರಿಗಣನೆ ಯನುಗುಣವಾಗಿ ಶ್ರೀ ವೀರತೀರ್ಥಂಕರನ ಜೀವಿತಸಂಬಂಧಿಯಾದ ಮೇಲ್ಕಂಡ ಐತಿಹ್ಯ ಪ್ರಸಂಗಗಳ ಕಾಲಾನುಕ್ರಮಣಿಕೆಯನ್ನು ಮುಂದಿನ ಚೌಬಂಧದಲ್ಲಿ ಪ್ರರೂಪಿಸಲಾಗಿದೆ.

---

1 ಮಹಾಪುರಾಣ—ವರ್ಧಮಾನತೀರ್ಥಂಕರ ಪುರಾಣಭಾಗ—ಶ್ಲೋಕ ಸಂಖ್ಯೆ ೨೯೬, ೩೦೩ ಮತ್ತು ೩೪೮.

## ⓢ ವೀರತೀರ್ಥಂಕರರ ಜನನಾದಿ ಪ್ರಸಂಗಗಳ ಕಾಲಾನುಕ್ರಮಣಿಕೆ

| ಪ್ರಸಂಗಗಳು | ವಯೋಮಾನ | | ಶಾಲಿವಾಹನ ಶಕಪೂರ್ವ | | | ಕ್ರಿಸ್ತಪೂರ್ವ | |
|---|---|---|---|---|---|---|---|
| | ವರ್ಷ | ತಿಂಗಳು | | | | | |
| ಜನನ | ೦ | ೦ | ೬೭೭ ನೇ ವರ್ಷ | ಚೈತ್ರಮಾಸ | ಶು. ೧೩ | ೫೯೯ ನೇ ಇಸವಿ | ಏಪ್ರಿಲ್ |
| ಪ್ರವ್ರಜ್ಯೆ | ೨೯ | ೮ | ೬೪೮ ನೇ ವರ್ಷ | ಮಾರ್ಗಶಿರಮಾಸ | ಬ. ೧೦ | ೫೭೦ ನೇ ಇಸವಿ | ಡಿಸೆಂಬರ್ |
| ಕೇವಲಬೋಧ | ೪೨ | ೧ | ೬೩೫ ನೇ ವರ್ಷ | ವೈಶಾಖಮಾಸ | ಶು. ೧೦ | ೫೫೭ ನೇ ಇಸವಿ | ಮೇ |
| ನಿರ್ವಾಣ | ೭೧ | ೭ | ೬೦೫ ನೇ ವರ್ಷ | ಕಾರ್ತಿಕಮಾಸ[1] | ಬ. ೧೪ | ೫೨೭ ನೇ ಇಸವಿ | ನವೆಂಬರ್ |

1 ಪ್ರತಿಯೊಂದು ಮಾಸದ ಆರಂಭ ಮತ್ತು ಅಂತ್ಯಗಳನ್ನು ಗಣನೆಮಾಡುವಲ್ಲಿ ಆಧುನಿಕ ಪದ್ಧತಿ ಮತ್ತು ಪ್ರಾಚೀನ ಪದ್ಧತಿಗಳ ಮಧ್ಯೆ ವ್ಯತ್ಯಾಸವಿದೆಯೆಂದು ಹೇಳಲವಕಾಶವಿದೆ. ಆಧುನಿಕಪದ್ಧತಿಯನುಗುಣವಾಗಿ ಪ್ರತಿಮಾಸವೂ ಶುಕ್ಲಪಾಡ್ಯದಂದು ಆರಂಭವಾಗಿ ಅಮಾವಾಸ್ಯೆಯಂದು ಕೊನೆಗೊಳ್ಳುವುದು. ಪ್ರಾಚೀನ ಪದ್ಧತಿಯನುಗುಣವಾಗಿ ಪ್ರತಿಯೊಂದು ಮಾಸವೂ ಕೃಷ್ಣಪಾಡ್ಯದಂದು ಆರಂಭವಾಗಿ ಪೂರ್ಣಿಮೆಯಂದು ಅಂತ್ಯಗೊಳ್ಳುತ್ತಿದ್ದಿತೆಂದು ಕಂಡುಬರುತ್ತದೆ. ಇದರಿಂದ ಆಧುನಿಕ ಪದ್ಧತಿಯನುಗುಣವಾದ ಅಶ್ವೀಜಮಾಸದ ಬಹುಳ ಚತುರ್ದಶಿಯು ಪ್ರಾಚೀನ ಪದ್ಧತಿಯನುಗುಣವಾಗಿ ಕಾರ್ತಿಕ ಬಹುಳ ಚತುರ್ದಶಿಯೆನಿಸಿ ಪರಿಗಣಿತವಾಗಿದ್ದಂತೆ ಕಂಡುಬರುತ್ತದೆ.

**ಧರ್ಮತೀರ್ಥೋತ್ಪತ್ತಿ :** ಕೇವಲಜ್ಞಾನಸಂಪನ್ನನಾದ ಶ್ರೀ ವೀರ ತೀರ್ಥಂಕರನು ಪಂಚಶೈಲಪುರದ (=ರಾಜಗೃಹನಗರದ) ಬಳಿ ಸಮವಸರಣಮಂಡಿತ ನಾಗಿದ್ದನು. ಆ ಸಮಯದಲ್ಲಿ ಗೌತಮಗ್ರಾಮವಾಸಿಯೂ ವೇದವೇದಾಂಗಪಾರ ಗಾಮಿಯೂ ಪಂಚಶತಶಿಷ್ಯಗಣಸಮೇತನೂ ಆದ ಇಂದ್ರಭೂತಿ ಗೌತಮನು ಸಮವ ಸರಣಕ್ಕೆ ಬಂದು, ಶ್ರೀ ವೀರತೀರ್ಥಂಕರನನ್ನು ವಂದಿಸಿ, ಜೀವಸ್ವರೂಪದ ವಿಷಯ ವಾಗಿ ತನಗಿದ್ದ ಸಂಶಯವನ್ನು ಪರಿಹರಿಸಿಕೊಳ್ಳಲೋಸುಗ ಷಷ್ಟಿಸಹಸ್ರಪರಿಮಿತವಾದ ಪ್ರಶ್ನೆಗಳನ್ನು ಕೇಳಿದನು.[1] ಈ ಪ್ರಶ್ನೆಗಳಿಗುತ್ತರವಾಗಿ ಶ್ರೀ ವೀರತೀರ್ಥಂಕರನಿಂದ ಉಪದಿಷ್ಟವಾದ ಜೀವಾಜೀವಾದಿತತ್ತ್ವಸ್ವರೂಪವನ್ನು ತಿಳಿದು ಸಂಶಯವಿರಹಿತ ನಾದನು. ಅನಂತರ ನಿರ್ಗ್ರಂಥಯತಿದೀಕ್ಷೆಪಡೆದ ಇಂದ್ರಭೂತಿ ಗೌತಮನು ಶ್ರುತ ಋದ್ಧಿಸಂಪನ್ನನಾಗಿ, ಶ್ರಾವಣ ಬಹುಳ ಪಾಡ್ಯಮಿಯಂದು ಚತುರ್ದಶಪೂರ್ವಸಹಿತ ವಾದ ದ್ವಾದಶಾಂಗಶ್ರುತವನ್ನು ರಚನೆಮಾಡಿ, ಪ್ರಥಮಗಣಭೃತ್ಪದವಿಯನ್ನಲಂಕರಿಸಿ ದನು. ಈ ರೀತಿಯಾಗಿ ಗೌತಮಗಣಧರಸ್ವಾಮಿಯಿಂದ ಚತುರ್ದಶಪೂರ್ವಸಹಿತ ವಾದ ದ್ವಾದಶಾಂಗಶ್ರುತರಚನೆಯಾದ ಈ ದಿನವು ತೀರ್ಥೋತ್ಪತ್ತಿಯ ದಿನವೆಂದೂ ಮತ್ತು ಯುಗಾದಿಯ ದಿನವೆಂದೂ ಸಂಸ್ತುತವಾಗಿದೆ.[2]

**ಶ್ರೀ ವೀರತೀರ್ಥಂಕರನ ಧರ್ಮಬೋಧನಾ ಕ್ರಮದ ವೈಶಿಷ್ಟ್ಯ :** ಜೈನಮತವು 'ದಿಗಂಬರ' ಮತ್ತು 'ಶ್ವೇತಾಂಬರ' ಎಂಬ ಎರಡು ಪಂಗಡಗಳಾಗಿ ಕವಲುಗೊಂಡಿರುವುದು ವಿದಿತವಿದೆ. ಧರ್ಮದ ತಾತ್ತ್ವಿಕಸ್ವರೂಪವನ್ನು ಪ್ರರೂಪಿಸು ವಲ್ಲಿ ಈ ಎರಡು ಪಂಗಡಗಳ ಮಧ್ಯೆ ಮಹತ್ವವೆನಿಸುವ ಯಾವ ಹೆಚ್ಚಿನ ಅಂತರವೂ ಇರುವುದಿಲ್ಲ. ಆದರೆ ಯತಿಗಳ ಆಚಾರವಿಧಿಯನ್ನಧಿಕರಿಸಿದಂತೆ ಏರ್ಪಟ್ಟಿರುವ ವಿವಾದವು ಈ ಎರಡು ಪಂಗಡಗಳ ಪ್ರತ್ಯೇಕತೆಗೆ ಪ್ರಧಾನಕಾರಣವಾಗಿದೆ. ಯತಿ ಗಳಿಗೆ ನಿಯತವಾದ ಆಚಾರವಿಧಿಯನ್ನು ಬೋಧಿಸುವಲ್ಲಿ ಮಧ್ಯಮಕಾಲೀನರಾದ ಶ್ರೀ ಅಜಿತನಾಥಾದಿ ಶ್ರೀ ಪಾರ್ಶ್ವನಾಥಪರ್ಯಂತರಾದ ಇಪ್ಪತ್ತೆರಡು ತೀರ್ಥಂಕರರ ಬೋಧನಾಕ್ರಮದ ಅಪೇಕ್ಷೆಯಿಂದ ಆದಿ ಮತ್ತು ಅಂತಿಮ ತೀರ್ಥಂಕರರಾದ ಶ್ರೀ

---

1 ಇಂದ್ರನಂದಿ ಆಚಾರ್ಯವಿರಚಿತ 'ಶ್ರುತಾವತಾರ'_ಪ. ಸಂ. ೭೦.

2 ವಾಸಸ್ಸ ಪಢಮಮಾಸೇ ಪಢಮೇ ಪಕ್ಖಮ್ಮಿ ಸಾವಣೇ ಬಹುಲೇ।
ಪಾಡಿವದಪುವ್ವದಿವಸೇ ತಿತ್ಥುಪ್ಪತ್ತೀದು ಅಭಿಜಿಮ್ಮಿ ॥೫೬॥
ಸಾವಣಬಹುಲಪಡಿವದೇರುದ್ದಮುಹುತ್ತೇ ಸುಹೋದಯೆ ರವಿಣೋ।
ಅಭಿಜಿಸ್ಸ ಪಢಮಜೋಏ ಜತ್ಥ ಜುಗಾದೀ ಮುಣೇಯವ್ವೋ ॥೫೭॥
(ಷಟ್ಖಂಡಾಗಮ_ಜೀವಸ್ಥಾನ_ಸತ್ಪ್ರರೂಪಣಾ ೧
ಸನ್ಮಾನ್ಯ ಹೀರಾಲಾಲ್ ಜೈನರವರಿಂದ ಸಂಪಾದಿತ ಗ್ರಂಥ_ಪು. ಸಂ. ೬೩)

ವೃಷಭನಾಥ ಮತ್ತು ಶ್ರೀ ವೀರನಾಥರ ಬೋಧನಾಕ್ರಮವು ವೈಶಿಷ್ಟ್ಯವುಳ್ಳುದಾಗಿದ್ದಿತೆಂದು ದಿಗಂಬರ ಮತ್ತು ಶ್ವೇತಾಂಬರ ಪಂಥಗಳೆರಡರ ಆಗಮಗ್ರಂಥಗಳಲ್ಲಿಯೂ ಹೇಳಿದೆ. ಆದರೆ ಧರ್ಮಬೋಧನಾಕ್ರಮದ ಈ ವೈಶಿಷ್ಟ್ಯವೇನೆಂಬುದನ್ನು ವಿವರಿಸುವಲ್ಲಿ ಈ ಆಮ್ನಾಯಗಳೆರಡರ ಮಧ್ಯೆ ಅಭಿಪ್ರಾಯಭೇದವಿದೆ. ಆದ್ದರಿಂದ ಈ ಎರಡು ಆಮ್ನಾಯಗಳಲ್ಲಿ ಉಪಲಬ್ಧವಿರುವ ಹೇಳಿಕೆಗಳಾಧಾರದಿಂದ ಶ್ರೀ ವೀರತೀರ್ಥಂಕರನ ಬೋಧನಾಕ್ರಮದ ವೈಶಿಷ್ಟ್ಯವೇನೆಂಬುದನ್ನು ಮುಂದೆ ಪರಿಷ್ಕರಿಸಲಾಗುವುದು.

ದಿಗಂಬರ ಜೈನ ಆಮ್ನಾಯಾನುಸಾರವಾಗಿ ತೀರ್ಥಂಕರರೆಲ್ಲರಿಂದ ಸಮಾನ ರೀತಿಯಾಗಿ ಬೋಧಿತವಾಗಿರುವ ಧರ್ಮದ ಸ್ವರೂಪವು ಮುಂದಿನಂತಿದೆ :

ಭರತೇನ ಸಮಭ್ಯರ್ಚ್ಯ ಪೃಷ್ಟೋ ಧರ್ಮಮಭಾಷತ |
ಧ್ರಿಯತೇ ಧಾರಯತ್ಯುಚ್ಚೈರ್ವಿನೇಯಾ್ ಕುಗತೇಸ್ತತಃ || ೩೦೨ ||
ಧರ್ಮ ಇತ್ಯುಚ್ಯತೇ ಸದ್ಭಿಶ್ಚತುರ್ಭೇದಂ ಸಮಾಶ್ರಿತಂ |
ಸಮ್ಯಗ್ದೃಗ್ಜ್ಞಾನಚಾರಿತ್ರತಪೋರೂಪಃ ಕೃಪಾಪರಃ || ೩೦೩ ||
ಜೀವಾದಿಸಪ್ತಕೇ ತತ್ತ್ವೇ ಶ್ರದ್ಧಾನಂ ಯತ್ಸ್ವತೋಂಜಸಾ |
ಪರಪ್ರಣಯನಾದ್ವಾ ತತ್ಸಮ್ಯಗ್ದರ್ಶನಮುಚ್ಯತೇ || ೩೦೪ ||
ಶಂಕಾದಿದೋಷನಿರ್ಮುಕ್ತಂ ಭಾವತ್ರಯವಿವೇಚಿತಂ |
ತೇಷಾಂ ಜೀವಾದಿ ಸಪ್ತಾನಾಂ ಸಂಶಯಾದಿವಿವರ್ಜನಾತ್ || ೩೦೫ ||
ಯಾಥಾತ್ಮ್ಯೇನ ಪರಿಜ್ಞಾನಂ ಸಮ್ಯಗ್ಜ್ಞಾನಂ ಸಮಾದಿಶೇತ್ |
ಯಥಾ ಕರ್ಮಾಸ್ರವೋ ನ ಸ್ಯಾಚ್ಚಾರಿತ್ರಂ ಸಂಯಮಸ್ತಥಾ || ೩೦೬ ||
ನಿರ್ಜರಾ ಕರ್ಮಣಾಂ ಯೇನ ತೇನ ವೃತ್ತಿಸ್ತಪೋ ಮತಂ |
ಚತ್ವಾರ್ಯೇತಾನಿ ಮಿಶ್ರಾಣಿ ಕಷಾಯೈಃ ಸ್ವರ್ಗಹೇತವಃ || ೩೦೭ ||
ನಿಷ್ಕಷಾಯಾಣಿ ನಾಕಸ್ಯ ಮೋಕ್ಷಸ್ಯ ಚ ಹಿತೈಷಿಣಾಂ |
ಚತುಷ್ಟಯಮಿದಂ ವರ್ತ್ಮ ಮುಕ್ತೇರ್ದುಷ್ಪ್ರಾಪಮಂಗಿಭಿಃ || ೩೦೮ ||

[ಮಹಾಪುರಾಣ ಪರ್ವ ೪೭]

**ತಾತ್ಪರ್ಯ :** ಶ್ರೀ ಋಷಭತೀರ್ಥಂಕರನು ಭರತೇಶ್ವರನಿಗೆ ಧರ್ಮಸ್ವರೂಪವನ್ನು ಹೇಳಿದನು : ಶೀಲಸಂಪನ್ನರಾದ ಭವ್ಯರನ್ನು ದುರ್ಗತಿಯಿಂದ ದೂರೀಕರಿಸಿ ಅಭ್ಯುದಯನಿಶ್ರೇಯಸರೂಪವಾದ ಉನ್ನತಸ್ಥಾನದಲ್ಲಿ ನೆಲೆಗೊಳಿಸುವಂತಹುದು ಸಂತರಿಂದ 'ಧರ್ಮ'ವೆಂದು ಹೇಳಲ್ಪಟ್ಟಿದೆ. ದಯಾಪ್ರಧಾನವಾದ ಆ ಧರ್ಮವು ಸಮ್ಯಗ್ದರ್ಶನ - ಜ್ಞಾನ - ಚಾರಿತ್ರ - ತಪ ಎಂಬ ನಾಲ್ಕು ಪ್ರಧಾನ ಭೇದವುಳ್ಳುದ್ದಾಗಿದೆ.

ಸ್ವಪ್ರೇರಣೆಯಿಂದಾಗಲೀ ಪರಪ್ರೇರಣೆಯಿಂದಾಗಲೀ ಜೀವಾದಿ ಸಪ್ತತತ್ತ್ವಗಳಲ್ಲಿ ಉಂಟಾಗುವ ಶ್ರದ್ಧೆಯು ಸಮ್ಯಗ್ದರ್ಶನವೆನಿಸಿಕೊಳ್ಳುವುದು. ಅದು ಶಂಕೆಯೇ ಮೊದಲಾದ ದೋಷಗಳಿಂದ ಬಿಡಲ್ಪಟ್ಟುದೂ ಭಾವತ್ರಯ[1] ನಿರ್ಣೀತವೂ ಆಗಿರುವುದು. ಆ ಜೀವಾದಿ ಸಪ್ತತತ್ತ್ವಗಳನ್ನು ಸಂಶಯಾದಿ ವಿರಹಿತವಾಗಿ ಯಥಾಸ್ವರೂಪದಿಂದ ತಿಳಿಯುವಿಕೆಯು ಸಮ್ಯಜ್ಞಾನವೆನಿಸುವುದು. ಕರ್ಮಗಳು ಆಸ್ರವವಾಗದಂತಿರುವ ಸಂಯಮವು ಸಮ್ಯಕ್ಚಾರಿತ್ರವು. ಯಾವ ರೀತಿಯಿಂದ ಕರ್ಮಗಳು ನಿರ್ಜರೆಯಾಗುವುದೋ ಆ ರೀತಿಯಾದ ಪ್ರವೃತ್ತಿಯು ಸಮ್ಯಕ್ತಪವೆಂದು ತಿಳಿಯಲ್ಪಟ್ಟದೆ. ಕ್ರೋಧಾದಿ ಕಷಾಯಮಿಶ್ರವಾದ ಸಮ್ಯಗ್ದರ್ಶನ ಜ್ಞಾನ ಚಾರಿತ್ರ ತಪಗಳೆಂಬ, ಈ ನಾಲ್ಕು ಸ್ವರ್ಗಕ್ಕೆ ಕಾರಣಗಳಾಗುವುವು. ಕಷಾಯರಹಿತವಾಗಿ ಇವು ಹಿತಾಕಾಂಕ್ಷಿಗಳಿಗೆ ಸ್ವರ್ಗಕ್ಕೂ ಮೋಕ್ಷಕ್ಕೂ ಕಾರಣಗಳಾಗುವುವು. ಮುಕ್ತಿಯ ಈ ನಾಲ್ತೆರದ ಮಾರ್ಗವು ಅಭವ್ಯರಿಂದ ಹೊಂದಲಸದಳವಾದುದು.

ಧರ್ಮದ ಮೇಲ್ಕಂಡ ಚತುರ್ಭೇದಗಳಲ್ಲೊಂದಾದ ಮತ್ತು ಕರ್ಮಾಸ್ರವ-ನಿರೋಧರೂಪ ಸಂವರತತ್ತ್ವಸಹಯೋಗಿಯೂ ಆದ ಸಮ್ಯಕ್ಚಾರಿತ್ರವು ಸಂಯಮಿ ಮತ್ತು ದೇಶಸಂಯಮಿ (=ಅನಗಾರ ಮತ್ತು ಸಾಗಾರ) ಎಂಬ ಪಾತ್ರಭೇದದಿಂದ ಸಕಲಚಾರಿತ್ರ ಮತ್ತು ವಿಕಲಚಾರಿತ್ರ ಎಂಬ ಎರಡು ಭೇದಗಳುಳ್ಳದ್ದಾಗಿದೆ.[2] ಈ ಎರಡು ಭೇದಗಳಾಶ್ರಯದಿಂದ ಧರ್ಮವು 'ಅನಗಾರಧರ್ಮ'(=ನಿರ್ಗ್ರಂಥಯತಿಧರ್ಮ) ಮತ್ತು ಸಾಗಾರಧರ್ಮ (=ಶ್ರಾವಕಧರ್ಮ) ಎಂದು ದ್ವಿವಿಧರೀತಿಯಿಂದ ಉಪದಿಷ್ಟವಾಗಿದೆ.

ಧರ್ಮದ ಮೂರನೇ ವಿಭಾಗವಾದ ಚಾರಿತ್ರಧರ್ಮವು ಆಚಾರಭೇದದಿಂದ ಪುನಃ ಜ್ಞಾನ, ದರ್ಶನ, ತಪ, ವೀರ್ಯ ಮತ್ತು ಚಾರಿತ್ರಗಳೆಂಬ ಐದು ಭೇದಗಳುಳ್ಳದ್ದಾಗಿ 'ಪಂಚಾಚಾರ' ಎಂಬ ಹೆಸರಿನಿಂದ ಉಪದಿಷ್ಟವಾಗಿದೆ.[3]

ಈ ಪಂಚಾಚಾರಗಳನ್ನು ಮೇಲ್ಕಂಡ ಕ್ರಮದಿಂದ ಸ್ವಲ್ಪಮಾತ್ರದ ಭಿನ್ನಕ್ರಮದಿಂದ ಮೂಲಾಚಾರದಲ್ಲಿ ಮತ್ತು ಶ್ವೇತಾಂಬರ ಆಮ್ನಾಯದಲ್ಲಿ ಮುಂದಿನಂತೆ ನಿರ್ದೇಶಿಸಲಾಗಿದೆ.

---

1 ಔಪಶಮಿಕಕ್ಷಾಯಿಕಕ್ಷಾಯೋಪಶಮಿಕೈರ್ನಿರ್ಣೀತಂ.

2 ಸಕಲಂ ವಿಕಲಂ ಚರಣಂ ತತ್ಸಕಲಂ ಸರ್ವಸಂಗವಿರತಾನಾಂ ।
ಅನಗಾರಾಣಾಂ ವಿಕಲಂ ಸಾಗಾರಾಣಾಂ ಸಸಂಗಾನಾಂ ॥ ೫೦ ॥
(ಸಮಂತಭದ್ರಾಚಾರ್ಯ ವಿರಚಿತ 'ರತ್ನಕರಂಡಕ ಶ್ರಾವಕಾಚಾರ')

3 ಆಚಾರಂ ಸಹಪಂಚಭೇದಮುದಿತಂ ತೀರ್ಥಂ ಪರಂ ಮಂಗಲಂ ।
[ದಶಭಕ್ತ್ಯಂತರ್ಗತ ಚಾರಿತ್ರಭಕ್ತಿ–ಪದ್ಯ ಸಂಖ್ಯೆ ೮]

ದಂಸಣ ಣಾಣ ಚರಿತ್ತ ತವ ವೀರಿಯಾಚಾರ ಣಿಗ್ಗಹ ಸಮತ್ಥೋ।
ಅತ್ತಾಣಂ ಜೋ ಸಮಣೋ ಗಚ್ಛದಿ ಸಿದ್ಧಿಂ ಧುದಕಿಲೇಸೋ ‖ ೨೨೨‖

ಇಲ್ಲಿ ಪಂಚಾಚಾರಭೇದಗಳು 'ದರ್ಶನ, ಜ್ಞಾನ, ಚಾರಿತ್ರ, ತಪ ಮತ್ತು ವಿರ್ಯಾಚಾರ' ಎಂಬ ಕ್ರಮದಿಂದ ನಿರ್ದೇಶಿತವಾಗಿವೆ. ಮೂಲಾಚಾರ–ಪಂಚಾಚಾರಾಧಿಕಾರ.

ಶ್ವೇತಾಂಬರ ಆಮ್ನಾಯದನುಗುಣವಾಗಿ :

ಆಚಾರೋ ಜ್ಞಾನಾಚಾರಾದಿಃ ಪಂಚಧಾ–
ಆಮುಜ್ಜಾಯೂವಯಣೋ ಚರಣಂ ಚಾರೋತ್ತಿತ್ತೀಏ ಆಯಾರೋ।
ಸೋ ಹೋಇ ನಾಣದಂಸಣ ಚರಿತ್ತ ತವ ವೀರಿಯಪ್ಪೊ ‖

[ಅಭಿಧಾನ ರಾಜೇಂದ್ರಕೋಶ]

ಈ ಪಂಚಭೇದಗಳಲ್ಲಿ ಒಂದಾದ ಚಾರಿತ್ರಾಚಾರವು ಪುನಃ ೧೩ ಪ್ರಕಾರವಾದ ಅಂತರ್ಭೇದಗಳುಳ್ಳದ್ದಾಗಿ ಶ್ರೀ ವೀರತೀರ್ಥಂಕರನಿಂದ ಉಪದಿಷ್ಟವಾಗಿರುವುದು :

ತಿಸ್ರಃ ಸಂಯಮ ಗುಪ್ತಯಸ್ತನುಮನೋಭಾಷಾನಿಮಿತ್ತೋದಯಾಃ।
ಪಂಚೇರ್ಯಾದಿ ಸಮಾಶ್ರಯಾಃ ಸಮಿತಯಃ ಪಂಚವ್ರತಾನೀತ್ಯಪಿ‖
ಚಾರಿತ್ರೋಪಹಿತಂ ತ್ರಯೋದಶತಯಂ ಪೂರ್ವಂ ನ ದೃಷ್ಟಂ ಪರ್ರೈ।
ರಾಚಾರಂ ಪರಮೇಷ್ಠಿನೋಃ ಜಿನಪತೇರ್ವೀರಾನ್ನಮಾಮೋ ವಯಂ ‖ ೭‖

ದಶಭಕ್ತಿ–ಚಾರಿತ್ರಭಕ್ತಿ[1]

ತಾತ್ಪರ್ಯ : ಅಜಿತನಾಥಾದಿ ಪಾರ್ಶ್ವನಾಥ ತೀರ್ಥಂಕರಪರ್ಯಂತರಾದ ಇಪ್ಪತ್ತೆರಡು ತೀರ್ಥಂಕರರಿಂದ ಆದಿಷ್ಟವಾಗಿಲ್ಲದಿದ್ದು, ಶ್ರೀ ವೀರತೀರ್ಥಂಕರನಿಂದ ಆದಿಷ್ಟವಾಗಿರುವ ತ್ರಿಗುಪ್ತಿ, ಪಂಚಸಮಿತಿ ಮತ್ತು ಪಂಚವ್ರತಗಳೆಂಬ (೩+೫+೫=) ಹದಿಮೂರು ಅಂತರ್ವಿಭಾಗಗಳುಳ್ಳ ಚಾರಿತ್ರೋಪಹಿತ ಆಚಾರವನ್ನು (ಚಾರಿತ್ರಾಚಾರವನ್ನು) ನಾವು ನಮಸ್ಕರಿಸುವೆವು.

ಮೇಲ್ಕಂಡ ಪದ್ಯದ 'ನ ದೃಷ್ಟಂ ಪರ್ರೈಃ' (ಇತರ ತೀರ್ಥಂಕರರಿಂದ ದೃಷ್ಟವಲ್ಲದ) ಎಂಬ ಹೇಳಿಕೆಯಿಂದ ಪೂರ್ವಕಾಲೀನ ತೀರ್ಥಂಕರರಿಂದ ಉಪದಿಷ್ಟವಾಗದಿದ್ದ ತ್ರಿಗುಪ್ತಿ, ಪಂಚಸಮಿತಿ ಮತ್ತು ಪಂಚವ್ರತಯುಕ್ತವಾದ ಚಾರಿತ್ರಾಚಾರವನ್ನು ನೂತನವಾಗಿ ಶ್ರೀ ವೀರತೀರ್ಥಂಕರನು ಉಪದೇಶಿಸಿದನೇ? ಎಂಬ ಪ್ರಶ್ನೆಗವಕಾಶವಾಗುವುದು. ಆದರೆ ಈ ಪ್ರಶ್ನೆಯು ಮುಂದಿನ ಗಾಹೆಗಳ ಹೇಳಿಕೆಯಿಂದ ಪರಿಹೃತವಾಗುವುದು.

---

1 ದಶಭಕ್ತ್ಯಂತರ್ಗತವಾದ ಸಂಸ್ಕೃತಭಾಷಾನಿಬದ್ಧ ಭಕ್ತಿಗಳು ಪೂಜ್ಯಪಾದಾಚಾರ್ಯರಿಂದ ವಿರಚಿತವಾಗಿವೆಯೆಂಬ ಪರಂಪರಾಗತ ಐತಿಹ್ಯವಿದೆ.

ಬಾವೀಸಂ ತಿತ್ಥಯರಾ ಸಾಮಾಯಿಯಸಂಜಮಂ ಉವದಿಸಂತಿ ।
ಛೇದುವಠಾವಣಿಯಂ ಪುಣ ಭಯವಂ ಉಸಹೋಯ ವೀರೋ ಯ ॥೩೬॥

ಆಚಕ್ಖಿದುಂ ವಿಭಜಿದುಂ ವಿಣ್ಣಾದುಂ ಚಾವಿ ಸುಹದರಂ ಹೋದಿ ।
ಏದೇಣ ಕಾರಣೇಣ ದು ಮಹವ್ವದಾ ಪಂಚಪಣ್ಣತ್ತಾ ॥ ೩೭ ॥

ಆದೀಏ ದುವ್ವಿಸೋಧಣಣಿಹಣೇ ತಹ ಸುಟ್ಠು ದುರಣುಪಾಲೇ ಯ ।
ಪುರಿಮಾ ಯ ಪಚ್ಛಿಮಾ ವಿ ಹು ಕಪ್ಪಾಕಪ್ಪಂ ಣ ಜಾಣಂತಿ ॥ ೩೮ ॥

ಸಪಡಿಕ್ಕಮಣೋ ಧಮ್ಮೋ ಪುರಿಮಸ್ಸ ಯ ಪಚ್ಛಿಮಸ್ಸ ಯ ಜಿಣಸ್ಸ ।
ಅವರಾಹೇ ಪಡಿಕಮಣಂ ಮಜ್ಝಿಮಯಾಣಂ ಜಿಣವರಾಣಂ ॥ ೧೨೯ ॥

ಜಾವೇದು ಅಪ್ಪಣೋ ವಾ ಅಣ್ಣದರೇ ವಾ ಭವೇ ಅದಿಚಾರೋ ।
ತಾವೇದು ಪಡಿಕ್ಕಮಣಂ ಮಜ್ಝಿಮಯಾಣಂ ಜಿಣವರಾಣಂ ॥ ೧೩೦ ॥

ಇರಿಯಾಗೋಯರಸುಮಿಣಾದಿಸವ್ವಮಾಚರದು ಮಾ ವ ಆಚರದು ।
ಪುರಿಮಚರಿಮಾದು ಸವ್ವೇ ಸವ್ವಂ ಣಿಯಮಾ ಪಡಿಕಮಂದಿ ॥ ೧೩೧ ॥

ಮಜ್ಝಿಮಯಾ ದಿಢಬುದ್ಧೀ ಏಯಗ್ಗಮಣಾ ಅಮೋಹಲಕ್ಖಾ ಯ ।
ತಮ್ಹಾ ಹು ಜಮಾಚರಂತಿ ತಂ ಗರಹಂತಾ ವಿ ಸುಜ್ಝಂತಿ ॥ ೧೩೨ ॥

ಪುರಿಮಚರಿಮಾದು ಜಮ್ಹಾ ಚಲಚಿತ್ತಾ ಚೇವ ಮೋಹಲಕ್ಖಾ ಯ ।
ತೋ ಸವ್ವಪಡಿಕ್ಕಮಣಂ ಅಂಧಲಯಘೋಡಯ ದಿಟ್ಠಂತಾ ॥ ೧೩೩ ॥

[ಮೂಲಾಚಾರ–ಷಡಾವಶ್ಯಕಾಧಿಕಾರ]

ಗಾಹೆಗಳ ಭಾವಾರ್ಥ :

(೩೬) ಅಜಿತನಾಥಾದಿ ಪಾರ್ಶ್ವನಾಥಪರ್ಯಂತರಾದ ಇಪ್ಪತ್ತೆರಡು ತೀರ್ಥಂಕರರು ಸಾಮಾಯಿಕ ಸಂಯಮವನ್ನು[1] ಉಪದೇಶಿಸಿರುವರು. ಶ್ರೀ ವೃಷಭ ಮತ್ತು

---

1 ಸಾಮಾಯಿಕ :

ಸಮ್ಮತ್ತಣಾಣಸಂಜಮತವೇಹಿಂ ಜಂ ತಂ ಪಸತ್ಥಸಮಗಮಣಂ ।
ಸಮಯಂ ತಂ ತು ಭಣಿದಂ ತಮೇವ ಸಾಮಾಯಿಯಂ ಜಾಣೇ ॥ ೧೮ ॥

[ಮೂಲಾಚಾರ–ಷಡಾವಶ್ಯಕಾಧಿಕಾರ]

ಅರ್ಥ : ಸಮ್ಯಕ್ತ್ವಜ್ಞಾನಸಂಯಮ (=ಚಾರಿತ್ರ) ತಪಸ್ಸುಗಳೊಡನೆ ಪ್ರಶಸ್ತ ರೀತಿಯಿಂದ ಆತ್ಮನ ಏಕ್ಯವಾಗುವಿಕೆಯು ಸಮಯವೆಂದು ಹೇಳಲ್ಪಟ್ಟಿದೆ. ಅದನ್ನೇ ಸಾಮಯಿಕವೆಂದು ತಿಳಿಯುವುದು.

ಶ್ರೀ ಮಹಾವೀರತೀರ್ಥಂಕರರಿಬ್ಬರು ಪುನಃ ಛೇದೋಪಸ್ಥಾಪನಾ ಸಂಯಮವನ್ನು[1] ಉಪದೇಶಿಸಿದ್ದಾರೆ.

ಶ್ರೀ ವೃಷಭನಾಥ ಮತ್ತು ಶ್ರೀ ವೀರತೀರ್ಥಂಕರರು ಛೇದೋಪಸ್ಥಾಪನಾ ಸಂಯಮವನ್ನು ಉಪದೇಶಿಸಿದುದರ ಕಾರಣ :

(೩೭) ಅನ್ಯರಿಗೆ ಉಪದೇಶಮಾಡಲು ಅಥವಾ ಸ್ವಯಂ ಅನುಷ್ಠಾನಮಾಡಲು, ಪೃಥಕ್ಕರಿಸಿ ಭಾವಿಸಲು ವಿಶದವಾಗಿ ತಿಳಿಯಲೂ ಕೂಡ ಸುಲಭವಾಗಿರುವುದೆಂದು ಪಂಚಮಹಾವ್ರತಗಳು ಪ್ರಜ್ಞಪ್ತವಾದುವು.

ಆದಿ ಮತ್ತು ಅಂತಿಮ ತೀರ್ಥಗಳಲ್ಲಿ ಛೇದೋಪಸ್ಥಾಪನಾ ಸಂಯಮವು ಉಪದಿಷ್ಟವಾದುದೇಕೆ ?

(೩೮) ಆದಿ ತೀರ್ಥದಲ್ಲಿ ಶಿಷ್ಯರು ದುರ್ವಿಶೋಧನರಾಗಿದ್ದರು. ಅಂತೆಯೇ ಅಂತಿಮ ತೀರ್ಥದಲ್ಲಿ ಶಿಷ್ಯರು ದುರನುಪಾಲಕರಾಗಿದ್ದರು. (ಕಾರಣವೇನೆಂದರೆ) ಆದಿ ಮತ್ತು ಅಂತಿಮ ತೀರ್ಥಕಾಲಗಳಲ್ಲಿ ಶಿಷ್ಯರು, ಕಲ್ಪ್ಯಾಕಲ್ಪ್ಯಗಳನ್ನು ಅಂದರೆ ಆಚಾರ ವಿಧಿಯ ಕರ್ತವ್ಯಾಕರ್ತವ್ಯಗಳನ್ನು ತಿಳಿದಿರಲಿಲ್ಲ. (ಆದ್ದರಿಂದ ಛೇದೋಪಸ್ಥಾಪನಾ ಸಂಯಮವು ಉಪದಿಷ್ಟವಾಯಿತು.)

(೧೨೯) ಪ್ರಥಮ ಮತ್ತು ಅಂತಿಮ ತೀರ್ಥಂಕರರ ಕಾಲದಲ್ಲಿ ಧರ್ಮವು (ನಿಯತರೀತಿಯಾದ) ಪ್ರತಿಕ್ರಮಣ[2]ಯುಕ್ತವಾಗಿದೆ. ಮಧ್ಯಮ ಕಾಲದ ಶ್ರೀ

---

1 ಛೇದೋಪಸ್ಥಾಪನಾ ಸಂಯಮ :

ಸರ್ವಪಾಪನಿವೃತ್ತಿರೂಪಸಾಮಾಯಿಕದ ಅಪೇಕ್ಷೆಯಿಂದ ವ್ರತವು ಒಂದು ಎನಿಸುವುದು ಅದೇ ವ್ರತವು ಛೇದೋಪಸ್ಥಾಪನಾಪೇಕ್ಷೆಯಿಂದ (ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹವೆಂದು) ಐದು ವಿಧವಾಗುವುದು.

['ಸರ್ವಾರ್ಥ ಸಿದ್ಧಿ'-ಸಪ್ತಮ ಅಧ್ಯಾಯ ಸೂತ್ರ ೧-ವ್ಯಾಖ್ಯೆ]

2 ಪ್ರತಿಕ್ರಮಣ: ಭಾವಃ ಪರಿಣಾಮರಾಗದ್ವೇಷಾದಿ ಮದಾದಿ ಲಕ್ಷಣಃ, ಏತದ್ವಿಷಯಾದತಿಚಾರಾನ್ನಿವರ್ತನಪರೋ ಜೀವಃ ಪ್ರತಿಕ್ರಾಮಕ ಇತ್ಯುಚ್ಯತೇ ಅಥವಾ ಯೇನ ಪರಿಣಾಮೇನ ಅಕ್ಷರ ಕದಂಬಕೇನ ವಾ ಪ್ರತಿಗಚ್ಛತಿ ಪುನರ್ಯಾತಿ ಯಸ್ಮಿನ್ ವ್ರತಶುದ್ಧಿ ಪೂರ್ವಕ ಸ್ವರೂಪೇ ಯಸ್ಮಿನ್ ವಾ ಜೀವೇ ಪೂರ್ವವ್ರತಶುದ್ಧಿ ಪರಿಣತೇ ಅತಿಚಾರಂ ಪರಿಭೂತೂ ಸ ಪರಿಣಾಮೋ ಅಕ್ಷರ ಸಮೂಹೋ ವಾ ತಸ್ಯ ವ್ರತಸ್ಯ ತಸ್ಯ ವಾ ವ್ರತಶುದ್ಧಿ ಪರಿಣತಸ್ಯ ಜೀವಸ್ಯ ಭವೇತ್ಪ್ರತಿಕ್ರಮಣಂ ವ್ರತವಿಷಯಮತೀಚಾರಂ ಯೇನ ಪರಿಣಾಮೇನ ಪ್ರಕ್ಷಾಲ್ಯ ಪ್ರತಿಗಚ್ಛತಿ ಪೂರ್ವವ್ರತಶುದ್ಧೌ ಸ ಪರಿಣಾಮಸ್ತಸ್ಯ ಜೀವಸ್ಯ ಭವೇತ್ಪ್ರತಿಕ್ರಮಣಮಿತಿ.

[ಮೂಲಾಚಾರ-ಷಡಾವಶ್ಯಕ ಗಾಹೆ ೧೧೫-ವ್ಯಾಖ್ಯಾನ]

ಅಜಿತಾದಿ ಪಾರ್ಶ್ವನಾಥಪರ್ಯಂತರಾದ ತೀರ್ಥಂಕರರ ಕಾಲದಲ್ಲಿ ಪ್ರತಿಕ್ರಮಣವು ಆದಿಷ್ಟವಾಗಿದ್ದಿತು.

(೧೩೦) ಯಾವ ವ್ರತದಲ್ಲಿ ಆತ್ಮನ ಅಥವಾ ಇತರ ಯಾವುದಾದರೊಂದರ ಅತೀಚಾರವಾಗುವುದೋ ಆ ವಿಷಯದಲ್ಲಿ ಪ್ರತಿಕ್ರಮಣವು ಮಧ್ಯಮ ಕಾಲದ ತೀರ್ಥಂಕರರ ಶಿಷ್ಯರಿಗೆ ಆದಿಷ್ಟವಾಗಿದ್ದಿತು. ಆದಿ ಮತ್ತು ಅಂತಿಮ ತೀರ್ಥಂಕರರ ಶಿಷ್ಯರಿಗೆ ಯಾವುದೇ ರೀತಿಯ ಒಂದು ಅಪರಾಧಮಾತ್ರಕ್ಕೂ ಸರ್ವಪ್ರತಿಕ್ರಮಣವು ಆದಿಷ್ಟವಾಗಿದೆ. (ಎಲ್ಲ ಪ್ರತಿಕ್ರಮಣದಂಡಕಗಳನ್ನೂ ಹೇಳಬೇಕು.)

(೧೩೧) ಈರ್ಯಾಗೋಚರಸ್ವಪ್ನಾದಿಗಳಿಂದುಂಟಾಗುವ ಎಲ್ಲ ಅತೀಚಾರಗಳು ಸಂಘಟಿಸಲಿ ಅಥವಾ ಸಂಘಟಿಸದಿರಲಿ ಪ್ರಥಮ ಮತ್ತು ಅಂತಿಮ ತೀರ್ಥಂಕರರ ಶಿಷ್ಯರು ಎಲ್ಲ ಪ್ರತಿಕ್ರಮಣವನ್ನೂ ನಿಯತವಾಗಿ ಆಚರಿಸುವರು.

(೧೩೨) ದೃಢಬುದ್ಧಿಯವರೂ ಏಕಾಗ್ರಚಿತ್ತರೂ ಅಮೋಹಲಕ್ಷರೂ (=ಪ್ರೇಕ್ಷಾಪೂರ್ವಕ ಆಚರಿಸುವವರೂ) ಆದ ಮಧ್ಯಮಕಾಲದ ತೀರ್ಥಂಕರರ ಶಿಷ್ಯರು ತಮ್ಮಿಂದ ಅತೀಚಾರರೂಪದ ಯಾವ ದೋಷವಾಗುವುದೋ ಆ ದೋಷಕ್ಕಾಗಿ ಆತ್ಮಗರ್ಹಣೆ ಮಾಡಿ ಶುದ್ಧರಾಗುತ್ತಿದ್ದರು ಅರ್ಥಾತ್ ಶುದ್ಧಚಾರಿತ್ರಧರರಾಗುತ್ತಿದ್ದರು.

(೧೩೩) ಆದಿ ಮತ್ತು ಅಂತಿಮತೀರ್ಥಂಕರರ ಶಿಷ್ಯರು ಚಲಚಿತ್ತರೂ ಮೋಹಲಕ್ಷರೂ ಆಗಿದ್ದುದರಿಂದ ಅನೇಕಬಾರಿ ಬೋಧಿತರಾದರೂ ಯಥಾವತ್ತಾಗಿ ತಿಳಿದುಕೊಳ್ಳದಿದ್ದು ಅತೀಚಾರದೋಷಭಾಗಿಗಳಾಗುತ್ತಿದ್ದರಾಗಿ ಇವರಿಗೆ ಸರ್ವಪ್ರತಿಕ್ರಮಣವು ನಿಯತವಾಗಿ ಉಪದಿಷ್ಟವಾಗಿದೆ. ಇವರಿಗೆ ಅಂಧಲಕಘೋಟಕವು (ಕುರುಡು ಕುದುರೆಯು) ದೃಷ್ಟಾಂತವಾಗಿದೆ.

ದಿಗಂಬರ ಜೈನಆಮ್ನಾಯಾನುಗತವಾದ ಮೇಲ್ಕಂಡ ಉಲ್ಲೇಖಗಳಿಂದ, ಶಿಷ್ಯರ ಧೀಶಕ್ತಿ ಮತ್ತು ಆಚಾರಪರಿಪಾಲನಾಪ್ರವೃತ್ತಿಗಳನ್ನನುಸರಿಸಿ ತೀರ್ಥಂಕರರ ಬೋಧನಾಕ್ರಮ ಮತ್ತು ಆಚಾರವಿಧಿಯ ಅನುಶಾಸನಕ್ರಮಗಳಲ್ಲಿ ವ್ಯತ್ಯಾಸವಿದ್ದಿತೆಂದು ಸ್ಫುಟವಾಗುವುದು. ಅಜಿತನಾಥಾದಿ ಪಾರ್ಶ್ವನಾಥಪರ್ಯಂತರಾದ ತೀರ್ಥಂಕರರ ಶಿಷ್ಯರು ಧಾರ್ಮಿಕ ತತ್ತ್ವಗ್ರಹಣೆಯಲ್ಲಿ ಪಟುಮತಿಗಳೂ ಆಚಾರವಿಧಿಗಳ ಸುಪರಿಪಾಲಕರೂ ಆಗಿದ್ದುದರಿಂದ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ[1] ಮತ್ತು ತಪಸ್ಸುಗಳೆಂಬ

---

1 'ಚಾರಿತ್ರ' ಪದದ ಪರ್ಯಾಯಪದವಾಗಿ 'ಸಂಯಮ' ಪದವು ಪ್ರಯುಕ್ತವಾಗುವುದು — 'ದಶವಿಧೇ ಧರ್ಮೇ ಸಂಯಮ ಉಕ್ತಃ ಸ ಏವ ಚಾರಿತ್ರಮಿತಿ' ಮತ್ತು 'ತತ್ರ ದಶವಿಧೇ ಧರ್ಮೇ ಸಂಯಮೋ ವಾ ವ್ರತಾನಾಮಂತರ್ಭಾವ ಇತಿ'

[ಸರ್ವಾರ್ಥಸಿದ್ಧಿ—ನವಮ ಅಧ್ಯಾಯ-ಸೂತ್ರ ೧೮ ಮತ್ತು ಸಪ್ತಮ ಅಧ್ಯಾಯ ಸೂತ್ರ ೧—ವ್ಯಾಖ್ಯೆಗಳು]

ನಾಲ್ಕುಭೇದಗಳಿಂದ ಕೂಡಿದ ಧರ್ಮವು ಉಪದಿಷ್ಟವಾಯಿತು. ಆದಿ ಮತ್ತು ಅಂತಿಮ ತೀರ್ಥಂಕರರಾದ ವೃಷಭನಾಥ ಮತ್ತು ಶ್ರೀ ವೀರನಾಥರು ತಮ್ಮ ಕಾಲದ ಮಂದಪ್ರಜ್ಞರೂ ಆಚಾರವಿಧಿಗಳದುರನುಪಾಲಕರೂ ಆದ ಶಿಷ್ಯರ ಸುಬೋಧಾರ್ಥವಾಗಿ ಮತ್ತು ಆಚಾರವಿಧಿಗಳ ಸುಪರಿಪಾಲನಾರ್ಥವಾಗಿ ಸಮ್ಯಗ್ದರ್ಶನಾದಿ ನಾಲ್ಕುಭೇದ ಗಳಿಂದ ಕೂಡಿದ ಧರ್ಮದ ಮೂರನೆಯ ವಿಭಾಗವಾದ ಮತ್ತು ಕರ್ಮಾಸ್ರವನಿರೋಧಕ ಸಂವರತತ್ತ್ವಸಂಗತವಾದ ಚಾರಿತ್ರಧರ್ಮದಲ್ಲಿ ಅಂತರ್ಗತವಾಗಿದ್ದ ಪಂಚವ್ರತಾದಿ ವಿಷಯಗಳನ್ನು ಪ್ರತ್ಯೇಕಿಸಿ ವಿಶದೀಕರಿಸಿದುದಲ್ಲದೆ ವ್ರತಾಚರಣೆಯೇ ಮೊದಲಾದವು ಗಳಲ್ಲಿ ಸಂಭವಿಸಬಹುದಾದ ಅತೀಚಾರದೋಷನಿವೃತ್ತಿಗಾಗಿ ಪ್ರತಿಕ್ರಮಣಸಮಸ್ತ ವನ್ನು ನಿಯತಗೊಳಿಸಿದರೆಂದು ನಿರ್ದೇಶಿತವಾಗುವುದು. ಇದರಿಂದ ಮಧ್ಯಮಕಾಲದ ಇಪ್ಪತ್ತೆರಡು ತೀರ್ಥಂಕರರ ಮತ್ತು ಆದಿ ಹಾಗೂ ಅಂತಿಮ ತೀರ್ಥಂಕರರ ಮಧ್ಯೆ ಧರ್ಮಸ್ವರೂಪ ಬೋಧನಾಕ್ರಮ ಮತ್ತು ಆಚಾರಪರಿಪಾಲನೆಯಲ್ಲಿ ಸಂಭವಿಸ ಬಹುದಾದ ದೋಷಗಳ ನಿವಾರಣಾಕ್ರಮದಅನುಶಾಸನಗಳಲ್ಲಿ ಮಾತ್ರ ವ್ಯತ್ಯಾಸವಿದ್ದಿ ತೆಂದು ಅಧಿಗತವಾಗುವುದು

ದಿಗಂಬರ ಜೈನ ಆಮ್ನಾಯಾನುಸಾರವಾಗಿ ಶ್ರೀ ವೀರತೀರ್ಥಂಕರನಿಂದ ಉಪ ದಿಷ್ಟವಾದ ಧರ್ಮಸ್ವರೂಪದ ವೈಶಿಷ್ಟ್ಯವೇನೆಂಬುದು ಸ್ಪಷ್ಟಗೊಂಡಂತಾಗಿದೆ. ಈ ವಿಷಯವಾಗಿ ಶ್ವೇತಾಂಬರ ಜೈನ ಆಮ್ನಾಯದ ಕಥನವೇನೆಂಬುದನ್ನು ಗಮನಿಸಿ, ತದಪೇಕ್ಷೆಯಿಂದ ದಿಗಂಬರ ಆಮ್ನಾಯದ ಮೇಲ್ಕಂಡ ವಿವರಣೆಯ ತಥ್ಯವನ್ನು ಪರಾ ಮರ್ಶಿಸಬೇಕಾಗಿದೆ.

ಶ್ವೇತಾಂಬರಜೈನಆಮ್ನಾಯದ ಉತ್ತರಾಧ್ಯಯನಸೂತ್ರದ ೨೩ ನೇ ಅಧ್ಯಯನ ದಲ್ಲಿ ಪ್ರರೂಪಿತವಾಗಿರುವ, ಕೇಶಿಕುಮಾರಶ್ರಮಣ ಮತ್ತು ಗೌತಮಗಣಧರರ ಮಧ್ಯೆ ನಡೆದ ಪ್ರಶ್ನೋತ್ತರರೂಪದ ಸಂವಾದ ಪ್ರಸಂಗದಲ್ಲಿ, ಶ್ರೀ ಪಾರ್ಶ್ವನಾಥತೀರ್ಥಂಕರ ಮತ್ತು ಶ್ರೀ ವೀರತೀರ್ಥಂಕರರ ಧರ್ಮೋಪದೇಶಗಳ ಮಧ್ಯೆ ಇರುವ ವ್ಯತ್ಯಾಸವನ್ನು ಈ ಮುಂದಿನಂತೆ ನಿರೂಪಿಸಲಾಗಿದೆ.[1]

ಶ್ರೀ ಪಾರ್ಶ್ವನಾಥತೀರ್ಥಂಕರನ ಧರ್ಮಪಂಥಾನುಯಾಯಿಯಾದ ಕೇಶಿ ಕುಮಾರಶ್ರಮಣ ಮತ್ತು ಶ್ರೀ ವೀರತೀರ್ಥಂಕರನ ಧರ್ಮಪಂಥಾನುಯಾಯಿಯಾದ ಗೌತಮಗಣಧರರು ಶ್ರಾವಸ್ತೀನಗರದ ತಿಂದೂಕ ಮತ್ತು ಕೋಷ್ಟಕವೆಂಬ ಹೆಸರಿನ ಉಪವನಗಳಲ್ಲಿ ಶಿಷ್ಯಗಣಸಮೇತರಾಗಿ ವಿಹರಿಸಿದ್ದರು. ಈ ಆಚಾರ್ಯರೀರ್ವರ

---

1 ಪ್ರಸಕ್ತ ವಿಷಯವು 'ಶ್ರಮಣಭಗವಾನ್ ಮಹಾವೀರ' ಗ್ರಂ. ಭಾ. ೫- ವಿಭಾಗ ೧-ಸ್ಥವಿರಾವಲಿಯಲ್ಲಿ ಉಲ್ಲಿಖಿತವಾಗಿದೆ. ಈ ಕೃತಿಯಾಧಾರದಿಂದ ಇಲ್ಲಿ ವಿಷಯ ವನ್ನು ಸಂಕಲನಮಾಡಲಾಗಿದೆ.

ಶಿಷ್ಯವರ್ಗದಲ್ಲಿ ಪರಸ್ಪರರ ಧಾರ್ಮಿಕವಿಷಯ ಮತ್ತು ಆಚಾರವಿಷಯಗಳನ್ನು ಕುರಿತು ಮುಂದಿನಂತೆ ಸಂಶಯಭಾವವು ಮೂಡಿತು.

ಕೇರಿಸೋ ವಾ ಇಮೋ ಧಮ್ಮೋ ಇಮೋ ಧಮ್ಮೋ ವ ಕೇರಿಸೋ।
ಆಯಾರಧಮ್ಮಪ್ಪಣಿಹೀ ಇಮಾ ವಾ ಸಾ ವ ಕೇರಿಸೀ ॥ ೧೧ ॥

ಚಾಉಜ್ಜಾಮೋ ಯ ಜೋ ಧಮ್ಮೋ ಜೋ ಇಮೋ ಪಂಚಸಿಕ್ಖಿಓ।
ದೇಸಿಓ ವದ್ಧಮಾಣೇಣ ಪಾಸೇಣ ಯ ಮಹಾಮುಣೀ ॥ ೧೨ ॥

ಅಚೇಲಗೋ ಯ ಜೋ ಧಮ್ಮೋ ಜೋ ಇಮೋ ಸಂತರುತ್ತರೋ।
ಏಗಕಜ್ಜಪವನ್ನಾಣಂ ವಿಸೇಸೇ ಕಿಂ ನು ಕಾರಣಂ ॥ ೧೩ ॥

ತಾತ್ಪರ್ಯ[1] : "ಮಹಾಮುನಿ ಶ್ರೀ ಪಾರ್ಶ್ವನಾಥಪ್ರಭುವಿನಿಂದ ಉಪದಿಷ್ಟವಾಗಿರುವ ನಾಲ್ಕು ವ್ರತಗಳಿಂದ ಯುಕ್ತವಾಗಿರುವ ಆಚಾರಧರ್ಮದ ಸ್ವರೂಪವೇನು? ಮತ್ತು ಐದುವ್ರತಗಳಿಂದ ಕೂಡಿದ ಶ್ರೀ ವೀರತೀರ್ಥಕರೋಪದಿಷ್ಟವಾಗಿರುವ ಆಚಾರ ಧರ್ಮದ ಸ್ವರೂಪವೇನು? ಒಂದು ಆಚಾರವಿಧಿಯನುಗುಣವಾಗಿ (ಯತಿಗಳಿಗೆ) ಭೂಷಣಕಾರಿಯಾದ ಮತ್ತು ಬೆಲೆಯಾದ ವಸ್ತ್ರೋಪಯೋಗವು ಮಾನ್ಯಮಾಡಲ್ಪಟ್ಟದ್ದು ಮತ್ತೊಂದು ಆಚಾರವಿಧಿಯನುಗುಣವಾಗಿ 'ಅಚೇಲಕತ್ವ'ವು (ವಸ್ತ್ರಧಾರಣೆಯ ಪ್ರತಿಷೇಧವು) ವಿಧಿಸಲ್ಪಟ್ಟದೆ. ಎರಡು ಧರ್ಮೋಪದೇಶಗಳೂ ಮೋಕ್ಷಪ್ರಾಪ್ತಿ ರೂಪದ ಏಕೈಕ ಉದ್ದೇಶಯುಕ್ತವಾಗಿರುವಲ್ಲಿ (ಇಬ್ಬರು ತೀರ್ಥಂಕರರಿಂದ) ಆದಿಷ್ಟವಾಗಿರುವ ಆಚಾರವಿಧಿಗಳಲ್ಲಿ ಈ ರೀತಿಯಾದ ವ್ಯತ್ಯಾಸಗಳಿರಲು ಕಾರಣವೇನು?"

ಶಿಷ್ಯರಲ್ಲಿ, ಮೇಲ್ಕಂಡಂತೆ, ಸಂಶಯಭಾವವು ಮೂಡಿದುದನ್ನು ತಿಳಿದ ಕೇಶಿಕುಮಾರಶ್ರಮಣ ಮತ್ತು ಗೌತಮಗಣಧರರು ಶಿಷ್ಯಸಮೇತರಾಗಿ ಧಾರ್ಮಿಕ ಸಭೆ ಸೇರಿದರು. ಈ ಸಭೆಯಲ್ಲಿ ಧಾರ್ಮಿಕವಿಷಯವಾಗಿ ಕೇಶಿಕುಮಾರಶ್ರಮಣರು ಕೇಳಿದ ಅನೇಕ ಪ್ರಶ್ನೆಗಳಿಗೆ ಗೌತಮಗಣಧರರು ಉತ್ತರವಿತ್ತರು. ಇವರ ಮಧ್ಯೆ ನಡೆದ ಪ್ರಶ್ನೋತ್ತರಗಳಲ್ಲಿ ಮುಂದಿನ ಎರಡು ಅಂಶಗಳು ಪ್ರಧಾನವಾದುವು.

ಕೇಶಿಕುಮಾರಶ್ರಮಣರ ಪ್ರಶ್ನೆ–೧– :

ಚಾಉಜ್ಜಾಮೋಯ ಜೋ ಧಮ್ಮೋ ಜೋ ಇಮೋ ಪಂಚಸಿಕ್ಖಿಓ।
ದೇಸಿಓ ವದ್ಧಮಾಣೇಣ ಪಾಸೇಣ ಯ ಮಹಾಮುಣೀ ॥ ೨೩ ॥

ಏಗಕಜ್ಜಪವನ್ನಾಣಂ ವಿಸೇಸೇ ಕಿಂ ನು ಕಾರಣಂ।
ಧಮ್ಮೇ ದುವಿಹೇ ಮೇಹಾವೀ ಕಹಂ ವಿಪ್ಪಚ್ಚಓ ನ ತೇ ॥ ೨೪ ॥

---

1 ಪ್ರಸಕ್ತಪ್ರಸಂಗದ ಗಾಹೆಗಳ ತಾತ್ಪರ್ಯವನ್ನು ಪೂರ್ವಸೂಚಿತ 'ಶ್ರ. ಭ. ಮಹಾವೀರ' ಕೃತಿಯಿಂದ ಸಂಗ್ರಹಿಸಲಾಗಿದೆ.

**ತಾತ್ಪರ್ಯ :** "ಮಹಾಮುನಿ ಶ್ರೀ ಪಾರ್ಶ್ವನಾಥ ಭಗವಂತನು (ಯತಿಗಳಿಗೆ) ಹಿಂಸಾ, ಅನೃತ, ಸ್ತೇಯ ಮತ್ತು ಪರಿಗ್ರಹಗಳೆಂಬ ನಾಲ್ಕರ ವಿರತಿರೂಪದ ನಾಲ್ಕು ಮಹಾವ್ರತಗಳಿಂದ ಕೂಡಿದ (ಚಾಉಜ್ಜಾಮ) ಧರ್ಮದ ಆಚರಣೆಯನ್ನು ಬೋಧಿಸಿದ್ದಾನೆ, ಮತ್ತು ಶ್ರಮಣ ಭಗವಾನ್ ಮಹಾವೀರಸ್ವಾಮಿಯು ಪೂರ್ವೋಕ್ತವಾದ ನಾಲ್ಕು ವಿರತಿಗಳೊಡನೆ ಮೈಥುನವಿರತಿಯನ್ನು ನಾಲ್ಕನೇ ಮಹಾವ್ರತವನ್ನಾಗಿ ಸೇರಿಸಿ, ಪರಿಗ್ರಹವಿರತಿರೂಪದ ಮಹಾವ್ರತಕ್ಕೆ ಐದನೇ ಸ್ಥಾನವಿತ್ತು (ಹಿಂಸಾ, ಅನೃತ, ಸ್ತೇಯ, ಮೈಥುನ ಮತ್ತು ಪರಿಗ್ರಹಗಳೈದರ ವಿರತಿರೂಪದ ('ಪಂಚಸಿಕ್ಖಿಓ') ಪಂಚಮಹಾವ್ರತಯುಕ್ತವಾದ ಧರ್ಮದ ಆಚರಣೆಯನ್ನು ಉಪದೇಶಿಸಿದ್ದಾನೆ. ಈ ಇಬ್ಬರು ತೀರ್ಥಂಕರರ ಉಪದೇಶಗಳು ಮೋಕ್ಷಸಾಧನಾರೂಪದ ಏಕೈಕ ಉದ್ದೇಶವುಳ್ಳವಾಗಿವೆ ; ಇಂತಿರಲು ಈ ಎರಡು ವಿಧದ ಧರ್ಮಸ್ವರೂಪಗಳು ಪರಸ್ಪರ ಸಮನ್ವಯವಲ್ಲದವುಗಳಾಗಿವೆಯೆನಿಸುವುದಿಲ್ಲವೆ? ಇಬ್ಬರೂ ಸರ್ವಜ್ಞರು; ಆದರೂ ಧರ್ಮಸ್ವರೂಪದ ಪ್ರರೂಪಣೆಯಲ್ಲಿ ಈ ವ್ಯತ್ಯಾಸವನ್ನೇಕೆ ರೂಪಿಸಿದರು ?"

ಗೌತಮಗಣಧರಸ್ವಾಮಿಯ ಉತ್ತರ :

.................................................................. |
ಪಣ್ಣಾ ಸಮಿಕ್ಖಏ ಧಮ್ಮಂ ತತ್ತಂ ತತ್ತವಿಣಿಚ್ಛಯಂ || ೨೫ ||
ಪುರಿಮಾ ಉಜ್ಜುಜಡಾ ಉ ವಕ್ಕಜಡಾ ಯ ಪಚ್ಛಿಮಾ |
ಮಜ್ಝಿಮಾ ಉಜ್ಜುಪಣ್ಣಾ ಉ ತೇಣ ಧಮ್ಮೋ ದುಹಾ ಕಏ || ೨೬ ||
ಪುರಿಮಾಣಂ ದುವ್ವಿಸೋಜ್ಝೋ ಉ ಚರಿಮಾಣಂ ದುರಣುಪಾಲಓ |
ಕಪ್ಪೋ ಮಜ್ಝಿಮಾಣಂ ತು ಸುವಿಸೋಜ್ಝೋ ಸುಪಾಲಓ || ೨೭ ||

**ತಾತ್ಪರ್ಯ :** "ಧರ್ಮದ ಸಾರವು ಪ್ರಜ್ಞಾಗಮ್ಯವಾದುದು ; ಸೈದ್ಧಾಂತಿಕ ತತ್ತ್ವಗಳು ಜೀವ ಮತ್ತು ಇತರ ದ್ರವ್ಯಗಳ ನಿಜಸ್ವರೂಪವನ್ನು ನಿರ್ಣಯಿಸುವುವು. ವರ್ತಮಾನಕಾಲದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಮೊದಲನೆಯ ತೀರ್ಥಂಕರನಾದ ಭಗವಾನ್ ಶ್ರೀ ಋಷಭದೇವನ ಕಾಲದ ಯತಿಗಳು ಸರಳರೂ ಮತ್ತು ಮಂದ ಪ್ರಜ್ಞರೂ ಆಗಿದ್ದರು ; ಇಂತೆಯೇ ಅಂತಿಮ ತೀರ್ಥಂಕರನಾದ ಶ್ರಮಣ ಭಗವಾನ್ ಶ್ರೀ ಮಹಾವೀರಸ್ವಾಮಿಯ ಕಾಲದ ಯತಿಗಳು ವಕ್ರಸ್ವಭಾವಿಗಳೂ ಮತ್ತು ಮಂದ ಪ್ರಜ್ಞರೂ ಆಗಿದ್ದರು. ಆದರೆ ಮಧ್ಯಕಾಲೀನರಾದ ಇಪ್ಪತ್ತೆರಡು ತೀರ್ಥಂಕರರ ಕಾಲದ ಯತಿಗಳು ಸರಳರೂ ಪಟುಮತಿಗಳೂ ಆಗಿದ್ದರು. ಆದ್ದರಿಂದ (ಯತಿಗಳಿಗೆ ಆದಿಷ್ಟವಾದ) ಆಚಾರವಿಧಿಗಳ ಧರ್ಮವು ಎರಡುಪ್ರಕಾರವಾಗಿದೆ. ಆದಿತೀರ್ಥಂಕರನ ಕಾಲದ ಯತಿಗಳು ದುರ್ವಿಶೋಧ್ಯರಾಗಿದ್ದರು ; (ಮಂದಪ್ರಜ್ಞರಾಗಿದ್ದುದರಿಂದ) ಗುರೂಪದೇಶವನ್ನು ಸ್ಪಷ್ಟರೀತಿಯಿಂದ ತಿಳಿದುಕೊಳ್ಳಲು ಸಮರ್ಥರಿರಲಿಲ್ಲ; ಇಂತೆಯೇ ಅಂತಿಮ ತೀರ್ಥಂಕರನ ಕಾಲದ ಯತಿಗಳು ದುರನುಪಾಲಕರಾಗಿದ್ದರು ; (ವಕ್ರ

ಸ್ವಭಾವದವರೂ ಮಂದಪ್ರಜ್ಞರೂ ಆಗಿದ್ದುದರಿಂದ ಇವರು) ಕ್ಲೇಶಪೂರ್ವಕವಾಗಿ ಗುರೂಪದೇಶವನ್ನು ಅನುಸರಿಸುತ್ತಿದ್ದರು ; ಆದರೆ ಮಧ್ಯಕಾಲೀನರಾದ ಇಪ್ಪತ್ತೆರಡು ತೀರ್ಥಂಕರರಕಾಲದ ಯತಿಗಳು ಸುವಿಶೋಧ್ಯರೂ ಸುಪರಿಪಾಲಕರೂ ಆಗಿದ್ದುದರಿಂದ ಗುರೂಪದೇಶವನ್ನು ಸುಲಭವಾಗಿ ಗ್ರಹಿಸಿ, ಆದಿಷ್ಟವಾದ ಆಚಾರವಿಧಿಗಳನ್ನು ಯಥಾವತ್ತಾಗಿ ಅನುಸರಿಸುತ್ತಿದ್ದರು ; ಈ ಯತಿಗಳು ನಾಲ್ಕು ವ್ರತಗಳ ಧಾರಕರಾಗಿದ್ದರೂ ಐದನೆಯ ವ್ರತವಿಧಿಯನ್ನೂ ಗ್ರಹಿಸಿ, ಅದನ್ನು ಜಾಗರೂಕತೆಯಿಂದ ಪರಿಪಾಲಿಸಲು ಸಮರ್ಥರಿದ್ದರು.

ಯದುಕ್ತಂ :

ನೋ ಅಪರಿಗ್ಗಹಿಆಏ ಇತ್ಥೀಏ ಜೇಣ ಹೋಇ ಪರಿಭೋಗೋ ।<br>
ತಾ ತವ್ವಿರಈಏ ಚ್ಚಿಯ, ಅಬಂಭವಿರಇತ್ತಿಪಣ್ಣಾಣಂ ॥ ೨೭೮ ॥

(ಆಗಮದಲ್ಲಿ) ಹೇಳಲ್ಪಟ್ಟಿದೆಯೇನೆಂದರೆ :

ಅಪರಿಗ್ರಹೀತ ಸ್ತ್ರೀಯರನ್ನು, ಅರ್ಥಾತ್ ವಿವಾಹಿತಪತ್ನಿಯಾಗಿ ಸ್ವೀಕೃತಗಳಾಗದಿರುವ ಮತ್ತು ಕೌಟುಂಬಿಕ ಪರಿಗ್ರಹವಾಗಿ ಅಂಗೀಕೃತಳಾಗದಿರುವ ಸ್ತ್ರೀಯನ್ನು ಲೈಂಗಿಕಸಂಗಸುಖಕ್ಕಾಗಿ ಭೋಗಿಸುವಂತಿಲ್ಲ. ಯಾವ ವಸ್ತುವನ್ನೂ ತನ್ನದೆನಿಸಿ ಹೊಂದಿರುವುದನ್ನು ನಿಷೇಧಿಸುವ ಅಪರಿಗ್ರಹವ್ರತವನ್ನು ಧರಿಸುವಲ್ಲಿ ಅಬಂಭ-ವಿರಇಯು ; ಅರ್ಥಾತ್ ಲೈಂಗಿಕ ಸಂಗವಿರತಿಯು ನಿಶ್ಚಿತವಾಗಿ ವಿಧಿಸಲ್ಪಟ್ಟಿರುವುದು.

ಈ ದೃಷ್ಟಿಯಿಂದ ಮಹಾಮುನಿ ಶ್ರೀ ಪಾರ್ಶ್ವನಾಥತೀರ್ಥಂಕರನು ನಾಲ್ಕು ಮಹಾವ್ರತಗಳಿಂದ ಕೂಡಿದ ಧರ್ಮವನ್ನು ಉಪದೇಶಿಸಿದನು ; ಆದಿತೀರ್ಥಂಕರನಾದ ಭಗವಾನ್ ಶ್ರೀ ಋಷಭದೇವ ಹಾಗೂ ಅಂತಿಮ ತೀರ್ಥಂಕರನಾದ ಶ್ರಮಣಭಗವಾನ್ ಶ್ರೀ ವರ್ಧಮಾನಸ್ವಾಮಿಯರೀರ್ವರೂ ಐದು ವ್ರತಗಳಿಂದ ಕೂಡಿದ ಧರ್ಮವನ್ನು ಉಪದೇಶಿಸಿದರು. (ನಾಲ್ಕುವ್ರತಯುಕ್ತವಾದ ಧರ್ಮ ಮತ್ತು ಪಂಚವ್ರತಯುಕ್ತವಾದ ಧರ್ಮಗಳ ) ಈ ವ್ಯತ್ಯಾಸವು ಶಿಷ್ಯರ ಧೀಶಕ್ತಿಯ ವ್ಯತ್ಯಾಸವನ್ನಾಧರಿಸಿ ರೂಪಿತವಾಗಿದೆಯಲ್ಲದೆ ತತ್ತ್ವದ ನಿಜರೂಪಕ್ಕೆ ಸಂಬಂಧಿಸಿದುದಾಗಿಲ್ಲ."

ಗೌತಮಗಣಧರಸ್ವಾಮಿಯ ಮೇಲ್ಕಂಡ ವಿವರಣೆಯಿಂದ, ಶ್ರೀಪಾರ್ಶ್ವನಾಥ ತೀರ್ಥಂಕರ ಮತ್ತು ಶ್ರೀ ವೀರತೀರ್ಥಂಕರರಿಂದ ಬೋಧಿತವಾದ ಧರ್ಮವು ಒಂದೇ ಆಗಿದ್ದು, ಈ ತೀರ್ಥಂಕರರೀರ್ವರ ಬೋಧನಾಕ್ರಮದಲ್ಲಿ ಮಾತ್ರ ವ್ಯತ್ಯಾಸವಿರುವುದೆಂಬ ಕಾರಣಮಾತ್ರದಿಂದ 'ಮೋಕ್ಷಸಾಧನಾರೂಪದ ಏಕೈಕ ಉದ್ದೇಶಯುಕ್ತವಾದ ಧರ್ಮವು, ಶ್ರೀ ಪಾರ್ಶ್ವನಾಥತೀರ್ಥಂಕರ ಮತ್ತು ಶ್ರೀ ವೀರತೀರ್ಥಂಕರರಿಂದ ದ್ವಿವಿಧವಾಗಿ ಬೋಧಿಸಲ್ಪಟ್ಟಿದೆ[1]' ಎಂಬ ಕೇಶಿಕುಮಾರ ಶ್ರಮಣರ ಪ್ರಶ್ನೆಗವಕಾಶ

---

1 ಪೂರ್ವೋಲ್ಲಿಖಿತ ೨೪ ನೇ ಗಾಹೆ.

ವಿರುವುದಿಲ್ಲವೆಂಬುದಲ್ಲದೆ, ಈ ಪ್ರಶ್ನೆಗುತ್ತರವಾಗಿ 'ಧರ್ಮವು ದ್ವಿವಿಧವಾಗಿಬೋಧಿಸಲ್ಪಟ್ಟಿದ್ದರೂ[1] ತಾತ್ವಿಕಸ್ವರೂಪವನ್ನಧಿಕರಿಸಿ ಯಾವ ವ್ಯತ್ಯಾಸವೂ ಏರ್ಪಡುವುದಿಲ್ಲ' ಎಂಬ ಗೌತಮಗಣಧರರ ವಿವರಣೆಯೂ ಸುಸಂಗತವಿರುವುದಿಲ್ಲ. ಯತಿಗಳ ಆಚಾರ ಧರ್ಮವೆನಿಸಿ ಶ್ರೀಪಾರ್ಶ್ವನಾಥತೀರ್ಥಂಕರನಿಂದ ಬೋಧಿತವಾದ ಚಾತುರ್ಯಾಮ ಧರ್ಮದನುಗುಣವಾಗಿಯೂ ಕೂಡ ಯತಿಧರ್ಮವನ್ನು ಗ್ರಹಣೆಮಾಡುವವನು ಪತ್ನೀಪುತ್ರಾದಿಯಾದ ಸರ್ವಕೌಟುಂಬಿಕ ಸಂಗವನ್ನೂ ತ್ಯಜಿಸಬೇಕೆಂಬ ಸರ್ವಸಾಮಾನ್ಯವಾದ ವಿಧಿಯಿದ್ದಿತೆಂಬುದರಲ್ಲಿ ವಿವಾದವಿಲ್ಲ. ಈರೀತಿಯಾದ ಸರ್ವಸಂಗ ವಿಮುಕ್ತಿರೂಪದ ಯತಿಧರ್ಮವನ್ನು ಕೈಗೊಂಡ ಯತಿಯು ತಾನು ಕೈಗೊಂಡ ಯತಿಧರ್ಮದಲ್ಲಿ ಬ್ರಹ್ಮಚರ್ಯವ್ರತವು ( ಪೃಥಕ್ಕಾಗಿ ) ಆದಿಷ್ಟವಾಗಿಲ್ಲವೆಂಬ ಕಾರಣಮಾತ್ರದಿಂದ ತನ್ನ ಪೂರ್ವಾಶ್ರಮದ ಪತ್ನಿಯೊಡನಾಗಲೀ ಅಥವಾ ಮತ್ತಾವಸ್ತ್ರೀಯೊಡನಾಗಲೀ ಸಂಗಮಾಡಿದಲ್ಲಿ ಅದಕ್ಕೆ ಅವನ ಐಂದ್ರಿಯಿಕ ಲಾಲಸಾರೂಪದ ಅಸಂಯಮವು ಕಾರಣವಾಗಿಯೆಂದು ಹೇಳಬಹುದಲ್ಲದೆ, ಅವನ ಅಜ್ಞತೆಯು ಕಾರಣವಾಗಿದೆಯೆಂದು ಹೇಳಲಾಗುವುದಿಲ್ಲ. ಈ ರೀತಿಯಾಗಿ ಅಂತರಂಗದ ಲಾಲಸೆಯಿಂದ ಪ್ರೇರಿತನಾಗಿ ವ್ರತಭ್ರಷ್ಟನಾಗುವ ವ್ಯಕ್ತಿಗೆ ಅಪರಿಗ್ರಹವ್ರತದಲ್ಲಿ ಅಂತರ್ಗತವಾಗಿದ್ದ ಬ್ರಹ್ಮಚರ್ಯವ್ರತವನ್ನು ಪೃಥಕ್ಕರಿಸಿ ಬೋಧಿಸಿದ ಮಾತ್ರಕ್ಕೆ ಯಾವ ಪ್ರಯೋಜನವೂ ಆಗಲಾರದು. ಆದ್ದರಿಂದ ಪೂರ್ವಕಾಲೀನ ತೀರ್ಥಂಕರರಿಂದ ಬೋಧಿತವಾದ ಧರ್ಮದಲ್ಲಿ ಅಂತರ್ಗತವಾಗಿದ್ದ ಯಾವುದಾದರೊಂದು ಆಚಾರ ವಿಧಿಯನ್ನು ಶ್ರೀ ವೀರತೀರ್ಥಂಕರನು ಪೃಥಕ್ಕರಿಸಿ ಬೋಧಿಸಿದ್ದಲ್ಲಿ ಅದಕ್ಕೆ ಯತಿಗಳ ಆಚರಣೆಯಲ್ಲಿ ಕಂಡುಬಂದ ವಿಶಿಷ್ಟರೂಪದ ಲೋಪದೋಷಗಳು ಕಾರಣವಾಗಿರಬೇಕೆಂದು ಗ್ರಹಿಸಬೇಕಾಗುವುದು. ಪಾಪಕರ್ಮಾಸ್ರವಹೇತುಗಳಾದ ಬಾಹ್ಯಾಭ್ಯಂತರರೂಪದ ಹಿಂಸಾದಿ ಪ್ರವೃತ್ತಿಗಳ ವಿರತಿಯು ವ್ರತವೆನಿಸುವುದು. ಅಂತೆಯೇ ಇದರಂತೆ ಬಾಹ್ಯರೂಪದ ಪ್ರಾಣಿವಧೆಯೇ ಮೊದಲಾದ ಕ್ರಿಯೆಗಳ ವಿರತಿಮಾತ್ರವು ವ್ರತವೆನಿಸುವುದಿಲ್ಲ.[2] ಬಾಹ್ಯರೂಪದ ಈ ವಿರತಿಯೊಡನೆ ಆಭ್ಯಂತರರೂಪದ ಹಿಂಸಾದಿ ಭಾವಗಳ ವಿರತಿಯೂ ಸಂಗತವಾಗಿದ್ದಲ್ಲಿ ಮಾತ್ರ ನಿರತೀಚಾರವಾದ ವ್ರತ ಪರಿಪಾಲನೆಯೆನಿಸುವುದು. ಹಿಂಸಾದಿ ಪಾಪಪ್ರವೃತ್ತಿಗಳ ಪ್ರೇರಕವಾದ ಕ್ರೋಧಾದಿ ಕಷಾಯಗಳಿಂದ ನಿವೃತ್ತಿಹೊಂದುವುದು ವ್ರತಗಳ ಮೂಲೋದ್ದೇಶವಾಗಿದೆ[3] ಈ

---

1 ೨೯ ನೇ ಗಾಹೆ.

2 ಭಾವವಿರದೋದು ವಿರದೋ ಣ ದವ್ವವಿರದಸ್ಸ ಸುಗ್ಗಈ ಹೋಇ ॥ ೧೦೪ ॥
[ಮೂಲಾಚಾರ_ಸಮಯಸಾರಾಧಿಕಾರ]

3 ರಾಗಾದೀಣಮಣುಪ್ಪಾ ಅಹಿಂಸಗತ್ತಂ ತಿ ದೇಸಿದಂ ಸಮಯೆ ।
ತೇಸಿಂ ಚೇ ಉಪ್ಪತ್ತೀ ಹಿಂಸೇತಿ ಜಿಣೇಹಿ ಣಿದ್ದಿಟ್ಠಾ ।
[ಸರ್ವಾರ್ಥಸಿದ್ಧಿ_ಅಧ್ಯಾಯ ೭ ; ಸೂತ್ರ ೨೨ ರ ವ್ಯಾಖ್ಯೆ]

ಸೂಕ್ಷ್ಮವಾದ ಮೂಲೋದ್ದೇಶವನ್ನು ಮಂದಮತಿಗಳೂ ಮೋಹಲಕ್ಷರೂ ಆಗಿದ್ದ ಶಿಷ್ಯರಿಗೆ ಬೋಧಿಸುವುದಕ್ಕಾಗಿ ಮತ್ತು ಉಪದೇಶಾನುಸಾರವಾದ ಆಚರಣೆಯ ಪರಿಪಾಲನಾರ್ಥವಾಗಿ ಚಾರಿತ್ರಧರ್ಮಾಂತರ್ಗತವಾದ ಪಂಚಾಚಾರಗಳಲ್ಲೊಂದಾದ ಚಾರಿತ್ರಾಚಾರವು ತ್ರಿಗುಪ್ತಿ, ಪಂಚಸಮಿತಿ ಮತ್ತು ಪಂಚವ್ರತಗಳೆಂಬ ೧೩ ಪ್ರಕಾರಗಳುಳ್ಳದ್ದಾಗಿ ಶ್ರೀ ವೀರತೀರ್ಥಂಕರನಿಂದ ರೂಪಿತವಾಗಿದೆಯೆಂಬ ದಿಗಂಬರ ಆಮ್ನಾಯದ ಹೇಳಿಕೆಯು ತಥ್ಯನಿಷ್ಠವಾಗಿರುವುದೆಂದು ವ್ಯಕ್ತವಾಗುವುದು.

ಸಂಯಮಿ ಮತ್ತು ದೇಶಸಂಯಮಿ ಎಂಬ ಪಾತ್ರಗಳ ಆಚಾರಭೇದವಶವಾಗಿ ಆಚಾರಧರ್ಮವು ದ್ವಿವಿಧವಾಗಿ ಉಪದಿಷ್ಟವಾಗಿರುವುದೆಂದು ಹಿಂದೆ ಹೇಳಿದೆ. ಸಂಯಮಿಗಳ ಮತ್ತು ದೇಶಸಂಯಮಿಗಳ ವ್ರತಾಚರಣೆಯಲ್ಲಿರುವ ಮಹತ್ ಮತ್ತು ಅಣುರೂಪದ ಭೇದದಿಂದ ಮುನಿಗಳನ್ನು ಮಹಾವ್ರತಿಗಳೆಂದೂ ಗೃಹಸ್ಥರನ್ನು ಅಣುವ್ರತಿಗಳೆಂದೂ ನಿರ್ದೇಶಿಸಲಾಗಿದೆ. ಅಣುವ್ರತಿಯ ಪರಸ್ತ್ರೀಸಂಗ ವಿರತಿರೂಪದ ವ್ರತವು ಬ್ರಹ್ಮಚರ್ಯಾಣುವ್ರತವೆನಿಸಿ ಉಪದಿಷ್ಟವಾಗಿದೆ. ಯತಿಗಳ ಆಚಾರಧರ್ಮವೆಂದು ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಉಪದಿಷ್ಟವಾದ ಚಾಉಜ್ಜಾಮ ಧರ್ಮದ ನಾಲ್ಕನೇ ವಿಭಾಗವಾದ ಅಪರಿಗ್ರಹವ್ರತದಲ್ಲಿ ಬ್ರಹ್ಮಚರ್ಯವ್ರತವು ಅಂತರ್ಗತವಾಗಿದ್ದಿತೆಂಬುದನ್ನು ಆಗಮೋಕ್ತಿಯಾಧಾರದಿಂದ ಸಮರ್ಥಿಸುವ ಸಲುವಾಗಿ 'ಯದುಕ್ತಂ' ಎಂಬ ಪೀಠಿಕೆಯೊಡನೆ ಪ್ರಸ್ತುತಗೊಳಿಸಲಾಗಿರುವ 'ನೋ ಅಪರಿಗ್ಗಹಿಆ ಏ.......' ಎಂಬ ಪೂರ್ವೋಲ್ಲಿಖಿತಗಾಹೆಯು (ಸಂ. ೨೭ ಅ.) ವಾಸ್ತವವಾಗಿ ಶ್ರಾವಕನ ಬ್ರಹ್ಮಚರ್ಯಾಣುವ್ರತದ ಪ್ರತಿಪಾದಕವಾಗಿದೆ ಎಂಬುದನ್ನು ಮುಂದಿನ ಅರ್ಥಕ್ರಮದಿಂದ ಗಮನಿಸಬಹುದು.

ಜೇಣ = ಯಾವುದರಿಂದ, ಅಪರಿಗ್ಗಹಿಆಏ ಇತ್ಥೀಏ = ಅಪರಿಗ್ರಹೀತಳಾದ ಸ್ತ್ರೀಯಲ್ಲಿ, ಪರಿಭೋಗೋ=ಭೋಗಪಡುವಿಕೆಯು, ನೋ ಹೋಇ=ಆಗುವಂತಿಲ್ಲವೊ, ತಾ ತವ್ವಿರಈಏ ಚ್ಚಿಯ=ಅಂತಹ ಆ ವಿರತಿಗೂ ಕೂಡ, ಅಬಂಭವಿರಇತ್ತಿ=ಅಬ್ರಹ್ಮ ವಿರತಿಯೆಂದು, ಪಣ್ಣಾಣಂ=ತಿಳಿಯಲ್ಪಟ್ಟಿದೆ.

ತಾತ್ಪರ್ಯ: ಯಾವ ವ್ರತನಿಮಿತ್ತದಿಂದ ವಿವಾಹವಿಧಿಪೂರ್ವಕ ಪರಿಗೃಹೀತಳಲ್ಲದ ಸ್ತ್ರೀಯಲ್ಲಿ ಭೋಗಪಡುವಿಕೆಯು ಸಂಭವಿಸುವಂತಿಲ್ಲವೋ ಅಂತಹ ಆ (ಅಪರಿಗೃಹೀತ ಸ್ತ್ರೀಸಂಗ)ವಿರತಿಯೂಕೂಡ ಬ್ರಹ್ಮಚರ್ಯವೆನಿಸುವುದೆಂದು ತಿಳಿಯಲ್ಪಟ್ಟಿದೆ.

ಈ ಅರ್ಥದನುಗುಣವಾಗಿ ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಉಪದಿಷ್ಟವಾಗಿದ್ದ ಪರಿಗ್ರಹವ್ರತದಲ್ಲಿ ಬ್ರಹ್ಮಚರ್ಯವ್ರತವು ಅಂತರ್ಗತವಾಗಿದ್ದಿತೆಂಬ ಅಭಿಮತದ ಸಮರ್ಥಕವೆನಿಸಿ ಉಲ್ಲಿಖಿತವಾಗಿರುವ 'ನೋ ಅಪರಿಗ್ಗಹಿಆಏ ಇತ್ಥೀಏ....' ಎಂಬ ಗಾಹೆಯು ಗೃಹಸ್ಥರ ಬ್ರಹ್ಮಚರ್ಯಾಣುವ್ರತದ ಪ್ರತಿಪಾದಕವಾಗಿರುವುದೆಂದು

ಸ್ಪಷ್ಟವಾಗುವುದು. ಆದ್ದರಿಂದ ಈ ಗಾಹೆಯು, ಯತಿಗಳ ಆಚಾರಧರ್ಮವೆನಿಸಿ ಶ್ರೀ ಪಾರ್ಶ್ವನಾಥ ತೀರ್ಥಂಕರನಿಂದ ಉಪದಿಷ್ಟವಾದುದೆಂದು ಹೇಳಲಾಗಿರುವ ಚಾಉಜ್ಜಾಮ ಧರ್ಮದ ನಾಲ್ಕನೇ ವಿಭಾಗವಾದ ಅಪರಿಗ್ರಹವ್ರತದಲ್ಲಿ ಬ್ರಹ್ಮಚರ್ಯವ್ರತವು ಅಂತರ್ಗತವಾಗಿದ್ದಿತೆಂಬ ಹೇಳಿಕೆಯನ್ನು ಸಮರ್ಥಿಸುವುದಿಲ್ಲ. ಇಂತೆಯೇ ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಉಪದಿಷ್ಟವಾದ ಆಚಾರಧರ್ಮಗಳು ದ್ವಿವಿಧವಾಗಿದ್ದುವೆಂಬ ವಾದವೂ ನಿರಾಕೃತವಾಗುವುದಲ್ಲದೆ, ಆಚಾರಧರ್ಮದ ಈ ದ್ವೈವಿಧ್ಯತೆಯು ಸರ್ವತೀರ್ಥಂಕರೋಪದಿಷ್ಟವಾದ ಯತಿಗಳ ಮತ್ತು ಶ್ರಾವಕರ ಆಚಾರಭೇದವಾಗಿದೆಯೆಂದೂ ಅಧಿಗತವಾಗುವುದು.

ದಿಗಂಬರ ಜೈನ ಆಮ್ನಾಯದನುಗುಣವಾಗಿ ತೀರ್ಥಂಕರರೆಲ್ಲರೂ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಎಂಬ ಚತುರ್ಭೇದಸಮಾಶ್ರಿತವಾದ ಧರ್ಮವನ್ನು ಉಪದೇಶಿಸಿರುವರೆಂದು ಹಿಂದೆ ಆಧಾರಪೂರ್ವಕವಾಗಿ ವಿವರಿಸಲಾಗಿದೆ. ಅಂತೆಯೇ ಶ್ರೀವೀರತೀರ್ಥಂಕರನಿಂದ ಉಪದಿಷ್ಟವಾದ ಧರ್ಮವು ಈ ಚತುರ್ಭೇದ ಸಮಾಶ್ರಿತವಾದಧರ್ಮವೇ ಆಗಿರುವುದೆಂದು ಪ್ರಾಚೀನ ಜೈನ ಆಗಮೋಕ್ತಿಯಿಂದ[1] ಮಾತ್ರವಲ್ಲದೆ, ಬೌದ್ಧ ಆಮ್ನಾಯದ ಪ್ರಾಚೀನ ಆಗಮಗ್ರಂಥದ ಹೇಳಿಕೆಯಾಧಾರದಿಂದಲೂ ಸಮರ್ಥಿತವಾಗುವುದು. ಅಜಾತಶತ್ರುವಿಗೆ ನಿಗಂಠನಾತಪುತ್ತನು [ಶ್ರೀವೀರತೀರ್ಥಂಕರನು) 'ಚಾತುಯಾಮ-ಸಂವರ' ಧರ್ಮವನ್ನು ಉಪದೇಶಿಸಿದುದಾಗಿ ಸಾಮಞ್ಞಫಲಸುತ್ತದಲ್ಲಿ ಹೇಳಿದೆ.[2] 'ಚಾತುಯಾಮ' ಮತ್ತು 'ಚಾಉಜ್ಜಾಮ' ಎಂಬ ಪದಗಳು 'ಚಾತುರ್ಯಾಮ' ಎಂಬ ಪದದ ರೂಪಾಂತರಗಳಾಗಿದ್ದು 'ನಾಲ್ಕು ಪ್ರಕಾರದ ಧಾರ್ಮಿಕಅನುಷ್ಠಾನಗಳಿಂದಕೂಡಿದ ಧರ್ಮ' ಎಂಬ ಅರ್ಥದ ವಾಚಕಗಳಾಗಿವೆ. 'ಚಾತುಯಾಮ-ಸಂವರ' ಎಂಬ ಉಕ್ತಿಯ 'ಸಂವರ' ಪದವು ವಿಶಿಷ್ಟಾರ್ಥಯುಕ್ತವಾಗಿದೆ. ಅಭಿನವಕರ್ಮಾದಾನಹೇತುವಾದ ಆಸ್ರವದ ನಿರೋಧವು 'ಸಂವರ'ವೆನಿಸುವುದು.[3] ಮಿಥ್ಯಾತ್ವವಿರತಿಯು (ಸಮ್ಯಕ್ತ್ವವು) ಕರ್ಮಾಸ್ರವನಿರೋಧದ ಪ್ರಥಮ ಹಾಗೂ ಪ್ರಧಾನ ಆವಶ್ಯಕತೆಯಾಗಿದೆಯೆಂಬುದಲ್ಲದೆ ಸಮ್ಯಕ್ತ್ವ

---

1 'ಜ್ಞಾನದರ್ಶನಚಾರಿತ್ರತಪಾಂಸಿಮಮ ಶರಣಾನಿ, ತೇಷಾಂ ಉಪದೇಷ್ಟಾ ಚ ಮಹಾವೀರೋ ಭಗವಾನ್ ಶರಣಂ ಇತಿ'-ಮೂಲಾಚಾರ; ಬೃಹತ್ಪ್ರತ್ಯಾಖ್ಯಾನ-ಗಾಹೇ೬ ವ್ಯಾಖ್ಯಾನ.

2 ದೀರ್ಘನಿಕಾಯ-ಸಾಮಞ್ಞಫಲಸುತ್ತಂ-ಸನ್ಮಾನ್ಯರಾದ ಟಿ. ಡಬ್ಲ್ಯು. ರೈಸ್ ಡೇವಿಡ್ ಮತ್ತು ಜೆ. ಇ. ಕಾರ್ಪೆಂಟರ್‌ರವರಿಂದ ಸಂಪಾದಿತಗ್ರಂಥ-ಪು. ಸಂ. ೫೭.

3 ಸರ್ವಾರ್ಥಸಿದ್ಧಿ-ಸೂತ್ರ ೧-ವ್ಯಾಖ್ಯಾನ.

ಸಹಿತವಾದ ವ್ರತಾಚರಣೆಯುಮಾತ್ರ ಕರ್ಮಾಸ್ರವನಿರೋಧಕವಾಗುವುದು.[1] ಆದ್ದರಿಂದ ಶ್ರೀ ವೀರತೀರ್ಥಂಕರನಿಂದ ಉಪದಿಷ್ಟವಾದುದೆಂದು ಬೌದ್ಧ ಆಗಮಗ್ರಂಥದಲ್ಲಿ ಹೇಳಲಾಗಿರುವ ಚಾತುರ್ಯಾಮಸಂವರಧರ್ಮದ ಚತುರ್ವಿಭಾಗಗಳಲ್ಲಿ ಸಮ್ಯಗ್ದರ್ಶನವು ಅವಶ್ಯವಾಗಿ ಸ್ಥಾನಪಡೆದಿರಬೇಕೆಂದು ಅಧಿಗತವಾಗುವುದಲ್ಲದೆ, ಶ್ರೀ ವೀರತೀರ್ಥಂಕರನಿಂದ ಉಪದಿಷ್ಟವಾದ ಈ ಧರ್ಮವು ಹಿಂದೆ ಪ್ರತಿಪಾದಿಸಲಾಗಿರುವಂತೆ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಎಂಬ ಚತುರ್ಭೇದ ಸಮಾಶ್ರಿತವಾದುದಾಗಿರಬೇಕೆಂದು ತರ್ಕಿತವಾಗುವುದು. ಚರಿತ್ರಕಾರರು, ಚಾ ಉ ಜ್ಜಾ ಮ ಧರ್ಮವಿಷಯಕವಾದ ಶ್ವೇತಾಂಬರ ಜೈನಆಗಮದ ಪೂರ್ವೋಲ್ಲಿಖಿತವಿವರಣೆಯನ್ನಾಧರಿಸಿ, ಬೌದ್ಧಆಗಮದ ಮೇಲ್ಕಂಡ ಹೇಳಿಕೆಯು ತಪ್ಪುಗ್ರಹಿಕೆಯವಶವಾಗಿ ರೂಪಿತವಾಗಿರುವುದೆಂದು ಹೇಳಿದ್ದಾರೆ.[2] ಆದರೆ ದಿಗಂಬರ ಜೈನಆಮ್ನಾಯಾನುಸಾರದ ಮೇಲ್ಕಂಡ ವಿವರಣೆಯಿಂದ ಬೌದ್ಧಆಮ್ನಾಯದ ಪೂರ್ವೋಕ್ತ ಹೇಳಿಕೆಯು ತಥ್ಯನಿಷ್ಠವಾಗಿರುವುದೆಂದು ವ್ಯಕ್ತವಾಗುವುದು.

ಕೇಶಿಕುಮಾರಶ್ರಮಣರ ಪ್ರಶ್ನೆ ೨ ['ಶ್ರ. ಭ. ಮಹಾವೀರ'–ಪು. ಸಂ. ೮೩]

ಅಚೇಲಗೋ ಅ ಜೋ ಧಮ್ಮೋ ಜೋ ಇಮೋ ಸಂತರುತ್ತರೋ ।
ದೇಸಿಓ ವದ್ಧಮಾಣೇಣ ಪಾಸೇಣ ಯ ಮಹಾಯಸಾ ॥ ೨೯ ॥

ಏಗಕಜ್ಜಪ್ಪವನ್ನಾಣಂ ವಿಸೇಸೇ ಕಿಂ ನು ಕಾರಣಂ ।
ಲಿಂಗೇ ದುಹೇ ಮೇಹಾವೀ ! ಕಹಂ ವಿಪ್ಪಚ್ಚಓ ನ ತೇ ॥ ೩೦ ॥

ತಾತ್ಪರ್ಯ: ತೀರ್ಥಂಕರ ಭಗವಾನ್ ಶ್ರೀ ಮಹಾವೀರಸ್ವಾಮಿಯು ಅಚೇಲಕ (ವಸ್ತ್ರರಹಿತವಾಗಿರುವ) ನಿಯಮವನ್ನೂ, ತೀರ್ಥಂಕರ ಭಗವಾನ್ ಶ್ರೀ ಪಾರ್ಶ್ವನಾಥನು, ಉಡುವ ಮತ್ತು ಹೊದೆಯುವ ವಸ್ತ್ರೋಪಯೋಗದ ನಿಯಮವನ್ನೂ ವಿಧಿಸಿದ್ದಾರೆ. ಇಬ್ಬರೂ (ಅಥವಾ ಎರಡು ವಿಧಿಗಳೂ) ಏಕೈಕ ಇಚ್ಛೆ

---

1 ಮಿಚ್ಛತ್ತಾಸವದಾರಂ ರುಂಭಇ ಸಮ್ಮತ್ತದಢಕವಾಡೇಣ ।
ಹಿಂಸಾದಿ ದುವಾರಣ ವಿ ದಢವದಫಲಿಹೇಹಿಂ ರುಬ್ಭಂತಿ ॥ ೪೨ ॥
[ಮೂಲಾಚಾರ–ಪಂಚಾಚಾರಾಧಿಕಾರ]

ಮತ್ತು
ದಂಸಣಭಟ್ಠಾ ಭಟ್ಠಾ ದಂಸಣಭಟ್ಠಾಣ ಣತ್ಥಿ ಣಿವ್ವಾಣಂ ।
ಸಿಜ್ಝಂತಿ ಚರಿಯಭಟ್ಠಾ ದಂಸಣಭಟ್ಠಾ ಣ ಸಿಜ್ಝಂತಿ ॥
[ಕುಂದಕುಂದಾಚಾರ್ಯವಿರಚಿತ-ದರ್ಶನಪಾಹುಡ]

2 ಶನ್ಮಾನ್ಯ ಆರ್. ಕೆ. ಮುಕರ್ಜಿಯವರ 'ಹಿಂದೂ ಸಿವಿಲೈಜೇಷನ್' ಪು. ಸಂ. ೨೨೮-೯.

ತಾರ್ಥದ ಸಾಧನೆಯ ಉದ್ದೇಶಹೊಂದಿರುವಲ್ಲಿ ಈ ವ್ಯತ್ಯಾಸಕ್ಕೆ ಕಾರಣವೇನಿರ ಬಹುದು? ಪ್ರಾಜ್ಞನೇ! ಎರಡುವಿಧವಾದ ಈ ಚಿಹ್ನೆಗಳು (ಲಿಂಗೇ ದುವಿಹೇ= ಎರಡು ವಿಧವಾದ ಬಾಹ್ಯಚಿಹ್ನೆಗಳು) ನಿನಗೆ ವಿಕಲ್ಪವೆನಿಸಿ ಕಾಣುವುದಿಲ್ಲವೆ?

ಗೌತಮಗಣಧರಸ್ವಾಮಿಯವರ ಉತ್ತರ :

.................................................................... |
ವಿಣ್ಣಾಣೇಣ ಸಮಾಗಮ್ಮ ಧಮ್ಮಸಾಹಣಮಿಚ್ಛಿಅಂ || ೩೧ ||
ಪಚ್ಚಯತ್ಥಂ ಚ ಲೋಯಸ್ಸನಾಣಾವಿಹವಿಗಪ್ಪಣಂ |
ಜತ್ತತ್ಥಂ ಗಹಣತ್ಥಂ ಚ ಲೋಗೇ ಲಿಂಗಪ್ಪಓಅಣಂ || ೩೨ ||
ಅಹ ಭವೇ ಪಇಣ್ಣಾ ಉ, ಮುಕ್ಖಸಬ್ಭೂಅಸಾಹಣೋ |
ನಾಣಂ ಚ ದಂಸಣಂಚೇವ ಚರಿತ್ತಂಚೇವ ನಿಚ್ಛಏ || ೩೩ ||

ತಾತ್ಪರ್ಯ: "ಅನೇಕ ಆಚಾರನಿಯಮಗಳ ಅನುಷ್ಠಾನಕ್ಕೆ ಅವಶ್ಯಕವಾದ ಸಾಮಗ್ರಿಗಳಾವುವೆಂಬುದನ್ನು ತೀರ್ಥಂಕರರು ಕೇವಲಜ್ಞಾನದಿಂದ ತಿಳಿದು ಯತಿಗಳಿಗೆ ಅಂತಹ ಸಾಮಗ್ರಿಗಳನ್ನು ಉಪಯೋಗಿಸಲು ಅನುಮತಿಯಿತ್ತಿದ್ದಾರೆ.

ತೀರ್ಥಂಕರ ಭಗವಾನ್ ಋಷಭದೇವಸ್ವಾಮಿ ಮತ್ತು ತೀರ್ಥಂಕರ ಭಗವಾನ್ ಶ್ರೀ ವರ್ಧಮಾನರ ಕಾಲದ ಯತಿಗಳಿಗೆ ಬಣ್ಣದವುಗಳೂ ಮತ್ತು ಬೆಲೆಯಾದುವೂ ಆದ ವಸ್ತ್ರಗಳನ್ನು ಉಪಯೋಗಿಶಲು ಅಪ್ಪಣೆಯಿರಲಿಲ್ಲ; ಈ ತೀರ್ಥಂಕರರ ಕಾಲದ ಯತಿಗಳು ವಕ್ರಸ್ವಭಾವಿಗಳೂ ಮತ್ತು ಮಂದಮತಿಗಳೂ ಆಗಿದ್ದು, ಇವರು ತಮಗೆ ಬೇಕಾದ ಈ ವಸ್ತುಗಳನ್ನು ಬೇರೆಯವರಿಂದ ಸಿದ್ಧಪಡಿಸಿಕೊಳ್ಳುವಲ್ಲಿ ಸೂಕ್ಷ್ಮಜಂತುಗಳ ಸಾವಿಗೆ ಅವಕಾಶವಾಗಬಹುದೆಂಬ ಅಂಜಿಕೆಯು (ಈ ನಿಷೇಧಕ್ಕೆ) ಕಾರಣವಾಗಿದೆ. ತೀರ್ಥಂಕರ ಭಗವಾನ್ ಶ್ರೀ ಪಾರ್ಶ್ವನಾಥನ ಕಾಲದ ಯತಿಗಳು ಸರಳರೂ ಮತ್ತು ಪ್ರಾಜ್ಞರೂ ಆಗಿದ್ದುದರಿಂದ ಇವರು ಆಕರ್ಷಣೀಯವೂ ಬೆಲೆಬಾಳುವಂತಹುವೂ ಆದ ವಸ್ತ್ರಗಳನ್ನುಪಯೋಗಿಸುವುದು ನಿಷಿದ್ಧವಿರಲಿಲ್ಲ.

ಜನರು ಯತಿಗಳ ಬಾಹ್ಯಚಿಹ್ನೆಗಳೆನಿಸಿದ ವಸ್ತುಗಳ ಮೂಲಕ ಅವರನ್ನು ಪೃಥಕ್ಕರಿಸಿ ಗುರುತಿಸುವರು. ಚಿತ್ತೈಕಾಗ್ರತೆಯ ಸಾಧನೆ ಮತ್ತು ಜ್ಞಾನಾರ್ಜನೆಗಳ ಉದ್ದೇಶಾನುಗುಣವಾಗಿ ಉಡಿಗೆಗಳಲ್ಲಿ ವೈವಿಧ್ಯತೆಯೇರ್ಪಟ್ಟಿದೆ. ಯತಿಯ ಮನಸ್ಸು ಅಲ್ಪಮಾತ್ರವಾದರೂ ವಿಕ್ಲವವಶವಾದಾಗ ತಾನು ಯತಿಯಾಗಿದ್ದೇನೆಂಬುದನ್ನು ನೆನಪಿಗೆ ತರುವುದು ಉಡಿಗೆಯ ವೈಶಿಷ್ಟ್ಯದ ಮತ್ತೊಂದು ಕಾರಣವಾಗಿದೆ. ತೀರ್ಥಂಕರರು ಸಮ್ಯಜ್ಞಾನ, ಸಮ್ಯಗ್ದರ್ಶನ ಮತ್ತು ಸಮ್ಯಕ್ಚಾರಿತ್ರಗಳನ್ನು ಮೋಕ್ಷ ಸಾಧಕಗಳನ್ನಾಗಿ ಉಪದೇಶಿಸಿದ್ದಾರೆ. ಆದರೆ ಎಲೈ ಕೇಶಿಕುಮಾರನೇ! ಬಾಹ್ಯ ಚಿಹ್ನೆಗಳು ಮೋಕ್ಷಸಾಧಕಗಳಲ್ಲ."

ಮೇಲ್ಕಂಡ ವಿವರಣೆಯನುಗುಣವಾಗಿ ಶ್ರೀ ಪಾರ್ಶ್ವನಾಥ ತೀರ್ಥಂಕರನ ಧರ್ಮ ಸಂಥಾನುಯಾಯಿಗಳಾದ ನಿರ್ಗ್ರಂಥಯತಿಗಳಿಗೆ ವಸ್ತ್ರಧಾರಕರಾಗಿರಲು ಅವಕಾಶ ವಿದ್ದು, ಶ್ರೀ ವೀರತೀರ್ಥಂಕರನ ಕಾಲದಲ್ಲಿ ವಸ್ತ್ರಧಾರಣೆಯು ನಿಷಿದ್ಧವಾಯಿತೆಂದು[1] ಪ್ರತಿಪಾದಿತವಾಗಿರುವುದು ಸ್ಪಷ್ಟವಿದೆ. ಆದರೆ ಈ ಸಚೇಲಕ ಮತ್ತು ಅಚೇಲಕ ಆಚಾರವಿಧಿ ಪ್ರವರ್ತನೆಗಳ ನಿರೂಪಕವಾದ 'ಅಚೇಲಗೋಯ....' ಎಂಬ ಗಾಹೆ ಯನ್ನು ಅರ್ಥವಿಸುವಲ್ಲಿ, 'ಚಾಉಜ್ಜಾವೋಯ....' ಎಂಬ ಪೂರ್ವಗಾಹೆಯನ್ನು ಅರ್ಥವಿಸಿರುವುದರ ಅಪೇಕ್ಷೆಯಿಂದ, ಕ್ರಮಭೇದವೇರ್ಪಟ್ಟಿರುವುದಾದ್ದರಿಂದ ಪ್ರಕೃತ ಸಂದರ್ಭದ ಅರ್ಥವಿವರಣೆಯ ತಥ್ಯವು ಪ್ರಶ್ನಾಯತ್ತವಾಗಿದೆ. 'ಚಾಉಜ್ಜಾವೋಯ ಜೋಥಮ್ಮೋ ...' ಎಂಬ ಗಾಹೆಯನ್ನು ಅರ್ಥವಿಸುವಲ್ಲಿ ಪ್ರಥಮಪಾದವನ್ನು ಚತುರ್ಥ ಪಾದದೊಡನೆಯೂ ಮತ್ತು ದ್ವಿತೀಯ ಪಾದವನ್ನು ತೃತೀಯಪಾದದೊಡನೆಯೂ ಅನ್ವಯಿಸಿ ಅರ್ಥವಿಸಲಾಗಿರುವುದನ್ನು ಗಮನಿಸಬಹುದು. ಇದೇ ಅನ್ವಯಕ್ರಮಾನು ಸಾರವಾಗಿ 'ಅಚೇಲಗೋಯ ಜೋ ಥಮ್ಮೋ....' ಎಂಬ ಗಾಹೆಯನ್ನು ಅರ್ಥವಿಸಿದಲ್ಲಿ 'ಅಚೇಲಕ ಧರ್ಮವು ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಉಪದಿಷ್ಟವಾಗಿರುವುದು ಮತ್ತು (ಸಂತರುತ್ತರೋ=) ಸಚೇಲಕ ಧರ್ಮವು ಶ್ರೀ ವೀರತೀರ್ಥಂಕರನಿಂದ ಉಪ ದಿಷ್ಟವಾಗಿರುವುದು' ಎಂದು ಅರ್ಥಮೂಡುವುದು. ಆದರೆ ಅನ್ವಯಕ್ರಮದ ಬದ ಲಾವಣೆಯ ಮೂಲಕ 'ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಸಚೇಲಕ ಧರ್ಮವು ಉಪದಿಷ್ಟವಾಗಿರುವುದು ಮತ್ತು ಶ್ರೀ ವೀರತೀರ್ಥಂಕರನಿಂದ ಅಚೇಲಕ ಧರ್ಮವು ಉಪದಿಷ್ಟವಾಗಿರುವುದು' ಎಂದು ವ್ಯಾಖ್ಯಾನಮಾಡಲಾಗಿದೆ. ಈ ರೀತಿಯಾಗಿ ಅನ್ವಯಕ್ರಮವನ್ನು ಬದಲಿಸಿ ಅರ್ಥವಿಸಿರಲು ಯುಕ್ತವಾದ ಯಾವುದಾದರೊಂದು ಕಾರಣವಿರಬೇಕೆಂದು ಒಪ್ಪಬಹುದಾದರೂ ಈ ಗಾಹೆಯು ಮತ್ತೂ ಒಂದುರೀತಿಯಿಂದ ವ್ಯತ್ಯಾಸಭಾಗಿಯಾಗಿರುವುದು. ಆದ್ದರಿಂದ ಸ್ವಮತಉದ್ಧೃತವಾದ ಆಚಾರದ ಸಮರ್ಥನೆಗಾಗಿ ಈ ವ್ಯತ್ಯಾಸಗಳನ್ನು ರೂಪಿಸಲಾಗಿದೆಯೆಂದು ಹೇಳಲವಕಾಶ ವಾಗುವುದು. ಈ ಗಾಹೆಯನ್ನಧಿಕರಿಸಿದಂತೆ ರೂಪಿತವಾಗಿರುವ ಮತ್ತೊಂದು ರೀತಿಯ ವ್ಯತ್ಯಾಸವೇನೆಂಬುದು ಪೂರ್ವೋಲ್ಲಿಖಿತವಾದ ೧೩ ನೇ ಗಾಹೆಯನ್ನು ಗಮನಿಸಿದಲ್ಲಿ ಸ್ಪಷ್ಟವಾಗುವುದು. ಈ ೧೩ ನೇ ಗಾಹೆಯ ಮತ್ತು ಈ ಹಿಂದಿನ ೨೯ ನೇ ಗಾಹೆಯ ಪೂರ್ವಾರ್ಧವು ಒಂದೇ ಆಗಿದ್ದು ಉತ್ತರಾರ್ಧದಲ್ಲಿ ವ್ಯತ್ಯಾಸ ವೇರ್ಪಡಿಸಲಾಗಿದೆ. ಉತ್ತರಾರ್ಧದ ಈ ವ್ಯತ್ಯಾಸದ ಪರಿಣಾಮವಾಗಿ ಅರ್ಥವೂ ವಿಶಿಷ್ಟರೀತಿಯಿಂದ ವ್ಯತ್ಯಾಸಭಾಗಿಯಾಗಿದೆ: ೧೩ ನೇ ಗಾಹೆಯು 'ಯಾವ ಅಚೇ ಲಕವೆಂಬ ಧರ್ಮ ಮತ್ತು ಯಾವ (ಸಂತರುತ್ತರೋ=) ಸಚೇಲಕವೆಂಬ ಈ

---

1 'ಅಚೇಲಕ' ಎಂದರೆ ವಸ್ತ್ರಧಾರಣೆಮಾಡದಿರುವುದು, ನಗ್ನನಾಗಿರುವುದು ಎಂಬ ಅರ್ಥವಿದೆ. ಆದರೆ 'ಶ್ರ. ಭ. ಮಹಾವೀರ' ಕೃತಿಯಲ್ಲಿ ಈ ಪದಕ್ಕೆ 'ಬಣ್ಣದ ಮತ್ತು ಬೆಲೆಯಾದ ವಸ್ತ್ರಗಳನ್ನು ಧಾರಣೆಮಾಡದಿರುವುದು' ಎಂಬ ಅರ್ಥ ಕೊಡಲಾಗಿದೆ.

ಧರ್ಮ (ಎರಡೂ) ಏಕಕಾರ್ಯವನ್ನು ಗುರಿಯಾಗಿ ಹೊಂದಿವೆ. (ಇಂತಿರುವಲ್ಲಿ) ವ್ಯತ್ಯಾಸಕ್ಕೆ ಕಾರಣವೇನು?' ಎಂದು ಅರ್ಥಗೊಡುವುದು. ಮಹಾವ್ರತಿಗಳಾದ ಯತಿಗಳಿಗೆ ಅಚೇಲಕಧರ್ಮವೂ ಅಣುವ್ರತಿಗಳಾದ ಗೃಹಸ್ಥರಿಗೆ ಸಚೇಲಕಧರ್ಮವೂ ಉಪದಿಷ್ಟವಾಗಿವೆಯೆಂಬುದು ವಿದಿತವಿದೆ. ಯತಿಗಳು ಮತ್ತು ಗೃಹಸ್ಥರು ಮೋಕ್ಷ ಸಾಧನಾರೂಪದ ಏಕಕಾರ್ಯದಲ್ಲಿ ಮಹದಣುಭೇದದಿಂದ ಪ್ರವೃತ್ತರಾಗಿರುವರು.[1] ಇದರಂತೆ ಈ ಗಾಹೆಯಲ್ಲಿ, ಯತಿಗಳ ಮತ್ತು ಗೃಹಸ್ಥರ ಆಚಾರಧರ್ಮವಿಷಯಕವಾದ ಪ್ರಶ್ನೆಯು ಅಂತರ್ಗತವಾಗಿರುವುದೆಂದು ಸ್ಪಷ್ಟವಾಗುವುದಲ್ಲದೆ, 'ಯತಿಗಳಿಗೆ, ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಸಚೇಲಕ ಧರ್ಮವೂ ಶ್ರೀ ವೀರತೀರ್ಥಂಕರನಿಂದ ಅಚೇಲಕಧರ್ಮವೂ ಆಚರಣೀಯವಾಗಿ ಉಪದೇಶಿಸಲ್ಪಟ್ಟಿದೆ' ಎಂಬ ಅರ್ಥವು ಸರ್ವಥಾ ಈ ಗಾಹೆಯಲ್ಲಿ ಮೂಡುವುದಿಲ್ಲ. ಆದ್ದರಿಂದ ಯತಿಗಳಲ್ಲಿ ಆರೂಢವಾದ ಸಚೇಲಕ ಆಚಾರಧರ್ಮದ ಸಮರ್ಥನೆಗಾಗಿ ಆಗಮದ ಆಧಾರವನ್ನು ಪರಿಕಲ್ಪಿಸುವ ಸಲುವಾಗಿಯೇ ಈ (೧೩ ನೇ) ಗಾಹೆಯ 'ಏಗಕಜ್ಜ ಪವನ್ನಾಣಂ....' ಎಂಬ ಉತ್ತರಾರ್ಧದ ಬದಲಾಗಿ, ೨೯ ನೇ ಗಾಹೆಯಲ್ಲಿ 'ದೇಸಿಓ ವದ್ಧಮಾಣೇಣಂ ...'[2] ಎಂಬ ಉತ್ತರಾರ್ಧವನ್ನು ಸಂಯೋಜಿಸಲಾಗಿದೆಯೆಂದು ವ್ಯಕ್ತವಾಗುವುದು. ಇಂತಹ ಈ ಆಗಮೋಕ್ತಿಯನ್ನಾಧರಿಸಿ ಚರಿತ್ರಕಾರರು ತಮ್ಮದೇ ಆದ ಪರಿಕಲ್ಪನೆಯೊಂದನ್ನು ಈ ಮುಂದಿನಂತೆ ಮಂಡಿಸಿದ್ದಾರೆ: "ಶ್ವೇತಾಂಬರರ ಪೂರ್ವಜರು ಪಾರ್ಶ್ವನಾಥನ ಅನುಯಾಯಿಗಳಾಗಿದ್ದಾರೆ ಹಾಗೂ ದಿಗಂಬರರ ಪೂರ್ವಜರು ಮಹಾವೀರನ ಅನುಯಾಯಿಗಳಾಗಿದ್ದಾರೆ; ಮತ್ತು ಮಹಾವೀರನಕಾಲದಲ್ಲಿ ಈ ಎರಡು ಪಂಗಡಗಳ ಮಧ್ಯೆ ಒಂದು ರೀತಿಯ ಸಂಘಟನೆಯನ್ನೇರ್ಪಡಿಸಲಾಯಿತು. [ಪೂ. ಸೂ. 'ಹಿಂದೂ ಸಿವಿಲೈಜೇಶ್ನ' ಪು. ಸಂ. ೨೨೯]" ಚರಿತ್ರಕಾರರ ಈ ಅಭಿಪ್ರಾಯ ಹಾಗೂ ಇದಕ್ಕೆ ಆಧಾರವಾದ ಪೂರ್ವೋಲ್ಲಿಖಿತ ಆಗಮೋಕ್ತಿಯು ತಥ್ಯವಿದೂರವಾಗಿವೆಯೆಂದು ಸಾಕ್ಷಿಗೊಡುವ ಐತಿಹಾಸಿಕ ಪ್ರಸಂಗವಿದೆ: ಶ್ರೀ ವೀರತೀರ್ಥಂಕರನು ಪ್ರವ್ರಜಿತನಾಗುವ ಪೂರ್ವಭಾವಿಯಾಗಿಯೇ, ಶ್ರೀ ಗೌತಮಬುದ್ಧನು ತನ್ನ ಹಲವರ್ಷಕಾಲದ ತಪಸ್ಸಿ

---

1 ಅಣುವ್ರತಧಾರಿಗಳಾದ ಗೃಹಸ್ಥರು ಯಾವ ರೀತಿಯಿಂದ ಮೋಕ್ಷಮಾರ್ಗ ಪ್ರವೃತ್ತರಾಗಿರುವರೆಂಬುದು, ಸಮಂತಭದ್ರಾಚಾರ್ಯವಿರಚಿತ 'ರತ್ನಕರಂಡಕ ಶ್ರಾವಕಾಚಾರ' ದ ಈ ಮುಂದಿನ ಹೇಳಿಕೆಯಿಂದ ಸ್ಪಷ್ಟವಾಗುವುದು :

ಗೃಹಸ್ಥೋ ಮೋಕ್ಷಮಾರ್ಗಸ್ಥೋ ನಿರ್ಮೋಹೋ, ನೈವಮೋಹವಾನ್ ।
ಅನಗಾರೋ, ಗೃಹೀ ಶ್ರೇಯಾನ್ ನಿರ್ಮೋಹೋ ಮೋಹಿನೋ ಮುನೇಃ ॥ ೩೩ ॥

2 ಈ ಉತ್ತರಾರ್ಧವು ೧೨ ನೇ ಗಾಹೆಯ ಉತ್ತರಾರ್ಧವಾಗಿದೆಯೆಂಬುದನ್ನು ಗಮನಿಸಬಹುದು.

ಮತ್ತು ಧ್ಯಾನಾಚರಣೆಗಳ ತರುವಾಯ ಬೋಧಿಸಂಪನ್ನನಾಗಿ ಧರ್ಮಪ್ರವರ್ತನೆ ಮಾಡಿದ್ದುದಾಗಿಯೂ ಮತ್ತು ತನ್ನ ತಪಶ್ಚರ್ಯೆಯ ಅವಧಿಯಲ್ಲಿ ಶ್ರೀ ಗೌತಮ ಬುದ್ಧನು ಸ್ವಲ್ಪಕಾಲಪರ್ಯಂತ, ಶ್ರೀ ಪಾರ್ಶ್ವನಾಥ ತೀರ್ಥಂಕರನ ಧರ್ಮಪಂಥಾನುಗುಣವಾದ ದಿಗಂಬರ ಮುನಿಚರ್ಯೆಯಲ್ಲಿದ್ದುದ್ದಾಗಿಯೂ ಹಿಂದೆ ಆಧಾರಪೂರ್ವಕವಾಗಿ ಪ್ರತಿಪಾದಿಸಲಾಗಿದೆ. [ಪು. ಸಂ. ೧೨-೧೫ ಮತ್ತು ೭೭-೭೮] ಇದರಂತೆ ಶ್ರೀ ಪಾರ್ಶ್ವನಾಥತೀರ್ಥಂಕರನಿಂದ ಉಪದಿಷ್ಟವಾದ ಧರ್ಮಪಂಥದಲ್ಲಿ ನಿರ್ಗ್ರಂಥಯತಿಗಳಿಗೆ ಅಚೇಲಕ ಆಚಾರವಿಧಿಯು ನಿಯತವಾಗಿ ವಿಧಿಸಲ್ಪಟ್ಟತೆಂದು ನಿಶ್ಚಿತವಾಗುವುದು. ಆದ್ದರಿಂದ ಶ್ರೀ ವೀರತೀರ್ಥಂಕರನು ನಿರ್ಗ್ರಂಥಯತಿಗಳಿಗೆ ಅಚೇಲಕ ಆಚಾರವಿಧಿಯನ್ನು ನೂತನವಾಗಿ ವಿಧಿಸಿದನೆಂಬ ವಿಸಂವಾದ ಹಾಗೂ ಚರಿತ್ರಕಾರರ ಮೇಲ್ಕಂಡ ಅಭಿಪ್ರಾಯವು ತಥ್ಯನಿಷ್ಠವಾಗಿಲ್ಲವೆಂದು ಪ್ರಮಾಣೀಕೃತವಾಗುವುದು.

ನಿಷ್ಪಕ್ಷಪಾತಮನೋಭಾವದ ಇತಿಹಾಸಸಂಶೋಧಕರಲ್ಲೊಬ್ಬರಾದ ಸನ್ಮಾನ್ಯ ಆರ್. ಪಿ. ಚಂದಾರವರು, ಕ್ರಿ. ಪೂ. ಮೂರುಸಾವಿರ ವರ್ಷಗಳಷ್ಟು ಪ್ರಾಚೀನವಾದ ಮೊಹೆಂಜೊದಾರೊ ಅವಶೇಷಗಳಲ್ಲಿ ದೊರೆತ ಮುದ್ರೆಗಳಲ್ಲಿ ಅಂಕಿತಗೊಂಡಿರುವ ನಗ್ನ ಯೋಗಿಚಿತ್ರಗಳಲ್ಲಿ ನಿರ್ಗ್ರಂಥ ಧರ್ಮದ ಮಾತೃಕೆಯನ್ನು ಗುರುತಿಸಿದ್ದಾರೆಂದು ಹಿಂದೆ ಹೇಳಿದೆ.[1] ಇದರಂತೆ ಬಹುಪ್ರಾಚೀನಕಾಲದಿಂದಲೂ ಪರಂಪರಾನುಗತವಾಗಿ ಉಳಿದುಬಂದು ಗ್ಲಾನಿವಶವಾದ ನಿರ್ಗ್ರಂಥಧರ್ಮವನ್ನು ಕ್ರಿ. ಪೂ. ೯ ಮತ್ತು ೮ ನೇ ಶತಮಾನಗಳ ಮಧ್ಯವರ್ತಿಸಮಯದಲ್ಲಿ ಶ್ರೀ ಪಾರ್ಶ್ವನಾಥತೀರ್ಥಂಕರನೂ ಮತ್ತು ಕ್ರಿ.ಪೂ. ೬ ನೇ ಶತಮಾನದಲ್ಲಿ ಶ್ರೀ ವೀರತೀರ್ಥಂಕರನೂ ಪುನಃ ಪ್ರಕಾಶಿತಗೊಳಿಸಿರುವರೆಂದು ವ್ಯಕ್ತವಾಗುವುದು. ಶ್ರೀ ವೀರತೀರ್ಥಂಕರನು ಪರಂಪರಾನುಗತವಾದ ನಿರ್ಗ್ರಂಥಧರ್ಮವನ್ನು, ತನ್ನ ಕಾಲದ ಜನರ ಸುಬೋಧಾರ್ಥವಾಗಿ ಮತ್ತು ಸುಪರಿಪಾಲನಾರ್ಥವಾಗಿ, ಅಹಿಂಸಾದಿ ಪಂಚವ್ರತಗಳ ಪ್ರಾಧಾನ್ಯತೆಯಿಂದ ಉಪದೇಶಿಸಿರುವನೆಂದು ಈ ಹಿಂದಿನ ಪರಾಮರ್ಶೆಯಿಂದ ಸ್ಪಷ್ಟಗೊಂಡಿದೆ. ತಾತ್ತ್ವಿಕ ಮತ್ತು ಧಾರ್ಮಿಕ ವಿಷಯಗಳ ಪ್ರರೂಪಣೆಯಲ್ಲಿ ಹಾಗೂ ಆಚಾರನಿಯಮಗಳ ವಿಧಿವಿಧಾನಗಳಲ್ಲಿ ನಿರ್ಗ್ರಂಥಧರ್ಮದೊಡನೆ ವಿಶೇಷ ಸಾದೃಶ್ಯತೆಯನ್ನು ಹೊಂದಿದ್ದ ಅನೇಕ ಧರ್ಮಪಂಥಗಳು ಮೂಡಿ ಪ್ರಸಾರಗೊಂಡಿದ್ದ ಕಾರಣದಿಂದ ಶ್ರೀ ವೀರತೀರ್ಥಂಕರನ ಧರ್ಮತೀರ್ಥಪ್ರಸಾರದ ಶ್ರೀವಿಹಾರವು ಆರಂಭವಾಗುವ ಸಮಯಕ್ಕೆ ಪರಂಪರಾನುಗತವಾದ ನಿರ್ಗ್ರಂಥಧರ್ಮವು ಗ್ಲಾನಿವಶವಾಗಿ ಖಿಲಗೊಂಡಿದ್ದಿತು. ಈ ರೀತಿಯಲ್ಲಿ ಖಿಲಾವಸ್ಥೆಯಲ್ಲಿದ್ದ ನಿರ್ಗ್ರಂಥಧರ್ಮವು ಶ್ರೀ ವೀರತೀರ್ಥಂಕರನ ೩೦ ವರ್ಷಾವಧಿಯ ಶ್ರೀವಿಹಾರಸಮಯದಲ್ಲಿ ಪುನರುಜ್ಜ್ವಲಿತವಾಗಿ ಪರಿವೃದ್ಧಿಗೊಂಡು ಪ್ರಭಾವಪೂರ್ಣವಾಗಿ ಮುನ್ನಡೆದಿದೆ.

---

1 ಪು. ಸಂ. ೫೬

# ಶ್ರುತವಿಹಾರ

ಶ್ರೀ ವೀರತೀರ್ಥಂಕರನ ಸನ್ನಿಧಿಯಲ್ಲಿ ಜೀವಾದಿ ಸಮಸ್ತ ತತ್ತ್ವರೂಪವನ್ನವ ಧರಿಸಿದ ಇಂದ್ರಭೂತಿಗೌತಮಗಣಧರಸ್ವಾಮಿಯವರು ಚತುರ್ದಶಪೂರ್ವಸಹಿತವಾದ ದ್ವಾದಶಾಂಗ ಶ್ರುತವನ್ನು ವಿರಚಿಸಿದ ಪ್ರಸಂಗವನ್ನು ಹಿಂದೆ ಹೇಳಿದೆ.

ವೀ. ನಿ. ಪ. ಏಳನೇ ಶತಮಾನ ಸಮಯದಲ್ಲಿ ಆಚಾರ್ಯಪರಂಪರಾನುಗತ ವಾಗಿ ಉಪವಬ್ಧವಿದ್ದ ಈ ದ್ವಾದಶಾಂಗಶ್ರುತದ ಅವಶೇಷಾಂಶ ಮಾತ್ರವನ್ನು ಲಿಪಿ ಬದ್ಧಗೊಳಿಸಲಾದ ಐತಿಹ್ಯವು ದಿಗಂಬರ ಆಮ್ನಾಯದಲ್ಲಿ ಉಳಿದುಬಂದಿದೆ. ಈ ಐತಿಹ್ಯದಲ್ಲಿ ಶ್ರೀ ವೀರನಿರ್ವಾಣಾನಂತರಕಾಲೀನ ನಿರ್ಗ್ರಂಥ ಧರ್ಮಪಂಥದ ಚರಿತ್ರೆ ಹಾಗೂ ದಿಗಂಬರಆಮ್ನಾಯದ ಸಾಹಿತ್ಯಚರಿತ್ರೆಗಳ ಮೌಲಿಕಾಂಶಗಳು ಅಂತರ್ಗತ ವಾಗಿವೆ. 'ಶ್ರುತಾವತಾರ' ಅಥವಾ ಲಿಪಿಬದ್ಧಆಗಮೋದಯದ ಈ ಐತಿಹ್ಯಮಾತ್ರ ವಲ್ಲದೆ, ಶ್ರೀ ವೀರನಿರ್ವಾಣಾನಂತರಕಾಲದ ಆಚಾರ್ಯಪರಂಪರೆಯ ಐತಿಹ್ಯವನ್ನು ನಿರೂಪಿಸುವ 'ಪಟ್ಟಾವಲಿ' ಎಂಬ ಹೆಸರಿನ ಐತಿಹಾಸಿಕ ಸಾಹಿತ್ಯವು ಉಳಿದುಬಂದಿದೆ. ಶ್ರೀ ವೀರನಿರ್ವಾಣಸಮಯವನ್ನಧಿಕರಿಸಿದ ವಿವಾದವು ಈ ಐತಿಹ್ಯದಲ್ಲಿಯೂ ಸಂಗತ ವಾಗಿದೆ. ಆದ್ದರಿಂದ ಪಟ್ಟಾವಲೀಸಾಹಿತ್ಯದ ಸ್ಥೂಲಪರಿಚಯ ಪೂರ್ವಕ ಆಚಾರ್ಯ ಪರಂಪರೆಯ ಐತಿಹ್ಯವನ್ನು ಪರಿಷ್ಕರಿಸಬೇಕಾದ ಆವಶ್ಯಕತೆಯಿದೆ.

ಶ್ವೇತಾಂಬರ ಜೈನ ಸಂಪ್ರದಾಯದಲ್ಲಿ ಗುರ್ವಾವಲಿಗಳು ಉಳಿದುಬಂದಿರುವಂತೆ ದಿಗಂಬರ ಜೈನಸಂಪ್ರದಾಯದಲ್ಲಿಯೂ ಉಳಿದುಬಂದಿರಬೇಕೆಂಬ ಆಶಯದಿಂದ ಶ್ರೀ ಸೆಯಿಲ್ ಬೆಂಡಲ್‌ರವರು ಶೋಧನೆಯಲ್ಲಿ ತೊಡಗಿದ್ದರು. ಕೊನೆಗೆ ಜಯಪುರದ ಪಂಡಿತ ಚಿಮ್ಮಲಾಲ್‌ರವರ ಸಹಾಯಪಡೆದು ನಂದಿಆಮ್ನಾಯ ಪಟ್ಟಾವಲಿಯ ಪ್ರತಿಯನ್ನು ಸಿದ್ಧಪಡಿಸಿಕೊಂಡರು. ಈ ಪಟ್ಟಾವಲಿಯಲ್ಲಿ ಮೊದಲ ಮೂರು ಸಂಸ್ಕೃತ ಪದ್ಯಗಳು ಹಾಗೂ ಪ್ರಾಕೃತದ ೧೫ ಪದ್ಯಗಳ ಹೊರತಾಗಿ ಉಳಿದ ವಿಷಯ ವೆಲ್ಲವೂ ರಾಜಾಸ್ಥಾನೀ ಭಾಷೆಯಲ್ಲಿದ್ದಿತು. ಇದರಿಂದ ಶ್ರೀ ಸೆಯಿಲ್ ಬೆಂಡಲ್ ರವರು, ಪುರಾತನ ರಾಜಾಸ್ಥಾನೀ ಭಾಷೆಯ ವಿಶೇಷ ಪರಿಚಯವನ್ನು ಪಡೆದಿದ್ದ ಪ್ರೊ. ರುಡೋಲ್ಫ್ ಹೊಏರ್ನಲ್‌ರವರಿಗೆ ಈ ಪಟ್ಟಾವಲಿಯ ಪ್ರಕಾಶನ ಕಾರ್ಯವನ್ನು ವಹಿಸಿದರು. ಶ್ರೀ ರು. ಹೋಏರ್ನಲ್‌ರವರು, ೧೮೮೧ ನೇ ಇಸವಿ ಅಕ್ಟೋಬರ್ ಮಾಹೆಯ ಇಂಡಿಯನ್ ಆಂಟಿಕ್ವೆರಿ ವಾಲ್ಯೂಮ್ XX [ಪು ಸಂ. ૩೪೧–೭೬೧] ರಲ್ಲಿ, ತಮ್ಮ ವಿಮರ್ಶೆಯೊಡನೆ ಈ ಪಟ್ಟಾವಲಿಯನ್ನು ಪ್ರಕಟಪಡಿಸಿದರು. ಇದರ ಪ್ರಕಾಶನಕ್ಕೆ ಸಹಾಯಕವಾದ ಮೂಲಪ್ರತಿಗಳನ್ನು 'ಎ' ಮತ್ತು 'ಬಿ' ಎಂದು ಹೆಸರಿ ಸಿದ್ದಾರೆ. ಪುನಃ ೧೮೯೩ ನೇ ಇಸವಿ ಫೆಬ್ರವರಿ–ಮಾರ್ಚಿ ಮಾಹೆಯ ಇಂಡಿಯನ್

ಆಂಟಿಕ್ವೆರಿ ವಾಲ್ಯೂಂ XXIರಲ್ಲಿ, 'ಸಿ', 'ಡಿ' ಮತ್ತು 'ಇ' ಎಂಬ ಇತರ ಪ್ರತಿಗಳನ್ನು ಪ್ರಕಟಗೊಳಿಸಿ, ಈ ಎಲ್ಲ ಪ್ರತಿಗಳಲ್ಲಿ ಕಂಡುಬಂದ ವ್ಯತ್ಯಾಸ ಮತ್ತು ವಿಶೇಷಗಳನ್ನು ತಮ್ಮ ವಿಮರ್ಶೆಯೊಡನೆ ಮಂಡಿಸಿದ್ದಾರೆ.

ನಂದಿಆಮ್ನಾಯಪಟ್ಟಾವಲಿ[1] ಯನ್ನು ವಿಷಯ ಮತ್ತು ಭಾಷಾದೃಷ್ಟಿಯಿಂದ ಪ್ರಧಾನವಾಗಿ ಎರಡು ವಿಭಾಗಗಳಲ್ಲಿ ಗಣನೆ ಮಾಡಬಹುದು. ೧. ಶ್ರೀ ವೀರನಿರ್ವಾಣಸಮಯದಿಂದ ವೀ. ನಿ. ಸ. ೬೮೩ ವರ್ಷಪರ್ಯಂತ ಸಮಯದವರೆವಿಗಿನ ಶ್ರುತಧರ ಆಚಾರ್ಯರ ಪಟ್ಟಕಾಲಗಳನ್ನು ಪ್ರಾಕೃತ ಭಾಷೆಯ ಪದ್ಯ [=ಗಾಹೆ] ಗಳಲ್ಲಿ ನಿರೂಪಿಸಲಾಗಿದೆ. ೨. ಈ ಗಾಹೆಗಳ ಅರ್ಥ ಮತ್ತು ಶ್ರುತಧರ ಆಚಾರ್ಯರ ಅನಂತರ ವಿಕ್ರಮಸಂವತ್ ೧೯೩೮ [=ಕ್ರಿ. ಶ. ೧೮೮೧] ನೇ ವರ್ಷ ಪರ್ಯಂತದ ಆಚಾರ್ಯರ ಪಟ್ಟಕಾಲಾದಿ ವಿಷಯಗಳನ್ನು ರಾಜಾಸ್ಥಾನೀ ಭಾಷೆಯಲ್ಲಿ ವಿವರಿಸಲಾಗಿದೆ.

ನಂದಿ ಆಮ್ನಾಯ, ಸರಸ್ವತೀ ಗಚ್ಛ, ಬಲಾತ್ಕಾರಗಣದ ಪಟ್ಟಾವಲಿ 'ಲು' ಪ್ರತಿಯ ಪ್ರಾಕೃತ ಗಾಹೆಗಳು :

೧) ಮೂವರು ಕೇವಲಿಗಳು :

ಅಂತಿಮ-ಜಿಣ-ಣಿವ್ವಾಣೇ ಕೇವಲಣಾಣೀ ಯ ಗೋಯಮಮುಣಿಂದೋ ।
ಬಾರಹ-ವಾಸೇ ಯ ಗಯೇ ಸುಧಮ್ಮ-ಸಾಮೀ ಯ ಸಂಜಾದೋ ॥ ೧ ॥

ತಹ ಬಾರಹ-ವಾಸೇ ಪುಣ ಸಂಜಾದೋ ಜಂಬು-ಸಾಮಿ ಮುಣಿರಾಯೋ ।
ಅಠತೀಸ-ವಾಸ ರಹಿಟೋ ಕೇವಲಣಾಣೀ ಯ ಉಕ್ಕಿಟ್ಠೋ ॥ ೨ ॥

ಬಾಸಠಿ-ಕೇವಲ-ವಾಸೇ ತಿಣ್ಣಿ ಮುಣೀ ಗೋಯಮಸುಧಮ್ಮ ಜಂಬೂ ಯ ।
ಬಾರಹ ಬಾರಹ ದೋಜಣ ತಿಯ ದುಗ-ಹೀಣಂ ಚ ಚಾಲೀಸಂ ॥ ೩ ॥

೨) ಐವರು ದ್ವಾದಶಾಂಗ ಶ್ರುತಕೇವಲಿಗಳು :

ಸುಯಕೇವಲಿಪಂಚಜಣಾ ಬಾಸಠಿ-ವಾಸೇ ಗಯೇಸು ಸಂಜಾದಾ ।
ಪಢಮಂ ಚಉದಹ-ವಾಸಂ ವಿಣ್ಹುಕುಮಾರಂ ಮುಣೇಯವ್ವಂ ॥ ೪ ॥

ನಂದಿಮಿತ್ತ ವಾಸ ಸೋಲಹ ತಿಯ ಅಪರಾಜಿಯ ವಾಸ ಬಾವೀಸಂ ।
ಇಗ-ಹೀಣ-ವೀಸ ವಾಸಂ ಗೋವದ್ಧಣ ಭದ್ದಬಾಹು ಗುಣತೀಸಂ ॥ ೫ ॥

ಸದ ಸುಯಕೇವಲಣಾಣೀ ಪಂಚಜಣಾ ವಿಣ್ಹುನಂದಿಮಿತ್ತೋ ಯ ।
ಅಪರಾಜಿಯ ಗೋವಡ್ಢಣ [ತಹ] ಭದ್ದಬಾಹು ಯ ಸಂಜಾದಾ ॥ ೬ ॥

1 ನಂ. ಆ. ಪಟ್ಟಾವಲಿ.

೩) ಹನ್ನೊಂದು ಜನ ದಶಪೂರ್ವಧರರು :

ಸದ-ಬಾಸಟ್ಠಿಸು ವಾಸೇ ಗಯೇಸು ಉಪ್ಪಣ್ಣ ದಹೆ ಸುಪುವ್ವಧರಾ ।
ಸದ-ತಿರಾಸಿ ವಾಸಾಣಿ ಯ ಏಗಾದಹ ಮುಣಿವರಾ ಜಾದಾ ॥ ೭ ॥
ಆಯರಿಯ ವಿಸಾಖ ಪೋಟ್ಠಿಲ ಖತ್ತಿಯ ಜಯಸೇಣ ನಾಗಸೇಣ ಮುಣೀ
ಸಿದ್ಧತ್ಥ ಧಿತ್ತಿ ವಿಜಯಂ ಬುಹಿಲಿಂಗ ದೇವ ಧಮಸೇಣಂ ॥ ೮ ॥
ದಹ ಉಗಣೀಸ ಯ ಸತ್ತರ ಇಕವೀಸ ಅಠಾರಹ ಸತ್ತರ ।
ಅಠಾರಹ ತೇರಹ ವೀಸ ಚಉದಹ ಚೋದಹ ಕಮೋಣೇಯಂ ॥ ೯ ॥

೪) ಐವರು ಏಕಾದಶಾಂಗಧರರು :

ಅಂತಿಮ-ಜಿಣ-ಣಿವ್ವಾಣೇ ತಿಯ-ಸಯ-ಪಣ-ಚಾಲ-ವಾಸ ಜಾದೇಸು ।
ಏಗಾದಹಂಗಧಾರಿಯ ಪಂಚಜಣಾ ಮುಣಿವರಾ ಜಾದಾ ॥ ೧೦ ॥
ನಕ್ಖತ್ತೋ ಜಯಪಾಲಗ ಪಂಡವ ಧುವಸೇಣ ಕಂಸ ಆಯರಿಯಾ ।
ಅಠಾರಹ ವೀಸ-ವಾಸಂ ಗುಣಚಾಲಂ ಚೋದ ಬತ್ತೀಸಂ ॥ ೧೧ ॥
ಸದ ತೇವೀಸ ಯ ವಾಸೇ ಏಗಾದಹ ಅಂಗಧರಾ ಜಾದಾ ।

೫) ನಾಲ್ವರು, ದಶ, ನವ ಮತ್ತು ಅಷ್ಟ ಅಂಗಶ್ರುತಧರರು :

ವಾಸಂ ಸತ್ತಾಣವದಿ [ಯ] ದಸಂಗ ಣವ ಅಟ್ಠ ಅಂಗಧರಾ ॥ ೧೨ ॥
ಸುಭದ್ದಂ ಚ ಜಸೋಭದ್ದಂ ಭದ್ದಬಾಹು ಕಮೇಣ ಯ ।
ಲೋಹಾಚಜ್ಜ ಮುಣೀಸಂ ಚ ಕಹಿಯಂ ಚ ಜಿಣಾಗಮೇ ॥ ೧೩ ॥
ಛಹ ಅಟ್ಠಾರಹ ವಾಸೇ ತೇವೀಸ ಬಾವಣ ವಾಸ ಮುಣಿಣಾಹಂ ।
ದಸ ಣವ ಅಟ್ಠಂಗಧರಾ ವಾಸ ದುಸದ ವೀಸ ಸವ್ವೇಸು ॥ ೧೪ ॥

೬) ಐವರು ಏಕಾಂಗ ಶ್ರುತಧರರು :

ಪಂಚಸಯೇ ಪಣ್ಣಸಠೇ ಅಂತಿಮ-ಜಿಣ-ಸಮಯ-ಜಾದೇಸು ।
ಉಪ್ಪಣ್ಣಾ ಪಂಚಜಣಾ ಇಯುಂಗಧಾರೀ ಮುಣೇಯವ್ವಾ ॥ ೧೫ ॥
ಅಹಿವಲ್ಲಿ ಮಾಘಣಂದಿ ಯ ಧರಸೇಣಂ ಪುಪ್ಫಯಂತ ಭೂದಬಲೀ ।
ಅಡವೀಸೇ ಇಗವೀಸಂ ಉಗಣೀಸಂ ತೀಸ ವೀಸ ವಾಸ ಪುಣೋ ॥ ೧೬ ॥
ಇಗಸಯ- ಅಠಾರ-ವಾಸೇ ಇಯುಂಗಧಾರೀ ಯ ಮುಣಿವರಾ ಜಾದಾ ।
ಛಸಯ ತಿರಾಸಿಯ-ವಾಸೇ ಣಿವ್ವಾಣಾ ಅಂಗಛಿತ್ತಿ ಕಹಿಯ ಜಿಣಂ ॥ ೧೭ ॥

ಈ ಪ್ರಾಕೃತಗಾಹೆಗಳಲ್ಲಿ ನಿರೂಪಿತವಾಗಿರುವ ವಿಷಯವನ್ನು ಶ್ರೀ ಹೋಎರ್ನಲ್ ರವರು ಮುಂದಿನಂತೆ ಚೌಬಂಧರೂಪದಲ್ಲಿ ಕೊಟ್ಟಿದ್ದಾರೆ.

# ಅಂಗಶ್ರುತಧರ ಆಚಾರ್ಯ ಪರಂಪರೆ

| | ಪಟ್ಟವರ್ಷಕಾಲ | | ಶ್ರೀ ವೀರನಿರ್ವಾಣ ವರ್ಷಪರ್ಯಂತ |
|---|---|---|---|
| **೧. ಕೇವಲಿಗಳು :** | | | |
| ೧)-೧ ಗೌತಮ | [೧೨] | ” | ೧೨ |
| ೨)-೨ ಸುಧರ್ಮ | [೧೨] | ” | ೨೪ |
| ೩)-೩ ಜಂಬೂ | [೩೮] | ” | ೬೨ |
| | ಒಟ್ಟು [೬೨] ವರ್ಷಗಳು | | |
| **೨. ಶ್ರುತಕೇವಲಿಗಳು :** | | | |
| ೪)-೧ ವಿಷ್ಣು | [೧೪] | ” | ೭೬ |
| ೫)-೨ ನಂದಿ | [೧೬] | ” | ೯೨ |
| ೬)-೩ ಅಪರಾಜಿತ | [೨೨] | ” | ೧೧೪ |
| ೭)-೪ ಗೋವರ್ಧನ | [೧೯] | ” | ೧೩೩ |
| ೮)-೫ ಭದ್ರಬಾಹು I | [೨೯] | ” | ೧೬೨ |
| | ಒಟ್ಟು [೧೦೦] ವರ್ಷಗಳು | | |
| **೩) ದಶಪೂರ್ವಿಗಳು :** | | | |
| ೯)-೧ ವಿಶಾಖ | [೧೦] | ” | ೧೭೨ |
| ೧೦)-೨ ಪ್ರೋಷ್ಠಿಲ | [೧೯] | ” | ೧೯೧ |
| ೧೧)-೩ ಕ್ಷತ್ರಿಯ | [೧೭] | ” | ೨೦೮ |
| ೧೨)-೪ ಜಯಸೇನ | [೨೧] | ” | ೨೨೯ |
| ೧೩)-೫ ನಾಗಸೇನ | [೧೮] | ” | ೨೪೭ |
| ೧೪)-೬ ಸಿದ್ಧಾರ್ಥ | [೧೭] | ” | ೨೬೪ |
| ೧೫)-೭ ಧೃತಿಸೇನ | [೧೮] | ” | ೨೮೨ |
| ೧೬)-೮ ವಿಜಯ | [೧೩] | ” | ೨೯೫ |
| ೧೭)-೯ ಬುದ್ಧಿಲಿಂಗ | [೨೦] | ” | ೩೧೫ |
| ೧೮)-೧೦ ದೇವ | [೧೪] | ” | ೩೨೯ |
| ೧೯)-೧೧ ಧಮಸೇನ[1] | [೧೪] | ” | ೩೪೩ ಅಥವಾ ೩೪೫ |
| | ಒಟ್ಟು [೧೮೧] ಅಥವಾ [೧೮೩] ವರ್ಷಗಳು | | |

1 'ಬ' ಪ್ರತಿಯಲ್ಲಿ ಧರ್ಮಸೇನರೆಂಬು ಹೆಸರಿಸಲಾಗಿದೆ.

೪) ಏಕಾದಶಾಂಗಶ್ರುತಧರರು :

| | | |
|---|---|---|
| ೨೦)-೧ ನಕ್ಷತ್ರ | [೧೮] | " ೩೬೧ ಅಥವಾ ೩೬೩ |
| ೨೧)-೨ ಜಯಪಾಲಕ | [೨೦] | " ೩೮೧ ಅಥವಾ ೩೮೩ |
| ೨೨)-೩ ಪಾಂಡವ | [೩೯] | " ೪೨೦ ಅಥವಾ ೪೨೨ |
| ೨೩)-೪ ಧ್ರುವಸೇನ | [೧೪] | " ೪೩೪ ಅಥವಾ ೪೩೬ |
| ೨೪)-೫ ಕಂಸ | [೩೨] | " ೪೬೬ ಅಥವಾ ೪೬೮ |

ಒಟ್ಟು [೧೨೩] ವರ್ಷಗಳು

೫) ದಶ, ನವ, ಅಷ್ಟ ಅಂಗಶ್ರುತಧರರು :

| | | |
|---|---|---|
| ೨೫)-೧ ಸುಭದ್ರ | [೬] | " ೪೭೨ ಅಥವಾ ೪೭೪ |
| ೨೬)-೨ ಯಶೋಭದ್ರ | [೧೮] | " ೪೯೦ ಅಥವಾ ೪೯೨ |
| ೨೭)-೩ ಭದ್ರಬಾಹು II | [೨೩] | " ೫೧೩ ಅಥವಾ ೫೧೫ |
| ೨೮)-೪ ಲೋಹಾಚಾರ್ಯ | [೫೨] | " ೫೬೫ ಅಥವಾ ೫೬೭ |

ಒಟ್ಟು [೯೯] ಅಥವಾ [೯೭] ವರ್ಷಗಳು

೬) ಆಚಾರಾಂಗ (ಏಕಾಂಗ) ಶ್ರುತಧರರು :

| | | |
|---|---|---|
| ೨೯)-೧ ಅರ್ಹದ್ಬಲಿ | [೨೮] | " ೫೯೩ ಅಥವಾ ೫೯೫ |
| ೩೦)-೨ ಮಾಘನಂದಿ | [೨೧] | " ೬೧೪ ಅಥವಾ ೬೧೬ |
| ೩೧)-೩ ಧರಸೇನ | [೧೯] | " ೬೩೩ ಅಥವಾ ೬೩೫ |
| ೩೨)-೪ ಪುಷ್ಪದಂತ | [೩೦] | " ೬೬೩ ಅಥವಾ ೬೬೫ |
| ೩೩)-೫ ಭೂತಬಲಿ | [೨೦] | " ೬೮೩ ಅಥವಾ ೬೮೫ |

ಒಟ್ಟು [೧೧೮] ವರ್ಷಗಳು

ಈ ಮೊದಲು ಉಲ್ಲೇಖಿಸಿರುವ ಗಾಹೆಗಳಿಗೆ ಮೂಲದಲ್ಲಿ ರಾಜಾಸ್ಥಾನೀ ಭಾಷೆಯಲ್ಲಿ ವಿವರಣಾಸಹಿತವಾಗಿ ಅರ್ಥವನ್ನು ಕೊಡಲಾಗಿದೆಯಲ್ಲದೆ ಮುಂದೆ, ನಂದಿ ಸಂಘ, ಸರಸ್ವತೀಗಚ್ಛದ ಆಚಾರ್ಯಪರಂಪರೆಯ ಪಟ್ಟಕಾಲಮಾನಗಳನ್ನೂ ನಿರೂಪಿಸಲಾಗಿದೆ. ಈ ನಂದಿಸಂಘ ಸರಸ್ವತೀಗಚ್ಛದ ಆಚಾರ್ಯರ ಪಟ್ಟಕಾಲ ಗಣನೆಯು (ಎ, ಬಿ, ಸಿ ಮತ್ತು ಡಿ ಪ್ರತಿಗಳ ಪ್ರಕಾರ) ದ್ವಿತೀಯ ಭದ್ರಬಾಹುಗಳು ಪಟ್ಟಸ್ಥರಾದ ಕಾಲದಿಂದ ಆರಂಭಗೊಂಡಿದೆ. ಆದರೆ 'ಇ' ಪ್ರತಿಯ ಕ್ರಮದಂತೆ ಈ ಆಚಾರ್ಯರ ಪಟ್ಟಕಾಲ ಗಣನೆಯು (ಎ, ಬಿ, ಸಿ ಮತ್ತು ಡಿ ಪ್ರತಿಗಳಲ್ಲಿ ಹೆಸರಿಸಿಲ್ಲದ) ತೃತೀಯ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದ ಕಾಲದಿಂದ ಆರಂಭಗೊಂಡಿದೆ. ರಾಜಾಸ್ಥಾನೀ ಭಾಷೆಯಲ್ಲಿ ನಿರೂಪಿತವಾಗಿರುವ ಈ ಆಚಾರ್ಯ ಪರಂಪರೆಯನ್ನು ಶ್ರೀ ಹೋಏರ್ನಲ್‌ರವರು ಚೌಬಂಧರೂಪದಲ್ಲಿ ಕೊಟ್ಟಿದ್ದಾರೆ. ಅಂತೆಯೇ ಉಮಾಸ್ವಾಮಿ ಆಚಾರ್ಯರ ಪರ್ಯಂತದ ಪಟ್ಟಾವಲಿಯನ್ನು ಉದಾಹರಣೆಗಾಗಿ, ಈ ಮುಂದೆ ಕೊಡಲಾಗಿದೆ :

## ಕುಂದಕುಂದಾನ್ವಯದ ಅಥವಾ ಮೂಲಸಂಘ, ನಂದಿ ಆಮ್ನಾಯ, ಬಲಾತ್ಕಾರಗಣ, ಸರಸ್ವತೀ ಗಚ್ಛದ ಪಟ್ಟಾವಲಿ

| ಕ್ರಮ ಸಂಖ್ಯೆ | ಆಚಾರ್ಯರ ಹೆಸರು | ಪಟ್ಟಸ್ಥ ವರ್ಷ | ಗೃಹಸ್ಥಾಶ್ರಮ | ಸನ್ಯಾಸಾಶ್ರಮ | ಒಟ್ಟು ಪಟ್ಟಕಾಲ |
|---|---|---|---|---|---|
| | | ಸಂವತ್ | ವ. ತಿಂ. ದಿ. | ವ. ತಿಂ. ದಿ. | ವ. ತಿಂ. ದಿ |
| ೧ | ದ್ವಿ. ಭದ್ರಬಾಹು[1] | ೪ | ೨೪—೦—೦ | ೩೦—೦—೦ | ೨೨-೧೦-೨೭ |
| ೨ | ಗುಪ್ತಿಗುಪ್ತ[2] (=ಅರ್ಹದ್ಬಲಿ =ವಿಶಾಖಾಚಾರ್ಯ) | ೨೬ | ೨೨—೦—೦ | ೩೪—೦—೦ | ೯—೬-೨೫ |
| ೩ | ಮಾಘನಂದಿ | ೩೬ | ೨೦—೦—೦ | ೪೪—೦—೦ | ೪—೪-೨೬ |
| ೪ | ಜಿನಚಂದ್ರ | ೪೦ | ೨೪—೯—೦ | ೩೨—೦—೦ | ೮—೯—೬ |
| ೫ | ಕುಂದಕುಂದ | ೪೯ | ೧೧—೦—೦ | ೩೩—೦—೦ | ೫೧-೧೦-೧೦ |
| ೬ | ಉಮಾಸ್ವಾಮಿ | ೧೦೧ | ೯—೦—೦ | ೨೫—೦—೦ | ೪೦—೮—೧ |

(ವಿ. ಸೂ. : ಇದೇ ರೀತಿಯಾಗಿ ಪಟ್ಟಾವಲಿಯಲ್ಲಿ ಕ್ರಿ. ಶ. ೧೮೮೧ ರ ಪರ್ಯಂತದ ಆಚಾರ್ಯರ ಪಟ್ಟಕಾಲಗಳನ್ನು ನಿರೂಪಿಸಲಾಗಿದೆ )

ಪ್ರಾಕೃತ ಗಾಹೆಗಳಲ್ಲಿ ನಿರೂಪಿತವಾಗಿರುವ ವಿಷಯಗಳಲ್ಲಿ ಮುಖ್ಯವಾಗಿ ಈ ಮುಂದಿನ ಮೂರು ಅಂಶಗಳನ್ನು ಗಮನಿಸಬೇಕಾಗಿದೆ. ೧. ಶ್ರೀ ವೀರತೀರ್ಥಂಕರನ ನಿರ್ವಾಣಾರಭ್ಯ ೬೮೩ ವರ್ಷ ಪರ್ಯಂತದವರೆಗೆ ಆದ ಅಂಗಶ್ರುತಧರ ಆಚಾರ್ಯ ರೆಲ್ಲರ ಪ್ರತ್ಯೇಕ ಪಟ್ಟವರ್ಷಗಳನ್ನು ನಿರ್ದೇಶಿಸಲಾಗಿದೆ. ೨. ಈ ಆಚಾರ್ಯ ಪರಂಪರೆಯನ್ನು ೧) ಕೇವಲಿ ೨) ಶ್ರುತಕೇವಲಿ ೩) ದಶಪೂರ್ವಿಗಳು ೪) ಏಕಾ ದಶಾಂಗ ಶ್ರುತಧರರು ೫) ಹತ್ತು, ಒಂಬತ್ತು ಮತ್ತು ಎಂಟು ಅಂಗಶ್ರುತಧರರು

1 ಎ, ಬಿ, ಸಿ, ಡಿ ಪ್ರತಿಗಳಲ್ಲಿ ಈ ಭದ್ರಬಾಹುಸ್ವಾಮಿಯವರನ್ನು ಎರಡನೇ ಭದ್ರಬಾಹು ಎಂದು ಹೇಳಲಾಗಿದೆ. ಆದರೆ 'ಇ' ಪ್ರತಿಯಲ್ಲಿ ಇವರನ್ನು ಮೂರನೇ ಭದ್ರಬಾಹು ಎಂದು ನಿರ್ದೇಶಿಸಿದೆ.

2 ಅರ್ಹದ್ಬಲಿ ಆಚಾರ್ಯರನ್ನು ಪ್ರಾಕೃತದಲ್ಲಿ 'ಅಹಿವಲ್ಲಿ' ಎಂದು ಹೆಸರಿಸಿದೆ. ಇವರಿಗೆ ಗುಪ್ತಿಗುಪ್ತ ಮತ್ತು ವಿಶಾಖಾಚಾರ್ಯ ಎಂಬ ಮತ್ತೆರಡು ಹೆಸರುಗಳಿದ್ದುವೆಂದೂ ಹೇಳಿದೆ.

೬) ಆಚಾರಾಂಗ (ವೆಂಬ ಒಂದು ಅಂಗ) ಶ್ರುತಧರರೆಂಬ ಆರು ವರ್ಗಗಳಲ್ಲಿ ವಿಂಗಡಿಸಿ ಪ್ರತ್ಯೇಕ ವರ್ಗದ ಒಟ್ಟು (=ಸಮಷ್ಟಿ) ಪಟ್ಟಕಾಲಮಾನವನ್ನು ಹೇಳಿದೆ. ೩. ಪ್ರತಿಯೊಂದು ವರ್ಗದ ಆರಂಭಸಮಯವನ್ನು ವೀ. ನಿ. ಪ. ಕಾಲಗಣನೆಯಿಂದ ನಿರ್ದೇಶಿಸಿದೆ.[1]

ಅಂಗಶ್ರುತಧರ ಆಚಾರ್ಯರ ಪ್ರತ್ಯೇಕ ಪಟ್ಟಕಾಲ ವಿವರಗಳು ಹಿಂದೆ ಉಲ್ಲೇಖಿಸಲಾಗಿರುವ ಗಾಹೆಗಳ ಹೊರತಾಗಿ ದಿಗಂಬರ ಜೈನ ಸಂಪ್ರದಾಯದ ಇತರ ಇನ್ನಾವ ಗ್ರಂಥದಲ್ಲಿಯೂ ನಿರೂಪಿತವಾಗಿಲ್ಲ. ನಂ. ಆ. ಪಟ್ಟಾವಲಿಯ ಐದು ಪ್ರತಿಗಳಿಗೆ ಶ್ರೀ ಹೊಏರ್ನಲ್‌ರವರು ಎ, ಬಿ, ಸಿ, ಡಿ ಮತ್ತು ಇ ಎಂಬ ಗುರುತುಗಳನ್ನಿತ್ತು ಇವುಗಳಲ್ಲಿರುವ ವಿಷಯಗಳನ್ನೂ ಮತ್ತು ಇವುಗಳಲ್ಲಿ ಕಂಡುಬರುವ ಪರಸ್ಪರ ವ್ಯತ್ಯಾಸ ವಿಶೇಷಗಳನ್ನೂ ವಿಮರ್ಶಿಸಿ, ತಮ್ಮ ವಿಚಾರಸರಣಿಯನ್ನು ಮಂಡಿಸಿದ್ದಾರೆಂದು ಹಿಂದೆ ಹೇಳಿದೆ.

ಹಿಂದೆ ಉಲ್ಲೇಖಿಸಲಾಗಿರುವ ಪ್ರಾಕೃತ ಗಾಹೆಗಳು 'ಎ' ಪ್ರತಿಯಲ್ಲಿವೆ. ಬಿ, ಸಿ ಮತ್ತು ಡಿ ಪ್ರತಿಗಳು ಸ್ಥೂಲರೂಪದಿಂದ ಎ ಪ್ರತಿಯ ಕ್ರಮವನ್ನು ಅನುಸರಿಸಿದವುಗಳಾಗಿವೆ. 'ಇ' ಪ್ರತಿಯೊಂದು ಮಾತ್ರ ಎ ಪ್ರತಿಯಿಂದ ಭಿನ್ನವಾದ ರೀತಿಯಲ್ಲಿದೆ. ಇದರಲ್ಲಿ ಆಚಾರ್ಯರೆಲ್ಲರ ಪ್ರತ್ಯೇಕ ಪಟ್ಟವರ್ಷಗಳನ್ನು ಹೇಳಲಾಗಿಲ್ಲ. ೧) ಕೇವಲಿ ೨) ಶ್ರುತಕೇವಲಿ ೩) ದಶಪೂರ್ವಿಗಳು ೪) ಏಕಾದಶಾಂಗಧರರು ಮತ್ತು ೫) ಆಚಾರಾಂಗ (ವೆಂಬ ಒಂದು ಅಂಗ) ಶ್ರುತಧರರು ಎಂಬ ಐದು ವರ್ಗಗಳಲ್ಲಿ, ಆಚಾರ್ಯರ ಸಮಷ್ಟಿಕಾಲಗಳನ್ನು ಹೇಳಲಾಗಿದೆ. ಎ ಪ್ರತಿಯಲ್ಲಿ ನಂದಿ ಆಮ್ನಾಯ ಸರಸ್ವತೀಗಚ್ಛ ಶಾಖೆಯ ಆಚಾರ್ಯರ ಪ್ರತ್ಯೇಕ ಪಟ್ಟಕಾಲಗಳನ್ನು ವಿಕ್ರಮಸಂವತ್ ೪ ರಿಂದ [೨ ನೇ ಭದ್ರಬಾಹುಗಳು ಪಟ್ಟಸ್ಥರಾದ ಸಮಯಾರಂಭದಿಂದ] ಗಣನೆಮಾಡಲಾಗಿದೆ. ಆದರೆ 'ಇ' ಪ್ರತಿಯಲ್ಲಿ ೨ ನೇ ಭದ್ರಬಾಹುಸ್ವಾಮಿಯವರನ್ನು ಆಚಾರಾಂಗ ಶ್ರುತಧರರಲ್ಲೊಬ್ಬರನ್ನಾಗಿ ನಿರ್ದೇಶಿಸಿದೆ. ಮುಂದೆ ಮೂರನೇ ಭದ್ರಬಾಹುಸ್ವಾಮಿಯವರು ಸಂವತ್ ೧೦೪ ರಲ್ಲಿ ಪಟ್ಟಸ್ಥರಾದರೆಂದು ಹೇಳಿ ಇವರ ಪಟ್ಟಸಮಯದಾರಂಭದಿಂದ ನಂದಿ ಆ. ಸರಸ್ವತೀಗಚ್ಛಶಾಖೆಯ ಆಚಾರ್ಯರ ಪಟ್ಟಕಾಲಮಾನಗಳನ್ನು ನಿರೂಪಿಸಲಾಗಿದೆ. 'ಇ' ಪ್ರತಿಯ ಸಂಪ್ರದಾಯದಂತೆ 'ಭದ್ರಬಾಹು' ಎಂಬ ಹೆಸರಿನ ಮೂವರು ಆಚಾರ್ಯರಿದ್ದಾರೆ.

---

1 ಐದನೇ ವರ್ಗದ ಆರಂಭಸಮಯವನ್ನು ಮಾತ್ರ ವೀ. ನಿ. ಪ. ಗಣನೆಯಿಂದ ನಿರ್ದೇಶಿಸಿಲ್ಲ.

‘ಇ’ ಪ್ರತಿಯ ಕ್ರಮದಂತೆ ಅಂಗಶ್ರುತಧರ ಆಚಾರ್ಯರ ಪರಂಪರೆಯನ್ನು ೫ ವರ್ಗಗಳಲ್ಲಿ ವಿಭಾಗಿಸಿ, ಈ ವರ್ಗಗಳ ಸಮಷ್ಟಿಕಾಲಗಳನ್ನು ಮಾತ್ರ ನಿರೂಪಿಸಿರುವ ಮತ್ತೊಂದು ಸಂಪ್ರದಾಯವಿದೆ. ಈ ಸಂಪ್ರದಾಯವು ಎ ಮತ್ತು ಇ ಪ್ರತಿಗಳ ಮಧ್ಯವರ್ತಿಯಾದ ಕ್ರಮವನ್ನನುಸರಿಸಿದೆಯೆಂದು ಹೇಳಬಹುದು. ಮಧ್ಯವರ್ತಿಕ್ರಮಾನುಸಾರಿಯಾದ ಈ ಸಂಪ್ರದಾಯವು ಕ್ರಿ. ಶ. ೮ ನೇ ಶತಮಾನದಿಂದ ಈಚೆಗೆ ವಿಶೇಷ ಪ್ರಚಾರದಲ್ಲಿದೆಯೆಂಬುದಲ್ಲದೆ ಸರ್ವ ಆಚಾರ್ಯ ಸಮ್ಮತವೂ ಆಗಿದ್ದಂತೆ ತೋರುತ್ತದೆ. ತಿಲೋಯಪಣ್ಣತ್ತಿ, ಧವಲಸಿದ್ಧಾಂತ ಟೀಕೆ, ಜಿನಸೇನಾಚಾರ್ಯವಿರಚಿತ ಮಹಾಪುರಾಣ, ಇಂದ್ರನಂದಿ ಆಚಾರ್ಯವಿರಚಿತ ಶ್ರುತಾವತಾರವೇ ಮೊದಲಾದ ಗ್ರಂಥಗಳಲ್ಲಿ ಮಧ್ಯವರ್ತಿ ಕ್ರಮದ ಸಂಪ್ರದಾಯಾನುಸಾರ ಅಂಗಶ್ರುತಧರ ಆಚಾರ್ಯ ಪರಂಪರೆಯನ್ನು ನಿರೂಪಿಸಲಾಗಿದೆ.[1] ನಂದಿ ಆಮ್ನಾಯದ ಇ ಪ್ರತಿ ಹಾಗೂ ತಿ. ಪ. ಸಂಪ್ರದಾಯಗಳಲ್ಲಿ ನಿರೂಪಿಸಲಾಗಿರುವ ಆಚಾರ್ಯ ಪರಂಪರೆಯ ಕ್ರಮವು ಈ ಮುಂದಿನಂತಿದೆ :

| ತಿಲೋಯಪಣ್ಣತ್ತಿಯಾದಿ ಗ್ರಂಥ ಕ್ರಮ | | ನಂ. ಆ. ಪಟ್ಟಾವಲಿಯ ‘ಇ’ ಪ್ರತಿಯ ಕ್ರಮ |
|---|---|---|
| I<br>ಮೂವರು ಕೇವಲಿಗಳು<br>ಕಾಲ-೬೨ ವರ್ಷ | ೧ ಗೌತಮ ೧<br>೨ ಸುಧರ್ಮ ೨<br>೩ ಜಂಬೂ ೩ | I<br>ಮೂವರು ಕೇವಲಿಗಳು<br>೬೨ ವರ್ಷ |
| II<br>ಐವರು ಶ್ರುತಕೇವಲಿಗಳು<br>ಕಾಲ-೧೦೦ ವರ್ಷ | ೧ ವಿಷ್ಣುನಂದಿ ೧<br>೨ ನಂದಿಮಿತ್ರ ೨<br>೩ ಅಪರಾಜಿತ ೩<br>೪ ಗೋವರ್ಧನ ೪<br>೫ ಭದ್ರಬಾಹು I ೫ | II<br>ಐವರು ಶ್ರುತಕೇವಲಿಗಳು<br>೧೦೦ ವರ್ಷ |

---

1 ಇಲ್ಲಿಂದ ಮುಂದೆ ಈ ಸಂಪ್ರದಾಯವನ್ನು ತಿಲೋಯಪಣ್ಣತ್ತಿ ಸಂಪ್ರದಾಯ =ತಿ. ಪ. ಸಂಪ್ರದಾಯವೆಂದು ಸೂಚಿಸಲಾಗುವುದು.

| | | |
|---|---|---|
| **III**<br>ಹನ್ನೊಂದು ದಶಪೂರ್ವಿಗಳು, ಕಾಲ-೧೮೩ ವರ್ಷ | ೧ ವಿಶಾಖ ೧<br>೨ ಪ್ರೋಷ್ಠಿಲ ೨<br>೩ ಕ್ಷತ್ರಿಯ ೩<br>೪ ಜಯ [ಸೇನ] ೪<br>೫ ನಾಗ [ಸೇನ] ೫<br>೬ ಸಿದ್ಧಾರ್ಥ ೬<br>೭ ಧೃತಿಸೇನ ೭<br>೮ ವಿಜಯ [ಸೇನ] ೮<br>೯ ಬುದ್ಧಿಲ = ಬಹಧೂಲಿ ೯<br>೧೦ ಗಂಗದೇವ ೧<br>೧೧ ಧರ್ಮಸೇನ ೨ | **III**<br>ಒಂಬತ್ತು ದಶಪೂರ್ವಿಗಳು, ೧೮೩ ವರ್ಷ |
| **IV**<br>ಐವರು ಏಕಾದಶಾಂಗ ಧಾರಿಗಳು, ಕಾಲ-೨೨೦ ವರ್ಷ | ೧ ನಕ್ಷತ್ರ ೩<br>೨ ಜಯಪಾಲ ೪<br>೩ ಪಾಂಡು[ಪಾಂಡವ] ೫<br>೪ ಧ್ರುವಸೇನ ೬<br>೫ ಕಂಸ ೧ | **IV**<br>ಆರು ಏಕಾದಶಾಂಗ ಧಾರಿಗಳು, ೨೨೦ ವರ್ಷ |
| **V**<br>ನಾಲ್ವರು ಆಚಾರಾಂಗ ಧರರು, ಕಾಲ-೧೧೮ ವರ್ಷ | ೧ ಸುಭದ್ರ ೨<br>೨ ಯಶೋಭದ್ರ ೩<br>೩ ಭದ್ರಬಾಹು II ೪<br>೪ ಲೋಹಾಚಾರ್ಯ ೫<br>ವಿನಯಂಧರ ೬ | **V**<br>ಆರು ಏಕಾಂಗಧಾರಿಗಳು, ೧೧೮ ವರ್ಷ |
| ಒಟ್ಟು ೨೮ ಆಚಾರ್ಯರು | | ಒಟ್ಟು ೨೯ ಆಚಾರ್ಯರು |
| ಒಟ್ಟು ಕಾಲ-೬೮೩ ವರ್ಷ | | ಒಟ್ಟು ಕಾಲ-೬೮೩ ವರ್ಷ |

'ಎ' ಪ್ರತಿ, 'ಇ' ಪ್ರತಿ ಹಾಗೂ ತಿ. ಪ ಸಂಪ್ರದಾಯಗಳ ಮಧ್ಯೆ ವಿಷಯ ನಿರೂಪಣೆಯಲ್ಲಿ ಕಂಡುಬರುವ ವ್ಯತ್ಯಾಸಗಳು:

೧ 'ಇ' ಪ್ರತಿಯಲ್ಲಿ ನಿರೂಪಿತವಾಗಿರುವಂತೆ ದಶಪೂರ್ವಿವರ್ಗದಲ್ಲಿ ವಿಶಾಖಾ ಚಾರ್ಯಾದಿ ಬುದ್ಧಿಲಿಂಗ [=ಬುದ್ಧಿಲ] ಪರ್ಯಂತ ೯ ಜನ ಆಚಾರ್ಯರನ್ನು ಮಾತ್ರ ಗಣನೆಮಾಡಲಾಗಿದೆ. 'ಎ' ಪ್ರತಿ ಮತ್ತು ತಿ. ಪ. ಸಂಪ್ರದಾಯಗಳಲ್ಲಿ [೯ ನೆಯ] ಬುದ್ಧಿಲಿಂಗ ಆಚಾರ್ಯರ ಅನಂತರ ದೇವ ಮತ್ತು ಧರ್ಮಸೇನ ಎಂಬ ಮತ್ತೂ ಇಬ್ಬರು ಆಚಾರ್ಯರು ಸೇರಿ ೧೧ ಜನ ದಶಪೂರ್ವಿಗಳನ್ನು ಗಣನೆಮಾಡಲಾಗಿದೆ. ದಶಪೂರ್ವಿಗಳ ಒಟ್ಟು ಪಟ್ಟಕಾಲ ೧೮೩ ವರ್ಷಗಳ ಗಣನೆಯಲ್ಲಿ ಮಾತ್ರ ಯಾವ ಮತಭೇದವೂ ಇರುವುದಿಲ್ಲ.

೨. 'ಇ' ಪ್ರತಿಯಲ್ಲಿ ಗಂಗದೇವಾದಿ ಧ್ರುವಸೇನಆಚಾರ್ಯರಪರ್ಯಂತ ೬ ಜನ ಏಕಾದಶಾಂಗಧರರನ್ನು ಗಣನೆಮಾಡಲಾಗಿದೆ. 'ಎ' ಪ್ರತಿ ಮತ್ತು ತಿ. ಪ. ಸಂಪ್ರದಾಯಗಳಲ್ಲಿ [ಗಂಗದೇವ ಮತ್ತು ಧರ್ಮಸೇನರನ್ನು ದಶಪೂರ್ವಿ ವರ್ಗದಲ್ಲಿಯೇ ಗಣನೆಮಾಡಿರುವುದರಿಂದ ಇವರಿಂದ ಮುಂದಿನ] ನಕ್ಷತ್ರಾಚಾರ್ಯಾದಿ ಕಂಸ ಆಚಾರ್ಯ ಪರ್ಯಂತರಾದ ಐವರು ಆಚಾರ್ಯರನ್ನು ಏಕಾದಶಾಂಗಧರ ವರ್ಗದಲ್ಲಿ ಗಣನೆಮಾಡಲಾಗಿದೆ. ಎ ಪ್ರತಿಯನುಸಾರ ಏಕಾದಶಾಂಗಧರ ಆಚಾರ್ಯರ ಒಟ್ಟು ಪಟ್ಟಕಾಲವು ೧೨೩ ವರ್ಷಗಳು. ಇ ಪ್ರತಿ ಮತ್ತು ತಿ. ಪ. ಸಂಪ್ರದಾಯಾನುಸಾರ ೨೨೦ ವರ್ಷಗಳು.

೩. 'ಎ' ಪ್ರತಿಯಲ್ಲಿ ಸುಭದ್ರಾದಿ ಲೋಹಾಚಾರ್ಯ ಪರ್ಯಂತರಾದ ನಾಲ್ವರು ಆಚಾರ್ಯರನ್ನು, ಹತ್ತು ಒಂಭತ್ತು, ಎಂಟು ಮತ್ತು ಏಳು ಅಂಗಶ್ರುತಧರರೆಂದು ಗಣನೆಮಾಡಲಾಗಿದೆ. ಈ ನಾಲ್ವರು ಆಚಾರ್ಯರ ಒಟ್ಟು ಪಟ್ಟಕಾಲವನ್ನು ೯೭ ವರ್ಷಗಳೆಂದು ಹೇಳಿ ಏಕಾದಶಾಂಗಧರರ ಪಟ್ಟಕಾಲದೊಡನೆ ಇವರ ಪಟ್ಟಕಾಲವನ್ನು ಸೇರಿಸಿ ಒಟ್ಟು [೧೨೩ + ೯೭=] ೨೨೦ ವರ್ಷಗಳೆಂದು ಗಣನೆಮಾಡಲಾಗಿದೆ. ಇವರ ಅನಂತರ ಅರ್ಹದ್ಬಲ್ಯಾದಿ ಭೂತಬಲಿಪರ್ಯಂತರಾದ ಐವರು ಆಚಾರ್ಯರನ್ನು ಆಚಾರಾಂಗಧರರೆಂದು ಹೆಸರಿಸಿ ಇವರ ಒಟ್ಟು ಪಟ್ಟಕಾಲವನ್ನು ೧೧೮ ವರ್ಷಗಳೆಂದು ಗಣನೆಮಾಡಲಾಗಿದೆ. 'ಇ' ಪ್ರತಿ ಮತ್ತು ತಿ. ಪ. ಸಂಪ್ರದಾಯಗಳಲ್ಲಿ ದಶ, ನವ, ಅಷ್ಟ ಅಂಗಶ್ರುತಧರ ಆಚಾರ್ಯರ ಪರಿಗಣನೆಯಿಲ್ಲವಾಗಿದ್ದು 'ಎ' ಪ್ರತಿಯಲ್ಲಿ ದಶ, ನವ, ಅಷ್ಟ ಅಂಗಶ್ರುತಧರರೆಂದು ಗಣನೆಗೊಂಡಿರುವ ಸುಭದ್ರಾದಿ ಲೋಹಾಚಾರ್ಯ ಪರ್ಯಂತರಾದ ನಾಲ್ವರು ಆಚಾರ್ಯರೇ ಇಲ್ಲಿ ಆಚಾರಾಂಗಧರರೆಂದು ಗಣನೆ ಹೊಂದಿದ್ದಾರೆ. ಇವರ ಪಟ್ಟಕಾಲವನ್ನು ೧೧೮ ವರ್ಷಗಳೆಂದು ಹೇಳಿದೆ.

‘ಎ’ ಮತ್ತು ‘ಇ’ ಪ್ರತಿಗಳು ಹಾಗೂ ತಿ. ಪ. ಸಂಪ್ರದಾಯಗಳ ಮಧ್ಯೆ ಗೌತಮಕೇವಲಿಯಾದಿಯಾಗಿ ದಶಪೂರ್ವಿವರ್ಗದ ೯ ನೇ ಆಚಾರ್ಯರಾದ ಬುದ್ಧಿಲ ಸ್ವಾಮಿ ಪರ್ಯಂತದ, ಆಚಾರ್ಯ ಪರಂಪರೆಯವರೆಗೆ ವಿಷಯ ನಿರೂಪಣೆಗಳಲ್ಲಿ ಗಮನಾರ್ಹವಾದ ವ್ಯತ್ಯಾಸಗಳಾವುವೂ ಕಂಡುಬರುವುದಿಲ್ಲ. ಆದರೆ ದಶಪೂರ್ವಿ ಆಚಾರ್ಯರ ಸಂಖ್ಯೆ ಹಾಗೂ ಏಕಾದಶಾಂಗಶ್ರುತಧರ ಆಚಾರ್ಯರ ಸಂಖ್ಯೆಗಳ ವಿಷಯದಲ್ಲಿ ಮಾತ್ರ ‘ಇ’ ಪ್ರತಿಯಲ್ಲಿ ಇತರ ಎಲ್ಲ ಸಂಪ್ರದಾಯಗಳಿಂದ ಭಿನ್ನವಾದ ಸಂಪ್ರದಾಯವನ್ನು ಅನುಸರಿಸಿರುವಂತೆ ತೋರುತ್ತದೆ. ದಶಪೂರ್ವಿ ಆಚಾರ್ಯರ ಸಂಖ್ಯೆಯ ವಿಷಯದಲ್ಲಿ, ‘ಇ’ ಪ್ರತಿಯ ಸಂಪ್ರದಾಯಾನುಗುಣವಾದ ಅಭಿಮತವು, ಕ್ರಿ. ಶ. ೭ ನೇ ಶತಮಾನಕಾಲದಲ್ಲಿದ್ದಿತೆಂದು ಶ್ರ. ಬೆಳಗುಳದ ಶಾಸನಾಂಕ ೧ ರ ಐತಿಹ್ಯಾಧಾರದಿಂದ ಹೇಳಲು ಅವಕಾಶವಿದೆ.

ಶ್ರೀ ವೀರನಿರ್ವಾಣಾನಂತರದ ೬೮೩ ವರ್ಷಗಳ ಪರ್ಯಂತ ಕಾಲದ ಆಚಾರ್ಯ ಸಂತತಿಯ ಐತಿಹ್ಯವನ್ನು ನಿರೂಪಿಸುವಲ್ಲಿ ಮೇಲ್ಕಂಡಂತಿರುವ ಮತಭೇದಗಳನ್ನು ವಿಶ್ಲೇಷಣಾಪೂರ್ವಕವಾಗಿ ಪರಿಷ್ಕರಿಸಿ ಸತ್ಯಸಮೀಪವರ್ತಿಯಾದ ಐತಿಹ್ಯವನ್ನು ಸ್ಫುಟೀಕರಿಸಬಹುದಾಗಿದೆ.

**ಇಂದ್ರಭೂತಿಗೌತಮಗಣಧರಸ್ವಾಮಿಯವರು :** ಶ್ರೀ ವೀರತೀರ್ಥಂಕರನ ನಿರ್ವಾಣಾನಂತರ ಅನುಕ್ರಮವಾಗಿ ಇಂದ್ರಭೂತಿಗೌತಮಸ್ವಾಮಿ, ಸುಧರ್ಮಸ್ವಾಮಿ ಮತ್ತು ಜಂಬೂಸ್ವಾಮಿ ಎಂಬ ಮೂವರು ಆಚಾರ್ಯರು ಕೇವಲಜ್ಞಾನಸಂಪನ್ನರಾಗಿ ನಿರ್ಗ್ರಂಥ ಧರ್ಮಪಂಥಪ್ರಧಾನರೆನಿಸಿ ಸಂಪೂಜಿತರಾಗಿದ್ದರೆಂಬುದು ಶ್ವೇತಾಂಬರ ಮತ್ತು ದಿಗಂಬರ ಪಂಥಗಳೆರಡರ ಒಮ್ಮತಾಭಿಪ್ರಾಯ. ಗೌತಮಸ್ವಾಮಿಯವರು ವೀ. ನಿ. ಪ. ೧೨ ವರ್ಷಗಳ ತರುವಾಯದಲ್ಲಿ ನಿರ್ವಾಣಹೊಂದಿದ್ದಾರೆ. ಈ ಸಮಯದಲ್ಲಿ ಮಗಧರಾಜ್ಯದಲ್ಲಿ ಅಜಾತಶತ್ರುವಿನ ೧೭-೧೮ ನೇ ವರ್ಷದ ರಾಜ್ಯಭಾರವು ನಡೆದಿದ್ದಿತು. ಅಜಾತಶತ್ರುವು ಶ್ರೀ ಗೌತಮಬುದ್ಧನ ಸಂದರ್ಶನಪಡೆದ ಐತಿಹ್ಯವಿಷಯವು ಬೌದ್ಧಆಗಮಗ್ರಂಥಗಳಲ್ಲಿ ಉಳಿದುಬಂದಿರುವುದು ವಿದಿತವಿದೆ. ಇಂತೆಯೇ ಗೌತಮಗಣಧರಸ್ವಾಮಿಯವರು ಕೇವಲಜ್ಞಾನಸಂಪನ್ನರಾದ ತರುವಾಯ ಒಮ್ಮೆ ರಾಜಗೃಹನಗರದ ಬಳಿ ವಿಪುಲಾಚಲಪರ್ವತದಲ್ಲಿ ವಿಹರಿಸಿರಲು ಅಜಾತಶತ್ರುವು ಅವರ ಸಂದರ್ಶನ ಪಡೆದು, ಧರ್ಮವನ್ನು ಕೇಳಿ ಸ್ವರ್ಗಮೋಕ್ಷಸಾಧನವಾದ ದಾನಶೀಲೋಪವಾಸನೇ ಮೊದಲಾದುವನ್ನು ಸ್ವೀಕರಿಸಿದನೆಂಬ ಐತಿಹ್ಯವು ದಿಗಂಬರ ಜೈನ ಆಮ್ನಾಯದಲ್ಲಿ ಉಳಿದುಬಂದಿದೆ [1] ಇದರಿಂದ ಅಜಾತಶತ್ರುವು ರಾಜನಾಗಿ ಅಭಿಷಿಕ್ತನಾದ ತರುವಾಯ ಸ್ವಲ್ಪಕಾಲಪರ್ಯಂತ ಬೌದ್ಧಮತಾವಲಂಬಿಯಾಗಿದ್ದು

---

1 ಮಹಾಪುರಾಣ_ವರ್ಧಮಾನಸ್ವಾಮಿ ಪುರಾಣಭಾಗ, ಪ. ಸಂ. ೧೨೭೮ ರಿಂದ ೧೨೮೨.

ಶ್ರೀ ಗೌತಮಬುದ್ಧನನಿರ್ವಾಣಾನಂತರ, ಗೌತಮಗಣಧರಸ್ವಾಮಿಯವರ ಸಂದರ್ಶನ ಪಡೆದು, ನಿರ್ಗ್ರಂಥಧರ್ಮದ ಶ್ರದ್ಧಾಳುವಾಗಿ ಪರಿವರ್ತಿತನಾಗಿರುವನೆಂದು ಸೂಚಿತವಾಗುವುದು.

ಸುಧರ್ಮಸ್ವಾಮಿಯವರು[1] : ಇಂದ್ರಭೂತಿಗೌತಮಗಣಧರಸ್ವಾಮಿಯವರು ಮುಕ್ತರಾದಂದು ಸುಧರ್ಮಸ್ವಾಮಿಯವರು ಕೇವಲಜ್ಞಾನಸಂಪನ್ನರಾದರು. ಇವರು ಕೇವಲಜ್ಞಾನಸಂಪನ್ನರಾಗಿ ಜೀವಿಸಿದ್ದ ಅವಧಿಯನ್ನು ನಿರ್ದೇಶಿಸುವಲ್ಲಿ ದಿಗಂಬರ ಮತ್ತು ಶ್ವೇತಾಂಬರ ಆಮ್ನಾಯಗಳ ಮಧ್ಯೆ ಮತಭೇದವಿದೆ. ದಿಗಂಬರ ಆಮ್ನಾಯದ ಹೇಳಿಕೆಯಂತೆ ಇವರು ಕೇವಲಿಗಳಾಗಿ ೧೨ ವರ್ಷಕಾಲ ವಿಹರಿಸಿದರೆಂದಿದೆಯಾದರೆ ಶ್ವೇತಾಂಬರ ಆಮ್ನಾಯದ ಹೇಳಿಕೆಯಂತೆ ೮ ವರ್ಷಕಾಲ ಮಾತ್ರ ಕೇವಲಿಗಳಾಗಿ ಜೀವಿಸಿದ್ದರು. ಇದರಂತೆ ಇವರು ಕ್ರಿ. ಪೂ. ೫೦೪ ರಲ್ಲಿ ಅಥವಾ ೫೦೮ ರಲ್ಲಿ ಅಜಾತಶತ್ರುವಿನ ೨೮ ನೇ ವರ್ಷದ ಅಥವಾ ೨೪ ನೇ ವರ್ಷದ ರಾಜ್ಯಭಾರಸಮಯದಲ್ಲಿ ಮುಕ್ತರಾಗಿರುವರೆಂದು ಪರಿಗಣಿತವಾಗುವುದು. ಸುಧರ್ಮಸ್ವಾಮಿಯವರು ಕೇವಲಜ್ಞಾನಸಂಪನ್ನರಾಗಿ ವಿಹರಿಸುತ್ತಿದ್ದ ಸಮಯದಲ್ಲಿ ಒಮ್ಮೆ ಅವರನ್ನು ಚಂಪಾಪುರದಲ್ಲಿ ಅಜಾತಶತ್ರುವು ಸಂದರ್ಶಿಸಿದನೆಂಬ ಐತಿಹ್ಯವು ಶ್ವೇತಾಂಬರ ಆಮ್ನಾಯದಲ್ಲಿ ಉಳಿದುಬಂದಿದೆ.[2]

ಜಂಬೂಸ್ವಾಮಿಯವರು : ಗೌತಮಗಣಧರಸ್ವಾಮಿಯವರು ಕೇವಲಿಗಳಾಗಿ ಜೀವಿಸಿದ್ದ ಸಮಯದಲ್ಲಿ ಯತಿಸಂಘಪ್ರಧಾನರಾಗಿದ್ದ ಸುಧರ್ಮಸ್ವಾಮಿಯವರಿಂದ ಜಂಬೂಸ್ವಾಮಿಯವರು ಪ್ರವ್ರಜ್ಯೆಯನ್ನು ಕೈಗೊಂಡರು. ಸುಧರ್ಮಸ್ವಾಮಿಯವರು ಕೇವಲಿಗಳಾಗಿ ವಿಹರಿಸುತ್ತಿದ್ದ ಅವಧಿಯಲ್ಲಿ ಜಂಬೂಸ್ವಾಮಿಯವರು ಗಣಧರರಾಗಿದ್ದರು. ಅನಂತರ ಸುಧರ್ಮಸ್ವಾಮಿಯವರು ನಿರ್ವಾಣಹೊಂದಿದಂದು ಜಂಬೂಸ್ವಾಮಿಯವರು ಕೇವಲಜ್ಞಾನಸಂಪನ್ನರಾದರು. ಇವರು ಕೇವಲಜ್ಞಾನಸಂಪನ್ನರಾಗಿ ೩೮ ವರ್ಷಕಾಲ ಜೀವಿಸಿದ್ದರೆಂದು ದಿಗಂಬರ ಆಮ್ನಾಯದಲ್ಲಿ ಹೇಳಿದೆಯಾದರೆ, ೪೪ ವರ್ಷಕಾಲ ಜೀವಿಸಿದ್ದರೆಂದು ಶ್ವೇತಾಂಬರ ಆಮ್ನಾಯದಲ್ಲಿ ಹೇಳಿದೆ. ಶ್ರೀ ವೀರನಿರ್ವಾಣಾನಂತರಸಮಯದ ಅನುಬದ್ಧಕೇವಲಿಗಳಲ್ಲಿ ಕೊನೆಯವರೆಂದು ಮತ್ತು ಸದ್ಯಪ್ರವರ್ತಿತ ಅವಸರ್ಪಿಣೀಕಾಲದಲ್ಲಿ ಭರತಕ್ಷೇತ್ರದಲ್ಲಿ ಮುಕ್ತಿಭಾಜನರಾದವರಲ್ಲಿ ಕೊನೆಯವರೆಂದು ಜಂಬೂಸ್ವಾಮಿಯವರು ಸಂಸ್ತುತರಾಗಿದ್ದಾರೆ. ಇಲ್ಲಿ 'ಕೇವಲಿ' ಪದಪೂರ್ವವರ್ತಿಯಾಗಿ ಸಂಯೋಜಿತವಾಗಿರುವ 'ಅನುಬದ್ಧ' ಪದದ ಉದ್ದಿಷ್ಟಾರ್ಥವೇನೆಂಬುದನ್ನು ತಿಳಿಯಬೇಕಾಗಿದೆ: ಶ್ರೀ ವೀರತೀರ್ಥಂಕರನು ನಿರ್ವಾಣಹೊಂದಿದಂದು ಇಂದ್ರಭೂತಿಗೌತಮಸ್ವಾಮಿಯವರು ಕೇವಲಜ್ಞಾನಸಂಪನ್ನರಾಗಿದ್ದಾರೆ. ಇಂತೆಯೇ ಗೌತಮಸ್ವಾಮಿಯವರು ನಿರ್ವಾಣಹೊಂದಿದಂದು ಸುಧರ್ಮಸ್ವಾಮಿ

---

1 ಇವರಿಗೆ 'ಲೋಹಾರ್ಯ' ಎಂಬುದು ಮತ್ತೊಂದು ಹೆಸರು.

2 ಪರಿಶಿಷ್ಟಪರ್ವಸರ್ಗ_೪.

ಯವರು ಕೇವಲಜ್ಞಾನಸಂಪನ್ನರಾಗಿದ್ದಾರೆ. ಇವರು ನಿರ್ವಾಣಹೊಂದಿದೊಡನೆ ಜಂಬೂಸ್ವಾಮಿಯವರು ಕೇವಲಜ್ಞಾನಸಂಪನ್ನರಾಗಿದ್ದಾರೆ. ಇದರಂತೆ 'ಅನುಬದ್ಧ' ಪದದಿಂದ ಕೇವಲಜ್ಞಾನಸಂಪನ್ನರ ಅವಿಚ್ಛಿನ್ನ ಅನುಕ್ರಮ ಪರಂಪರೆಯು ಸೂಚಿತವಾಗುವುದೆಂದು ಸ್ಪಷ್ಟವಾಗುವುದು. ಈ ಮೂವರು ಅನುಬದ್ಧಕೇವಲಿಗಳ ಜೀವಿತ ಸಮಯದಲ್ಲಿ ಇತರ ಅನೇಕ ಕೇವಲಜ್ಞಾನಸಂಪನ್ನರಿದ್ದರೆಂದು ಹೇಳಲವಕಾಶವಿದೆ. 'ಶ್ರೀಧರದೇವ' ಎಂಬುವರು ಅಂತಿಮ ಕೇವಲಿಗಳಾಗಿರುವರೆಂದೂ ಮತ್ತು ಇವರು ಕುಂಥಲಗಿರಿಯಲ್ಲಿ ಮುಕ್ತರಾಗಿರುವರೆಂದೂ ತಿಲೋಯಪಣ್ಣತ್ತಿಯಲ್ಲಿ ಹೇಳಿದೆ. ಇದರಿಂದ ಜಂಬೂಸ್ವಾಮಿಯವರು ಕೇವಲಜ್ಞಾಸಂಪನ್ನರಾದ ತರುವಾಯ ಶ್ರೀಧರದೇವರು ಕೇವಲಜ್ಞಾನಸಂಪನ್ನರಾಗಿರುವರೆಂದೂ ಮತ್ತು ಇವರು ಜಂಬೂಸ್ವಾಮಿಯವರಿಂದ ಮುನ್ನವೇ ಮುಕ್ತಿಭಾಜನರಾಗಿರುವರೆಂದೂ ಅಧಿಗತವಾಗುವುದು. ಮುಕ್ತಿಪಡೆದವರಲ್ಲಿ ಜಂಬೂಸ್ವಾಮಿಯವರೇ ಕೊನೆಯವರಾಗಿರುವರಾದ್ದರಿಂದ ಇವರ ನಿರ್ವಾಣದೊಡನೆಯೇ ಕೇವಲಜ್ಞಾನಸಂಪದವು ಭರತಕ್ಷೇತ್ರದಲ್ಲಿ ಅಂತ್ಯಗೊಂಡಿದೆಯೆಂದು ನಿಶ್ಚಿತವಾಗುವುದು. ಆದ್ದರಿಂದ 'ಕೇವಲಿ', 'ಶ್ರುತಕೇವಲಿ' ಮುಂತಾದ ಶ್ರುತಧರ ಆಚಾರ್ಯಪರಂಪರೆಯ ವರ್ಗಸೂಚಕಪದಗಳ ಪೂರ್ವವರ್ತಿಯಾಗಿ ಸಂಯೋಜಿತವಾಗಿರುವ 'ಅನುಬದ್ಧ' ಪದವು ಶ್ರೀ ವೀರನಿರ್ವಾಣಸಮಯದಾದಿಯಾಗಿ ನಿರ್ಗ್ರಂಥ ಧರ್ಮಪಂಥಾನುಸೃತ ಶ್ರುತಜ್ಞಾನದ ಅವಿಚ್ಛನತೆಯ ಸೂಚಕವಾಗಿರುವುದೆಂದು ವ್ಯಕ್ತವಾಗುವುದು. ಜಂಬೂಸ್ವಾಮಿಯವರು ವೀ. ನಿ. ಪ. ೬೨ನೇ ವರ್ಷದಲ್ಲಿ ಮುಕ್ತರಾದರೆಂದು ದಿಗಂಬರ ಆಮ್ನಾಯದಲ್ಲಿ ಹೇಳಿದೆಯಾದರೆ, ವೀ. ನಿ. ಪ. ವರ್ಷ ೬೪ ರಲ್ಲಿ ಮುಕ್ತರಾದರೆಂದು ಶ್ವೇತಾಂಬರ ಆಮ್ನಾಯದಲ್ಲಿ ಹೇಳಿದೆ. ಇದರಂತೆ ಮಗಧ ರಾಜ್ಯಪ್ರಭುತ್ವದಲ್ಲಿ ನಂದರಾಜನು ಅಧಿಷ್ಠಿತನಾದ ೨ನೇ ವರ್ಷ ಅಥವಾ ೪ನೇ ವರ್ಷದಲ್ಲಿ ಜಂಬೂಸ್ವಾಮಿಯವರು ನಿರ್ವಾಣಹೊಂದಿದ್ದಾರೆಂದು ಗ್ರಹಿಸಲವಕಾಶವಾಗುವುದು.

ಚತುರ್ದಶಪೂರ್ವಿಗಳು—ಶ್ವೇತಾಂಬರಾಮ್ನಾಯಾನುಸಾರ: ಅಂತಿಮ ಕೇವಲಿ ಜಂಬೂಸ್ವಾಮಿಯವರ ತರುವಾಯ ಪ್ರಭವಸ್ವಾಮಿ, ಶಯ್ಯಂಭವ, ಯಶೋಭದ್ರ, ಸಂಭೂತಿವಿಜಯ, ಭದ್ರಬಾಹು ಮತ್ತು ಸ್ಥೂಲಭದ್ರರೆಂಬ ಆರು ಜನ ಆಚಾರ್ಯರು ಶ್ರುತಕೇವಲಿಗಳಾದರು ಎಂದು ಶ್ವೇತಾಂಬರ ಆಮ್ನಾಯದಲ್ಲಿ ಹೇಳಿದೆ.[1] ಈ

---

1 ಕೇವಲೀಚರಮೋಜಂಬೂ—ಸ್ವಾಮ್ಯಥಪ್ರಭವ ಪ್ರಭುಃ ಶಯ್ಯಂಭವೋ ಯಶೋಭದ್ರಃ।
ಸಂಭೂತಿವಿಜಯಸ್ತಥಾ ಭದ್ರಬಾಹುಃ ಸ್ಥೂಲಭದ್ರಃ ಶ್ರುತಕೇವಲಿನೋ ಹಿ ಷಟ್।
[ಶ್ರ. ಭ. ಮಹಾವೀರ—ಭಾಗ ೫—ವಿಭಾಗ ೧—ಪು. ಸಂ. ೨೩೪]

ಆರು ಚತುರ್ದಶಪೂರ್ವಿಗಳಲ್ಲಿ ಪ್ರಥಮ ಯವರಾದ ಪ್ರಭವಸ್ವಾಮಿಯವರು ಪ್ರವ್ರಜಿತರಾಗುವ ಮುನ್ನ ಚೋರವೃತ್ತಿಯನ್ನವಲಂಬಿಸಿದ್ದರೆಂದೂ ಜಂಬೂಸ್ವಾಮಿಯವರಿಂದ ಪ್ರತಿಬೋಧಿತರಾಗಿ ಅವರೊಡನೆಯೇ ಪ್ರವ್ರಜ್ಯೆಕೈಗೊಂಡರೆಂದೂ ಮತ್ತು ಪ್ರವ್ರಜ್ಯೆಕೈಗೊಂಡ ಸಮಯದಲ್ಲಿ ಮುವ್ವತ್ತು ವರ್ಷ ವಯೋಮಾನದವರಾಗಿದ್ದ ಇವರು ೪೪ ವರ್ಷ ಸಾಮಾನ್ಯ ಯತಿಯಾಗಿಯೂ ಅನಂತರ ಜಂಬೂಸ್ವಾಮಿಯವರು ನಿರ್ವಾಣಹೊಂದಲಾಗಿ, ಮುಂದೆ ೧೧ ವರ್ಷಕಾಲ ಯುಗಪ್ರಧಾನರಾಗಿಯೂ ಜೀವಿಸಿದ್ದು, ತಮ್ಮ ೮೫ ನೇ ವರ್ಷವಯೋಮಾನದಲ್ಲಿ ಸ್ವರ್ಗಸ್ಥರಾದರೆಂದು ಶ್ವೇತಾಂಬರ ಆಮ್ನಾಯದ ಐತಿಹ್ಯವಿದೆ.[1] ಆದರೆ ಇವರ ಸಾಮಾನ್ಯಯತಿಪರ್ಯಾಯದ ಕಾಲ ನಿರ್ದೇಶನದಲ್ಲಿ ೨೦ ವರ್ಷಾವಧಿಯ ನ್ಯೂನತೆಯೇರ್ಪಟ್ಟಿದೆ. ಜಂಬೂಸ್ವಾಮಿಯವರು ಪ್ರವ್ರಜಿತರಾದಂದೇ ಇವರೂ ಪ್ರವ್ರಜಿತರಾದರೆಂದು ಹೇಳಲಾಗಿರುವುದರನ್ನು ಗುಣವಾಗಿ, ಜಂಬೂಸ್ವಾಮಿಯವರ ಸಾಮಾನ್ಯಯತಿಪರ್ಯಾಯದ ೨೦ ವರ್ಷಗಳ ಅವಧಿ ಮತ್ತು ಇವರ ಕೇವಲಪರ್ಯಾಯದ ೪೪ ವರ್ಷಗಳ ಅವಧಿಗಳ ಒಟ್ಟು (೨೦+೪೪=) ೬೪ ವರ್ಷಕಾಲಪರ್ಯಂತ ಪ್ರಭವಸ್ವಾಮಿಯವರು ಸಾಮಾನ್ಯ ಯತಿಪರ್ಯಾಯದಲ್ಲಿದ್ದಿರಬೇಕೆಂದು ಪರಿಗಣಿತವಾಗುವುದು. ಇದರಂತೆ, ಇವರ ಸಾಮಾನ್ಯಯತಿಪರ್ಯಾಯದ ಕಾಲಗಣನೆಯಲ್ಲಿ ೨೦ ವರ್ಷಗಳ ನ್ಯೂನತೆಯೇರ್ಪಟ್ಟಿದೆಯೆಂದು ವ್ಯಕ್ತವಾಗುವುದು. ಇದರಿಂದ ಜಂಬೂಸ್ವಾಮಿಯವರು ನಿರ್ವಾಣ ಹೊಂದುವ ಮುನ್ನವೇ ಪ್ರಭವಸ್ವಾಮಿಯವರು ಸ್ವರ್ಗಸ್ಥರಾಗಿರಬೇಕೆಂದು ಅಥವಾ ಇವರು ತಮ್ಮ ೮೫ ನೇ ವರ್ಷವಯೋಮಾನದಲ್ಲಿ ಸ್ವರ್ಗಸ್ಥರಾಗಿರದೆ ೧೦೫ ನೇ ವರ್ಷ ವಯೋಮಾನದಲ್ಲಿ ಸ್ವರ್ಗಸ್ಥರಾಗಿರಬೇಕೆಂದು ಗಣನೆಮಾಡಬೇಕಾಗುವುದು. ಪ್ರಭವಸ್ವಾಮಿಯವರ ವಿಷಯವಾಗಿ ಶ್ವೇತಾಂಬರ ಆಮ್ನಾಯದಲ್ಲಿ ಉಕ್ತವಾಗಿರುವ ಐತಿಹ್ಯದೊಡನೆ ವಿಶೇಷಸಾದೃಶ್ಯತೆಯುಳ್ಳ ಐತಿಹ್ಯವು ದಿಗಂಬರ ಆಮ್ನಾಯದಲ್ಲಿ 'ಭವಸ್ವಾಮಿ' ಎಂಬ ಹೆಸರಿನೊಡನೆ ಉಳಿದುಬಂದಿದೆ. ಇಂತೆಯೇ ಪ್ರಭವಸ್ವಾಮಿಯವರ ಅನಂತರ ಕಾಲೀನರಾದ ಆಚಾರ್ಯರೈವರಲ್ಲಿ ಶಯ್ಯಂಭವಸೂರಿಯವರೊಬ್ಬರ ಹೊರತಾಗಿ ಉಳಿದ ನಾಲ್ವರ ಐತಿಹ್ಯವಿಷಯಗಳು ದಿಗಂಬರ ಆಮ್ನಾಯದಲ್ಲಿ ಉಳಿದುಬಂದಿರುವುದನ್ನು ನಾಮಸಾದೃಶ್ಯತೆಯೇ ಮುಂತಾದ ಆಧಾರಗಳಿಂದ ಗುರುತಿಸಬಹುದಾಗಿದೆ.

ದಿಗಂಬರ ಆಮ್ನಾಯಾನುಸಾರ, ಶ್ರುತಕೇವಲಿಯಾದಿ ಶ್ರುತಧರ ಆಚಾರ್ಯ ಪರಂಪರೆ: ಹಿಂದೆ ಉಲ್ಲೇಖಿಸಲಾಗಿರುವ ನಂ. ಆ. ಪಟ್ಟಾವಲಿ 'ಎ' ಪ್ರತಿಯ ಐತಿಹ್ಯದಲ್ಲಿ, ಶ್ರೀ ವೀರನಿರ್ವಾಣಾನಂತರ ಗೌತಮಸ್ವಾಮಿಯಾದಿ ಮೂವರು ಕೇವಲಿಗಳ ಅನುಕ್ರಮವನ್ನು ಹೇಳಿ ತದನಂತರ ಅನುಕ್ರಮವಾಗಿ ಶ್ರುತಕೇವಲಿ, ದಶಪೂರ್ವಿ

---

1 ಶ್ರ. ಭ. ಮಹಾವೀರ–ಗ್ರಂಥ ಭಾಗ ೫–ವಿಭಾಗ ೧–ಪು. ಸಂ. ೧೯೪.

ಹಾಗೂ ಏಕಾದಶ, ದಶ, ನವ, ಅಷ್ಟ ಮತ್ತು ಏಕ ಅಂಗಶ್ರುತಜ್ಞಾನಧರ ಆಚಾರ್ಯ ವರ್ಗಗಳನ್ನು ಹೇಳಿರುವುದು ವಿದಿತವಿದೆ. ಸಮಸ್ತ ದ್ವಾದಶಾಂಗ ಶ್ರುತದ ಪರಿಪೂರ್ಣಜ್ಞಾನಪಡೆದಿದ್ದ ಆಚಾರ್ಯ ವರ್ಗವು 'ಶ್ರುತಕೇವಲಿ' ಎಂಬ ಹೆಸರಿನಿಂದ ನಿರ್ದೇಶಿತವಾಗಿದೆ. ಶ್ರುತಕೇವಲಿಗಳನ್ನು 'ಚತುರ್ದಶಪೂರ್ವಿ' ಗಳೆಂದು ನಿರ್ದೇಶಿಸುವ ರೂಢಿಯೂ ಇದೆ. ಗೌತಮಗಣಧರಸ್ವಾಮಿ ವಿರಚಿತವಾದ ದ್ವಾದಶಾಂಗ ಶ್ರುತದಲ್ಲಿ ಹನ್ನೆರಡನೆಯದಾದ ದೃಷ್ಟಿವಾದಾಂಗವು ಬಹು ವಿಸ್ತೃತವಾದುದಾಗಿದ್ದು ಇದು ೧) ಪರಿಕರ್ಮ ೨) ಸೂತ್ರ ೩) ಪ್ರಥಮಾನುಯೋಗ ೪) ಪೂರ್ವ ಮತ್ತು ೫) ಚೂಲಿಕಾ ಎಂಬ ಐದು ಭಾಗಗಳುಳ್ಳದಾಗಿದೆ. ಇವುಗಳಲ್ಲಿ ನಾಲ್ಕನೇ ಭಾಗವಾದ ಪೂರ್ವವು ಹದಿನಾಲ್ಕು ವಿಭಾಗಗಳುಳ್ಳದಾಗಿ 'ಚತುರ್ದಶಪೂರ್ವ' ಎಂಬ ಹೆಸರನ್ನು ಹೊಂದಿದೆ. ಈ ಚತುರ್ದಶಪೂರ್ವವು ಬಹು ವಿಸ್ತೃತವೂ ಮತ್ತು ಅತಿ ಮಹತ್ವಪೂರ್ಣವೂ ಆಗಿದ್ದ ಕಾರಣ ಇದು ಸಮಸ್ತ ದ್ವಾದಶಾಂಗಶ್ರುತದ ಅಂತರ್ಗತವಿಭಾಗವಾಗಿರುವುದಾದರೂ, ಇವರ ಅತಿಶಯ ಮಹತ್ತ್ವದ ಕಾರಣದಿಂದ ಸಮಸ್ತ ಶ್ರುತಜ್ಞಾನದ ನಿರ್ದೇಶನಮಾಡುವಲ್ಲಿ 'ದ್ವಾದಶಾಂಗ' ಪದದೊಡನೆ 'ಚತುರ್ದಶಪೂರ್ವ' ಪದವನ್ನೂ ಸಂಯೋಜಿಸಿ 'ದ್ವಾದಶಾಂಗ ಚತುರ್ದಶಪೂರ್ವ' ಎಂದು ಹೆಸರಿಸುವ ಪರಿಪಾಠಉಂಟಾಗಿದೆ. ಅಂತೆಯೇ ಚತುರ್ದಶಪೂರ್ವದ ಈ ಮಹತ್ತ್ವದಿಂದಾಗಿ ಪರಿಪೂರ್ಣ ದ್ವಾದಶಾಂಗಶ್ರುತಜ್ಞಾನಧರರನ್ನು 'ಚತುರ್ದಶ ಪೂರ್ವಿಗಳು' ಎಂದು ಹೆಸರಿಸುವ ಪರಿಪಾಠಉಂಟಾಗಿದೆ. ಚತುರ್ದಶಪೂರ್ವಿ ಅಥವಾ ಶ್ರುತಕೇವಲಿವರ್ಗದ ಅಂತಿಮ ಆಚಾರ್ಯರಾದ ಭದ್ರಬಾಹುಸ್ವಾಮಿಯವರ ತರುವಾಯ ದ್ವಾದಶಾಂಗ ಶ್ರುತಜ್ಞಾನವು ಕಾಲಾನುಕ್ರಮವಾಗಿ ಮುಂದಗೊಳ್ಳುತ್ತಾ ನಡೆಯಿತು. ಅಂತೆಯೇ ಚತುರ್ದಶಪೂರ್ವಿವರ್ಗದ ಅನಂತರ ಹೆಸರಿಸಲಾಗಿರುವ 'ದಶಪೂರ್ವಿ' ವರ್ಗದ ಆಚಾರ್ಯರು ದಶಪೂರ್ವಪರ್ಯಂತಶ್ರುತದ ಪರಿಪೂರ್ಣ ಜ್ಞಾನಪಡೆದವರಾಗಿದ್ದು, ಉಳಿದ ಶ್ರುತಭಾಗವನ್ನು ವಿಕಲರೀತಿಯಿಂದ ತಿಳಿದವರಾಗಿದ್ದರು. ಇಂತೆಯೇ ದಶಪೂರ್ವಿವರ್ಗಾನಂತರದ ಏಕಾದಶ, ದಶ, ನವ, ಅಷ್ಟ ಮತ್ತು ಏಕ ಅಂಗಶ್ರುತಧರ ವರ್ಗಗಳ ಆಚಾರ್ಯರು ಆಯಾಯ ಸಂಖ್ಯೆಗಳಿಂದ ಸೂಚಿತವಾಗುವ ಅಂಗಶ್ರುತಭಾಗಗಳಲ್ಲಿ ಪರಿಪೂರ್ಣ ಜ್ಞಾನಪಡೆದವರಾಗಿದ್ದು ಉಳಿದ ಶ್ರುತ ಭಾಗಗಳನ್ನು ವಿಕಲರೀತಿಯಿಂದ ತಿಳಿದವರಾಗಿದ್ದರು.

ಐವರು ಶ್ರುತಕೇವಲಿಗಳು : ಜಂಬೂಸ್ವಾಮಿಯವರು ಕೇವಲಿಗಳಾಗಿ ವಿಹರಿಸುತ್ತಿದ್ದ ಸಮಯದಲ್ಲಿ ಭವಸ್ವಾಮಿಯವರು ಯತಿಸಂಘದ ನಾಯಕರಾಗಿದ್ದು ೪೦ ವರ್ಷಕಾಲ ಧರ್ಮೋಪದೇಶಮಾಡಿ ಸ್ವರ್ಗಸ್ಥರಾದರೆಂದು ಮಹಾಪುರಾಣದಲ್ಲಿ ಹೇಳಿದೆ.[1] ಇಂತೆಯೇ ಜಂಬೂಸ್ವಾಮಿಯವರು ಕೇವಲಜ್ಞಾನಸಂಪನ್ನರಾಗಿ ೩೮

1 ವರ್ಧಮಾನಸ್ವಾಮಿ ಪುರಾಣಭಾಗ_ಪದ್ಯ ಸಂಖ್ಯೆ ೧೩೪೦.

ವರ್ಷಕಾಲ ಜೀವಿಸಿದ್ದರೆಂದು ಹೇಳಿದೆಯಾದುದರಿಂದ, ಇವರ ನಿರ್ವಾಣಾನಂತರ (೪೦ – ೩೮ =) ೨ ವರ್ಷಕಾಲ ಭವಸ್ವಾಮಿಯವರು ನಿರ್ಗ್ರಂಥಧರ್ಮಪಂಥದ ಪ್ರಧಾನ ಆಚಾರ್ಯರಾಗಿದ್ದಿರಬೇಕೆಂದು ಫಲಿತವಾಗುವುದು. ಆದರೆ ಈ ಎರಡು ವರ್ಷಗಳ ಅವಧಿಯ ವಿಷಯವಾಗಿ ಪರಿಷ್ಕಾರಾರ್ಹವಾದ ಅಂಶವೊಂದಿದೆ. ಜಂಬೂ ಸ್ವಾಮಿಯವರ ನಿರ್ವಾಣಾನಂತರ ೧) ನಂದಿ-ವಿಷ್ಣು, ೨) ದೇವ-ನಂದಿ, ೩) ಅಪರಾ ಜಿತ, ೪) ಗೋವರ್ಧನ ಮತ್ತು ೫) ಭದ್ರಬಾಹು ಎಂಬ ಅನುಬದ್ಧ ಶ್ರುತಕೇವಲಿ ಗಳೈವರು ನಿರ್ಗ್ರಂಥಧರ್ಮಪಂಥದ ಪ್ರಧಾನಾಚಾರ್ಯರಾಗಿದ್ದರೆಂದು ಮತ್ತು ಇವ ರೆಲ್ಲರ ಸಮಷ್ಟಿಪಟ್ಟಕಾಲವು ೧೦೦ ವರ್ಷಗಳ ಅವಧಿಯುಳ್ಳದ್ದಾಗಿರುವುದೆಂದು ಸರ್ವ ಸಾಧಾರಣವಾಗಿ ಎಲ್ಲ ಐತಿಹ್ಯಮೂಲಗಳಲ್ಲಿಯೂ ಹೇಳಲಾಗಿದೆ. ಈ ಹೇಳಿಕೆಯಲ್ಲಿ, ಜಂಬೂಸ್ವಾಮಿಯವರ ತರುವಾಯ ಭವಸ್ವಾಮಿಯವರು ನಿರ್ಗ್ರಂಥಧರ್ಮಪಂಥದ ಪ್ರಧಾನಆಚಾರ್ಯರಾಗಿದ್ದ ೨ ವರ್ಷಗಳ ಅವಧಿಯು ಗಣನೆಗೊಂಡಿಲ್ಲದಿರುವುದು ಸ್ಪಷ್ಟವಿದೆ. ಇಂತಿದ್ದರೂ ಈ ಎರಡುವರ್ಷಗಳ ಅವಧಿಯು ಜಂಬೂಸ್ವಾಮಿಯವರ ತರುವಾಯದ ಪ್ರಥಮ ಅನುಬದ್ಧ ಶ್ರುತಕೇವಲಿಯವರೆಂದು ಸಂಸ್ತುತರಾಗಿರುವ ನಂದಿ-ವಿಷ್ಣುಸ್ವಾಮಿಯವರ ಪಟ್ಟಕಾಲದಲ್ಲಿ ಅಂತರ್ಗತವಾಗಿ ಗಣನೆಹೊಂದಿರುವು ದೆಂದು ಗುರುತಿಸಬಹುದಾಗಿದೆ: ಶ್ರೀ ವೀರನಿರ್ವಾಣಪಶ್ಚಾತ್ ೬೮೩ ವರ್ಷಪರ್ಯಂತ ಕಾಲದ ಮುನಿಪರಂಪರೆಯನುಕ್ರಮದಲ್ಲಿ ಶ್ರುತಜ್ಞಾನಧಾರೆಯು ಅನುಬದ್ಧರೀತಿ ಯಿಂದ ಉಳಿದುಬಂದ ಬಗೆಯನ್ನು ನಿರೂಪಿಸುವುದು ಈ ಐತಿಹ್ಯದ ಪ್ರಧಾನಉದ್ದೇಶ ವಾಗಿದೆ. ಅಂತೆಯೇ ಶ್ರುತಜ್ಞಾನಧರರಾಗಿಯೂ ಮತ್ತು ನಿರ್ಗ್ರಂಥಧರ್ಮಪಂಥದ ಪ್ರಧಾನರಾಗಿಯೂ ಇದ್ದ ಆಚಾರ್ಯಾನುಕ್ರಮದ ಪಟ್ಟಕಾಲಗಳ ನಿರ್ದೇಶನದ ಮೂಲಕ ಶ್ರುತಜ್ಞಾನಧಾರೆಯ ಅನುಬದ್ಧತೆಯನ್ನು ಈ ಐತಿಹ್ಯದಲ್ಲಿ ನಿರೂಪಿಸ ಲಾಗಿವೆಯೆಂಬುದರಲ್ಲಿ ಸಂಶಯವಿಲ್ಲ. ಇದರಂತೆ ಜಂಬೂಸ್ವಾಮಿಯವರು ಕೇವಲಿ ಗಳಾಗಿದ್ದ ಸಮಯದಲ್ಲಿ ದ್ವಾದಶಾಂಗಶ್ರುತಜ್ಞಾನಸಂಪನ್ನತೆಯನ್ನು ಪಡೆದು ಮುಂದೆ ನಿರ್ಗ್ರಂಥಧರ್ಮಪಂಥದ ಪ್ರಧಾನಾಚಾರ್ಯಪದವಿಯನ್ನಲಂಕರಿಸಿದ ನಂದಿ-ವಿಷ್ಣು ಮುನಿಯವರನ್ನು ಪ್ರಥಮಶ್ರುತಕೇವಲಿಯವರನ್ನಾಗಿ ಈ ಐತಿಹ್ಯದಲ್ಲಿ ನಿರ್ದೇಶಿಸ ಲಾಗಿದೆಯೆಂದು ವ್ಯಕ್ತವಾಗುವುದು. ಆದರೆ ಇವರು ಭವಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾಗಿರುವರೆಂಬುದು ನಿಶ್ಚಿತವಿದೆ. ಆದ್ದರಿಂದ ಇವರ ಅನುಬದ್ಧ ಶ್ರುತಕೇವಲಿಪಟ್ಟಕಾಲವೆಂದು ನಂ. ಆ. ಪಟ್ಟಾವಲಿಯಲ್ಲಿ ನಿರ್ದೇಶಿತವಾಗಿರುವ ೧೪ ವರ್ಷಗಳ ಅವಧಿಯಲ್ಲಿ, ಭವಸ್ವಾಮಿಯವರ ಆಚಾರ್ಯಪಟ್ಟ ಕಾಲದ ೨ ವರ್ಷಗಳ ಅವಶೇಷವು ಅಂತರ್ಗತವಾಗಿರುವುದೆಂದು ಫಲಿತವಾಗುವುದು.

ಶ್ರುತಕೇವಲಿಗಳೈವರಲ್ಲಿ ಮೊದಲಿನೀರ್ವರನ್ನು ಹೆಸರಿಸುವಲ್ಲಿ ಮತಭೇದಗಳಿರು ವುದು ಕಂಡುಬರುತದೆ. ಮೊದಲನೆಯವರನ್ನು ತಿಲೋಯಪಣ್ಣತ್ತಿಯಲ್ಲಿ 'ನಂದಿ,

ಎಂಬುದಾಗಿ ಹೆಸರಿಸಿದ್ದು, ಇತರೆಡೆಗಳಲ್ಲಿ 'ವಿಷ್ಣು' ಎಂದು ಹೆಸರಿಸಿದೆ, ಇಂತೆಯೇ ಎರಡನೆಯವರನ್ನು ಕೆಲವೆಡೆ 'ನಂದಿ' ಎಂಬುದಾಗಿಯೂ ಮತ್ತೆ ಕೆಲವೆಡೆ 'ನಂದಿಮಿತ್ರ' ಎಂಬುದಾಗಿಯೂ ಮತ್ತು ಶ್ರವಣಬೆಳಗುಳದ ೧ ನೇ ಅಂಕದ ಶಾಸನದಲ್ಲಿ 'ದೇವ' ಎಂಬುದಾಗಿಯೂ ಹೆಸರಿಸಿದೆ. ಸಾಧಾರಣವಾಗಿ ಯತಿದೀಕ್ಷೆ ಕೈಗೊಳ್ಳುವಾಗ ಗೃಹಸ್ಥಾಶ್ರಮದ ಹೆಸರನ್ನು ತ್ಯಜಿಸಿ, ನೂತನವಾಗಿ ನಾಮಕರಣಮಾಡುವ ರೂಢಿಯಿದೆ. ಈ ರೀತಿಯಾದ ನೂತನ ನಾಮಕರಣಾನಂತರವೂ ಯತಿಗಳನ್ನು ಅವರ ಗೃಹಸ್ಥಾಶ್ರಮದ ಹೆಸರಿನಿಂದಲೇ ನಿರ್ದೇಶಿಸಲಾಗಿರುವುದು ಕೆಲವು ಪ್ರಸಂಗಗಳಲ್ಲಿ ಕಂಡುಬರುತ್ತದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಒಬ್ಬರೇ ಆಚಾರ್ಯರನ್ನು ಬೇರೆ ಬೇರೆ ಹೆಸರುಗಳಿಂದ ನಿರ್ದೇಶಿಸಲಾಗಿರುವ ಉದಾಹರಣೆಗಳೂ ಇವೆ. ಆದ್ದರಿಂದ ಈ ಆಚಾರ್ಯರೀರ್ವರನ್ನು ಹೆಸರಿಸುವಲ್ಲಿ ಮೇಲ್ಕಂಡಂತೆ ಮತಭೇದಗಳಿಗೆಡೆಯಾಗಿದೆಯೆಂದು ಹೇಳಲವಕಾಶವಾಗುವುದು. ಇಷ್ಟಲ್ಲದೆ ಮೊದಲನೆಯವರಿಗೆ 'ನಂದಿ' ಎಂಬ ಉಪನಾಮವಿದ್ದಿರಬೇಕೆಂದೂ ಹೇಳಲವಕಾಶವಿದೆ.[1] ಶ್ರುತಕೇವಲಿಗಳೈವರಲ್ಲಿ ಮೊದಲ ನಾಲ್ವರ ಹೆಸರುಗಳು ಮತ್ತು ಪಟ್ಟಕಾಲಗಳ ನಿರ್ದೇಶನದ ಹೊರತಾಗಿ ಮತ್ತಾವ ವಿಶೇಷ ಐತಿಹ್ಯವೂ ಉಳಿದುಬಂದಿಲ್ಲ. ಅಂತಿಮ ಶ್ರುತಕೇವಲಿಗಳಾದ ಭದ್ರಬಾಹುಸ್ವಾಮಿಯವರ ಜೀವಿತೈತಿಹ್ಯವು ಕಥಾರೂಪದಲ್ಲಿ ಉಳಿದುಬಂದಿದೆ. ಆದರೆ ಈ ಕಥೆಗಳಲ್ಲಿ 'ಭದ್ರಬಾಹು' ಎಂಬ ಹೆಸರಿನ ಮತ್ತೀರ್ವರು ಆಚಾರ್ಯರ ಜೀವಿತೈತಿಹ್ಯಾಂಶಗಳು ಸಂಮಿಶ್ರವಾದ ಪರಿಣಾಮವಾಗಿ ಶ್ರುತಜ್ಞಾನಧರ ಆಚಾರ್ಯಪರಂಪರೆಯನ್ನು ಕ್ರಮದ ಪ್ರರೂಪಣೆಯಲ್ಲಿಯೂ ಅನೇಕ ಲೋಪದೋಷಗಳೇರ್ಪಟ್ಟಿವೆಯೆಂದು ಹೇಳಲವಕಾಶವಿದೆ. ಆದ್ದರಿಂದ 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರನ್ನಧಿಕರಿಸಿ, ಶ್ರವಣಬೆಳಗುಳದ ಶಾಸನಗಳಲ್ಲಿ ಹಾಗೂ ಕಥೆಗಳಲ್ಲಿ ಅಂತರ್ಗತವಾಗಿರುವ ಐತಿಹ್ಯಾಂಶಗಳನ್ನು ಇಲ್ಲಿ ಪರಿಶೀಲಿಸಿ ಪರಿಷ್ಕರಿಸಬೇಕಾದ ಆವಶ್ಯಕತೆಯಿದೆ.

ಶ್ರವಣಬೆಳಗುಳದ ಚಂದ್ರಗಿರಿಯ ಮೇಲಿರುವ ೧ ನೇ ಅಂಕದ ಶಾಸನ:

ಅಥ ಖಲು ಸಕಲಜಗದುದಯಕರಣೋದಿತಾತಿಶಯ.......................... ..................ಮಹಾವೀರ ಸವಿತರಿ ಪರಿನಿರ್ವೃತೇ—ಭಗವತ್ಪರಮರ್ಷಿಗೌತಮಗಣಧರಸಾಕ್ಷಾಚ್ಛಿಷ್ಯಲೋಹಾರ್ಯಜಮ್ಬುವಿಷ್ಣುದೇವಾಪರಾಜಿತಗೋವರ್ಧನಭದ್ರ-ಬಾಹುವಿಶಾಖಪ್ರೋಷ್ಠಿಲಕ್ಷತ್ರಿಕಾರ್ಯಜಯನಾಮಸಿದ್ಧಾರ್ಥಧೃತಿಷೇಣಬುದ್ಧಿಲಾದಿಗುರುಪರಮ್ಪರೀಣಕ್ರಮಾಭ್ಯಾಗತಮಹಾಪುರುಷಸನ್ತತಿಸಮವದ್ಯೋತಿತಾನ್ವಯಭದ್ರಬಾಹುಸ್ವಾಮಿನಾ ಉಜ್ಜಯಿನ್ಯಾಮಷ್ಟಾಙ್ಗಮಹಾನಿಮಿತ್ತ ತತ್ತ್ವಜ್ಞೇನ, ತ್ರೈಕಾಲ್ಯದರ್ಶಿನಾ ನಿಮಿತ್ತೇನ ದ್ವಾದಶಸಂವತ್ಸರಕಾಲವೈಷಮ್ಯಮುಪಲಭ್ಯ ಕಥಿತೇ

---

1 ಈ ವಿಷಯವನ್ನು ಕುರಿತು ಮುಂದೆ ವಿವರಣೆಯನ್ನು ಕೊಡಲಾಗುವುದು.

ಸರ್ವಸಙ್ಘ ಉತ್ತರಾಪಥಾದ್ದಕ್ಷಿಣಾಪಣವ್ಪ್ರಸ್ಥಿತಃ ಅರ್ಪೇಣೈವ ಜನಪದಮನೇಕ ಗ್ರಾಮಶತಸಂಖ್ಯಮುದಿತಜನಧನಕನಕಸಸ್ಯಗೋಮಹಿಷಾಜಾವಿಕಲಸಮಾಕೀರ್ಣ – ಮ್ಪ್ರಾಪ್ತವಾನತಃ ಆಚಾರ್ಯಃ ಪ್ರಭಾಚಂದ್ರೇಣಾಮಾವನಿತಲಲಲಾಮಭೂತೇಽಥಾ ಸ್ಮಿನ್ಕಟವಪ್ರನಾಮಕೋಪಲಕ್ಷಿತೇ ............................ ............................ ಸಮುತ್ತುಙ್ಗಶೃಙ್ಗೇ ಶಿಖರಿಣಿ ಜೀವಿತಶೇಷಮಲ್ಪತರಮವಬುದ್ಧ್ಯಾಧ್ವನಃ ಸುಚಕಿತಃ ತಪಸ್ಸಮಾಧಿಮಾರಾಧಯಿತುಮಾಪೃಚ್ಛ್ಯ ನಿರವಶೇಷೇಣ ಸಙ್ಘಂ ವಿಸೃಜ್ಯ ಶಿಷ್ಯೇಣೈಕೇನ ಪೃಥುಲಕಾಸ್ತೀರ್ಣತಲಾಸು ಶಿಲಾಸು ಶೀತಲಾಸು ಸ್ವದೇಹಂ ಸನ್ನ್ಯಸ್ಯಾರಾಧಿತರ್ವಾ ಕ್ರಮೇಣ ಸಪ್ತಶತಂ ಋಷೀಣಾಮಾರಾಧಿತಂ ಇತಿ ಜಯತು ಜಿನ ಶಾಸನಂ ಇತಿ ||

೧೭ ನೇ ಅಂಕದ ಶಾಸನ :

ಶ್ರೀ। ಭದ್ರಬಾಹು ಸಚಂದ್ರಗುಪ್ತ ಮುನೀಂದ್ರಯುಗ್ಮರ್ದಿನೊಪ್ಪೆವಲ್ । ಭದ್ರ ಮಾಗಿದ ಧರ್ಮ್ಮಮನ್ದುವಳಿಕೆವನ್ದಿನಿಪಳ್ಕುಲೋ........ ||

೪೦ ನೇ ಅಂಕದ ಶಾಸನ :

ಶ್ರೀಮನ್ಮುನೀಂದ್ರೋತ್ತಮರತ್ನವರ್ಗಾಃ ಶ್ರೀ ಗೌತಮಾದ್ಯಾಃ ಪ್ರಭವಿಷ್ಣವಸ್ತೇ ।
ತತ್ರಾಂಬುಧೌ ಸಪ್ತಮಹರ್ಧಿಯುಕ್ತಾಸ್ತತ್ಸಂತತೌ ಬೋಧನಿಧಿರ್ಬಭೂವ ||
ಶ್ರೀಭದ್ರಸ್ಸರ್ವತೋ ಯೋ ಹಿ ಭದ್ರಬಾಹುರಿತಿಶ್ರುತಃ ।
ಶ್ರುತಕೇವಲಿನಾಥೇಷು ಚರಮರ್ಪ್ಪರಮೋ ಮುನಿಃ ||
ಚಂಪ್ರಪ್ರಕಾಶೋಜ್ವಳಸಾಂದ್ರಕೀರ್ತಿಃ ಶ್ರೀ ಚಂದ್ರಗುಪ್ತೋಽಜನಿತಸ್ಯಶಿಷ್ಯಃ ।
ಯಸ್ಯ ಪ್ರಭಾವಾದ್ವನದೇವತಾಭಿರಾರಾಧಿತಃ ಸ್ವಸ್ಯಗಣೋ ಮುನೀನಾಂ ||[1]

ಶ್ರೀರಂಗಪಟ್ಟಣದ ಕಾವೇರಿನದಿಯ ಗೌತಮಿಕ್ಷೇತ್ರದ (೯ ನೇ ಶತಮಾನದ) ಎರಡುಶಾಸನಗಳು[2] :

೧) ಭದ್ರಬಾಹು ಚಂದ್ರಗುಪ್ತಮುನಿಪತಿ ಚರಣಮುದ್ರಾಂಕಿತ ವಿಶಾಳ ಶಿ.... ಮಾಳಿತ ಶ್ರೀ ಕಳ್ಬಪ್ಪು ತೀರ್ಥ....(ಮುಂತಾಗಿ)

೨) ಭದ್ರಬಾಹು ಚಂದ್ರಗುಪ್ತಮುನಿಪತಿ ಚರಣ ಲಂಛ ಆಂಛಿತ ವಿಶಾಳ ಶಿರಕಳ್ಬಪ್ಪು........(ಮುಂತಾಗಿ)

---

1 ೫೪ ನೇ ಮತ್ತು ೧೦೮ ನೇ ಅಂಕಗಳ ಶಾಸನಗಳಲ್ಲಿಯೂ ಸ್ಥೂಲರೀತಿಯಿಂದ ಇದೇ ಅಭಿಪ್ರಾಯದ ಉಕ್ತಿಗಳಿವೆ.

2 ಸನ್ಮಾನ್ಯ ರೈಸ್‌ರವರಿಂದ ಪ್ರಕಾಶಿತವಾಗಿರುವ ಶ್ರವಣಬೆಳಗುಳದ ಶಾಸನಗಳ ಗ್ರಂಥ–ಪು. ಸಂ. ೩–ಅಡಿಟಿಪ್ಪಣಿ ೬

ವಡ್ಡಾರಾಧನೆಯ-ಭದ್ರಬಾಹುಭಟ್ಟಾರರ ಕಥೆ[1] :

ಗಾಹೆ|| ಓಮೋದರಿಯೇ ಘೋರಾಏ ಭದ್ದಬಾಹೂ ಅಸಂಕಿಲಿಟ್ಠಮದೀ ।
ಘೋರಾಏ ತಿಗಿಂಚ್ಛಾಏ ಪಡಿವಣ್ಣೋ ಉತ್ತಮಂ ಅಟ್ಠಂ ||

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಪುರವರ್ಧನ[2] ಮೆಂಬುದು ನಾಡಲ್ಲಿ ಕೌಂಡಿಸೀ ನಗರಮೆಂಬುದು ಪೊಳಲದನಾಳ್ವೊಂ ಪದ್ಮರಥನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳ್. ..ಮತ್ತಾ ಅರಸನ ಪುರೋಹಿತಂ .... ಸೋಮಶರ್ಮನೆಂಬೊಂಪಾರ್ವನಾತನ ಭಾರ್ಯೆ ಪ್ರತ್ಯಕ್ಷ ಶ್ರೀಯಾದೇವತೆಯನೆ ಪೋಲ್ವ ಸೋಮಶ್ರೀಯೆಂಬೊಳಾಯಿರ್ವರ್ಗಂ ಮಗಂ ಪುಟ್ಟಿದೊಂ ತಾಯ್ಗಂ ತಂದೆಗಮೆಲ್ಲಾ ನಂಟರ್ಗೆಯುತ್ಸಾಹಮುಂ ವಿಭವಮುಮಂ ಪಡೆವುದರಿಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರದಿಟ್ಟೊಡಾತನುಂ....ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ....ಮುಂಜಿಬಂಧನಕ್ರಿಯೆಯುಂ ಮಾಡಿದಬಳಿಕ್ಕೆ ತನ್ನೋರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊರವೊಳಲೊಳ್ ಬಟ್ಟಾಡುತ್ತಿರೆ ಭದ್ರಬಾಹುವೆಂಬ ಮಾಣಿಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದರ ಮೇಗೋಳಿಯೊಳಟ್ಟಾಡುತ್ತಿರ್ಪನ್ನೆಗಂ

ಇತ್ತ ವರ್ಧಮಾನಭಟ್ಟಾರರ್ ಮೋಕ್ಷಕ್ಕೆವೋದಿಂ ಬಳಿಕ್ಕೆ ಚತುರ್ದಶಪೂರ್ವಧಾರಿಗಳಪ್ಪ ಶ್ರುತಕೇವಲಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟಾರರುಜ್ಜಯಂತಮಂ ವಂದಿಸಲೆಂದು ವಿಹಾರಿಸುತ್ತಂ ಒರ್ಪೊರಾ ಕೌಂಡಿಸೀ ನಗರಕ್ಕೆ ವಂದು ಪೊರವೊಳಲೊಳೊಂದು ಬಟ್ಟನಮೇಗೆ ಪದಿನಾಲ್ಕುಂ ಬಟ್ಟನೊಂದೊಂದರಮೇಗೋಳಿಯೊಳಟ್ಟಾಡುತ್ತಿರ್ಪ ಭದ್ರಬಾಹುಮಾಣಿಯುಂ ಗೋವರ್ಧನ ಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದುದ್ದೇಶಂಗೆಯ್ದೊರೀತನೆಮ್ಮಿಂ ಬಳಿಕ್ಕೆ ಚತುರ್ದಶಪೂರ್ವಧಾರಿಯಪ್ಪ ಮಾಹಾತ್ಮ್ಯನೊಡೆಯೊಂ ಭದ್ರಬಾಹುಭಟಾರರೆಂಬೊರಪ್ಪೊರೆಂದು ಬಗೆದಾತನವರ ಮನೆಗೊಡಗೊಂಡು ಪೋಗಿಪುವರ ತಾಯ್ತಂದೆಗಮಿಂತೆಂದರೀತನನೆಮಗೊಪ್ಪಿಸಿಮೆಲ್ಲಾ ಶಾಸ್ತ್ರಂಗಳುಮಂ ಕಲ್ಪಿಸಿ ಪಂಡಿತನಂ ಮಾಡಿ ನಿಮಗೊಪ್ಪಿಸುವೊಮೆಂದೊಡವರುಮಂತೆ ಗೆಯ್ಯಿಮೆಂಡೊಡಾತನನೊಡಗೊಂಡು ಪೋಗಿ ಕೆಲವು ದಿವಸದಿಂದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರ ನಿಘಂಟು ಕಾವ್ಯ ನಾಟಕಂ ಮೊದಲಾಗೋಡೆಯ ಲೋಕದೊಳುಳ್ಳ ಶಾಸ್ತ್ರಂಗಳೆಲ್ಲಮಂ ಕಲ್ಪಿಸಿದೊಡಧಿಗಮ ಸಮ್ಯಗ್‌ದೃಷ್ಟಿಯಾಗಿಯಾಗಮದೊಳೆಲ್ಲಮನರಿದು ಸಂಸಾರ ಶರೀರಭೋಗ

---

1 ಸನ್ಮಾನ್ಯ ಡಿ. ಎಲ್. ನರಸಿಂಹಾಚಾರ್ಯರವರಿಂದ ಸಂಪಾದಿತವಾದ ಕೃತಿಯಿಂದ ಸಂಕಲನಮಾಡಲಾಗಿದೆ.

2 ಅನ್ಯಕೃತಿಗಳಲ್ಲಿ 'ಪುಂಡ್ರವರ್ಧನ' ಎಂಬ ಹೆಸರಿದೆ.

ವೈರಾಗ್ಯಪರಾಯಣನಾಗಿ ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟಾರ ರೆಂದರೆಮಗಂತು ದೀಕ್ಷೆಯಂ ಕುಡಲಾಗ ಮಗನೆ ನಿನ್ನ ಪೊಳಲ್ಗೆ ನೀಂ ಪೋಗಿ ನಿನ್ನ ಕಲ್ತವಿದ್ಯೆಯಂ ಪಂಡಿತಿಕ್ಕೆಯುಮನಾಪೊಳಲೊಳ್ ನೆಗಳ್ಚಿ ನೆಗಳ್ದ ಪಂಡಿತರ್ಕಳೊಡನೆ ವಾದಂ ಗೆಯ್ದುವರಂ ಗೆಲ್ದು ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪಸರಿಸಿ ನಿನ್ನ ನಾವೊಡಗೊಂಡು ಬಂದುದರ್ಕೆ ತಾಯ್ತಂದೆಗಂ ಸಂತೋಸಂಮಾಡಿಯವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪಮಂ ಕುಡಲಕ್ಕುಮಂತೆಯಾಗದೆಂದೊಡೆ ಭದ್ರ ಬಾಹುಮಾಣಿಯುಂ ಭಟ್ಟಾರರಂ ವಂದಿಸಿ ತನ್ನ ಪೊಳಲ್ಗೆವೋಗಿ ತಾಯಂ ತಂದೆ ಯುಮಂ ಕಂಡು ಪೊಳಲೊಳ್‌ನೆಗಳ್ದಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶ ದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ ಪಸರಿಸಿ ತಾಯ್ತಂದೆಗಂ ಸಂತೋಸಂ ಮಾಡಿಯವರನೊಡಂಬಡಿಸಿ ಬಂದು ಗೋವರ್ಧನ ಭಟ್ಟಾರರ ಪಕ್ಕದೆ ಕುಮಾರ ಬ್ರಹ್ಮ ಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವು ದಿವಸದಿಂದೊಳಗೆ ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರ ಪಾರಾವಾರಗನಾಗಿ ಎಲ್ಲಾವೋದುಗಳುಮಂ ನೆರೆಯೋದಿ ಕಲ್ತು ಶ್ರುತದೊಳಪ್ಪ ಭಕ್ತಿ ಕಾರಣಮಾಗಿ ಪ್ರತಿಮಾಯೋಗಂ ನಿಂದೊರಂ ದೇವರ್ಕಳುಂ ಮನುಷ್ಯರ್ಕಳುಂ ಬಂದು ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆಲ್ಲಾ ಋಷಿಸಮುದಾ-ಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನ ಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ವೋದರ್.

ಇತ್ತ ಭದ್ರಬಾಹುಭಟ್ಟಾರರ್ ಚತುರ್ದಶಪೂರ್ವಧಾರಿಗಳುಂ ಕಡೆಯಾರಿಸಿಯ-ಯ್ದನೆಯ ಶ್ರುತಕೇವಲಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮನಗರಖೇಡಖರ್ವಡಮಡಂಬ ದ್ರೋಣಾಮುಖಗಳಂ ವಿಹಾರಿಸುತ್ತಿರ್ಪನ್ನೆಗಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಪಾಟಲೀಪುತ್ರಮೆಂಬುದು ಪೊಳಲ್ ..............................................

(ಅಲ್ಲಿ) ಸಂಪ್ರತಿ ಚಂದ್ರಗುಪ್ತಮಹಾರಾಜನರಸುಗೆಯ್ಯುತ್ತಿರೆ ಸಮಾಧಿಗುಪ್ತ ರೆಂಬಾಚಾರ್ಯರವಧಿಜ್ಞಾನಿಗಳ್ ವಿಹಾರಿಸುತ್ತಂ ಬರ್ಪರಾಪಾಟಳೀಪುತ್ರಕ್ಕೆ ವಂದು ಪೊರಪೊಳಲ ಬಹಿರುದ್ಯಾನ ವನದೊಳಿರ್ದರಂ ಸಂಪ್ರತಿಚಂದ್ರಗುಪ್ತಂ ಪೋಗಿ ವಂದಿಸಿ ಧರ್ಮಮಂ ಕೇಳ್ದು ತದನಂತರಂ ತನ್ನ ಭವಾಂತರಂಗಳಂ ಬೆಸಗೊಂಡೊಡೆ ಭಟಾರರ್ ಪೇಳಲ್‌ತೊಡಗಿದರ್

..............................................................

..........ನಂದಿಮಿತ್ರನಪ್ಪ ಕಿತ್ತಯ್ಯನೆನುಣಿಸಿಂಗೆಂದು ತಪಂಬಟ್ಟೇಳುದಿವಸಮುಪ-ವಾಸಂಗೆಯ್ದು ಮುಡಿಪಿ ಸಂನ್ಯಸನಂ ಗೆಯ್ದು ಮುಡಿಪಿ ದೇವಲೋಕದೊಳ್ ಕನಕ

ಧ್ವಜನೆಂಬೊಂ ದೇವನಾಗಿ ಪುಟ್ಟಿ.................ಪಲಕಾಲಂ ದೇವಲೋಕದ ಸುಖಮ-
ನನುಭವಿಸಿ ಬಂದಿಲ್ಲಿ ನೀಂ ಸಂಪ್ರತಿ ಚಂದ್ರಗುಪ್ತನಾಗಿ ಪುಟ್ಟಿದೆಯೆಂದು ಸಮಾಧಿ
ಗುಪ್ತ ಭಟ್ಟಾರರ್ ತನ್ನ ಭವಮಂ ಪೇಳ್ದೊಡಾದಮಾನುಮೊಸೆದು ಸಂತೋಷಂಬಟ್ಟು
ಭಟ್ಟಾರರಂ ವಂದಿಸಿ ತನ್ನರಮನೆಗೆ ವೋಗಿ ಇಂತು ಸಂಪ್ರತಿಚಂದ್ರಗುಪ್ತಮಹಾರಾಜಂ
ಪೃಥ್ವಿಯನೇಕಚ್ಛತ್ರಚ್ಛಾಯೆಯಿಂದಮಾಳುತ್ತಮುಜ್ಜೇನಿಯೊಳ್ ಸುಖದಿಂದಿರ್ಪ-
ನ್ನೆಗಂ

ಇತ್ತ ದ್ವಾದಶಾಂಗ-ಚತುರ್ದಶಪೂರ್ವಧಾರಿಗಳಪ್ಪ ಭದ್ರಬಾಹುಭಟ್ಟಾರರ್
ಪಿರಿದು ಋಷಿ ಸಮುದಾಯಂ ಬೆರಸು............ವಿಹಾರಿಸುತ್ತಂ ಬರ್ಪೊರುಜ್ಜೇನಿಗೆ
ವಂದಾ ಪೊಳಲ ಬಹಿರುದ್ಯಾನವನದೊಳಿರ್ದರದನರಸಂ ಕೇಳ್ದು ಪರಿವಾರಸಹಿತಂ
ಪೋಗಿ ಭಟಾರರಂ ವಂದಿಸೆ ತನ್ನರಮನೆಗೆವೋದನಿತ್ತ ಭಟ್ಟಾರರುಂ ಪಲವು ದಿವಸಮಾ
ಪೊಳಲೊಳಿರೆ ಮತ್ತೊಂದು ದಿವಸಂ ಋಷಿಸಮುದಾಯಮೆಲ್ಲಮಂ ಚರಿಗೆವೊಗಿಸುತ್ತ-
ಮೆಲ್ಲರುಮಂ ನಿರಿಸಿ ತಾವೊರ್ವರೆಯೊಂದು ಮನೆಯಂ ಪೊಕ್ಕಾಗಳಾಮನೆಯೊಳಾರುಮಿ-
ಲ್ಲೊಸರಿಗೆಯೊಳ್ ತೊಟ್ಟಿಲೊಳಿರ್ದವ್ಯಕ್ತ ಕಿರುಗೂಸು 'ಬೋಳಹ ಬೋಳಹ ಭಟ್ಟಾರಾ'
ಎಂದತ್ತಾಗಳಾವಚನಮಂ ಭಟ್ಟಾರರ್ ಕೇಳ್ದು ದಿವ್ಯವಾಕ್ಯಮೆಂದರಿದು ಕಾಲಪ್ರಮಾ-
ಣಮಂ ಬೆಸಗೊಂಡೊಡೆ ದ್ವಾದಶವರ್ಷಮೆಂದು ಪೇಳ್ದತ್ತು ಭಟ್ಟಾರರ್ ಕಾಲದೋ-
ಷದಿಂ ಪ್ರಜಾಪೀಡೆಯಾದಪ್ಪುದೆಂದರಿದು ಕಾರುಣ್ಯಬುದ್ಧಿಯಿಂದಾಹಾರಮಂ ಕೊಳ್ಳದೆ
ಅಲಾಭಂಮಾಡಿಯಂತೆ ಬಸದಿಗೆ ವೋಗಿ ಗೋಚಾರನಿಯಮಂಗೆಯ್ದು ಬಳಿಕ್ಕೆರಿಸಿಯ-
ರ್ಕಳ್ಗೆಲ್ಲಂ ಬಳಿಯನಟ್ಟಿ ಬರಿಸಿ ಇಂತೆಂದರೀನಾಡೊಳ್ ಪನ್ನೆರಡುವರುಷಂ ಬರೆಗಮ-
ನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದೀನಾಡೊಳಗಿರ್ದರಿಸಿಯರ್ಕಳ್ಗೆಲ್ಲಂ ಬೇಗಂ
ಬಳಿಯಟ್ಟಿ ಬರಿಸಿಂ ಪೋಪಂ ದಕ್ಷಿಣಾಪಥಕ್ಕೆಂದು ರಿಸಿಯರ್ಕಳ್ಗೆಲ್ಲಂ ಬಳಿಯುನಟ್ಟಿ
ದರಿತ್ತರಸನುಮಾದಿವಸದಿರುಳ್ ಪದಿನಾರುಂ ಪೊಲ್ಲ ಕನಸುಗಳಂ ಕಂಡನಾವುವೆಂ-
ದೊಡೆ : ...............................................................................

...................... ಇಂತೀ ಪದಿನಾರುಂ ಕನಸುಗಳಂ ಸಮ್ಯಗ್ದರ್ಶನಶುದ್ಧಿ ಮೊದ
ಲಾಗೊಡೆಯ ಗುಣಂಗಳಿಂ ಕೂಡಿದ ಸಂಪ್ರತಿ ಚಂದ್ರಗುಪ್ತಮಹಾರಾಜಂ ಪೊಲ್ಲ
ಕನಸುಗಳ ಕಂಡೆನೆಂದಂಜಿ ನೇಸರ್ಮೂಡಿದಾಗಳ್ ಭದ್ರಬಾಹುಭಟ್ಟಾರರಲ್ಲಿಗೆ
ಪೋಗಿ ವಂದಿಸಿ ತನ್ನ ಕಂಡ ಕನಸುಗಳಂ ಭಟ್ಟಾರರ್ಗೆ ಪೇಳ್ದವರ ಫಲಂಗಳಂಬೆಸ
ಗೊಂಡೊಡೆ ಭಟಾರಿರಿಂತೆಂದು ಪೇಳಲ್ತೊಡಗಿದರ್ ..........................
............................................................................ ಕಲ್ಪ
ವೃಕ್ಷದ ಕೋಡುಡಿದುದುಮಂ ಕಂಡುದರಿಂದಿಂದಿನ ದಿವಸಂ ಕಳೆದೊಡೆ ಕುಲಬಲವಿಭ-
ವದಿಂ ಪಿರಿಯರಪ್ಪಮಕುಟಬದ್ಧರಪ್ಪರಸುಗಳ ತಪಂಬಡುವರಲ್ಲರ್ ..............
ಪನ್ನೆರಡು ತಲೆಯ ಪಾವಂ ಕಂಡುದರಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂ

ಬರಂ ರೌದ್ರಪಸವಮುಕ್ಕುಂ ..............................................................................................................
.................................................ಎಂದಿಂತು ಪದಿನಾರುಂ ಕಂಡಕನಸುಗಳ ಫಲಂ ಗಳಂ.................................ಭಟಾರರ್ ಪೇಳೆ ಸಂಪ್ರತಿಚಂದ್ರಗುಪ್ತಮಹಾರಾಜಂ ಕೇಳ್ದು ಮತ್ತಂದಿನ ದಿವಸಂ ಕಳೆದೊಡೆ ಮಂಡಳಿಕರ್ ಜಿನದೀಕ್ಷೆಯಂ ಕೈಕೊಳ್ಳರೆಂ-ಬುದಂ ಕೇಳ್ದಾದಮಾನುಂ (ಸಂಸಾರಕ್ಕೆ ಪೇಸಿ) ಭೀತನಾಗಿ ಸಿಂಹಸೇನನೆಂಬ ತನ್ನ ಪಿರಿಯಮಗಂಗೆ ರಾಜ್ಯಪಟ್ಟಂಗಟ್ಟಿ ಭದ್ರಬಾಹುಭಟ್ಟಾರರ ಪಕ್ಕದೆ ಪಲಂಬರರಸು ಮಕ್ಕಳ್ವೆರಸಾದಿವಸವೆ ತಪಂಬಟ್ಟಂ.

ಮತ್ತಿತ್ತ ಮಧ್ಯದೇಶದೊಳಿರ್ದ ರಿಸಿಯರ್ಕಳ್ಗೆಲ್ಲಂ ಬಳಿಯಟ್ಟಿ ಬರಿಸಿ ಭಟ್ಟಾರ ರಿಂತೆಂದರ್ ಪನ್ನೆರಡು ವರ್ಷಂ ಬರೆಗಮೀ ನಾಡೊಳನಾವೃಷ್ಟಿಯಾಗಿ ಮಹಾರೌದ್ರ ಪಸವಮುಕ್ಕುಂ ಮಧ್ಯಮದೇಶಮೆಲ್ಲಂ ಪಾಳಕ್ಕುಮೀ ನಾಡೊಳಿರ್ದ ರಿಸಿಯರ್ಕಳ್ಗೆ ಬ್ರತಭಂಗಮುಪ್ಪುದದರಿಂ ಪೋಪಂ ದಕ್ಷಿಣಾಪಥಕ್ಕೆಂದಾಚಾರ್ಯರ್ಕಳ್ ಸಹಿತ ಮಿಚ್ಚಾರ್ಸಿರ ರಿಸಿಸಮುದಾಯಮುಂ ಸಂಪ್ರತಿ ಚಂದ್ರಗುಪ್ತಮುನಿಯುಂಬೆರಸು ದಕ್ಷಿಣಾ ಪಥಕ್ಕೆ ಪೋದರಿತ್ತ ರಾಮಿಲಾಚಾರ್ಯರುಂ, ಸ್ಥೂಲಾಚಾರ್ಯರುಂ, ಸ್ಥೂಲಭದ್ರಾ ಚಾರ್ಯರುಮಿಂತೀ ಮೂವರಾಚಾರ್ಯರುಂ ಭಟಾರರೊಡನೆ ಪೋಗಲೊಲ್ಲದೆ ತಂತಮ್ಮ ಋಷಿಸಮುದಾಯಂಬೆರಸು ಸಿಂಧುವಿಷಯಕ್ಕೆ ಪೋದರಿತ್ತ ಭಟ್ಟಾರರುಂ ಪಿರಿದು ಋಷಿ ಸಮುದಾಯಂ ಬೆರಸು ಗ್ರಾಮನಗರಖೇಡಖರ್ವಡಮಡಂಬಪಟ್ಟಣ ದ್ರೋಣಾಮುಖಂ ಗಳಂ ಕಳಿದು ಪೋಗಿ ಕಳ್ಬಪ್ಪು ನಾಡನೆಯ್ದಿ ಪೋಗುತ್ತಂ ಭದ್ರಬಾಹು ಭಟ್ಟಾರರ್ ತಮ್ಮಾಯುಷ್ಯಪ್ರಮಾಣಮರಿದಾಮಿಲ್ಲಿ ಸಂನ್ಯಸನಂ ಗೆಯ್ದಪ್ಪೆವು ನೀಮೆಲ್ಲಂ ಪೋಗಿ ಮೆಂದು ತಮ್ಮ ಪಿರಿಯ ಶಿಷ್ಯರ್ ದಶಪೂರ್ವಧಾರಿಗಳ್ ವಿಶಾಖಾಚಾರ್ಯರೆಂಬೊ ರಲ್ಲಿಂ ಬಳಿಯ ಮಾರ್ಯ ಸುಹಸ್ತಿಗಳು ಮರಭದ್ರರುಂ ಸುಭದ್ರಮಿತ್ರರುಂ ಮಹಾ ಗಿರಿಯುಂ ಸುಮತಿಯುಂ ಮಹಾಮತಿಯುಂ ವಿಶಾಖನಂದಿಯುಮೆಂದಿವರ್ಗಳೆಲ್ಲರುಮ-ನಾಚಾರ್ಯರ್ ಮಾಡಿ ದ್ರವಿಳ ವಿಷಯಕ್ಕೆ ಪೋಗಿಮೆಂದು ವಿಶಾಖಾಚಾರ್ಯರೊಡನೆ ಎಣ್ಛಾಸಿರ್ವರ್ ರಿಸಿಯರನಟ್ಟಿದರ್ ಚಂದ್ರಗುಪ್ತಮುನಿಯುಮನಿವರೊಡನೆ ಪೋಗಿ ಮೆಂದು ಭಟ್ಟಾರರ್ ಕೀರಿ ಪೋಗಲ್ವೇಳ್ದೊಡಾಮುಂ ಪೋಗಲೆಲ್ಲವು ನಿಮ್ಮಡಿಗಳ್ಗೆ ವಿನಯಂಗೆಯ್ಯುತ್ತಮಿರ್ದಪ್ಪೆಮೆಂದು ಪೋಗಲೊಲ್ಲದೆ ಪಕ್ಕದಿರ್ದರುಳಿದರೆಲ್ಲಂ ಪೋದ ರಿತ್ತ ಭದ್ರಬಾಹುಭಟ್ಟಾರರ್ ಕಳ್ಬಪ್ಪುನಾಡಡವಿಯ ಬೆಟ್ಟದ ಮೇಗಣೇಕಸಿಲೆಯ ಮೇಲಿರ್ದು ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಪೂರ್ವ-ಕಂ ಸಂನ್ಯಸನಂ ಗೆಯ್ದರ್.

ಇತ್ತ ಚಂದ್ರಗುಪ್ತ ಮುನಿಯುಮುಪ್ಪೋಪವಾಸಂಗೆಯ್ದಿರ್ದೊರಂ ಭಟ್ಟಾರ ರೆಂದರಾಮುಂ ನೋಂತಿರ್ಪೆವು ನೀಮುಂ ಚರಿಗೆವುಗುವುದಲ್ತೆಯೆಂದೊಡೆ ಭಟ್ಟಾರಾ ಊರಿಲ್ಲ ಕೇರಿಯಿಲ್ಲೀಯಡವಿಯೊಳೆಲ್ಲಿಗೆ ಚರಿಗೆವುಗುವುದೆಂದೊಡೆ ಭಟ್ಟಾರರೆಂದರ್

ಕಾಂತಾರ ಭೈಕ್ಷಮೆಂಬುದಾಗಮದೊಳ್ ಪೇಳ್ದುದಾರಾನುಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿರಿಸುವರಪ್ಪುದಱಿಂದೆ ಚರಿಗೆವುಗುವುದೆಂದೊಡೆ ಅಂತೆಗೆಯ್ವೆನೆಂದು ದೇವರಂ ಬಂದಿಸಿ ಚರಿಗೆವೊಕ್ಕಡವಿಯಂ ತೊಟಿಲ್ವಲ್ಲಿಯೊಂದು ಮರದ ಪೊಟಲೊರ್ದು ಮಾಣಿಕದ ಮುತ್ತಿನ ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ ಭೈಕ್ಷಮಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು ತೊಟಲ್ದಲಾಭಮಾಗಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡಡವರುಂ ತಮ್ಮ ಕಂಡುದಂ ಪೇಳ್ದೊಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡಂತೆಗೆಯ್ವೆಮೆಂದು ಮಱುದಿವಸಂ ಚರಿಗೆವೊಕ್ಕಡವಿಯಂ ತೊೞಲ್ವಲ್ಲಿ ಯೊಂದು ಮರದ ಕೆಳಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ ನೆರೆಯೆ ತೊಟ್ಟುಟ್ಟು ಮಂಗಳವಸದನಂಗೊಂಡು ದಿವ್ಯಸ್ತ್ರೀ ಬಂದು ನಿರಸಿದೊಡೆ ಇಂತೆಂದರಬ್ಬಾ ನೀನೊ- ರ್ವಳೆಯೆ ಪೆಱರಾರುಮಿಲ್ಲಿಂತು ರಿಸಿಯರ್ಕಳ್ಗೆ ನಿಲಲಾಗದೆಂದು ಪೇಳ್ದು ತಮ್ಮಿರ್ದೆಡೆಗೆ ವೋದೊಡೆ ಭಟ್ಟಾರರಿಂತೆಂದರ್ ನಿಲೆವಟ್ಟುದೆ ಎಂದು ಬೆಸಗೊಂಡೊಡವರಿಂತೆಂದರ್ ಒರ್ವಳ್ ದಿವ್ಯಸ್ತ್ರೀ ಸರ್ವಾಭರಣಭೂಷಿತೆಯೊಂದು ಮರದ ಕೆಳಗೆ ಬೋನಮನೊಡ್ಡಿ ದಿರ್ದಿರಂ ಬಂದು ನಿರಿಸಿದೊಡೊರ್ವಳೆ ಪೆಱರಾರುಮಿಲ್ಲೆಂದೆನೆ ನಿಲ್ಲದೆ ಬಂದೆಮೆಂದೊ ಳ್ಪಿಕೆಯ್ದಿರೆಂದೊರಿಂತು ಪತ್ತು ಪವಾಸಂಗೆಯ್ದು ಪನ್ನೊಂದನೆಯ ದಿವಸದಂದು ಚರಿಗೆ ವೊಕ್ಕಡವಿಯಂ ತೊೞಲ್ವನ್ನೆಗಂ ಪಿರಿದೊಂದು ಪೊೞಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ ದೇವಾಲಯಂಗಳುಮಾನೆ ಕುದುರೆಗಳುಂ ಮಾನಸರ ಬರುವುಮಂ ಪೋಗುಮಂ ಕಂಡಿನಿತು ದಿವಸಮಿ ಮರಗಳಗಿಡುಗಳ ಪೊದರುಗಳ ಮಱೆ ಗಳೊಳೀಪೊೞಲಂ ಕಂಡೆಮಿಲ್ಲೆಂದು ಮನದೊಳ್ ಬಗೆದು ಪೊೞಲೊಳಗೆ ಚರಿಗೆ ವೊಕ್ಕಾಗಳೊರ್ವಳ್ ದಿವ್ಯಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿರಿಸಿ ತನ್ನ ಮಾಡ ಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದ ಮಾನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುೞೆ ಮಗುೞೆ ಬಡ್ಡಿಸೆ ಚರಿಗೆಮಾಡಿ ಪರಸಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡೊಡೆ ನಿಲೆವಟ್ಟುದೆಂದೊಡೆಲ್ಲಿ ನಿಂದಿರೆಂದು ಬೆಸಗೊಂಡೊಡಿಂತೆಂದರ್ ಭಟ್ಟಾರಾ ಇನಿತು ದಿವಸಂ ಮರಂಗಳ ಪೊದರುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲಿಂದಿನಿಸಾನುಂ ತಿಣ್ಣಂ ತೊೞಲ್ವಲ್ಲಿ ಪಿರಿದೊಂದು ಪೊೞಲಂ ಕಂಡು ಚರಿಗೆವೊಕ್ಕೊಡೊರ್ವಳ್ ದಿವ್ಯಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿರಿಸಿ ತನ್ನ ಮನೆಗೊಡಗೊಂಡು ಪೋಗಿ ಕಾಲಂ ಕರ್ಚಿ ಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದಮಾನುಂ ಭಕ್ತಿಯಿಂದಂ ದಿವ್ಯಾಹಾರಂ ಗಳಂ ಬಡ್ಡಿಸೆ ಶ್ರಮಂ ಪೋಗೆ ಚರಿಗೆಮಾಡಿ ಪರಸಿ ಬಂದೆಮೆಂದು ಭಟ್ಟಾರರ್ಗೆ ಪೇಳ್ದೊಡೊಳ್ಳಿತ್ತಾಯಿತ್ತೆಂದು ಸಂತೋಸಂಬಟ್ಟಿರ್ದರಿಂತು ದಿವಸಕ್ಕಂ ಪೊೞಲ್ಗೆ ವೋಗಿ ಚರಿಗೆಮಾಡುವರಿತ್ತ ಭದ್ರಬಾಹುಭಟ್ಟಾರರ್ ಮುನ್ನೆ ತಮ್ಮ ತಪಂಗೆಯ್ವಂ ದೆಲ್ಲಾ ಕಾಲಮುಮವನೋದರ್ಯ ಚರಿಗೆಮಾಡಿ ಪಸಿವಂ ಸೈರಿಸಿ ತಮ್ಮ ಮೆಯ್ಯಂ

ಕ್ಷಯಕ್ಕೆ ತಂದು ಸಂನ್ಯಸನಂಗೆಯ್ದು ಪಲವು ದಿವಸದಿಂದಂ ಪಸಿವುಂ ನೀರಳ್ಕೆಯುಮಂ ಸೈರಿಸಿ ಶುಭಪರಿಣಾಮದಿಂದಂ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳಂ ಸಾಧಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯೊಂ ಅಮಿತ ಕಾಂತಿಯೆಂಬೊಂ ದೇವನಾಗಿ ಪುಟ್ಟಿದೊಂ

ಚಂದ್ರಗುಪ್ತಮುನಿಯುಂ ಭಟ್ಟಾರರ ನಿಸಿದಿಗೆಯಂ ಬಂದಿಸುತ್ತಮಾದೇವತೆ ಬೆಸಕೆಯ್ಯೆ ಚರಿಗೆಮಾಡಿ ತಪಂಗೆಯ್ಯುತ್ತಂ ಪನ್ನೆರಡು ವರುಷಂಬರೆಗಮಿಂತಿರ್ಪನ್ನೆಗ ಮಿತ್ತ ತಿಮುಳನಾಳ್ಗೆ ಪೋದ ಋಷಿಸಮುದಾಯಮೆಲ್ಲಂ ಪನ್ನೆರಡು ವರುಷಂಬರೆಗಂ ಸುಖದೊಳಿರ್ದು ನಿರುಪಸರ್ಗದಿಂ ದರ್ಶನ ಜ್ಞಾನಚಾರಿತ್ರಂಗಳಂ ಪ್ರತಿಪಾಳಿಸಿ ಬಡಗ ನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇಳೆ ಕೇಳ್ದರಿದು ಭಟ್ಟಾರರ ನಿಸಿದಿಗೆಯಂ ಬಂದಿಸಿ ಪೋಪೆನೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ಋಷಿಸಮುದಾಯಮೆಲ್ಲಂ ದಕ್ಷಿಣಾಪಥದಿಂದಂ ಬಂದು ಭಟ್ಟಾರರ ನಿಸಿದಿಗೆಯನೆಯ್ದಿ ದಾಗಳ್ ಚಂದ್ರಗುಪ್ತ ಮುನಿಯುಂ ರಿಸಿಯರ್ಕಳ ಬರವಂ ಕಂಡಿದಿರಂ ಬಂದು ಋಷಿ ಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರೀಯಡವಿಯೊಳಿ-ನ್ನೆಗಮಿವರ್ ಕಂದಮೂಲಫಲಂಗಳಂ ತಿಂದು ತೊರೆಯ ಪಳ್ಳದ ನೀರ್ಗಳಂ ಕುಡಿದು ಪನ್ನೆರಡು ವರುಷಂಬರೆಗಮೆಂತು ಬರ್ದೊರೆಂದು ತಮ್ಮೊಳ್ ನುಡಿದು ಮತ್ತಂ ತಲೆ ನವಿರ್ ಬೆಳೆದುದುಮಂ ಕಂಡಾರಪ್ಪೊಡಂ ಪ್ರತಿವಂದನೆಯಂ ಕೊಟ್ಟುದಿಲ್ಲ ಮತ್ತಾ ರಿಸಿಯರ್ಕಳನಿಬರುಮಾ ದಿವಸಮುಪವಾಸಂಗೆಯ್ದರ್ಚಿಸಿ ಕ್ರಿಯೆಗೆಯ್ದು ಭಟ್ಟಾರರ ನಿಸಿದಿಗೆಯಂ ಬಂದಿಸಿಯಾದಿವಸಮಲ್ಲಿಯೆಕೆಂದು ಮರುದಿವಸಂ ಪೋಪಾಗಳ್ ಚಂದ್ರ ಗುಪ್ತ ಮುನಿಗಳೆಂದರ್ ಭಟಾರಾ ನಿನ್ನೆ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟಿರಿಂ-ದಿನ ದಿವಸಮಿಲ್ಲಿರ್ದು ಚರಿಗೆವೊಕ್ಕು ಸೇದೆಯನಾರಿಸಿ ನಾಳೆ ಪೋಕೆಂದೊಡೆ ಭಟ್ಟಾರ ರೆಂದರೂರಿಲ್ಲ ಕೇರಿಯಿಲ್ಲೆಲ್ಲಿ ಚರಿಗೆವುಗುವಮಂತು ಕೆಮ್ಮನೇಕೆಮ್ಮಂ ತಾಂಗಿದಪಿರೆಂ-ದೊಡೆ ಪಿರಿದೊಂದು ಪೊಳಲುಂಟು ನೀಮುಂ ಸಂಕ್ಲೇಶಂ ಬಡದಿರಿಂದಿನ ದಿವಸಮಿ-ರ್ಕೆಂದೊಡನಿಬರುಮೆಂದರಿಂದಿನ ದಿವಸಮುಪವಾಸಂಗೆಯ್ದ ಪ್ಪೊಡಮಿವರೆಂಬುದನಿಂಬು ಕೆಯ್ವಮೆಂದಿರ್ದೊಡೆ ಮಧ್ಯಾಹ್ನಮಪ್ಪಾಗಳ್ ದೇವರಂ ಬಂದಿಸವೇಳ್ದೊಡನಿಬರುಂ ಬಂದಿಸಿ ಚಂದ್ರಗುಪ್ತಮುನಿಯ ಬಳಿಯುಂ ಋಷಿಸಮುದಾಯಮೆಲ್ಲಂ ತಗುಳ್ದು ಕಿರಿ ದಂತರಮಂ ಪೋಪನ್ನೆಗಂ ಪಿರಿದೊಂದು ಪೊಳಲಂ ಕಂಡು ಚರಿಗೆವೊಕ್ಕನಿಬರುಮಂ ನಿರಿಸಿ ಕೆಲ ರಿಸಿಯರುಮಾಚಾರ್ಯರ್ಕಳುಂ ಬೆರಸು ತಾಮೊಂದುಮನೆಯೊಳ್ ನಿಂದ-ರಿಂತನಿಬರುಂ ದಿವ್ಯಾಹಾರಂಗಳಂ ಶ್ರಮಂ ಪೋಗೆ ಚರಿಗೆಮಾಡಿ ತಮ್ಮಾವಾಸಕ್ಕೆ ಬಂದು ವಿಶಾಖಾಚಾರ್ಯರೆಂದರ್ ಬ್ರಹ್ಮಯ್ಯಾ ಕಾಲಂಕರ್ಚಲ್ ಗುಂಡಿಗೆಯಂ ಕೊಂಡು ಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ ಗುಂಡಿಗೆಯನುಂಡ ಮನೆಯೊಳ್ ಮರೆದು ಬಂದೆನೆನೆ ಬೇಗಂ ಪೋಗಿ ಕೊಂಡು ಬಾಯೆನೆ ಬ್ರಹ್ಮಯ್ಯಂ ಪೋಗಿಪೊಳ

ಲೆಡೆಯಂ ಕಾಣದಡವಿಯೆಲ್ಲಮಂ ತೊಳಲ್ದು ನೋಡಿ ಗುಂಡಿಗೆಯಂ ಕಾಣದತ್ತಮಿತ್ತಂ
ನೋಳ್ಪನ್ನೆಗಮೊಂದು ಮರದ ತುತ್ತತುದಿಯೊಳಿರ್ದೆಳಲ್ವ ಗುಂಡಿಗೆಯಂ ಕಂಡುಬಂದು
ಗುರುಗಳ್ಗಿಂತೆಂದಂ ಭಟ್ಟಾರಾ ನಾಮುಂಡೆಡೆಯೊಳಾ ಪೊಳಲಿಲ್ಲ ನಮ್ಮುಂಡ ಮನೆ
ಯುಮಿಲ್ಲ ಗುಂಡಿಗೆಯುಮೊಂದು ನಿಡಿಯ ಮರದ ತುತ್ತತುದಿಯೊಳಿರ್ದುದಾರಾನು
ಮೇಳಲ್ ಬಲ್ಲೊರನಟ್ಟುಗೆಂದೊಡನಿಬರುಂ ರಿಸಿಯರ್ಕಳೆಲ್ಲಂ ಚೋದ್ಯಂಬಟ್ಟು
ನೋಡಲ್ಪೋಗಿ ಪೊಳಲಂ ಕಾಣದಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದೆ
ಳಲ್ವ ಗುಂಡಿಗೆಯಂ ಕಂಡು ತೆಗೆಯಿಸಿಕೊಂಡು ಪೋಗಿ ಚಂದ್ರಗುಪ್ತಮುನಿಯುನನಿ
ಬರುಂ ರಿಸಿಯರ್ಕಳ್ ನೆರೆದಿಂತೆಂದರಾಮುಂ ನಿಮ್ಮನೀಯಡವಿಯೊಳ್ ಕಂದಮೂಲ
ಫಲಂಗಳಂ ತಿಂದು ಪಳ್ಳದ ನೀರಂ ಕುಡಿದು ಇನಿತು ಕಾಲಂ ಬರ್ದಿರೆಂದು ನಿಮ್ಮಂ
ಬಗೆದು ಬಂದಿಸಿದೆಮಿಲ್ಲಿದರ್ಕೆ ನೀಮುಂ ಮನದೊಳೇವಂಗೊಳ್ಳದೆ ಕ್ಷಮಿಯಿಸಿಮೆಂದು
ನುಡಿದು ವಂದಿಸಿ ಮತ್ತಮಿಂತೆಂದರ್ ನೀಮುಂ ದೇವತಾಧಿಷ್ಠಿತರಿರ್ ನಿಮಗೆ ದೇವತೆ
ಗಳ್ ಬೆಸಕೆಯ್ವುವು ದೇವತೆಗಳ್ ಮಾಡಿದಾಹಾರಮಂ ನೀಮಿನೆಗಮುಂಡು ತಪಂ
ಗೆಯ್ದಿರಿನ್ನುಣಲ್ವೇಡ ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆಮಾಡಲಾಗ
ದೆಂದು ಬಾರಿಸಿಯುವರ್ಗೆ ಲೋಚುಗೆಯ್ದು ಬ್ರತಂಗಳನೇರಿಸಿ ಪಡಿಕಮಣಂಬೇಳ್ದೊಡ
ಗೊಂಡುತ್ತರಾಪಥಕ್ಕೆ ಪಯಣಂಬೋಗಿ ಕತಿಪಯ ದಿವಸಂಗಳಿಂದಂ ಮಧ್ಯದೇಶಮ
ನೆಯ್ದಿಯಾ ನಾಡೊಳ್ ಋಷಿಸಮುದಾಯಮೆಲ್ಲಂ ನಿರುಪಸರ್ಗಮಿರ್ದತ್ತು

ಮತ್ತಿತ್ತ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರು
ಮೆಂತು ಮೂವರುಂ ಸಿಂಧು ವಿಷಯಕ್ಕೆ ತಂತಮ್ಮ ಋಷಿಸಮುದಾಯಂ ಬೆರಸು
ಪೋದೊಡಾ ನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾಘೋರಂ
ಪಸವಾದೊಡಲ್ಲಿಯ ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟಾರಾ
ಲವಟುಗಳ ಕೈಯಲ್ ಪಗಲುಣಲುಮಡಲುಂ ಪೆರಲಾಗ ಮೇಲ್ವಾಯ್ದೆಳೆದು
ಕೊಂಡುಂಬರ್ ಲೋಗರೆಲ್ಲಮವರ ಭಯಕ್ಕೆ ಪಗಲಡುಗೆಯಂ ಬಿಸುಟ್ಟಿರುಳಟ್ಟುಣಲ್
ತಗಲ್ದರದರಿಂ ನೀಮುಮಿಂದಿತ್ತಿರುಳ್ ಭೈಕ್ಷಭಾಜನಂಗಳಂ ಕೊಂಡು ಪೋಗಿ ಶ್ರಾವ
ಕರ ಮನೆಗಳಂ ತೊಳಲ್ದು ಭೈಕ್ಷಂ ಬೇಡಿ ಕೊಂಡು ಕೂಳನಿರುಳ್ ತಂದಿಟ್ಟು ಪಗಲು-
ಣ್ಬುದೆಂದೊಡಂತೆ ಗೆಯ್ವಮೆಂದು ಇರುಳ್ ತೊಳಲ್ದು ಭೈಕ್ಷಮಂ ತಂದು ಮಡಗಿಟ್ಟು
ಪಗಲುಣ್ಬೊರಾದರಿಂತೀ ಪಾಂಗಿನೊಳ್ ಕಾಲಂ ಸಲೆ ಮತ್ತೊಂದು ದಿವಸಮೋರ್ವ
ನಿರ್ಗ್ರಂಥಯತಿ ಭೈಕ್ಷಭಾಜನಮಂ ಕೊಂಡು ಶ್ರಾವಕರ ಮನೆಗಳನಿರುಳ್ ಭೈಕ್ಷಂ
ಬೇಡಿ ತೊಳಲುತ್ತಂ ಪೋಪರೊಂದು ಮನೆಯಂ ಪೊಕ್ಕು ಭೈಕ್ಷಮಂ ಬೇಡಿದೊಡೊ-
ರ್ವಳ್ ಪೊಸ ಶ್ರಾವಕಿ ಬಸಿಪ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರು
ಳೊಳ್ ಕಳ್ತಲೆಯೊಳಾ ನಿರ್ಗ್ರಂಥಮಪ್ಪರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿರಿಳಿ
ದತ್ತದಂ ಕಂಡು ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟ್ಟಾರಾ

ಕಾಲಮಪ್ಪೊಡೆ ಕೆಟ್ಟತ್ತೊಳ್ಳಿತ್ತಪ್ಪ ಕಾಲಮಾದಂದು ಪ್ರಾಯಶ್ಚಿತ್ತಂಗೊಂಡು ನಿಮ್ಮ
ತಪಂಗಳೊಳ್ ನಿಲ್ಲಿಮೀಗಳೀಪಸವು ಕಳಿವನ್ನೆಗಂ ನೀಮುಮೆಡದ ಕೈಯನೆಳಲಿಕ್ಕಿಯ-
ರ್ಧಗಪ್ಪಡಮನೆಡದಮುಯ್ಪಿನಮೇಗಿಕ್ಕಿ ಒಳಗೆ ನಿರ್ಗ್ರಂಥಮಪ್ಪ ರೂಪಂ ತಾಳ್ದಿ
ಬಲದ ಕೈಯೊಳ್ ಭೈಕ್ಷದ ಭಾಜನಮಂ ಪಿಡಿದು ತೊಳಲ್ದು ಭೈಕ್ಷಮಂ ಬೇಡಿ ಮಡ
ಗಿಟ್ಟು ಪಗಲುಣ್ಣಿಮೆಂದೊಡವರ್ಗಳುಮಂತೆ ಗೆಯ್ವಮೆಂದವರ ಪೇಳ್ದ ಪಾಂಗಿನೊಳ್
ನೆಗಳ್ದು ಪಸಮಂ ನೀಗಿ ಕಾಲಮೊಳ್ಳಿತ್ತಾದೊಡೆ ರಾಮಿಲಾಚಾರ್ಯರುಂ ಸ್ಥೂಲಾ-
ಚಾರ್ಯರುಂ ಸ್ಥೂಲಭದ್ರಾಚಾರ್ಯರುಮಂತು ಮೂವರುಂ ತಂತಮ್ಮ ಋಷಿಸಮು
ದಾಯಂ ಬೆರಸು ವಿಹಾರಿಸುತ್ತಂ ಮಧ್ಯದೇಶಕ್ಕೆ ರಿಸಿಯರ್ಕಳಿರ್ದಲ್ಲಿಗೆ ಬಂದೊಡೆ
ವಿಶಾಖಾಚಾರ್ಯರ್ ಮೊದಲಾಗೊಡೆಯ ಆಚಾರ್ಯರ್ಕಳವರನಿಂತೆಂದರ್ ನೀಮೆಲ್ಲ-
ಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥರೂಪುಮಂ ಕೈಕೊಂಡು ಬ್ರತಂಗಳನೇರಿಸಿ
ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೇಳ್ದು ತಪದೊಳ್ ನಿಲ್ಲಿಮೆಂದೊಡಂತೆಗೆಯ್ವ
ಮೆಂದು ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ತಂತಮ್ಮ ಋಷಿಸಮುದಾಯಂ
ಬೆರಸು ವಿಶಾಖಾಚಾರ್ಯರ ಪಕ್ಕದೆ ಅರ್ಧಗಪ್ಪಡಮಂ ಬಿಸುಟ್ಟು ಪಡಿಕಮಣಂಗೇಳ್ದು
ಪ್ರಾಯಶ್ಚಿತ್ತಂಗೊಂಡು ಯಥೋಕ್ತಮಪ್ಪ ಚಾರಿತ್ರದೊಳ್ ನಿಂದರ್ ಸ್ಥೂಲಭದ್ರಾ
ಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದವರ್ ಜಿನಕಲ್ಪಂ ಸ್ಥವಿ [ರಕಲ್ಪ]
ಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗಳ್ಚಿದರ್

ಇಂತರ್ಧಗಪ್ಪಡದ ತೀರ್ಥ ಪಾರಂಪರ್ಯದಿಂದಂ ಸುರಥಮೆಂಬುದು ನಾಡಲ್ಲಿ
ವಳಭಿಯೆಂಬುದು ಪೊಳಲದನಾಳ್ವೊಂ ವಪ್ರಪಾಳನೆಂಬೊನರಸನ ರಾಜ್ಯಂ ಬರೆಗ
ಮರ್ಧಗಪ್ಪಡದ ತೀರ್ಥಂ ನೆಗಳ್ದತ್ತು ಮತ್ತಂ ವಪ್ರಪಾಳನೆಂಬರಸಂ ಮಿಥ್ಯಾದೃಷ್ಟಿ
ಯಾತನ ಮಹಾದೇವಿ ಸ್ವಾಮಿನಿಯೆಂಬೊಳರ್ಧಗಪ್ಪಡದ ತೀರ್ಥದ ತಪಸ್ವಿಯರ
ಶ್ರಾವಕಿಯಾಗಿ ಇಂತು ಕಾಲಂಸಲೆ ಮತ್ತೊಂದು ದಿವಸಂ ನಡುವಗಲರಸನುಂ ಮಹಾ
ದೇವಿಯುಮಿಂತಿರ್ವರುಂ ಪ್ರಾಸಾದದ ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ
ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗಮರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣಮಾಗಿ-
ಯರಮನೆಯಂ ಪುಗುವುದನರಸಂ ಕಂಡರಸಿಯನಿಂತೆಂದನೆಲೆ ಮಹಾದೇವಿ ಈ ನಿನ್ನ-
ರ್ಧಗಪ್ಪಡದ ಯತಿಯರ ಧರ್ಮಮೊಳ್ಳಿತಲ್ತಿವರುಟ್ಟರುಮಲ್ಲರ್ ಬತ್ತಲೆಗರುಮಲ್ಲರೆಂದು
ನುಡಿದು ಮತ್ತೊಂದು ದಿವಸಮರ್ಧಗಪ್ಪಡದ ಸಂಘಮನರಸಂ ಬಳಿಯಟ್ಟಿ ವರಸಿ
ಇಂತೆಂದಂ ನೀಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥಮಪ್ಪರಿಸಿರೂಪಂ ಕೈಕೊಂಡು
ಬಳಿಯೆ ತಪಂಗೆಯ್ವುದೆಂದೊಡವರೊಲ್ಲದಿರ್ದೊಡರಸಂ ಮತ್ತಮಿಂತೆಂದಂ ನಿರ್ಗ್ರಂಥ
ಮಪ್ಪ ರೂಪಂ ಕೈಕೊಳಲೊಲ್ಲಿರಪ್ಪೊಡರ್ಧಗಪ್ಪಡಮಂ ಬಿಸುಟ್ಟು ಪಳಿಯಂ ಸಯ್ತು-
ಟ್ಟುಕೊಂಡಿರಿಮೆಂದೊಡಂತೆ ಗೆಯ್ವೆಮೆಂದಾ ದಿವಸಂ ತಗುಳ್ದು ಬಡಗನಾಡವರ್ ವಪ್ರ
ಪಾಳನ ರಾಜ್ಯದೊಳರ್ಧಗಪ್ಪಡಮಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ತುಡುವರುಂ ಕುರಿ

ವಡವಂ ಪೊದೆವರುಮಾದೊರಲ್ಲಿಂದಿತ್ತ ಕಂಬಳತೀರ್ಥಮೆಂಬುದಾದುದವರುಂ ಶ್ವೇತಪಟರೆಂಬೊರಾದರ್ ದಕ್ಷಿಣಾಪಥದೊಳ್ ಸಾಮಳಿಪುತ್ರನೆಂಬರಸನಪ್ಪನವರಯೆ ಸಂತತಿಯ ಶ್ವೇತಭಿಕ್ಷುಜಾಪುಲಿ ಸಂಘಕ್ಕೆ ಮೊದಲಿಗನಾದಂ

ಮತ್ತಿತ್ತ ಸಂಪ್ರತಿ ಚಂದ್ರಗುಪ್ತಮುನಿಯುಮುಗ್ರೋಗ್ರ ತಪಶ್ಚರಣಂಗೆಯ್ದು ಸಂನ್ಯಸನವಿಧಾನದಿಂದಂ ಪರಮಶುದ್ಧ ಸಹಜ ರತ್ನತ್ರಯಮಂ ಸಾಧಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತುಸಾಗರೋಪಮಾಯುಷ್ಯಮನೊಡೆಯೊಂ ಶ್ರೀಧರನೆಂಬೊಂ ದೇವನಾಗಿ ಪುಟ್ಟಿದೊನಿಂತಿದು ಭದ್ರಬಾಹುಭಟಾರರ ಕಥೆ ಪೇಳ್ದುದು

ಪೆರರುಂ ಸಂನ್ಯಸನಂ ಗೆಯ್ದೊರೆಲ್ಲಂ ಭದ್ರಬಾಹುಭಟಾರಕರ ಮನದೆ ಬಗೆದವರೆಂತು ಪಸಿವುಂ ನೀರಳ್ಕೆ ಶೀತಮುಷ್ಣದಂಶಮಸಕಾದಿ ಪರೀಷಹಂಗಳಂ ಸೈರಿಸಿ ಪರಮಶುದ್ಧ ರತ್ನತ್ರಯಮಂ ಸಾಧಿಸಿದರಂತೆ ಸಂನ್ಯಸನಂಗೆಯ್ದ ಭವ್ಯರ್ಕಳುಂ ಪಸಿವುಂ ನೀರಳ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮಾಧಿಮರಣದಿಂ ಮುಡಿಪಿ ಪರಮಶುದ್ಧಸಹಜ ರತ್ನತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗಸುಖಂಗಳನೆಯ್ದುಗೆ

## ಹರಿಷೇಣಾಚಾರ್ಯ ರಚಿತ ಬೃಹತ್ಕಥಾಕೋಶದ ಭದ್ರಬಾಹು ಕಥಾನಕಂ[1]

[ಭದ್ರಬಾಹುಸ್ವಾಮಿಯವರ ವಿದ್ಯಾಭ್ಯಾಸ ನಡೆದು ಶ್ರುತಕೇವಲಿಯಾಗಿ ಯತಿಸಂಘದ ಪ್ರಧಾನಾಚಾರ್ಯ ಪದವಿಯನ್ನು ಪಡೆವಪರ್ಯಂತದ ಕಥಾಭಾಗವು ಮೇಲ್ಕಂಡ ವಡ್ಡಾರಾಧನೆಯ ಕಥೆಯಲ್ಲಿರುವಂತೆಯೆ ಇದೆ.[2]] ಮುಂದೆ[3] :

ಅವಂತೀದೇಶದಲ್ಲಿ ವಾಪಿ (=ಕೊಳ) ಉಪ್ಪರಿಗೆ ಮನೆ, ಅಂಗಡಿ ಮತ್ತು ಸರೋವರಗಳಿಂದ ಮನೋಹರವಾದ ಉಜ್ಜಯಿನೀ ಪಟ್ಟಣವಿದ್ದಿತು. ಶ್ರೀಮದುಜ್ಜಯಿನೀ ಪಾರ್ಶ್ವದಲ್ಲಿ ಸಿಪ್ರಾನದಿಯತಟದಲ್ಲಿ ಮನೋಹರವಾದ ಉಪವನವಿದ್ದಿತು. ಭದ್ರಬಾಹು ಮಹಾಮುನಿಯವರು ಮಹತ್ತಾದ ಚತುರ್ವಿಧಸಂಘದಿಂದ ಪರಿವಾರಿತರಾಗಿ ಈ ವನಕ್ಕೆ ಬಂದರು. ಆ ಕಾಲದಲ್ಲಿ ಸಮ್ಯಗ್ದರ್ಶನಸಂಪನ್ನನಾದ ಚಂದ್ರಗುಪ್ತನು ಆ ನಗರದ ರಾಜನಾಗಿದ್ದನು. ಚಿನ್ನದಂತಹ ಮೈಬಣ್ಣವುಳ್ಳವಳೂ ಮಿಂಚಿನ ಕುಡಿಗೆ ಸಮಾನವಾದ ಕಾಂತಿಯುಳ್ಳವಳೂ ಆದ ಸುಪ್ರಭೆಯು ಅವನ ಪಟ್ಟದರಸಿಯಾಗಿದ್ದಳು. ಒಂದು ದಿನ ಭದ್ರಬಾಹು ಮಹಾಯೋಗಿಯು ಭಿಕ್ಷಾರ್ಥವಾಗಿ ಮನೆ

---

1 ಕಥಾಸಂಖ್ಯೆ ೧೩೧_ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದೆ.

2 ಭದ್ರಬಾಹುಸ್ವಾಮಿಯವರ ಜನ್ಮಸ್ಥಾನದ ವಿಷಯವಾಗಿ ಈ ಕಥೆಯಲ್ಲಿ ಮುಂದಿನಂತೆ ಹೇಳಿದೆ : 'ಪೌಂಡ್ರವರ್ಧನವೆಂಬ ದೇಶದಲ್ಲಿ ಹಿಂದೆ ಕೋಟಿಪುರವೆಂದು ಹೆಸರನ್ನು ಹೊಂದಿದ್ದ ಮತ್ತು ಈಗ ದೇವಕೋಟ್ಟವೆಂಬ ಹೆಸರನ್ನು ಹೊಂದಿರುವ ಪುರವಿದೆ.

3 ಪ. ಸಂ. ೩೩ ರಿಂದ ಮುಂದೆ

ಯೊಂದನ್ನು ಪ್ರವೇಶಿಸಿದರು. ಅಲ್ಲಿ ಜನರಾರೂ ಇರಲಿಲ್ಲ. ಶಿಶುವೊಂದು ಮಾತ್ರ ತೊಟ್ಟಲಿನಲ್ಲಿದ್ದಿತು. ಅದು ಮುನಿಯನ್ನು ಕುರಿತು 'ಭಗವನ್ ಇಲ್ಲಿಂದ ಶೀಘ್ರವಾಗಿ ಹೊರಟುಹೋಗಿರಿ' ಎಂದು ಹೇಳಿತು. ಈ ಮಾತನ್ನು ಕೇಳಿದ ದಿವ್ಯಜ್ಞಾನಸಂಪನ್ನರಾದ ಭದ್ರಬಾಹು ಮುನಿಯು ಮನಸ್ಸಿನಲ್ಲಿ ಈ ರೀತಿಯಾಗಿ ಭಾವಿಸಿದರು–'ಶಿಶುವು ಇಂತಹ ಮಾತನ್ನಾಡಿದೆಯಾದ್ದರಿಂದ ಈ ಮಂಡಲದಲ್ಲಿ ಹನ್ನೆರಡು ವರ್ಷ ಮಳೆಯಾಗುವುದಿಲ್ಲ'. ಯೋಗಿಯು ಈ ರೀತಿಯಾಗಿ ಯೋಚಿಸಿ ಭಿಕ್ಷಾನಿವೃತ್ತಿಪೂರ್ವಕ ಜಿನಮಂದಿರಕ್ಕೆ ಹಿಂದಿರುಗಿದರು. ಅಲ್ಲಿ ಮಧ್ಯಾಹ್ನ ಅವಶ್ಯಕ ಸತ್ಕ್ರಿಯೆಯನ್ನು ಮಾಡಿ ಸಮಸ್ತಸಂಘದೆದುರಿನಲ್ಲಿ ಈ ಗುರುವು ಇಂತು ಹೇಳಿದರು : 'ಈ ದೇಶದಲ್ಲಿ ನಿಶ್ಚಿತವಾಗಿ ಅನಾವೃಷ್ಟಿಯಾಗಲಿದೆ. ಅಂತೆಯೇ ಹನ್ನೆರಡು ವರ್ಷಕಾಲ ಅಸಹನೀಯವಾದ ದುರ್ಭಿಕ್ಷ ಉಂಟಾಗಲಿದೆ. ಧನಧಾನ್ಯಸಮೃದ್ಧವಾದ ಈ ದೇಶವು ರಾಜ ಹಾಗೂ ಕಳ್ಳರಿಂದಾಗುವ ಸುಲಿಗೆಯ ಪರಿಣಾಮವಾಗಿ ಶೂನ್ಯಗೊಳ್ಳುವುದು. ನಾನು ಇಲ್ಲಿಯೇ ಇರುವೆನು, ಈಗ ನನ್ನ ಆಯುಷ್ಯವು ಕ್ಷೀಣಿಸಿದೆ. ಸಾಧುಗಳೇ! ನೀವು ಲವಣಸಮುದ್ರದಬಳಿಗೆ ಹೋಗಿರಿ' ಭದ್ರಬಾಹುಸ್ವಾಮಿಯವರ ಈ ಮಾತನ್ನು ಕೇಳಿ ಚಂದ್ರಗುಪ್ತರಾಜನು ಅವರ ಬಳಿ ಜೈನೇಶ್ವರ ತಪವನ್ನು ಧರಿಸಿದನು. ಚಂದ್ರಗುಪ್ತಮುನಿಯು ಶೀಘ್ರವಾಗಿ ದಶಪೂರ್ವಿಗಳ ಅಗ್ರಿಮನೆನಿಸಿ ವಿಸಷಾಚಾರ್ಯ ಎಂಬ ಹೆಸರನ್ನು ಪಡೆದು ಸರ್ವಸಂಘಾಧಿಪತಿಯಾದರು. ಗುರುವಚನಾನುಸಾರ ಈ ಮುನಿಯೊಡನೆ ಸಂಘವು ದಕ್ಷಿಣಾಪಥದೇಶದ ಪುನ್ನಾಟನಾಡಿಗೆ ಪಯಣಮಾಡಿತು. ರಾಮಿಲ್ಲ, ಸ್ಥೂಲವೃದ್ಧ ಮತ್ತು ಭದ್ರಾಚಾರ್ಯರೆಂಬ ಮೂವರು ತಮ್ಮ ಸಂಘಸಮುದಾಯದೊಡನೆ ಸಿಂಧು ಮೊದಲಾದ ನಾಡಿಗೆ ಹೋದರು. ಧೀರರಾದ ಭದ್ರಬಾಹು ಮುನಿಯು ಸಪ್ತಭಯರಹಿತರಾಗಿ ತೀವ್ರವಾದ ನೀರಡಿಕೆ (?) ಹಸಿವುಗಳ ಶ್ರಮವನ್ನು ಜಯಿಸಿ ಶ್ರೀಮದುಜ್ಜಯಿನೀ ಬಳಿಯ ಭಾದ್ರಪದ ದೇಶವನ್ನು ಸೇರಿ ಬಹುದಿನಗಳ ವರವಿಗೆ ಅನಶನದಿಂದಿದ್ದರು. ಆ ಭದ್ರಬಾಹುಮುನಿಯು ವಿಧಿಪೂರ್ವಕವಾಗಿ ಚತುರ್ವಿಧವಾದ ಆರಾಧನೆಯನ್ನು ಸಮಾರಾಧಿಸಿ ಸಮಾಧಿಮರಣಪಡೆದು ಸ್ವರ್ಗಸ್ಥರಾದರು. ವಿಶಾಖಾಚಾರ್ಯ ಎಂಬ ಹೆಸರಿನ ಭದ್ರಬಾಹು ಗುರುವಿನ ಶಿಷ್ಯರು ದರ್ಶನಜ್ಞಾನಚಾರಿತ್ರತ್ರಯವನ್ನು ಚೆನ್ನಾಗಿ ಪರಿಪಾಲಿಸಿ, ಸುಭಿಕ್ಷಕಾಲವು ಸಂಪ್ರಾಪ್ತವಾಗಲು ಸರ್ವಸಂಘಸಮನ್ವಿತರಾಗಿ ದಕ್ಷಿಣಾಪಥದೇಶದಿಂದ ಮಧ್ಯದೇಶಕ್ಕೆ ಬಂದರು. ದುರ್ಭಿಕ್ಷಕಾಲದಲ್ಲಿ ಸಿಂಧುದೇಶಕ್ಕೆ ಹೋಗಿದ್ದ ರಾಮಿಲ್ಲ, ಸ್ಥವಿರಯೋಗಿ ಮತ್ತು ಭದ್ರಾಚಾರ್ಯರೆಂಬ ಈ ಮೂವರು (ಇಲ್ಲಿಂದ ಮುಂದಿನ 48, 49, 50 ಮತ್ತು 51 ನೇ ಶ್ಲೋಕನಾಲ್ಕರ ಅರ್ಥವು ಸ್ಪಷ್ಟವಿರುವುದಿಲ್ಲ) ನೀರು, ಅನ್ನಭೋಜನಗಳಿಂದ ಹೀನವಾದ, ಲೋಕಭೀಷಣವಾದ ಕಾಲದಲ್ಲಿ ಅವರು ಸಹಸಾಬಂದು ಜನಸನ್ನಿಧಿಯಲ್ಲಿ ಹೇಳಿದರು, ಕೋಲಾಹಲಮಾಡುತ್ತಿದ್ದ ದ್ವಾಃಸ್ಥರಾದ ವೈದೇಶಿಕಜನರಿಂದ ಪಿತಾಪುತ್ರಾದಿ ಲೋಕವು ಭುಂಜಿಸಲೋಸುಗ ಅನ್ನವನ್ನು ಹೊಂದಲಿಲ್ಲ. ಲೋಕವು ತನ್ನ

ಕುಟುಂಬದೊಡನೆ ಹಸಿವಿನಿಂದ ಗ್ರಸ್ತವಾದ ಚೇತಸರ (?) ಅನ್ನವನ್ನು ಸಾಧಿಸಿ ಬಾಲನಾದಿಯಾಗಿ ಹೆದರಿಕೆಯಿಂದ ರಾತ್ರಿಯಲ್ಲಿ ಕಬಳಿಸಲಾಗುವುದು. ತಾವೂ ಕೂಡ ನನ್ನ ಮನೆಯಿಂದ ರಾತ್ರಿಯಲ್ಲಿ ಪಾತ್ರೆಗಳನ್ನು ತೆಗೆದುಕೊಂಡು ಇವುಗಳಲ್ಲಿ ಅನ್ನಮಾಡಿ ದೇಶಕನಿಂದ ? ಹೋಗಿ ಭಯದಿಂದ (?) ಪುನಃ ಅಂಜಿಕೆಯಿಲ್ಲದ ಮನ ವುಳ್ಳವರಾಗಿ ಪವಿತ್ರವಾದ ತಮ್ಮ, ಶ್ರಾವಕಗೃಹದಲ್ಲಿ ಎಲೈ ಸಾಧುಗಳೇ ! ಹಗಲಾ ಗಲು ಭೋಜನಮಾಡಿರಿ. ಪ್ರೀತಿಕರವಾದ ಜನದ ಆ ಮಾತುಗಳಿಂದ ಸಂತುಷ್ಟರಾದ ಆಚಾರ್ಯರಿಂದ ಈ ವಿಧಿಯು ಎಲ್ಲವೂ ಅಂಗೀಕೃತವಾಯಿತು. ಮತ್ತೊಮ್ಮೆ ಒಡಕಲ ಮೈಯ್ಯ ನಿರ್ಗ್ರಂಥನೊಬ್ಬನು ಕೈಯ್ಯಲ್ಲಿ ಭಿಕ್ಷಾಪಾತ್ರೆ ಹಿಡಿದು ಶ್ರಾವಕನ ಮನೆಯನ್ನು ಪ್ರವೇಶಿಸಿದನು. ಅಲ್ಲಿ ಹೊಸಬಳೂ ಮುಗ್ಧೆಯೂ ಗರ್ಭಿಣಿ ಯೂ ಆಗಿದ್ದ ಶ್ರಾವಿಕೆಯೊಬ್ಬಳು ಕತ್ತಲಲ್ಲಿ ಮುನಿಯನ್ನು ಕಂಡು ಹೆದರಿದ ಳಾಗಿ ಅವಳಿಗೆ ಗರ್ಭಪಾತವಾಯಿತು. ಇದನ್ನು ಕಂಡ ಶ್ರಾವಕರು ಯತಿಗಳೊಡೆ ಯರನ್ನು ಕುರಿತು ಇಂತೆಂದರು : 'ಸಾಧುಗಳೇ ! ಕಾಲಕೆಟ್ಟಿದೆ, ಒಳಿತಾದ ಕಾಲ ಬಂದ ಅನಂತರ ಪ್ರಾಯಶ್ಚಿತ್ತಮಾಡಿಕೊಂಡು ಪುನಃ ತಪಸ್ಸನ್ನು ಕೈಗೊಳ್ಳಿರಿ. ಒಳಿ ತಾದ ಕಾಲವು ಬರುವ ಪರ್ಯಂತ, ಸಾಧುಗಳೇ ! ಎಡಗೈಯ್ಯಿಂದ ಅರ್ಧಫಾಲಕ ವನ್ನು ಮುಂದೆ ಹಿಡಿದುಕೊಂಡು ಹಾಗೂ ಬಲಗೈಯ್ಯಿಂದ ಭಿಕ್ಷಾಪಾತ್ರೆಯನ್ನು ಹಿಡಿದು ಕೊಂಡು ರಾತ್ರಿ ಆಹಾರವನ್ನು ಪಡೆದು ಹಗಲಿನಲ್ಲಿ ಭೋಜನಮಾಡಿರಿ'. ಶ್ರಾವಕರ ಪ್ರೀತಿಕರವಾದ ಮಾತನ್ನು ಕೇಳಿದ ಯತಿಗಳು ಕೂಡಲೆ ಅಂತೆಯೇ ಆಗಲೆಂದು ಒಪ್ಪಿ ಕೊಂಡರು. ಈ ರೀತಿ ನಡೆಯುತ್ತಿರಲಾಗಿ ಒಳಿತಾದ ಕಾಲವು ಬರಲು, ಸುಖೀಭೂತ ವಾದ ಜನಸಮೂಹವು ದೈನ್ಯಭಾವ ವಿಮುಕ್ತವಾಗಿರಲು ರಾಮಿಲ್ಲ, ಸ್ಥವಿರ ಮತ್ತು ಸ್ಥೂಲಭದ್ರಾಚಾರ್ಯರು ತಮ್ಮ ಸಾಧುಗಳೊಡನೆ ಒಟ್ಟುಗೂಡಿ ಸಂಘವನ್ನು ಕುರಿತು ಇಂತು ಹೇಳಿದರು : 'ಮುನಿಗಳೇ ! ಕೂಡಲೇ ಅರ್ಧಫಾಲಕವನ್ನು ತ್ಯಜಿಸಿ ತುಷ್ಟ ಮನವುಳ್ಳವರಾಗಿ, ಮುಕ್ತಿಗಾಗಿ ಸಾರರೂಪದ ನಿರ್ಗ್ರಂಥರೂಪವನ್ನು ಆಶ್ರಯಿಸಿರಿ'. ಮೋಕ್ಷಾವಾಪ್ತಿಫಲಪ್ರದವಾದ ಮಾತನ್ನು ಕೇಳಿ ಮುಕ್ತಿನಿರತಚಿತ್ತರಾದ ಕೆಲವರು ನಿರ್ಗ್ರಂಥತ್ವವನ್ನು ಧರಿಸಿದರು. ರಾಮಿಲ್ಲ, ಸ್ಥವಿರ ಮತ್ತು ಸ್ಥೂಲಭದ್ರಾಚಾರ್ಯರು ಮೂವರು ಮಹಾವೈರಾಗ್ಯಪರಾಯಣರಾಗಿ ವಿಶಾಖಾಚಾರ್ಯರ ಬಳಿಗೆ ಬಂದರು. ಕೂಡಲೇ ಸಂಸಾರಭೀತಮನರಾಗಿ ಅರ್ಧಕರ್ಪಟವನ್ನು ತ್ಯಜಿಸಿ ನೈರ್ಗ್ರಂಥ್ಯ ತಪ ಸ್ಸನ್ನು ಕೈಗೊಂಡು ಮೂವರೂ ಮುನಿರೂಪವನ್ನು ಪಡೆದರು. ಸಂಸಾರಸಮುದ್ರ ತಾರಕವಾದ ಈ ಗುರುವಾಕ್ಯವು ಯಾರಿಗೆ ರುಚಿಸಲಿಲ್ಲವೋ ಅವರು, ಲೋಕದಲ್ಲಿ ಜಿನಕಲ್ಪ ಮತ್ತು ಸ್ಥವಿರಕಲ್ಪ ಎಂಬ ಎರಡು ಭೇದಗಳನ್ನು ಮಾಡಿ, ಅರ್ಧಫಾಲಕ ಸಂಯುಕ್ತತೀರ್ಥವನ್ನು ಕಲ್ಪಿಸಿದರು. (ಇಲ್ಲಿಂದ ಮುಂದಿನಭಾಗವು ವಡ್ಡಾರಾಧನೆಯ ಮೇಲ್ಕಂಡ ಕಥಾಭಾಗದಿಂದ ವ್ಯತ್ಯಾಸವುಳ್ಳದ್ದಾಗಿಲ್ಲ.)

ಶ್ವೇತಾಂಬರ ಜೈನ ಆಮ್ನಾಯಾನುಸಾರವಾದ ಭದ್ರಬಾಹುಸ್ವಾಮಿಯವರ ಐತಿಹ್ಯ[1] :

ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ದಕ್ಷಿಣಭಾರತದೇಶದ ಪ್ರತಿಷ್ಠಾನ ಪುರನಿವಾಸಿ ಬ್ರಾಹ್ಮಣರಾಗಿದ್ದರು. ಜ್ಞಾನಾರ್ಜನೆಯಲ್ಲಿ ವಿಶೇಷ ಉತ್ಸಾಹವುಳ್ಳ ವರೂ, ಪಟುಮತಿಗಳೂ ಆದ ಇವರು ವ್ಯಾಕರಣ, ನ್ಯಾಯ, ತರ್ಕ, ಧರ್ಮಶಾಸ್ತ್ರ, ಜ್ಯೋತಿಷವೇ ಮೊದಲಾದುವನ್ನು ನಿಷ್ಠಾಪೂರ್ವಕ ಅಧ್ಯಯನಮಾಡಿ ಶೀಘ್ರವಾಗಿ ಪಂಡಿತೋತ್ತಮನ ಸ್ಥಾನವನ್ನು ಗಳಿಸಿದರು. ಇವರ ಕೀರ್ತಿಯು ಎಲ್ಲ ದಿಕ್ಕುಗಳ ಲ್ಲಿಯೂ ಪಸರಿಸಿತು. ಅವರ ಜ್ಯೋತಿಷ ಜ್ಞಾನವು ಅಸಾಧಾರಣವಾದುದಾಗಿದ್ದಿತು.

ಪುಣ್ಯೋದಯದಿಂದ ಅವರು ಶ್ರುತಕೇವಲಿ ಯಶೋಭದ್ರಸ್ವಾಮಿಯವರ ಸಂದ ರ್ಶನ ಪಡೆದು ನಿಜವಾದ ಧರ್ಮದ ಸ್ವರೂಪವನ್ನು ಮನಗಂಡರು.

ಶ್ರುತಕೇವಲಿ ಯಶೋಭದ್ರಸ್ವಾಮಿಯವರಿಂದ ದೀಕ್ಷೆಕೈಗೊಂಡ ಭದ್ರಬಾಹು ಸ್ವಾಮಿಯವರು, ತಮ್ಮ ಅಸಾಧಾರಣವಾದ ಧೀಶಕ್ತಿಯ ಸಾಮರ್ಥ್ಯದಿಂದ ಚತು ರ್ದಶಪೂರ್ವಗಳಲ್ಲಿ ಪಾರಗಾಮಿಯಾದರು ಮತ್ತು ಜ್ಯೋತಿಷ ಮತ್ತು ಖಗೋಳ ವಿಷಯಗಳಲ್ಲಿ ವಿಶೇಷ ಪ್ರತಿಪತ್ತಿಯುಳ್ಳವರಾದರು.

ಆಚಾರ್ಯ ಭದ್ರಬಾಹುಸ್ವಾಮಿಯವರಿಗೆ ವರಾಹಮಿಹಿರ ಎಂಬ ಸಹೋದರ ರಿದ್ದರು. ವರಾಹಮಿಹಿರರೂ ಭಗವತೀ ದೀಕ್ಷೆಯನ್ನು ಕೈಗೊಂಡಿದ್ದರು. ಗುರುಗಳಿಂದ ಭದ್ರಬಾಹುಸ್ವಾಮಿಯವರು ಆಚಾರ್ಯರಾಗಿಯೂ ಸಂಘಾಧಿಪತಿಯಾಗಿಯೂ ಅಧಿಷ್ಠಾಪಿತರಾದುದನ್ನು ಕಂಡು ವರಾಹಮಿಹಿರರು ರೋಷಗೊಂಡು ಯತಿಜೀವನ ವನ್ನು ತೊರೆದು, ತಮ್ಮ ವಿಶೇಷ ಜ್ಯೋತಿಷಜ್ಞಾನದ ಉಪಯೋಗಪಡೆದು ಭವಿಷ್ಯ ವನ್ನು ಹೇಳುವುದು, ಜಾತಕಗಳನ್ನು ರಚಿಸುವುದು ಇವೇ ಮುಂತಾದ ವೃತ್ತಿಯನ್ನವ ಲಂಬಿಸಿ ಜೀವಿಸಲಾರಂಭಿಸಿದರು. ಆದರೆ ಇವರಲ್ಲಿ ಜನಾದರಣೆಯು ವೃದ್ಧಿಹೊಂದಿ ದಂತೆ, ಜೈನಸಾಧುಗಳನ್ನಧಿಕರಿಸಿ ಇವರ ದ್ವೇಷಭಾವವೂ ವೃದ್ಧಿಹೊಂದಿತಾಗಿ, ಜೈನ ಸಾಧುಗಳನ್ನು ಮತ್ತು ಜೈನಧರ್ಮವನ್ನು ನಿಂದಿಸುವ ಕೆಟ್ಟಚಾಳಿಯು ಇವರಲ್ಲುಂಟಾ ಯಿತು. ವರಾಹಮಿಹಿರರು ತಮ್ಮ ಪ್ರಭಾವದ ಪ್ರಸರಣಕ್ಕಾಗಿ ನಾನಾ ಉಪಾಯ ಗಳನ್ನು ಮಾಡಿದರು. ಜನತೆಯು ವರಾಹಮಿಹಿರರ ಭವಿಷ್ಯವಾಣಿಯನ್ನು ವಿಶೇಷ ವಾಗಿ ನಂಬಿತಾಗಿ ಅವರ ಖ್ಯಾತಿಯು ಎಲ್ಲ ದಿಶೆಯಲ್ಲಿಯೂ ಪ್ರಸರಿಸಿತು. ಕಾಲಾನು ಕ್ರಮದಲ್ಲಿ ವರಾಹಮಿಹಿರರು ನಂದರಾಜನ ಆಸ್ಥಾನದಲ್ಲಿ ರಾಜಪುರೋಹಿತ ಸ್ಥಾನ

---

1 ಈ ಐತಿಹ್ಯವನ್ನು ಶ್ರ. ಭ. ಮಹಾವೀರ–ಗ್ರಂ. ಭಾ. ೫–ವಿಭಾಗ ೧ ಸ್ಥವಿರಾವಲಿ–ಪು. ಸಂ. ೨೧೦ ರಿಂದ ೨೧೭ ಮತ್ತು ೨೩೨ ರಿಂದ ೨೩೪ ರಿಂದ ಸಂಕಲನ ಮಾಡಿ ಇಂಗ್ಲೀಷ್‌ಭಾಷೆಯಿಂದ ಕನ್ನಡಕ್ಕೆ ಅನುವಾದಿಸಲಾಗಿದೆ.

ವನ್ನಲಂಕರಿಸುವ ಮಹದ್ಗೌರವಭಾಜನರಾದರು, ಇದರೊಡನೆ ಜೈನಧರ್ಮವನ್ನು ಕುರಿತಾದ ಅವರ ವದ್ವೇಷಭಾವವೂ ಪರಿವರ್ಧಿಸಿತು.

ನಂದರಾಜನಿಗೆ ದೀರ್ಘಕಾಲದ ಅನಂತರದಲ್ಲಿ ಸುತನೊಬ್ಬನು ಜನಿಸಿದನು. ಜನಿಸಿದ ಆ ಶಿಶುವಿನ ಜಾತಕವನ್ನು ವರಾಹಮಿಹಿರಾಚಾರ್ಯರು ಬರೆದು, ಮಗುವು ಶತವರ್ಷಾಯುಃ ಪ್ರಮಾಣವುಳ್ಳದ್ದಾಗಿದೆಯೆಂದು ಗಣನೆಮಾಡಿದರು. ರಾಜನು ವಿಶೇಷವಾಗಿ ಸಂತುಷ್ಟನಾದನು. ರಾಜನ ವೃದ್ಧಾಪ್ಯ ವಯಸ್ಸಿನಲ್ಲಿ ಮಗುವು ಜನಿಸಿದ್ದುದರಿಂದ ಹಾಗೂ ಮಗುವು ಶತಾಯುಷಿಯಾಗಿರುವನೆಂಬ ಹೇಳಿಕೆಯ ಕಾರಣದಿಂದ ಅನೇಕ ಜನರು ತಮ್ಮ ಹರ್ಷವನ್ನು ಸೂಚಿಸುವುದಕ್ಕಾಗಿ ಕಾಣಿಕೆಗಳೊಡನೆ ರಾಜನನ್ನು ಸಂದರ್ಶಿಸಿದರು. ಈ ಸಂದರ್ಭದಲ್ಲಿ ವರಾಹಮಿಹಿರರಿಗೆ (ಜೈನಸಂಘದ ಮೇಲೆ) ಹಗೆತೀರಿಸಿಕೊಳ್ಳುವ ಸದವಕಾಶವು ದೊರೆಯಿತು. ಅವರು ರಾಜನಿಗೆ 'ನಗರದ ಜನರೆಲ್ಲರೂ ನಿನ್ನ ಸುತನ ಜನನದಿಂದ ಹರ್ಷಗೊಂಡಿದ್ದಾರೆ. ಅವರಲ್ಲಿ ಬಹುಸಂಖ್ಯಾತರು ನಿನಗೆ ತಮ್ಮ ಗೌರವಾರ್ಪಣೆಮಾಡಿದ್ದಾರೆ. ಆದರೆ ಜೈನಸಾಧು ಭದ್ರಬಾಹುವು ಬರಲೇ ಇಲ್ಲ. ನಿನಗೆ ಇದು ತಿಳಿಯದಿರಬಹುದು.' ಎಂದು ಹೇಳಿದರು. ರಾಜನು ಕೂಡಲೇ ಶಕಡಾಲನೆಂಬ ಪ್ರಧಾನಮಂತ್ರಿಗೆ ಈ ವಿಷಯವನ್ನು ಕುರಿತು ವಿಚಾರಿಸುವಂತೆ ತಿಳಿಸಿದನು. ಶಕಡಾಲನು ಈ ವಿಷಯವಾಗಿ ಭದ್ರಬಾಹುಸ್ವಾಮಿಯವರ ಬಳಿ ವಿಚಾರಮಾಡಿದನು. ಗುರುವರ್ಯರು ವಿಷಯವೇನೆಂಬುದನ್ನು ಊಹಿಸಿದರು. ತಮ್ಮ ವಿಷಯವಾಗಿ ರಾಜನ ಮನಸ್ಸು ದೂಷಿತವಾಗುವಂತೆ ಮಾಡಲಾಗಿದೆಯೆಂದು ಅರಿತರು. ಅನಂತರ ಶಾಂತಚಿತ್ತದಿಂದ ಮಂತ್ರಿಗೆ ಉತ್ತರವಿತ್ತರು: 'ಏಕಪ್ರಸಂಗಕ್ಕಾಗಿ ನಾನು ಅನವಶ್ಯಕ ಎರಡು ಬಾರಿ ಬರಬೇಕೇಕೆ? ಆ ಶಿಶುವು ಬೆಕ್ಕಿನ ಮುಖಾಂತರ ಏಳನೇ ದಿನದಲ್ಲಿ ಮೃತವಾಗುವುದು. ಸಮಾಧಾನದ ಹಿತ ನುಡಿಗಳನ್ನು ಹೇಳುವುದಕ್ಕಾಗಿ ನಾನು ಆಗ ಬರುವೆನು.' ಶಕಡಾಲ ಮಂತ್ರಿಯು ಆ ವಿಷಯವನ್ನು ರಾಜನಿಗೆ ತಿಳಿಸಿದನು. ವರಾಹಮಿಹಿರರ ಮತ್ತು ಭದ್ರಬಾಹುಸ್ವಾಮಿಯವರ ಭವಿಷ್ಯವಾಣಿಗಳಲ್ಲಿ ಕಂಡುಬಂದ ಪರಸ್ಪರ ವಿರುದ್ಧಾಂಶಗಳನ್ನು ಕಂಡು ರಾಜನಿಗೆ ಆಶ್ಚರಿಯೂ ಕುತೂಹಲವೂ ಉಂಟಾಯಿತು. ಇವರ ಈ ಭವಿಷ್ಯವಾಣಿಯನ್ನು ಸುಳ್ಳಾಗಿಸಲೋಸುಗ ರಾಜನು ಸರ್ವರೀತಿಯಿಂದ ವ್ಯವಸ್ಥೆಮಾಡಿದನು. ನಿರ್ದಿಷ್ಟವಾದ ಏಳನೆಯ ದಿನದಂದು ದಾದಿಯು ಮಗುವಿಗೆ ಸ್ತನ್ಯಪಾನಮಾಡಿಸುತ್ತಿರಲು ಅಗುಳಿಯೊಂದು ಅಕಸ್ಮಾತ್ತಾಗಿ ತಲೆಯ ಮೇಲೆ ಬಿದ್ದ ಕಾರಣ ಮಗುವು ಮೃತಿಹೊಂದಿತು. ಸಮಾಧಾನದ ಹಿತನುಡಿಗಳನ್ನಾಡಲೋಸುಗ ಭದ್ರಬಾಹುಸ್ವಾಮಿಯವರು ರಾಜನ ಬಳಿ ಹೋದರು. ಭದ್ರಬಾಹುಸ್ವಾಮಿಯವರ ಹಿತನುಡಿಗಳನ್ನು ಕೇಳಿದ ರಾಜನು : 'ತಾವು ನುಡಿದಂತೆ ಮಗುವು ಏಳನೆಯ ದಿನದಲ್ಲಿ ಮೃತಿಹೊಂದಿದು ನಿಜ, ಆದರೆ ಅದು ಬೆಕ್ಕಿನ ಮುಖಾಂತರ ಮೃತಿಹೊಂದುವುದೆಂಬ ನಿಮ್ಮ ಹೇಳಿಕೆಯು ನಿಜವಾಗಲಿಲ್ಲ' ಎಂದನು. ಸೂಕ್ಷ್ಮವಾದ ಪರಿಶೀಲನದ ಅನಂತರ

ಅಗುಳಿಯಮೇಲೆ ಬೆಕ್ಕಿನಿಂದಾದ ಗುರುತುಗಳು ಕಂಡುಬಂದುವಾಗಿ ಭದ್ರಬಾಹು ಸ್ವಾಮಿಯವರ ಭವಿಷ್ಯವಾಣಿಯು ಪೂರ್ಣರೀತಿಯಿಂದ ನಿಜವಾದುದೆಂದು ಮನಗಾಣ ಲಾಯಿತು.

ಈ ಘಟನೆಯಿಂದ ವರಾಹಮಿಹಿರರು ಬಹುವಾಗಿ ಲಜ್ಜಿತರಾದರು. ಅವರ ಹೆಮ್ಮೆಯಳಿಯಿತು. ಜ್ಯೋತಿಷ್ಯಶಾಸ್ತ್ರಗ್ರಂಥಗಳ ವಿಷಯವಾಗಿ ಅವರು ತಿರಸ್ಕಾರ ಭಾವ ತಳೆದು ಅವುಗಳೆಲ್ಲವನ್ನೂ ಆಳವಾದ ನೀರಿನಲ್ಲೆಸೆಯಲು ತೀರ್ಮಾನಿಸಿದರು. ಇದನ್ನು ತಿಳಿದ ಭದ್ರಬಾಹುಸ್ವಾಮಿಯವರು ಅವರು ಅಂತೆಮಾಡದಂತೆ ತಡೆದರು. ಇಂತಾದರೂ ಜೈನಧರ್ಮದ ವಿಷಯವಾಗಿ ಮತ್ತು ಅಧಿಕರೀತಿಯಿಂದ ಭದ್ರಬಾಹು ಸ್ವಾಮಿಯವರ ವಿಷಯವಾಗಿ ವರಾಹಮಿಹಿರರ ವಿದ್ವೇಷ ಭಾವವು ದಿನಕ್ರಮೇಣ ಹೆಚ್ಚುವರಿಯುತ್ತಾ ನಡೆಯಿತು. ಸ್ವಲ್ಪಕಾಲಾನಂತರದಲ್ಲಿ ವರಾಹಮಿಹಿರರು ಮೃತ ರಾಗಿ ವ್ಯಂತರದೇವನಾಗಿ ಜನಿಸಿದರು. ಪೂರ್ವಭವದ ವಿದ್ವೇಷಭಾವವು ಈ ವ್ಯಂತರ ದೇವನಲ್ಲಿ ಜಾಗೃತಗೊಂಡಿತಾಗಿ ಜೈನ ಸಂಘಕ್ಕೆ ಪಿಡುಗನ್ನುಂಟುಮಾಡಿದನು. ಶ್ರೀ ಸಂಘದ ಪ್ರಾರ್ಥನೆಯ ಮೇರೆಗೆ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು 'ಉವ ಸಗ್ಗಹರಂ' ಸ್ತೋತ್ರವನ್ನು ರಚಿಸಿದರು. ಈ ಸ್ತೋತ್ರದ ಶ್ರವಣ, ಅಧ್ಯಯನ, ಧ್ಯಾನಾದಿಗಳಿಂದ ಪಿಡುಗಿನ ಸಂಕಟವು ಪರಿಹೃತವಾಯಿತು.

ನವಮ ನಂದರಾಜನನ್ನು ಕೊಂದು ರಾಜ್ಯಭಾರದಲ್ಲಿ ಅಧಿಷ್ಠಿತನಾದ ಚಂದ್ರ ಗುಪ್ತನು ಭದ್ರಬಾಹುಸ್ವಾಮಿಯವರ ಧೀಶಕ್ತಿ ಮತ್ತು ಅತಿಶಯ ಪಾಂಡಿತ್ಯಗಳನ್ನು ಕಂಡು ಪ್ರಭಾವಿತನಾದನು. ಒಂದು ರಾತ್ರಿ ಚಂದ್ರಗುಪ್ತನು ಹದಿನಾರು ಸ್ವಪ್ನ ಗಳನ್ನು ಕಂಡು ಭವಿಷ್ಯದಲ್ಲಿ ದಾರುಣ ದುಃಖಸ್ಥಿತಿಯು ಒದಗಿಬರಲಿದೆಯೆಂಬುದನ್ನು ಭದ್ರಬಾಹುಸ್ವಾಮಿಯವರಿಂದ ತಿಳಿದು, ವ್ಯಥೆಗೊಂಡನು. ಚಂದ್ರಗುಪ್ತನು ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ ಮುನಿದೀಕ್ಷೆಪಡೆದನೆಂದು ಕೆಲವರು ಹೇಳಿದ್ದಾರೆ.

ದ್ವಾದಶ ವರ್ಷಕಾಲ ದುರ್ಭಿಕ್ಷವು ಸಂಘಟಿಸಲಿರುವುದನ್ನು ತಿಳಿದ ಭದ್ರಬಾಹು ಸ್ವಾಮಿಯವರು ಮಹಾಪ್ರಾಣಧ್ಯಾನಾಚರಣೆಗಾಗಿ ನೇಪಾಲಕ್ಕೆ ಹೋದರು. (ಮಗಧ ರಾಜ್ಯದಲ್ಲಿ) ಬರಗಾಲದ ಪರಿಣಾಮವಾಗಿ ಆಹಾರ ಪಾನೀಯಗಳು ದುರ್ಲಭವಾದುವು. ಸಾಧುಗಳಲ್ಲಿ ಕೆಲವರು ದಕ್ಷಿಣ ದೇಶಕ್ಕೆ ಹೋದರು. ದುರ್ಭಿಕ್ಷದ ದುರದೃಷ್ಟಕರ ಪರಿ ಣಾಮವೆಂದರೆ ಸಾಧುಗಳು ಆಗಮ ಗ್ರಂಥಪಾಠಗಳನ್ನು ಮರೆತರು. ಈ ವಿಷಯವಾಗಿ ಪ್ರೊ. ಆರ್. ಕಾಪಡಿಆ ಅವರು ಇಂತೆ ಹೇಳಿದ್ದಾರೆ[1] : "ಭದ್ರಬಾಹುಸ್ವಾಮಿಯವರ ಸಮಯದಲ್ಲಿ ಮಗಧರಾಜ್ಯದಲ್ಲಿ ದ್ವಾದಶವರ್ಷಗಳದುರ್ಭಿಕ್ಷದ ವಿಪತ್ತಿಯುಂಟಾಯಿತು.

---

1 ಕೆನೋನಿಕಲ್ ಲಿಟರೇಚರ್ ಆಫ್ ದಿ ಜೈನಾಸ್–ಚ್ಯಾಪ್ಟರ್ 4 – ಪು. ಸಂ. 71–73.

ಸಾಧುಗಳು ಬಾಗಿಲಿಂದ ಬಾಗಿಲಿಗೆ ಹೋಗಿ ಭಿಕ್ಷೆತಂದರೂ ಸಾಕಾಗುವಷ್ಟು ಆಹಾರ ದೊರೆಯುತ್ತಿರಲಿಲ್ಲ. ಇದರ ಪರಿಣಾಮವಾಗಿ ಅವರಲ್ಲಿ ದಿಟ್ಠಿವಾಯದ (=ಹನ್ನೆರಡನೆಯದೃಷ್ಟಿವಾದಾಂಗದ) ಮರವೆಯೊಯಿತು. ದುರ್ಭಿಕ್ಷವು ಕಳೆದು ಸುಭಿಕ್ಷವುಂಟಾದ ಅನಂತರ ನಡೆದ ಸಾಧುಸಮ್ಮೇಳನದಲ್ಲಿ ದೃಷ್ಟಿವಾದಾಂಗವು ಮರೆವೆಗೊಂಡಿರುವುದು ಗಮನಕ್ಕೆ ಬಂದಿತು.[1] ಆಗ ನೇಪಾಲದಲ್ಲಿ ಮಹಾಪ್ರಾಣಧ್ಯಾನನಿರತರಾಗಿದ್ದ ಭದ್ರಬಾಹುಸ್ವಾಮಿಯವರೊಬ್ಬರು ಮಾತ್ರ ದಿಟ್ಠಿವಾಯವನ್ನು ತಿಳಿದವರಾಗಿದ್ದು ಉಪದೇಶಿಸಬಲ್ಲರಾಗಿದ್ದುದರಿಂದ ಅವರ ಬಳಿಗೆ ಶ್ರೀಸಂಘವು ಸಂಘಾಟಕರೆಂಬ ಮುನಿಗಳೀರ್ವರನ್ನು ಕಳುಹಿತು. ದುರ್ಭಿಕ್ಷಕಾಲದಲ್ಲಿ ಮಹಾಪ್ರಾಣಧ್ಯಾನವನ್ನಾಚರಿಸಲಾಗದೆ, ಆದಾಗ ತಾನೇ ಆ ಧ್ಯಾನಾಚರಣೆಯನ್ನು ಕೈಗೊಳ್ಳಲಾಗಿದೆಯೆಂಬ ಕಾರಣವನ್ನು ಮುಂದಿಟ್ಟು ಭದ್ರಬಾಹುಸ್ವಾಮಿಯವರು ದಿಟ್ಠಿವಾಯವನ್ನು ಬೋಧಿಸಲು ಒಪ್ಪಲಿಲ್ಲ. ಈ ವಿಷಯವನ್ನು ಹಿಂದಿರುಗಿ ಬಂದ ಸಂಘಾಟಕಮುನಿದ್ವಯದಿಂದ ತಿಳಿದ ಶ್ರೀಸಂಘವು, ಬೇರೊಂದು ಸಂಘಾಟಕ ಮುನಿಯುಗಲವನ್ನು ಭದ್ರಬಾಹುಸ್ವಾಮಿಯವರ ಬಳಿ ಹೋಗಲು ನಿಯೋಜಿಸಿ, ಸಂಘದ ಅಪ್ಪಣೆಯನ್ನು ಅತಿಕ್ರಮಿಸುವಂತಹವರಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕೆಂದು ಅವರನ್ನು ಪ್ರಶ್ನಿಸಬೇಕೆಂದು ಮತ್ತು ಅದೇ ಶಿಕ್ಷೆಯನ್ನು ಅವರಿಗೆ ಸಂಘವು ವಿಧಿಸಿದೆಯೆಂದು ಹೇಳಬೇಕೆಂದು ಆದೇಶವಿತ್ತಿತು. ತಮ್ಮಿಂದಾದ ದೋಷಕ್ಕಾಗಿ ಶ್ರೀ ಸಂಘವು ಬಹಿಷ್ಕಾರಶಿಕ್ಷೆ ವಿಧಿಸಿದೆಯೆಂಬುದನ್ನರಿತ ಭದ್ರಬಾಹುಸ್ವಾಮಿಯವರು ಬೋಧನಸಮಯದಲ್ಲಾಗಲೀ ಅಥವಾ ಬೇರಾವ ಸಮಯದಲ್ಲಾಗಲೀ, ತಾವು ಶಿಷ್ಯನೊಡನೆ ಮಾತನಾಡದಿರುವುದಾಗಿಯೂ ಹಾಗೂ ಶಿಷ್ಯನೂ ಮಾತನಾಡಬಾರದೆಂಬುದಾಗಿಯೂ ಮತ್ತು ದಿನವೊಂದರಲ್ಲಿ ಏಳುಬಾರಿ ಪಾಠಬೋಧೆ ಮಾಡುವುದಾಗಿಯೂ ನಿಬಂಧನವಿಟ್ಟು ದಿಟ್ಠಿವಾಯವನ್ನು ಬೋಧಿಸಲೊಪ್ಪಿದರು. ಸಂಘಕ್ಕೆ ಈ ನಿಬಂಧನೆಯು ಸಮ್ಮತವೆನಿಸಿತು. ಅನಂತರ, ಪ್ರತ್ಯೇಕವಾಗಿ ಇಬ್ಬಿಬ್ಬರು ಅನುಚರರಿಂದ ಕೂಡಿದ ಐದುನೂರು ಸಾಧುಗಳು ನೇಪಾಲಕ್ಕೆ ಬಂದು ಅಧ್ಯಯನವನ್ನಾರಂಭಿಸಿದರು. ಆದರೆ ಸನ್ನಿವೇಶವನ್ನು ಭರಿಸಲಾರದೆ, ಸ್ಥೂಲಭದ್ರಾಚಾರ್ಯರೊಬ್ಬರ ಹೊರತಾಗಿ ಮಿಕ್ಕೆಲ್ಲರೂ ಅಲ್ಲಿಂದ ನಿವೃತ್ತರಾದರು. ಸ್ಥೂಲಭದ್ರರಿಗೂ ೧೪ ಪೂರ್ವಗಳ ಪರಿಪೂರ್ಣಅಧ್ಯಯನಮಾಡಲಾಗಲಿಲ್ಲ. ಭದ್ರಬಾಹುಸ್ವಾಮಿಯವರು ಈ ಮುಂದಿನ ಕಾರಣದಿಂದ, ಕೊನೆಯ ನಾಲ್ಕು ಪೂರ್ವಗಳ ಅರ್ಥಬೋಧೆಯನ್ನು ಸ್ಥೂಲಭದ್ರರಿಗೀಯದೆ ತಡೆಹಿಡಿದರು."[2]

---

1 ಈ ಸಾಧುಸಮ್ಮೇಳನದಲ್ಲಿ ಪ್ರತಿಯೊಬ್ಬ ಸಾಧುವಿನ ನೆನಪಿನಲ್ಲಿ ಉಳಿದಿದ್ದ ಪವಿತ್ರ ಆಗಮಜ್ಞಾನವನ್ನು ಸಂಕಲನಮಾಡಿ ಹನ್ನೊಂದು ಅಂಗಶಾಸ್ತ್ರಗಳ ಪೂರ್ಣಪಾಠವನ್ನು ರೂಪಿಸಲಾಯಿತೆಂದು ಹೇಳಿದೆ—ಪೂ. ಸೂ. ಶ್ರ. ಭ. ಮಹಾವೀರಗ್ರಂಥ—ಪು. ಸಂ. ೨೩೨

2 ಪೂ. ಸೂ. 'ಶ್ರ. ಭ. ಮಹಾವೀರ'—ಪು. ಸಂ. ೨೩೩.

ಶ್ರುತಕೇವಲಿ ಆಚಾರ್ಯ ಸಂಭೂತಿವಿಜಯಸ್ವಾಮಿಯವರು ಮಹಾವೀರ ಸಂವತ್ ೧೫೬ ರಲ್ಲಿ ಸ್ವರ್ಗಸ್ಥರಾದರು. ಈ ತರುವಾಯ ಭದ್ರಬಾಹುಸ್ವಾಮಿಯವರು ನೇಪಾಲದಿಂದ ಪಾಟಲೀಪುತ್ರಕ್ಕೆ ಹಿಂದಿರುಗಿ ಬಂದು ಸಂಘಾಧಿಪತಿಗಳಾಗಿ ೧೪ ವರ್ಷಕಾಲವಿದ್ದರು.

ಸ್ಥೂಲಭದ್ರರ ಏಳು ಜನ ಸಹೋದರಿಯರು ಭಗವತೀ ದೀಕ್ಷೆಯನ್ನು ಕೈಗೊಂಡಿದ್ದರು. ಇವರು ಭದ್ರಬಾಹುಸ್ವಾಮಿಯವರ ಬಳಿ ಹೋಗಿ ಸ್ಥೂಲಭದ್ರರ ದರ್ಶನಾವಕಾಶಕ್ಕಾಗಿ ಅನುಮತಿ ಕೋರಿದರು. ನೆರೆಯ ಗುಹೆಯಲ್ಲಿ ಅವರನ್ನು ಕಾಣುವಂತೆ ಭದ್ರಬಾಹುಸ್ವಾಮಿಯವರು ಹೇಳಿದರಾಗಿ, ಸ್ಥೂಲಭದ್ರರ ಸಹೋದರಿಯರು ಅಲ್ಲಿಗೆ ಹೋದರು. ಆದರೆ ಸ್ಥೂಲಭದ್ರರು ತಮ್ಮ ವಿದ್ಯಾಪ್ರಭಾವದಿಂದ ಲಬ್ಧವಾದ ಅತಿಮಾನುಷಶಕ್ತಿಯನ್ನು ತೋರುವುದಕ್ಕಾಗಿ ಸಿಂಹದ ಆಕೃತಿಯನ್ನು ತಳೆದು ಕುಳಿತಿದ್ದರು. ಈ ಸಿಂಹವನ್ನು ಕಂಡು ಹೆದರಿದ ಸ್ಥೂಲಭದ್ರರ ಸಹೋದರಿಯರು ಭದ್ರಬಾಹುಸ್ವಾಮಿಯವರ ಬಳಿ ಹೋಗಿ, ಆ ವಿಷಯವನ್ನು ತಿಳಿಸಿದರು. ಭದ್ರಬಾಹುಸ್ವಾಮಿಯವರು ವಾಸ್ತವವಾದ ವಿಷಯವೇನೆಂಬುದನ್ನು ಮನಸ್ಸಿನಲ್ಲಿ ಅವಧರಿಸಿ ಹೋಗಿ ನೋಡಿರಿ, ಸ್ಥೂಲಭದ್ರರು ಅಲ್ಲಿಯೇ ಇರುವರು. ಎಂದು ಹೇಳಿದರು. ಅಂತೆಯೇ ಮರಳಿ ಬಂದ ಸಹೋದರಿಯರ ಯೋಗಕ್ಷೇಮವನ್ನು ಸ್ಥೂಲಭದ್ರರು ವಿಚಾರಿಸಿದರು. ಆದರೆ, ಸ್ಥೂಲಭದ್ರರು ಸಹೋದರಿಯರ ವಿನೋದಾರ್ಥವಾಗಿ ಸಿಂಹರೂಪ ತಳೆದ ಪ್ರಸಂಗವು, ಅವರಿಗೆ ವಿಪತ್ಕಾರಕವಾಗಿ ಪರಿಣಮಿಸಿತು. ಕಲಿತಿದ್ದ ವಿದ್ಯಾಬಲದಿಂದ ಲಬ್ಧವಾದ ಅತಿಮಾನುಷಶಕ್ತಿಯನ್ನು ಸ್ಥೂಲಭದ್ರರು ದುರುಪಯೋಗಪಡಿಸಿಕೊಂಡರೆಂಬ ಕಾರಣದಿಂದ ಅವರಿಗೆ ದ್ವಾದಶಾಂಗದ ಅವಶಿಷ್ಟಭಾಗವನ್ನು ಉಪದೇಶಿಸಲು ಭದ್ರಬಾಹುಸ್ವಾಮಿಯವರು ನಿರಾಕರಿಸಿದರು. ನಡೆದ ಘಟನೆಗಾಗಿ ಸ್ಥೂಲಭದ್ರರು ಅತಿಶಯವಾಗಿ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದರಾದರೂ ಭದ್ರಬಾಹುಸ್ವಾಮಿಯವರು ಉಪದೇಶವನ್ನು ಮುಂದುವರಿಸಲು ನಿರಾಕರಿಸಿದರು. ಅಂತಿಮವಾಗಿ ಶ್ರೀಸಂಘದ ಒತ್ತಾಯದ ಮನಿವಿಯನ್ನಾದರಿಸಿ ಭದ್ರಬಾಹುಸ್ವಾಮಿಯವರು ಅಂತಿಮವಾದ ನಾಲ್ಕು ಪೂರ್ವಗಳ ಗ್ರಂಥಮಾತ್ರವನ್ನು ಉಪದೇಶಿಸಿದರಾದರೂ ಆದರ ಅರ್ಥವನ್ನು ಉಪದೇಶಿಸಲಿಲ್ಲ. ಈ ರೀತಿಯಾಗಿ[1] ಅಂತಿಮವಾದ ನಾಲ್ಕು ಪೂರ್ವಗಳ ಅರ್ಥವು ವೀರನಿರ್ವಾಣ ಸಂವತ್ ೧೭೦ ರಲ್ಲಿ ಸ್ವರ್ಗಸ್ಥರಾದ ಭದ್ರಬಾಹುಸ್ವಾಮಿಯವರೊಡನೆ ಮರೆಗೊಂಡಿತು. ಭದ್ರಬಾಹುಸ್ವಾಮಿಯವರು ಪದಾನುಪದಮಾತ್ರರೂಪದ ಅಂತಿಮ ಪೂರ್ವಚತುಷ್ಟಯವನ್ನು ಮತ್ತಾರಿಗೂ ಬೋಧಿಸಬಾರದೆಂಬ ನಿಬಂಧನಪೂರ್ವಕ ಸ್ಥೂಲಭದ್ರರಿಗೆ ಉಪದೇಶಿಸಿದ್ದರಾಗಿ ಮುಂದೆ ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾದ

---

1 ಪ್ರೊ. ಹೆಚ್. ಆರ್. ಕಾಪಡಿಆ ಅವರ ಉಲ್ಲೇಖಭಾಗ — ಪೂ. ಸೂ. 'ಶ್ರೀ. ಭ. ಮಹಾವೀರ'_ಪು. ಸಂ. ೨೧೬-೨೧೭.

ಬಳಿಕ ಅಂತಿಮ ಪೂರ್ವಚತುಷ್ಟಯದ ಪದಾನುಪದಮಾತ್ರರೂಪವೂ ಮರೆಗೊಂಡಿತು.[1]

ಶ್ರುತಕೇವಲಿ ಆಚಾರ್ಯ ಭದ್ರಬಾಹುಸ್ವಾಮಿಯವರು ತಮ್ಮ ೪೫ ನೇ ವರ್ಷದ ವಯೋಮಾನದಲ್ಲಿ ದೀಕ್ಷೆ ಕೈಗೊಂಡು ಮುಂದೆ ೩೧ ವರ್ಷಕಾಲ ಯತಿಜೀವನದಲ್ಲಿದ್ದರು. ಯತಿಜೀವನದ ೩೧ ವರ್ಷಗಳ ಅವಧಿಯಲ್ಲಿ ೧೭ ವರ್ಷಕಾಲ ಸಾಮಾನ್ಯ ಯತಿಯಾಗಿಯೂ, ತದನಂತರ ೧೪ ವರ್ಷಕಾಲ ಯುಗಪ್ರಧಾನರಾಗಿಯೂ ಇದ್ದು ತಮ್ಮ ೭೬ ನೇ ವಯೋಮಾನದಲ್ಲಿ ಮಹಾವೀರ ಸಂವತ್ ೧೭೦ ರಲ್ಲಿ ಸ್ವರ್ಗಸ್ಥರಾದರು.[2]

ಭದ್ರಬಾಹುಸ್ವಾಮಿಯವರ ಐತಿಹ್ಯವಿಷಯವು ತನ್ನ ಮೂಲರೂಪವನ್ನು ಕಳೆದುಕೊಂಡು, ಕವಲೊಡೆದು ಇತಿಹಾಸ ದೃಷ್ಟಿಯಿಂದ ಪ್ರಶ್ನಾರ್ಹವಾಗುವಂತೆ ವಿಭಿನ್ನತಾರೂಪಪಡೆದಿದೆಯೆಂದು ಮೇಲ್ಕಂಡ ಉಲ್ಲೇಖಗಳಿಂದ ವ್ಯಕ್ತವಾಗುವುದು. ಇಂತಿದ್ದರೂ ಈ ಐತಿಹ್ಯವು ಈ ರೀತಿಯಾಗಿ ವಿಭಿನ್ನತಾರೂಪತಳೆದಿರಲು ಕಾರಣವೇನೆಂಬುದನ್ನು ಗುರುತಿಸಿ, ಇದರ ಮೂಲಸ್ವರೂಪವೇನೆಂಬುದನ್ನು ವಿವೇಚಿಸಿ ರೂಪಿಸಲವಕಾಶವಿದೆ.

ಪೂರ್ವೋಲ್ಲಿಖಿತವಾದ ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯವು ಅಂಕಿತಗೊಂಡಿದೆಯೆಂದು ಸನ್ಮಾನ್ಯ ರೈಸ್‌ರವರು ಅಭಿಪ್ರಾಯಪಟ್ಟಿದ್ದಾರೆ.[3] ಆದರೆ ಈ ಶಾಸನದಲ್ಲಿ ಗೌತಮಾದಿ ಬುದ್ಧಿಲಪರ್ಯಂತ

---

1 ಸ್ಥೂಲಭದ್ರರ ಶ್ರುತಜ್ಞಾನ ಪರಿಮಿತಿಯ ವಿಷಯವಾಗಿ ಖರತರಗಚ್ಛ ಪಟ್ಟಾವಲಿಯಲ್ಲಿ ವೃದ್ಧಮತವೊಂದನ್ನು ಈ ಮುಂದಿನಂತೆ ಉಲ್ಲೇಖಿಸಿದೆ. "ದಸಪೂರ್ವಾಣಿ ವಸ್ತುದ್ವಯೇನ ನ್ಯೂನಾನಿ ಸೂತ್ರತೋ ಅರ್ಥತಶ್ಚ ಪಪಾಠ. ಅಂತ್ಯಾನಿ ಚತ್ವಾರಿ ಪೂರ್ವಾಣಿ ತು ಸೂತ್ರತಏವ ಅಧೀತವಾನ್ ನ ಅರ್ಥತ ಇತಿ ವೃದ್ಧಪ್ರವಾದಃ" ಅರ್ಥ: ವಸ್ತು ದ್ವಯದಿಂದ ನ್ಯೂನವಾದ ದಶಪೂರ್ವಗಳ ಸೂತ್ರಪಾಠ ಮತ್ತು ಅರ್ಥಗಳೆರಡನ್ನೂ ಅಧ್ಯಯನಮಾಡಿದರು. ಅಂತಿಮವಾದ ನಾಲ್ಕು ಪೂರ್ವಗಳ ಸೂತ್ರಪಾಠವನ್ನು ಮಾತ್ರ ಅಧ್ಯಯನಮಾಡಿದರು. ಇದರಿಂದ ಸ್ಥೂಲಭದ್ರರು ದಶಪೂರ್ವಗಳಲ್ಲಿಯೂ ಪರಿಪೂರ್ಣರೀತಿಯಿಂದ ಪಾರಗಾಮಿಗಳಾಗಿರಲಿಲ್ಲೆಂದು ಅಭಿಪ್ರಾಯವಾಗುವುದು.

2 ಮಹಾವೀರ ಸಂವತ್ ೧೪೮ ರಲ್ಲಿ ಸ್ವರ್ಗಸ್ಥರಾದ ಶ್ರುತಕೇವಲಿ ಯಶೋಭದ್ರಸ್ವಾಮಿಯವರು, ಆಚಾರ್ಯ ಸಂಭೂತಿವಿಜಯಸ್ವಾಮಿಯವರನ್ನು ಮತ್ತು ಭದ್ರಬಾಹುಸ್ವಾಮಿಯವರನ್ನು ಜೋಡಿಯಾಗಿ ಸಂಘಾಧಿಪತಿಗಳನ್ನಾಗಿ ಅಧಿಕರಿಸಿದರೆಂದೂ ಹೇಳಲಾಗಿದೆ.

[ಪೂ. ಸೂ. 'ಶ್ರ. ಭ. ಮಹಾವೀರ'–ಪು. ಸಂ. ೨೦೯]

3 ಶ್ರವಣಬೆಳಗುಳದ ಶಾಸನಗಳ ಗ್ರಂಥ–ಪು. ಸಂ. ೨ ಮತ್ತು ೩.

ರಾದ ಆಚಾರ್ಯರ ಹೆಸರುಗಳಲ್ಲೊಂದಾಗಿ ಶ್ರುತಕೇವಲಿ ಭದ್ರಬಾಹುಆಚಾರ್ಯರ ಹೆಸರು ನಿರ್ದೇಶಿತವಾಗಿರುವುದಾದರೂ ಈ ಶಾಸನಗತವಾದ ಐತಿಹ್ಯವು 'ಭದ್ರಬಾಹು' ಎಂಬ ಹೆಸರಿನ ಮತ್ತೊಬ್ಬ ಆಚಾರ್ಯರನ್ನಧಿಕರಿಸಿದ್ದಾಗಿದೆಯೆಂಬುದು ಸ್ವಯಂ ಸ್ಪಷ್ಟ ವಿದೆ. ಗೌತಮ ಮಹರ್ಷಿಯಾದಿಯಾಗಿ ಎಂಟನೆಯದಾದ 'ಭದ್ರಬಾಹು' ಎಂಬ ಹೆಸರು ಚತುರ್ದಶಪೂರ್ವಿಗಳಲ್ಲಿ ಕೊನೆಯವರೆಂದು ಸಂಸ್ತುತರಾಗಿರುವ ಶ್ರುತಕೇವಲಿ ಭದ್ರ ಬಾಹುಸ್ವಾಮಿಯವರ ನಿರ್ದೇಶಕವಾಗಿದೆ. ಈ ಹೆಸರಿನಿಂದ ಮುಂದಿನ ವಿಶಾಖಾದಿ, ಬುದ್ಧಿಲಪರ್ಯಂತವಾದ ಹೆಸರುಗಳು, ನಂ. ಆ. ಪಟ್ಟಾವಲಿಗಳೇ ಮೊದಲಾದ ಇತಿ ವೃತ್ತಕೃತಿಗಳಲ್ಲಿ, ದಶಪೂರ್ವಿಗಳ ಹೆಸರುಗಳಾಗಿ ನಿರ್ದೇಶಿತವಾಗಿರುವುದು ವಿದಿತವಿದೆ. ಗೌತಮಾದಿ ಬುದ್ಧಿಲಪರ್ಯಂತರಾದ ಆಚಾರ್ಯರ ತರುವಾಯಕಾಲದ ಆಚಾರ್ಯ ಮಹಾಪುರುಷ ಸಂತತಿಯಲ್ಲೊಬ್ಬರಾಗಿ ಮತ್ತೊಬ್ಬರು 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರಾಗಿರುವರೆಂದೂ ಮತ್ತು ಈ ಶಾಸನದ ಐತಿಹ್ಯವು ಈ ಮತ್ತೊಬ್ಬರಾದ ಭದ್ರಬಾಹುಆಚಾರ್ಯರನ್ನಧಿಕರಿಸಿದ್ದಾಗಿರುವುದೆಂದೂ ಶಾಸನದ '.... ಬುದ್ಧಿಲಾದಿ ಗುರುಪರಂಪರೀಣ ಕ್ರಮಾಭ್ಯಾಗತ ಮಹಾಪುರುಷಸಂತತಿ ಸಮವದ್ಯೋತಿತಾನ್ವಯ ಭದ್ರಬಾಹುಸ್ವಾಮಿನಾ' ಎಂಬ ಹೇಳಿಕೆಯಿಂದ ಸ್ಪಷ್ಟವಾಗಿ ಸೂಚಿತವಾಗುವುದು. ನಂ. ಆ. ಪಟ್ಟಾವಲಿಗಳೇ ಮೊದಲಾದ ಗುರ್ವಾವಲಿಗಳಲ್ಲಿ ಸರ್ವಸಾಧಾರಣವಾಗಿ, ದಶ ಪೂರ್ವಿಗಳ ತರುವಾಯ ಏಕಾದಶಾಂಗಶ್ರುತಧರವರ್ಗದ ಆಚಾರ್ಯರನ್ನು ಹೆಸರಿ ಸಿದೆ. ಈ ಏಕಾದಶಾಂಗ ಶ್ರುತಧರ ಆಚಾರ್ಯರ ತರುವಾಯ ನಂ. ಆ. ಪಟ್ಟಾವಲಿಯ 'ಎ' ಮತ್ತು 'ಸಿ' ಪ್ರತಿಗಳಲ್ಲಿ ದಶ ಮತ್ತು ನವ ಅಂಗಶ್ರುತಧರರನ್ನೂ ತದನಂತರ ಅಷ್ಟಅಂಗ ಶ್ರುತಧರರಾದ ಭದ್ರಬಾಹುಸ್ವಾಮಿಯವರನ್ನೂ ನಿರ್ದೇಶಿಸಿರುವುದು ವಿದಿತ ವಿದೆ. ನಂ. ಆ. ಪಟ್ಟಾವಲಿಯ ಈ ಪ್ರತಿಗಳ ಹೊರತಾಗಿ ಮಿಕ್ಕ ಎಲ್ಲ ಗುರ್ವಾವಲಿ ಗಳಲ್ಲಿ ಏಕಾದಶಾಂಗಶ್ರುತಧರ ಆಚಾರ್ಯವರ್ಗದ ತರುವಾಯ ಆಚಾರಾಂಗವೆಂಬ ಏಕಅಂಗಶ್ರುತಧರ ಆಚಾರ್ಯವರ್ಗವನ್ನು ಹೆಸರಿಸಲಾಗಿದ್ದು, ಮಹಾಪುರಾಣದಲ್ಲಿ ಪ್ರಸಂಗವಶವಾಗಿ ಉಕ್ತವಾಗಿರುವ ಗುರ್ವಾವಲಿಯನುಗುಣವಾಗಿ, ಆಚಾರಾಂಗಧರ ರಲ್ಲಿ ಅಂತಿಮ ಆಚಾರ್ಯರಾದ ಲೋಹಾಚಾರ್ಯರ ಪೂರ್ವಾಚಾರ್ಯರು ಅರ್ಥಾತ್ ಉಪಾಂತ್ಯ ಆಚಾರ್ಯರು 'ಭದ್ರಬಾಹು' ಎಂಬ ಹೆಸರಿನವರಾಗಿದ್ದಾರೆ. ಇಂತೆಯೇ ಏಕಾದಶಾಂಗಶ್ರುತಧರ ಆಚಾರ್ಯವರ್ಗದ ತರುವಾಯ ನೇರವಾಗಿ ಆಚಾರಾಂಗ ಧರ ಆಚಾರ್ಯಪರಂಪರೆಯನ್ನು ನಿರ್ದೇಶಿಸಿರುವ ನಂ. ಆ. ಪಟ್ಟಾವಲಿಯ 'ಇ' ಪ್ರತಿಯಲ್ಲಿಯೂ ಆಚಾರಾಂಗಶ್ರುತಧರಆಚಾರ್ಯರನ್ನು 'ಭದ್ರಬಾಹು' ಎಂದು ಹೆಸರಿಸಿರುವುದಲ್ಲದೆ, ಇವರ ತರುವಾಯ ಮತ್ತೂ ಒಬ್ಬರು ಇದೇ ಹೆಸರಿನ ಆಚಾರ್ಯ ರಿದ್ದರೆಂಬ ಅಭಿಪ್ರಾಯಕ್ಕವಕಾಶವಾಗುವಂತೆ, 'ತೃತೀಯ ಭದ್ರಬಾಹು' ಎಂದು ನಿರ್ದೇಶಿಸಿದೆ. ಆದ್ದರಿಂದ ಪೂರ್ವೋಲ್ಲಿಖಿತ ೧ ನೇ ಶಾಸನದ, 'ಬುದ್ಧಿಲಾದಿ ಗುರು ಪರಂಪರೀಣ ಕ್ರಮಾಭ್ಯಾಗತ' ಎಂಬ ಉಕ್ತಿಯ ಅನಂತರವರ್ತಿಯಾಗಿರುವ 'ಮಹಾ

ಪುರುಷ ಸನ್ತತಿ' ಎಂಬ ಪದಬಂಧವು ಏಕಾದಶಾಂಗಶ್ರುತಧರಾದಿ ಆಚಾರ್ಯಸಂತತಿಯ ಸೂಚಕವಾಗಿರುವುದೆಂದೂ ಮತ್ತು ಈ ಶಾಸನದ ಐತಿಹ್ಯವು ಅಷ್ಟ ಅಂಗಶ್ರುತಧರ ಭದ್ರಬಾಹುಸ್ವಾಮಿಯವರನ್ನು ಅಥವಾ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರನ್ನು ಅಧಿಕರಿಸಿದ್ದಾಗಿರಬೇಕೆಂದು ಗ್ರಹಿಸಲವಕಾಶವಾಗುವುದು.[1]

೧ ನೇ ಅಂಕದ ಶಾಸನವು ರಚಿತವಾದ ಅನತಿದೀರ್ಘಸಮಯದಲ್ಲಿಯೇ ಪೂರ್ವೋಲ್ಲಿಖಿತವಾಗಿರುವ ೧೭ ನೇ ಅಂಕದ ಶಾಸವು ರಚಿತವಾಗಿರುವುದೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇಷ್ಟಲ್ಲದೆ, ಈ ಎರಡು ಶಾಸನಗಳು ಏಕೈಕ ಶಿಲಾತಲದಲ್ಲಿ ಉತ್ಕೀರ್ಣವಾಗಿದ್ದು ಬಹುಸಮೀಪವರ್ತಿಯಾದ ಸ್ಥಾನಗಳಲ್ಲಿ ಸಂನಿವಿಷ್ಟವಾಗಿವೆ. ಇದರಿಂದ ೧೭ ನೇ ಅಂಕದ ಶಾಸನರಚನಕಾರರಿಗೆ ೧ ನೇ ಶಾಸನಗತವಾದ ಐತಿಹ್ಯ ವಿಷಯವು ತಿಳಿದಿರಲಿಲ್ಲೆಂದು ಹೇಳಲಾಗುವುದಿಲ್ಲ. ಈ ೧೭ ನೇ ಶಾಸನ ಮತ್ತು ಇದೇ ಸ್ಥಳದ ೪೦ ನೇ, ೫೪ ನೇ ಮತ್ತು ೧೦೮ ನೇ ಅಂಕಗಳ ಶಾಸನಗಳು ಹಾಗೂ ಶ್ರೀರಂಗಪಟ್ಟಣದ ಗೌತಮಕ್ಷೇತ್ರದ ಶಾಸನಗಳಲ್ಲಿ ಶ್ರುತಕೇವಲಿ ಭದ್ರಬಾಹುಸ್ವಾಮಿ ಮತ್ತು ಇವರ ಶಿಷ್ಯರಾದ ಚಂದ್ರಗುಪ್ತ ಮುನಿಗಳ ಐತಿಹ್ಯವು ಅಂಕಿತಗೊಂಡಿದೆಯೆಂಬುದರಲ್ಲಿ ಸಂಶಯವಿಲ್ಲ. ಪೂರ್ವೋಲ್ಲಿಖಿತವಾದ ಶ್ರೀರಂಗಪಟ್ಟಣದ ಗೌತಮಕ್ಷೇತ್ರದ ಶಾಸನಗಳಲ್ಲಿ, ಕಳ್ಬಪ್ಪುವು (=ಶ್ರ. ಬೆಳಗುಳದ ಚಿಕ್ಕಬೆಟ್ಟ ಚಂದ್ರಗಿರಿಯು) ಭದ್ರಬಾಹುಸ್ವಾಮಿ ಮತ್ತು ಚಂದ್ರಗುಪ್ತಮುನಿಗಳ ಚರಣಮುದ್ರಾಂಕಿತವಾಗಿರುವುದೆಂದು ಹೇಳಿರುವುದು ಸ್ಪಷ್ಟವಿದೆ. ಶ್ರವಣಬೆಳಗುಳದ ಚಂದ್ರಗಿರಿಯ ಮೇಲೆ ಭದ್ರಭಾಹುಗುಹೆಯಲ್ಲಿರುವ ಪಾದಜೋಡಿ ಮತ್ತು ಈ ಗುಹೆಯ ಮುಂಭಾಗದಲ್ಲಿರುವ ಪಾದಜೋಡಿಗಳು ಶ್ರುತಕೇವಲಿ ಭದ್ರಬಾಹುಸ್ವಾಮಿ ಮತ್ತು ಚಂದ್ರಗುಪ್ತಮುನಿಗಳ ಪಾದಲಾಂಛನಗಳಾಗಿವೆಯೆಂದು ಇಂದಿಗೂ ಅಭಿವಂದಿತವಾಗಿವೆ. ಇದರಿಂದ ಸನ್ಮಾನ್ಯ ರೈಸ್‌ರವರು ಅಭಿಪ್ರಾಯಪಟ್ಟಿರುವಂತೆ, ಗೌತಮಕ್ಷೇತ್ರದ ಶಾಸನಗಳ ರಚನಾ ಕಾಲವಾದ ಕ್ರಿ. ಶ. ೯ ನೇ ಶತಮಾನಕಾಲದಲ್ಲಿಯೂ ಪೂರ್ವೋಕ್ತವಾದ ಪಾದಚಿಹ್ನೆಗಳು ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಮತ್ತು ಚಂದ್ರಗುಪ್ತಮುನಿಗಳ ಪಾದಲಾಂಛನಗಳೆಂದು ಸಂಸ್ತುತವಾಗಿದ್ದುವೆಂದು ವ್ಯಕ್ತವಾಗುವುದು. ಆದ್ದರಿಂದ ೧ ನೇ ಅಂಕದ ಶಾಸನಾಧಿಕೃತ ಭದ್ರಬಾಹುಸ್ವಾಮಿಯವರ ಐತಿಹ್ಯದಿಂದ ಬೇರೆಯಾದ ಶ್ರುತಕೇವಲಿ ಭದ್ರ

---

1 ನಂ. ಆ. ಪಟ್ಟಾವಲಿಯ ಇ ಪ್ರತಿಯಲ್ಲಿ ಆಚಾರಾಂಗ ಶ್ರುತಧರರಲ್ಲೊಬ್ಬರಾಗಿ ನಿರ್ದೇಶಿತರಾಗಿರುವ ಭದ್ರಬಾಹುಸ್ವಾಮಿಯವರು, ವಾಸ್ತವವಾಗಿ ಅಷ್ಟಅಂಗಶ್ರುತಧರ ಭದ್ರಬಾಹುಸ್ವಾಮಿಯವರಾಗಿಯೂ ಮತ್ತು ಇದರಲ್ಲಿ ನಿರ್ದೇಶಿತರಾಗಿರುವ ತೃತೀಯ ಭದ್ರಬಾಹುಸ್ವಾಮಿಯವರು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರಾಗಿಯೂ ಇದ್ದರೆಂಬುದನ್ನು ಮುಂದೆ ಸ್ಪಷ್ಟೀಕರಿಸಲಾಗುವುದು.

ಬಾಹುಸ್ವಾಮಿಯವರನ್ನಧಿಕರಿಸಿದ ಐತಿಹ್ಯವು ಪೂರ್ವೋಕ್ತವಾದ ೧೭ ನೇ ಅಂಕದ ಶಾಸನ ಹಾಗೂ ಇತರ ಶಾಸನಗಳು ರಚಿತವಾದ ಕಾಲಾವಧಿಯಲ್ಲಿ ಇದ್ದಿತೆಂದು ಸೂಚಿತವಾಗುವುದು. ಇಷ್ಟಲ್ಲದೆ, ೧ ನೇ ಅಂಕದ ಶಾಸನಗತವಾದ ಉಕ್ತಿಯಲ್ಲಿಯೂ ಇದೇ ರೀತಿಯಾದ ಸೂಚನೆಯಿರುವುದನ್ನು ಗಮನಿಸಬಹುದು. ಈ ಶಾಸನದ ಐತಿಹ್ಯಾಧಿಕೃತ ಭದ್ರಬಾಹುಸ್ವಾಮಿಯವರು ಉತ್ತರಾಪಥದಿಂದ ದಕ್ಷಿಣಾಪಥದತ್ತ ('ಆರ್ಷೇಣೈವ ........ ಪ್ರಾಪ್ತವಾನ್') ಆರ್ಷಮಾರ್ಗದಿಂದ ಪ್ರಯಾಣಮಾಡಿಬಂದು ಕಳ್ಬಪ್ಪುವನ್ನು ಸೇರಿದರೆಂದು ಹೇಳಿದೆ. ಇದರಿಂದ ಈ ಭದ್ರಬಾಹುಸ್ವಾಮಿಯವರ ಕಾಲದಲ್ಲಿ ಉತ್ತರಾಪಥದಿಂದ ಪಯಣಮಾಡಿ ಕಳ್ಬಪ್ಪುವನ್ನು (=ಶ್ರವಣಬೆಳಗುಳ ವನ್ನು) ಸೇರುವ ಆರ್ಷಮಾರ್ಗವೊಂದಿದ್ದಿತೆಂದು ಲಕ್ಷಿತವಾಗುವುದಲ್ಲದೆ ಈ ಆಚಾ ರ್ಯರ ಕಾಲದಲ್ಲಿ ಈ ಕಳ್ಬಪ್ಪುವು ನಿರ್ಗ್ರಂಥಯತಿಸಂಘಕ್ಕೆ ವಿಹರಣಾರ್ಹವಾದ ಕ್ಷೇತ್ರವೆನಿಸಿದ್ದಿತೆಂದೂ ಸೂಚಿತವಾಗುವುದು. ಇಷ್ಟಲ್ಲದೆ ಈ 'ಆರ್ಷೇಣೈವ' ಎಂಬ ಪದದಲ್ಲಿ ಪೂರ್ವೈತಿಹ್ಯಸೂಚಕವಾದ ಮತ್ತೂ ಒಂದು ಅರ್ಥವು ಅಂತರ್ಗತವಾಗಿದೆ ಯೆಂದು ಹೇಳಲವಕಾಶವಿದೆ. ಉತ್ತರಾಪಥದಲ್ಲಿ ನಿರ್ಗ್ರಂಥಧರ್ಮಬದ್ಧವಾದ ಯತಿ ಜೀವನವನ್ನು ನಡೆಸಲು ಸಾಧ್ಯವಾಗಲಾರದೆಂಬುದನ್ನು ಮನಗಂಡ ಶ್ರುತಕೇವಲಿ ಭದ್ರ ಬಾಹುಸ್ವಾಮಿಯವರು ಅದರ ಪರಿಹಾರರೂಪವಾಗಿ ಯಾವ ಮಾರ್ಗವನ್ನನುಸರಿಸಿ ದರೋ ಅದು ಈ ಶಾಸನದ ಐತಿಹ್ಯಾಧಿಕೃತ ಭದ್ರಬಾಹುಸ್ವಾಮಿಯವರಿಗೆ 'ಆರ್ಷ ಮಾರ್ಗ' ವಾಗಿದ್ದಿತೆಂಬ ಅರ್ಥವೂ ಈ ಉಕ್ತಿಯಲ್ಲಿ ಅಂತರ್ಗತವಾಗಿದೆ. ಇನ್ನಾವ ರೀತಿಯಿಂದಲೂ 'ಆರ್ಷೇಣೈವ' ಎಂಬ ಈ ಪದಪ್ರಯೋಗದ ಸಾರ್ಥಕತೆಯನ್ನು ಕಾಣ ಲಾಗುವುದಿಲ್ಲ. ಆದ್ದರಿಂದ ಈ ಶಾಸನದ ರಚನಕಾರರು ಶ್ರುತಕೇವಲಿ ಭದ್ರಬಾಹು ಸ್ವಾಮಿಯವರಿಗೆ ಸಂಬಂಧಿಸಿದ ಪೂರ್ವೈತಿಹ್ಯದ ಸೂಚನಾರ್ಥವಾಗಿಯೇ ಈ 'ಆರ್ಷೇ ಣೈವ' ಎಂಬ ಪದವನ್ನು ಪ್ರಯೋಗಿಸಿರುವರೆಂದು ಅಧಿಗತವಾಗುವುದು. ಆದ್ದರಿಂದ ಪೂರ್ವೋಲ್ಲಿಖಿತವಾದ ಶಾಸನಗಳ ಹೇಳಿಕೆಗಳಾಧಾರದಿಂದ ಶ್ರುತಕೇವಲಿ ಭದ್ರಬಾಹು ಸ್ವಾಮಿಯವರು ಹಾಗೂ ಇವರ ತರುವಾಯದ ಆಚಾರ್ಯಸಂತತಿಯಲ್ಲಿ ೧೮ ನೆಯ ಅಥವಾ ೨೨ ನೆಯವರಾದ 'ಭದ್ರಬಾಹು' ಎಂಬ ಹೆಸರಿನ ಮತ್ತೊಬ್ಬ ಆಚಾರ್ಯರು ಕಳ್ಬಪ್ಪುವಿನಲ್ಲಿ ಸಮಾಧಿಮರಣಪಡೆದಿರುವರೆಂದು ಗ್ರಹಿಸಲವಕಾಶವಾಗುವುದು.

ವಡ್ಡಾರಾಧನೆಯ ಪೂರ್ವೋಲ್ಲಿಖಿತವಾದ ಭದ್ರಬಾಹು ಭಟಾರ ಕಥಾಪ್ರರೂ ಪಣೆಯಲ್ಲಿ, ಇದೇ ಕೃತಿಯ ಇತರ ಕಥೆಗಳ ಪ್ರರೂಪಣೆಯ ಅಪೇಕ್ಷೆಯಿಂದ, ವಿಶಿಷ್ಟ ವೆನಿಸಿ ಕಂಡುಬರುವ ಅಂಶವೊಂದು ಪ್ರಕೃತಸಂದರ್ಭದಲ್ಲಿ ಗಮನಾರ್ಹವಾಗಿದೆ ಉಪಸರ್ಗಸಹನೆಯ ಪೂರ್ವಕ ಸಮಾಧಿಮರಣಪಡೆದು ಸ್ವರ್ಗಾಪವರ್ಗಭಾಜನರಾದ ಮುನಿಗಳ ಜೀವನಸಂಗತಿಯು ಈ ಕೃತಿಯಲ್ಲಿರುವ ಎಲ್ಲ ಕಥೆಗಳ ಕೇಂದ್ರವಿಷಯ ವಾಗಿದೆ. ಅಂತೆಯೇ ಈ ಕೃತಿಯ ಪ್ರತಿಯೊಂದು ಕಥೆಯೂ ಮುನಿಗಳೊಬ್ಬೊಬ್ಬರ

ಹೆಸರಿನಿಂದ ನಾಮಕರಣಗೊಂಡಿದ್ದು, ಆಯಾಯ ಮುನಿಗಳು ಉಪಸರ್ಗಸಹನೆಯ ಪೂರ್ವಕ ಸ್ವರ್ಗಾಪವರ್ಗವನ್ನು ಪಡೆದ ಪ್ರಸಂಗದೊಡನೆ ಮುಕ್ತಾಯಗೊಳ್ಳುವುದು. ಆದರೆ ಭದ್ರಬಾಹುಭಟಾರರ ಕಥೆಯೊಂದು ಮಾತ್ರ, ಭದ್ರಬಾಹು ಭಟಾರರ ಸಮಾಧಿ ಮರಣಪ್ರಸಂಗಕಥನದೊಡನೆ ಮುಕ್ತಾಯಗೊಂಡಿರದೆ, ಮುಂದುವರಿದು ಶ್ವೇತಾಂಬರ ಮತ್ತು ಜಾಪುಲಿ ಯತಿಸಂಗಡಗಳ ಉದಯಪ್ರಸಂಗದ ಕಥನದೊಡನೆ ಮುಕ್ತಾಯ ಗೊಂಡಿದೆ. ಇದರಿಂದ ಭಿನ್ನಕಾಲೀನವೂ ಮತ್ತು ಭಿನ್ನವ್ಯಕ್ತ್ಯಾಶ್ರಿತವೂ ಆದ ಎರಡು ಐತಿಹ್ಯಪ್ರಸಂಗಗಳು ಇದರಲ್ಲಿ ಸಂಮಿಶ್ರಗೊಂಡು ಮೇಲ್ಕಂಡಂತೆ ಕಥಾರೂಪತಳೆದು ಉಳಿದುಬಂದಿರಬಹುದಾದ ಸಂಭವವಿದೆಯೆಂದು ಭಾವಿಸಲವಕಾಶವಾಗುವುದು. 'ಶ್ವೇತಾಂಬರ' ಮತ್ತು 'ದಿಗಂಬರ' ಎಂಬ ಪಂಥಭೇದವು ವೀ. ನಿ. ಪ. ೬೩೦-೬೩೧ ನೇ ವರ್ಷದಲ್ಲಿ ಏರ್ಪಟ್ಟಿರುವುದೆಂದು ಹಿಂದೆ ವಿವರಿಸಲಾಗಿದೆಯಲ್ಲದೆ, ಶ್ವೇತಾಂಬರ ಪಂಥವು ತೃತೀಯ ಭದ್ರಬಾಹುಸ್ವಾಮಿಯವರ ಪಟ್ಟಕಾಲದಲ್ಲಿ ಉದಯಗೊಂಡಿತೆಂಬ ಐತಿಹ್ಯಾಂಶವು ನಂ. ಆ. ಪಟ್ಟಾವಲಿಯ 'ಇ' ಪ್ರತಿಯಲ್ಲಿ ಉಳಿದುಬಂದಿರುವುದು ವಿದಿತ ವಿದೆ. ವೀ. ನಿ. ಪ. ೬೩೦-೬೩೧ ನೇ ವರ್ಷದಲ್ಲಿ ಆಚಾರಾಂಗ ಶ್ರುತಧರ ಭದ್ರ ಬಾಹುಸ್ವಾಮಿಯವರು ಪಟ್ಟಸ್ಥರಾಗಿದ್ದರೆಂದು ಪ್ರಮಾಣೀಕರಿಸುವ ಆಧಾರಗಳಿವೆಯಾ ದ್ದರಿಂದ ಈ ಆಚಾರ್ಯರಿಗೆ ಸಂಬಂಧಿಸಿದ ಐತಿಹ್ಯಾಂಶಗಳೇ ಮೇಲ್ಕಂಡ ಭದ್ರಬಾಹು ಭಟಾರರ ಕಥೆಯಲ್ಲಿ ಸಂಕಲಿತವಾಗಿವೆಯೆಂದು ನಿರ್ದಿಷ್ಟವಾಗುವುದು.

ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಮುಂಬರಲಿದ್ದ ದುಷ್ಕಾಲವನ್ನು ಎರಡು ನಿಮಿತ್ತಗಳ ಆಧಾರದಿಂದ ಮನಗಂಡುದಾಗಿ ಮೇಲ್ಕಂಡ ಭದ್ರ ಬಾಹುಭಟಾರ ಕಥೆಯಲ್ಲಿ ಹೇಳಿದೆ: ಒಂದನೆಯದಾಗಿ ಶ್ರುತಕೇವಲಿ ಭದ್ರಬಾಹು ಸ್ವಾಮಿಯವರು ತೊಟ್ಟಿಲ ಶಿಶುವೊಂದರ 'ಬೋಳಹ ಬೋಳಹ ಭಟಾರಾ' ಎಂಬ ವಚನ ನಿಮಿತ್ತದಿಂದ ಮುಂದೆ ಅನಾವೃಷ್ಟಿಯಪರಿಣಾಮವಾಗಿ ಕ್ಷಾಮಗಾಲವು ಬರುವು ದೆಂದರಿತು, (ತವ್ಮೊಡನಿರ್ದ) ರಿಸಿಯರ್ಕಳ್ಗೆಲ್ಲಂ ಬಳಿಯನಟ್ಟೆ ಬರಿಸಿ........'ದುರ್ಭಿಕ್ಷ ಮಾದಪ್ಪುದೀ ನಾಡೊಳಗಿರ್ದ ರಿಸಿಯರ್ಕಳ್ಗೆಲ್ಲಂ ಬೇಗಂ ಬಳಿಯಟ್ಟೆ ಬರಿಸಿಂ ಪೋಪಂ ದಕ್ಷಿಣಾಪಥಕ್ಕೆ' ಎಂದರು. ಪುನಃ ಎರಡನೆಯದಾಗಿ ಚಂದ್ರಗುಪ್ತರಾಜನ ಹದಿನಾರು ಸ್ವಪ್ನಫಲಗಳಲ್ಲೊಂದರ ನಿಮಿತ್ತದಿಂದ ಮುಂದೆ ಆ ನಾಡಲ್ಲಿ ಪನ್ನೆರಡು ವರ್ಷಂಬರಂ ರೌದ್ರಪಸವಮಾಗಲಿರುವುದನ್ನರಿತು ಮಧ್ಯದೇಶದೊಳಿರ್ದ ರಿಸಿಯರ್ಕ ಳ್ಗೆಲ್ಲಂ ಬಳಿಯಟ್ಟೆ ಬರಿಸಿ 'ಪನ್ನೆರಡುವರ್ಷಂಬರೆಗಮೀ ನಾಡೊಳನಾವೃಷ್ಟಿಯಾಗಿ ಮಹಾರೌದ್ರಪಸವಮಕ್ಕುಂ ಮಧ್ಯದೇಶಮೆಲ್ಲಂ ಪಾಳಕ್ಕುಮೀನಾಡೊಳಿರ್ದರಿಸಿಯ ರ್ಕಳ್ಗೆ ಬ್ರತಭಂಗಮುಪ್ಪುದರಿಂ ಪೋಪಂ ದಕ್ಷಿಣಾಪಥಕ್ಕೆ' ಎಂದರು. ಈ ರೀತಿ ಯಾಗಿ ಬರಗಾಲ ಬರಲಿರುವುದನ್ನು ಮೊದಲು ಒಂದು ನಿಮಿತ್ತದಿಂದ ತಿಳಿದು ನಾಡೊ ಳಿರ್ದ ರಿಸಿಯರ್ಕಳಿಗೆ ಕರೆಕಳುಹಿ, ಪುನಃ ಚಂದ್ರಗುಪ್ತನ ಹದಿನಾರು ಸ್ವಪ್ನಗಳ

ಲ್ಲೊಂದರ ನಿಮಿತ್ತದಿಂದ ಮಧ್ಯಪ್ರದೇಶದೊಳಿರುವ ಋಷಿಗಳಿಗೆ ವ್ರತಭಂಗವಾಗಲಿದೆ ಯೆಂಬುದನ್ನು ತಿಳಿದು ಮತ್ತೊಮ್ಮೆ ಮಧ್ಯದೇಶದೊಳಿರ್ದ ರಿಸಿಯರ್ಕಳಿಗೆ ಕರೆಕಳುಹುವ ಪ್ರಸಂಗವು ಕಥಾಸಂವಿಧಾನದಲ್ಲಿ ಕಂಡುಬರುವ ದ್ವಿರುಕ್ತಿ ಯಾಗಿರದೆ ಭಿನ್ನವಾದ ಘಟನೆಗಳೆರಡರ ಐತಿಹ್ಯಾಂಶಗಳ ಸಂಯೋಜನೆ ಯಾಗಿದೆಯೆಂದು ತರ್ಕಿಸಲವಕಾಶವಿದೆ. ಶ್ರವಣಬೆಳಗುಳದ ೧ ನೇ ಅಂಕದ ಶಾಸ ನಾಧಿಕೃತ ಭದ್ರಬಾಹುಸ್ವಾಮಿಯವರು ನಿಮಿತ್ತ ಒಂದರ ಆಧಾರದಿಂದ ದ್ವಾದಶ ಸಂವತ್ಸರಾವಧಿಯ ಕಾಲವೈಷಮ್ಯವಾಗಲಿರುವುದನ್ನು ಮುಂಗಂಡು ದಕ್ಷಿಣಾಪಥದತ್ತ ಪಯಣಕ್ಕೆಗೊಂಡರೆಂಬುದು ಆ ಶಾಸನದ ಐತಿಹ್ಯದಿಂದ ಸ್ಪಷ್ಟಗೊಂಡಿದೆ. ಆದ್ದರಿಂದ ಮೇಲ್ಕಂಡ ಭದ್ರಬಾಹುಭಟಾರ ಕಥೆಯಲ್ಲಿ ನಿರ್ದೇಶಿತವಾಗಿರುವ ನಿಮಿತ್ತಗಳೆರಡರ ಲ್ಲೊಂದು ಪೂರ್ವೋಕ್ತ ೧ ನೇ ಅಂಕದ ಶಾಸನಾಧಿಕೃತ ಭದ್ರಬಾಹುಸ್ವಾಮಿಯವರನ್ನ ಧಿಕರಿಸಿದ ಐತಿಹ್ಯಾಂಶವಾಗಿರುವುದೆಂದು ಗ್ರಹಿಸಲವಕಾಶವಾಗುವುದು. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಮತ್ತು ಚಂದ್ರಗುಪ್ತರಾಜನ ಗುರುಶಿಷ್ಯಭಾವವು ಸರ್ವ ಸಾಧಾರಣವಾಗಿ ಎಲ್ಲ ಐತಿಹ್ಯಾಧಾರಗಳಿಂದ ಸಾಕ್ಷೀಕೃತವಾಗಿರುವುದು. ಆದ್ದರಿಂದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಮುಂಬಲಿರುವ ದುಷ್ಕಾಲವನ್ನು ಚಂದ್ರ ಗುಪ್ತನ ಸ್ವಪ್ನನಿಮಿತ್ತದಾಧಾರದಿಂದ ತಿಳಿದರೆಂಬುದು ಸುಸಂಗತವಿದೆ. ಇದರಿಂದ, ಮತ್ತೊಂದು ನಿಮಿತ್ತವಾದ ಶಿಶುವಿನ 'ಬೋಳಹ ಬೋಳಹ ಭಟಾರ' ಎಂಬ ವಚನ ದಾಧಾರದಿಂದ, ಪೂರ್ವೋಕ್ತ ೧ ನೇ ಅಂಕದ ಶಾಸನಾಧಿಕೃತ ಭದ್ರಬಾಹುಸ್ವಾಮಿ ಯವರು .ಮುಂಬರಲಿದ್ದ ದ್ವಾದಶಸಂವತ್ಸರಾವಧಿಯ ಕಾಲವೈಷಮ್ಯವನ್ನು ತಿಳಿದ ರೆಂದು ಪರಿಭಾವಿತವಾಗುವುದು. ಪೂರ್ವೋಲ್ಲಿಖಿತ ಭದ್ರಬಾಹುಭಟಾರ ಕಥೆಯಲ್ಲಿ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರ ಐತಿಹ್ಯಾಂಶಗಳು ಸಂಕಲಿತವಾಗಿ ವೆಯೆಂಬುದನ್ನು ಹಿಂದೆ ಗುರುತಿಸಲಾಗಿದೆ. ಈ ಮೇಲ್ಕಂಡ ವಿವರಣೆಯಿಂದ ೧ ನೇ ಅಂಕದ ಶಾಸನಾಧಿಕೃತ ಭದ್ರಬಾಹುಸ್ವಾಮಿಯವರಿಗೆ ಸಂಬಂಧಿಸಿದ ಐತಿಹ್ಯಾಂಶವೂ ಭದ್ರಬಾಹುಭಟಾರ ಕಥೆಯು ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯ ದೊಡನೆ ಸಂಮಿಶ್ರಗೊಂಡಿದೆಯೆಂಬುದು ವ್ಯಕ್ತಪಟ್ಟಿದೆ. ಉತ್ತರಾಪಥದಲ್ಲಿ ಕ್ಷಾಮ ಗಾಲವು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರು ಆಚಾರ್ಯಪಟ್ಟಸ್ಥ ರಾಗಿದ್ದ ಅಂತಿಮಸಮಯದಪರಿಸರದಲ್ಲಿ ಉಂಟಾಗಿದೆಯೆಂದು ಐತಿಹ್ಯಾಂತರದಿಂದ ಸೂಚಿತವಾಗುವುದು.[1] ಆದ್ದರಿಂದ ಶ್ರ. ಬೆಳಗುಳದ ೧ ನೇ ಅಂಕದ ಶಾಸನದ ಐತಿಹ್ಯವು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರನ್ನಧಿಕರಿಸಿದ್ದಾಗಿದೆ ಯೆಂದು ನಿರ್ದಿಷ್ಟವಾಗುವುದು. ಇದರಿಂದ ಪೂರ್ವೋಲ್ಲಿಖಿತ ಭದ್ರಬಾಹುಭಟಾರರ

---

1 ಈ ಐತಿಹ್ಯಾಂತರ ವಿಷಯವನ್ನು ಆಚಾರ್ಯಪಟ್ಟಕಾಲಾನುಕ್ರಮದ ನಿರೂ ಪಣೆಯು ಅನಂತರ ವಿವರಿಸಲಾಗುವುದು.

ಕಥೆಯಲ್ಲಿ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯದೊಡನೆ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರ ಐತಿಹ್ಯಾಂಶಗಳು ಅಸ್ತವ್ಯಸ್ತರೀತಿಯಿಂದ ಸಂಮಿಶ್ರವಾಗಿವೆಯೆಂದು ಸ್ಫುಟಗೊಳ್ಳುವುದು. ಆ ಚಾ ರಾಂ ಗ ಶ್ರುತಧರ ಭದ್ರ ಬಾಹುಸ್ವಾಮಿಯವರು, ೧ ನೇ ಅಂಕದ ಶಾಸನದ ಹೇಳಿಕೆಯನುಗುಣವಾಗಿ ಮುಂಬರ ಲಿದ್ದ ಕ್ಷಾಮಗಾಲದಲ್ಲಿ ಯತಿಸಂಘದ ಆಚಾರಸಂರಕ್ಷಣೆಯ ಉದ್ದೇಶದಿಂದ, ಪೂರ್ವ ಕಾಲೀನಋಷಿಗಳಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರಿಂದ ಅಧಿಕೃತವೆನಿಸಿದ ಮಾರ್ಗ ಅಥವಾ ಪದ್ಧತಿಯನ್ನನುಸರಿಸಿ, ಉತ್ತರಾಪಥದಿಂದ ದಕ್ಷಿಣಾಪಥದತ್ತ ಪಯಣಮಾಡಿಬಂದು ಕಳ್ಬಪ್ಪುವಿನಲ್ಲಿ ಸಮಾಧಿಮರಣಹೊಂದಿರುವರೆಂಬುದರಲ್ಲಿ ಸಂಶ ಯವಿಲ್ಲ. ಆದರೆ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರಿಗೆ ಸಂಬಂಧಿಸಿದ ಕೆಲವು ಐತಿಹ್ಯಾಂಶಗಳು ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯಾಂಶಗಳೆನಿಸಿ ಕಥೆಗಳಲ್ಲಿ ಪರಿವರ್ತನೆಹೊಂದಿವೆಯಾಗಿ, ಇವರಿಗೆ ಸಂಬಂಧಿಸಿದ ವಾಸ್ತವ ಐತಿಹ್ಯಾಂಶ ಗಳೇನೆಂಬುದನ್ನು ಪರಿಷ್ಕರಿಸಿಬೇಕಾದ ಆವಶ್ಯಕತೆಯಿದೆ.

ಉತ್ತರಭಾರತದ ಮಧ್ಯದೇಶದಲ್ಲಿ ಹನ್ನೆರಡುವರ್ಷಕಾಲ ದುರ್ಭಿಕ್ಷವು ಸಂಘಟಿ ಸುವುದೆಂಬ ನಿಮಿತ್ತದಿಂದ ದಕ್ಷಿಣಾಪಥದತ್ತ ಪಯಣಕ್ಕೈಗೊಂಡು ಕಳ್ಬಪ್ಪುವಿನಲ್ಲಿ ಸಮಾಧಿಮರಣಪಡೆದವರು ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರೆಂದು ಮೇಲ್ಕಂಡ ವಿವರಣೆಯಿಂದ ವ್ಯಕ್ತಪಟ್ಟಿದೆ. ಇಂತೆಯೇ ಇವರಿಂದ ಸುಮಾರು ೪೭೦ ವರ್ಷಗಳ ಪೂರ್ವದಲ್ಲಿ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು, ಉತ್ತರಾಪಥದಿಂದ ದಕ್ಷಿಣಾಪಥದತ್ತ ಪಯಣಮಾಡಿ ಬಂದು ಕಳ್ಬಪ್ಪುವಿನಲ್ಲಿ ಸ್ವರ್ಗಸ್ಥರಾಗಿರುವರೆಂದು ಶಾಸನ ಮತ್ತು ಕಥಾಯತ್ತ ಐತಿಹ್ಯದಾಧಾರಗಳಿಂದ ನಿರ್ದೇಶಿತವಾಗುವುದು. ಆದರೆ ಇವರು ದಕ್ಷಿಣಾಪಥದತ್ತ ಪಯಣಕ್ಕೈಗೊಂಡುದಕ್ಕೆ ದ್ವಾದಶಸಂವತ್ಸರಾವಧಿಯ ಕ್ಷಾಮ ಗಾಲದ ಘಟನೆಯು ನಿಮಿತ್ತವಾಗಿರದೆ, ನಿರ್ಗ್ರಂಥಯತಿಗಳ ಚಾರಿತ್ರಪರಿಪಾಲನೆಗೆ ಆತಂಕಕಾರಿಯಾಗಿದ್ದ ಮತ್ತೊಂದು ಪ್ರಸಂಗವು ನಿಮಿತ್ತವಾಗಿರುವುದೆಂದು ಹೇಳಲವ ಕಾಶವಿದೆ.

ಬೌದ್ಧಆಮ್ನಾಯದ ಇತಿವೃತ್ತಕೃತಿಗಳಲ್ಲಿ, ಬಿಂಬಿಸಾರ ಶ್ರೇಣಿಕರಾಜನ ರಾಜ್ಯ ಭಾರಸಮಯದಾರಭ್ಯ ಮೌರ್ಯ ಅಶೋಕ ಸಾಮ್ರಾಟನ ರಾಜ್ಯಭಾರಸಮಯ ಪರ್ಯಂತದ ಇತಿಹಾಸಪ್ರಕರಣವು ಪ್ರರೂಪಿತವಾಗಿರುವುದು ವಿದಿತವಿದೆ. ಆದರೆ ಈ ಅವಧಿಯ ಮಧ್ಯವರ್ತಿಸಮಯದಲ್ಲಿ ಮಗಧರಾಜ್ಯದಲ್ಲಿ ಕ್ಷಾಮಗಾಲವುಂಟಾಗಿದ್ದಿತೆಂದು ಸಮರ್ಥನೆಗೊಡುವ ಯಾವ ಹೇಳಿಕೆಗಳೂ ಈ ಬೌದ್ಧಆಮ್ನಾಯದ ಕೃತಿಗಳಲ್ಲಿ ಉಪ ಲಬ್ಧವಿರುವುದಿಲ್ಲ. ಇಂತೆಯೇ ಮೌರ್ಯ ಚಂದ್ರಗುಪ್ತನು ರಾಜ್ಯಭಾರಾಧಿಷ್ಠಿತನಾದ ಪೂರ್ವಸಮಯ ಅಥವಾ ಅನಂತರ ಸಮಯಗಳ ಐತಿಹಾಸಿಕ ವಿಷಯವಾಗಿ ಅಲ್ಪ ಸ್ವಲ್ಪವಾದ ವಿವರಗಳನ್ನೀಯುವ ಗ್ರೀಕ್ ದೇಶಮೂಲದ ಐತಿಹ್ಯದಿಂದಲೂ ಆ ಸಮಯ

ದಲ್ಲಿ ಭಾರತದೇಶವು ದ್ವಾದಶಸಾಂವತ್ಸರಿಕವಾದ ಕ್ಷಾಮಗಾಲದಿಂದ ಸಂಪೀಡಿತವಾಗಿದ್ದಿತೆಂಬುದಕ್ಕೆ ಸಾಕ್ಷ್ಯ ದೊರೆಯುವುದಿಲ್ಲ. ಈ ರೀತಿಯಾಗಿ, ಭದ್ರಬಾಹುಸ್ವಾಮಿ ಕಥಾನಕಗಳ ಹೊರತಾಗಿ, ಪ್ರಾಯಿಕವಾಗಿ ಇತರ ಯಾವ ಆಧಾರಗಳಿಂದಲೂ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಜೀವಿತಸಮಯವಾದ ಕ್ರಿ. ಪೂ. ನಾಲ್ಕನೇ ಶತಮಾನದಲ್ಲಿ ಮಗಧರಾಜ್ಯ ಅಥವಾ ಮಧ್ಯದೇಶವು ಕ್ಷಾಮಸಂಪೀಡಿತವಾಗಿದ್ದಿತೆಂದು ಸಾಕ್ಷೀಕೃತವಾಗುವುದಿಲ್ಲ. ಇಷ್ಟಲ್ಲದೆ ಭದ್ರಬಾಹುಸ್ವಾಮಿಕಥಾನಕಗಳಲ್ಲಿ ಯಾವ ದ್ವಾದಶಸಂವತ್ಸರಾವಧಿಯ ಕ್ಷಾಮಗಾಲಸಂಘಟನೆಯ ಐತಿಹ್ಯಾಂಶವಿರುವುದೋ ಅದು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರನ್ನಧಿಕರಿಸಿದ ಐತಿಹ್ಯಾಂಶವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ಆದ್ದರಿಂದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಉತ್ತರಾಪಥದಿಂದ ದಕ್ಷಿಣಾಪಥದತ್ತ ಪಯಣಕೈಗೊಂಡುದಕ್ಕೆ ಕ್ಷಾಮಗಾಲಸಂಘಟನೆಯು ಕಾರಣವಾಗಿರದೆ ಬೇರಾವುದೋ ಒಂದು ಪ್ರಸಂಗವು ಕಾರಣವಾಗಿರಬೇಕೆಂದು ತರ್ಕಿಸಲವಕಾಶವಾಗುವುದು: ನಿರ್ಗ್ರಂಥಯತಿಗಳಿಗೆ ವಾಸಯೋಗ್ಯವಲ್ಲದ ಪ್ರದೇಶಗಳ ವಿಷಯವಾಗಿ, ನಿರ್ಗ್ರಂಥಯತಿಗಳ ಆಚಾರನಿಯಮ ಪ್ರರೂಪಕವಾದ 'ಮೂಲಾಚಾರ' ದಲ್ಲಿ ಈ ಮುಂದಿನಂತೆ ಹೇಳಿದೆ:

> ಜತ್ಥ ಕಸಾಯುಪ್ಪತ್ತಿರಭತ್ತಿಂದಿಯದಾರಇತ್ಥಿಜಣಬಹುಲಂ।
> ದುಕ್ಖಮುವಸಗ್ಗಬಹುಲಂ ಭಿಕ್ಖೂ ಖೇತ್ತಂ ವಿವಜ್ಜೇಊ ॥ ೫೮ ॥
> ಣಿವದಿವಿಹೂಣಂ ಖೇತ್ತಂ ಣಿವದೀ ವಾ ಜತ್ಥ ದುಟ್ಠಓ ಹೋಜ್ಜ।
> ಪವ್ವಜ್ಜಾ ಚ ಣ ಲಬ್ಭಇ ಸಂಜಮಘಾದೋಯ ತಂ ವಜ್ಜೇ ॥ ೬೦ ॥
>
> (ಸಮಯಸಾರಾಧಿಕಾರ)

**ಅರ್ಥ:** ಕ್ರೋಧಾದಿ ಕಷಾಯೋತ್ಪತ್ತಿ, ಶಠಜನಮೂಲದ ಅನಾದರಭಾವ, ರಾಗಕಾರಣವಾದ ಐಂದ್ರಿಯಿಕ ವಿಷಯ ಪ್ರಾಚುರ್ಯ, ಸ್ತ್ರೀಜನಬಾಹುಲ್ಯ, ದುಃಖ ಕ್ಲೇಶಬಾಹುಲ್ಯ ಉಪಸರ್ಗಬಾಹುಲ್ಯಗಳಿಂದ ಕೂಡಿದಂತಹ ಕ್ಷೇತ್ರವನ್ನು ಸಾಧುವು ತ್ಯಜಿಸಬೇಕು.

ಅರಾಜಕತೆಯ ಕಾರಣದಿಂದ ಸ್ವೇಚ್ಛಾಪ್ರವೃತ್ತಿಯಿಂದ ವರ್ತಿಸುವ ಜನ ಬಾಹುಳ್ಯವುಳ್ಳ ದೇಶ, ಧರ್ಮವಿರೋಧಿಯಾದ ರಾಜನಾಳ್ವಿಕೆಯುಳ್ಳ ದೇಶ ಮತ್ತು ಪ್ರವ್ರಜ್ಯೆಯ ಲಾಭವಿಲ್ಲದ ದೇಶವನ್ನು ಸಾಧುವು ತ್ಯಜಿಸಬೇಕು.

ಪ್ರಕೃತಸಂದರ್ಭದ ಅಪೇಕ್ಷೆಯಿಂದ ಮೇಲ್ಕಂಡ ಎರಡನೇ ಗಾಹೆಯಲ್ಲಿ ಉಕ್ತವಾಗಿರುವ 'ಣಿವದೀ ವಾ ಜತ್ಥ ದುಟ್ಠಓ ಹೋಜ್ಜ' ಎಂಬ ಅಂಶವು ಗಮನಾರ್ಹವಾಗಿದೆ. ನಿರ್ಗ್ರಂಥಸಾಧುಗಳ ನಿಯತ ಆಚಾರವೆನಿಸಿರುವ ನಾಗ್ನ್ಯವೃತ್ತಿಯ ವಿಷಯವಾಗಿ ಪ್ರತಿರೋಧಭಾವವುಳ್ಳವನಾದ ರಾಜನ ಆಳ್ವಿಕೆಗೊಳಪಟ್ಟ ದೇಶದಲ್ಲಿ

ನಿರ್ಗ್ರಂಥಸಾಧುಗಳು ನಿರತೀಚಾರರೀತಿಯಿಂದ ತಮ್ಮ ಆಚಾರ ಪರಿಪಾಲನೆಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅಂತಹ ರಾಜನಿಂದ ಪಾಲಿತವಾಗಿರುವ ದೇಶವನ್ನು ನಿರ್ಗ್ರಂಥಸಾಧುಸಂಘವು ಅವಶ್ಯವಾಗಿ ತ್ಯಜಿಸಬೇಕಾಗುವುದು. ಇಂತಹ ಒಂದು ಸನ್ನಿವೇಶದ ಕಾರಣದಿಂದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಸಂಘಸಮೇತ ರಾಗಿ ಉತ್ತರಾಪಥವನ್ನು ತ್ಯಜಿಸಿ ದಕ್ಷಿಣಾಪಥದತ್ತ ಪಯಣಮಾಡಿರುವರೆಂದು ಹೇಳ ಲವಕಾಶವಿದೆ. ಮಹಾನಂದನಸುತನೂ, (ಪಾರಸೀಕ) ಶಾಹಿಮನೆತನದ ಸ್ತ್ರೀಯಲ್ಲಿ ಜನಿಸಿದವನೂ ಆದ ಮಹಾಪದ್ಮನಂದನು ತನ್ನ ಭ್ರಾತೃಗಳಾದ ಭದ್ರಸೇನಾದಿ ಒಂಭತ್ತು ಜನ ಸಹೋದರರನ್ನು ಕೊಂದು, ಸ್ವಮಾತೃ ಸಂಬಂಧಿಗಳಾದ ಶಾಹಿಜನರನ್ನು ಮಗಧ ರಾಜ್ಯಾಡಳಿತದ ಪ್ರಧಾನ ಅಧಿಕಾರಸ್ಥಾನಗಳಲ್ಲಿ ನಿಯೋಜಿಸಿ ಸರ್ವಾಧಿಕಾರಿಯೆನಿಸಿ ತನ್ನ ನಿರಂಕುಶಾಧಿಕಾರವನ್ನು ದೃಢಪಡಿಸಿಕೊಂಡಿದ್ದನಾದುದರಿಂದ, ನಾಮಮಾತ್ರಕ್ಕೆ ಸಾರ್ವಭೌಮನೆನಿಸಿದ್ದ ನಂದಚಂದ್ರಗುಪ್ತನು ಶ್ರುತಕೇವಲಿ ಭದ್ರಬಾಹುಸ್ವಾಮಿ ಯವರ ಬಳಿ ಯತಿದೀಕ್ಷೆಪಡೆದು ಪ್ರಸಂಗಾಯುತ್ತವಾದ ಸಂಕಟದಿಂದ ಮುಕ್ತನಾದ ನೆಂದು ಹಿಂದೆ ವಿವರಿಸಲಾಗಿದೆ. ಬೃಹತ್ಕಥಾಕೋಶದ ಭದ್ರಬಾಹುಕಥಾನಕದಲ್ಲಿ, ಶ್ರುತಕೇವಲಿ ಭದ್ರಬಾಹುಸ್ವಾಮಿಯವರೊಡನೆ ದಕ್ಷಿಣಾಪಥಕ್ಕೆ ಬಾರದೆ ಉತ್ತರಾ ಪಥದಲ್ಲಿಯೇ ಉಳಿದ ಯತಿಸಂಘವು ಆಚಾರಭ್ರಷ್ಟವಾದ ಪ್ರಸಂಗದ ಕಥನಸಂದರ್ಭದಲ್ಲಿ ಅರ್ಥಾಪೇಕ್ಷೆಯಿಂದ ಅಸಂಗತವಾದ 'ವೈದೇಶಿಕ ಜನೈರ್ದ್ವಾರ್ಸ್ಥೈಃ ಕೃತಕೋಲಾಹಲ ಸ್ವನೈಃ' ಎಂಬ ಉಕ್ತಿಯಿರುವುದೆಂದು ಹಿಂದೆ ಹೇಳಿದೆ. ಬೃಹತ್ಕಥಾಕೋಶದ ಕಥೆ ಗಳಲ್ಲಿ ಅರ್ಥಾಪೇಕ್ಷೆಯಿಂದ ಅಸಂಗತವಿರುವ ಅನೇಕ ಉಕ್ತಿಗಳು ಮೂಲಐತಿಹ್ಯದ ಅವಶೇಷಗಳಾಗಿ ಉಳಿದುಬಂದಿವೆಯೆಂಬುದು ಹಿಂದೆ ವ್ಯಕ್ತಪಟ್ಟಿದೆ. ಇಂತೆಯೇ ಪ್ರಕೃತಸಂದರ್ಭದಲ್ಲಿಯೂ 'ವೈದೇಶಿಕ ಜನೈಃ............' ಎಂಬುದು ಮೂಲಐತಿಹ್ಯದ ಅವಶೇಷವಾಗಿದೆಯೆಂದು ಭಾವಿಸಲವಕಾಶವಾಗುವುದು. ಶ್ರುತಕೇವಲಿ ಭದ್ರಬಾಹು ಸ್ವಾಮಿಯವರ ಜೀವಿತಸಮಯವಾದ ವೀ. ನಿ. ಪ. ೪ ನೇ ಶತಮಾನದಲ್ಲಿ ಭಾರತ ದೇಶದಲ್ಲಿದ್ದಿರಬಹುದಾದ ಬಲಿಷ್ಠ ವಿದೇಶೀಜನರು ಮತ್ತಾರೂ ಆಗಿರದೆ ಪಾರಸೀಕ ಶಾಹಿಜನರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಪೂರ್ವೋಕ್ತವಾದ 'ವೈದೇ ಶಿಕ ಜನೈಃ' ಎಂಬುದನ್ನು ಪಾರಸೀಕಶಾಹಿಜನರ ಸೂಚಕವನ್ನಾಗಿ ಗ್ರಹಿಸಲವಕಾಶ ವಾಗುವುದು. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ನೂತನವಾಗಿ ದೀಕ್ಷಿತನಾದ ನಂದಚಂದ್ರಗುಪ್ತನಿಂದೊಡಗೂಡಿದ ಯತಿಸಂಘಸಮೇತರಾಗಿ ದಕ್ಷಿಣಾಪಥಕ್ಕೆ ಪಯಣ ಮಾಡಿದ ಬಳಿಕ, ಉತ್ತರಾಪಥದಲ್ಲಿಯೇ ಉಳಿದಿದ್ದ ನಿರ್ಗ್ರಂಥ ಯತಿಗಳು, ತಮ್ಮ ನಗ್ನತೆಯನ್ನು ಮರೆಮಾಡುವಂತಹ ತುಂಡುಬಟ್ಟೆಯನ್ನು ಧಾರಣೆಮಾಡಿ ನಿರ್ಗ್ರಂಥ ಧರ್ಮದ ನಿಯತಾಚಾರವಾದ ನಾಗ್ನ್ಯವೃತ್ತಿಯಿಂದ ಪರಿಚ್ಯುತರಾಗಿ ಅರ್ಧಫಾಲಕ ಪಂಥಪ್ರವರ್ತನೆಮಾಡಿದರೆಂದು ಕಥೆಯಲ್ಲಿ ಹೇಳಿದೆ. ಈ ರೀತಿಯಾಗಿ ನಿರ್ಗ್ರಂಥ ಯತಿಗಳು ತಮ್ಮ ನಿಯತಾಚಾರವಾದ ನಾಗ್ನ್ಯವೃತ್ತಿಯನ್ನು ತೊರೆಯ

ಬೇಕಾದಂತಹ ಪ್ರಸಂಗವೇರ್ಪಟ್ಟಿರಬೇಕಾದರೆ, ಯತಿಗಳು ನಗ್ನರೂಪರಾಗಿ ಸಂಚರಿಸುವುದನ್ನು ನಿಷೇಧಿಸುವಂತಹ ರಾಜಶಾಸನವು ವಿಧಿಸಲ್ಪಟ್ಟಿರಬೇಕೆಂದು ಸೂಚಿತವಾಗುವುದು. ಸಮಸ್ತ ಉತ್ತರಾಪಥ ಪ್ರದೇಶವು ಮಹಾಪದ್ಮನಂದನ ಸಾರ್ವಭೌಮತ್ವದ ಅಂಕಿತಕ್ಕೊಳಪಟ್ಟದ್ದು, ಇವನಿಂದ ವಿಧಿಸಲ್ಪಟ್ಟ ಶಾಸನದ ಪರಿಣಾಮವಾಗಿಯೇ, ಉತ್ತರಾಪಥದಲ್ಲಿ ಉಳಿದಿದ್ದ ನಿರ್ಗ್ರಂಥಸಾಧುಗಳು ನಾಗ್ನ್ಯವೃತ್ತಿಯನ್ನು ತೊರೆದು ಅರ್ಧಗಪ್ಪಡಿಗರಾಗಬೇಕಾಯಿತೆಂದು ಸ್ಫುಟಗೊಳ್ಳುವುದು. ಅಂತೆಯೇ ಮಹಾಪದ್ಮನಂದನಿಂದ ವಿಧಿಸಲ್ಪಟ್ಟ ಈ ಶಾಸನವನ್ನು ರಾಜ್ಯಾಡಳಿತದ ಅಧಿಕಾರಸ್ಥಾನದಲ್ಲಿ ನಿಯೋಜಿತರಾಗಿದ್ದ ಪಾರಸೀಕಶಾಹಿಜನರು ಉದ್ಘೋಷಿಸಿ, ಯತಿಗಳು ನಗ್ನರೂಪರಾಗಿ ಸಂಚರಿಸುವುದನ್ನು ನಿಷೇಧಿಸಿದ ಪ್ರಸಂಗದ ಮೂಲಐತಿಹ್ಯಾಂಶವು ಪೂರ್ವೋಕ್ತವಾದ 'ವೈದೇಶಿಕಜನೈರ್ದ್ವಾರ್ಸ್ಥೈಃ ಕೃತಕೋಲಾಹಲಸ್ವನೈಃ' ಎಂಬ ಉಕ್ತಿಯಲ್ಲಿ ಅಂತರ್ಗತವಾಗಿರುವುದೆಂದು ವ್ಯಕ್ತವಾಗುವುದು.

ನಂದಚಂದ್ರಗುಪ್ತನು ಸಾಮ್ರಾಟನಾಗಿ ಅಭಿಷಿಕ್ತನಾಗುವ ಮುನ್ನವೇ ಮಗಧ ರಾಜ್ಯಾಡಳಿತದಲ್ಲಿ ಸರ್ವಾಧಿಕಾರತ್ವದ ಪ್ರಭುತ್ವಪಡೆದಿದ್ದ ಮಹಾಪದ್ಮನಿಂದ ಮತ್ತು ಅವನ ಬಂಧುಗಳೂ ಮಗಧರಾಜ್ಯಾಡಳಿತದ ಪ್ರಧಾನ ಅಧಿಕಾರಸ್ಥಾನಗಳಲ್ಲಿ ನಿಯೋಜಿತರೂ ಆಗಿದ್ದ ಶಾಹಿಜನರಿಂದ ನಗ್ನಯತಿಗಳ ಸಂಚಾರಕ್ಕೆ ಆತಂಕ ಉಂಟಾಗಿದೆ. ಮಹಾಪದ್ಮನಂದನ ಸರ್ವಾಧಿಕಾರಿಪ್ರಭುತ್ವದ ವ್ಯಾಪ್ತಿಯು ಬಲಗೊಂಡು ವಿಸ್ತರಿಸಿದಂತೆಲ್ಲಾ ಮಗಧರಾಜ್ಯಪ್ರದೇಶದಲ್ಲಿ ನಿರ್ಗ್ರಂಥ ಯತಿಗಳ ಸಂಚಾರಕ್ಕೆ ಪ್ರತಿರೋಧವು ಹೆಚ್ಚಾಗತೊಡಗಿದೆ. ಅಂತೆಯೇ, ನಿರ್ಗ್ರಂಥಯತಿಗಳ ಸಂಚಾರಕ್ಕೆ ಒದಗಿಬಂದ ಈ ಆತಂಕವನ್ನು ಪರಿಹರಿಸಲೋಸುಗ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಮಗಧ ರಾಜ್ಯದ ಸಾಮ್ರಾಟನೆನಿಸಿದ್ದ ನಂದಚಂದ್ರಗುಪ್ತನಲ್ಲಿ ವಿಷಯಪ್ರಸ್ತಾವಮಾಡಲು ಉಜ್ಜಯಿನಿಯಲ್ಲಿ ವಿಹರಿಸಿದ್ದಾರೆ. ಆದರೆ ಈ ಸಮಯಕ್ಕಾಗಲೇ ಮಹಾಪದ್ಮನಂದನ ಸರ್ವಾಧಿಕಾರಿತ್ವದ ಪ್ರಭುತ್ವದಲ್ಲಿ ಅವನ ಬಂಧುಗಳಾದ ಶಾಹಿಜನರಿಂದ ಆಗುತ್ತಿದ್ದ ಪ್ರಜಾಪೀಡೆಯನ್ನು ನಿವಾರಿಸಲೆತ್ನಿಸಿ ವಿಫಲನಾಗಿದ್ದ ನಂದಚಂದ್ರಗುಪ್ತನು ಶ್ರುತಕೇವಲಿಭದ್ರಬಾಹುಸ್ವಾಮಿಯವರ ಸಂದರ್ಶನ ಪಡೆದು, ಅವರಿಂದ ತಾನು ಕಂಡ ಸ್ವಪ್ನಫಲಗಳನ್ನು ತಿಳಿದು ಭವಿಷ್ಯದ ವಿಷಯವಾಗಿ ನಿರಾಶೆಹೊಂದಿ ವೈರಾಗ್ಯಭಾವದಿಂದ ಯತಿದೀಕ್ಷೆಪಡೆದಿದ್ದಾನೆ. ಅಂತೆಯೇ ಉತ್ತರಾಪಥದಲ್ಲಿ ನಿರ್ಗ್ರಂಥಯತಿಗಳು ನಿರತೀಚಾರರೀತಿಯಿಂದ ತಮ್ಮ ಆಚಾರ ಪರಿಪಾಲನೆಮಾಡಲು ಸಾಧ್ಯವಾಗದೆಂಬುದು ನಿಶ್ಚಿತವೆನಿಸಿದಂತಾಯಿತು. ಆದ್ದರಿಂದ ಮಹಾಪದ್ಮನಂದನ ಶಾಸನದ ಅಂಕಿತದಿಂದ ಸುದೂರವಿದ್ದು ನಿರ್ಗ್ರಂಥಯತಿಗಳ ಆಚಾರಪರಿಪಾಲನೆಗೆ ಏಕೈಕ ಅಭಯಧಾಮವೆನಿಸಿದ ದಕ್ಷಿಣಾಪಥದತ್ತ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಯತಿಸಂಘಸಮೇತರಾಗಿ ಪಯಣಮಾಡಿ ಕಳ್ವಪ್ಪುವನ್ನು ಸೇರಿ, ತಮ್ಮ ಅವಸಾನಕಾಲವು ಸಮೀಪಿಸುತ್ತಿರುವುದನ್ನು ಪರಿಭಾವಿಸಿ ಯತಿಸಂಘವನ್ನು ವಿಶಾಖಾಚಾರ್ಯರ ಮುನ್ನೇ

ತೃತ್ವದಲ್ಲಿ ದ್ರವಿಡನಾಡಿನತ್ತ ಹೋಗುವಂತೆ ಆದೇಶವಿತ್ತು, ಸಲ್ಲೇಖನ ಕೈಗೊಂಡು ಸಮಾಧಿಮರಣಪಡೆದಿದ್ದಾರೆ.

ಪೂರ್ವೋಲ್ಲಿಖಿತವಾದ ಭದ್ರಬಾಹುಸ್ವಾಮಿಕಥಾನಕಗಳಲ್ಲಿ, ದ್ವಾದಶವಾರ್ಷಿಕ ದುರ್ಭಿಕ್ಷನಿಮಿತ್ತದಿಂದ ದಕ್ಷಿಣಾಪಥಕ್ಕೆ ಪಯಣಮಾಡಿದ ನಿರ್ಗ್ರಂಥಯತಿಸಂಘವು ೧೨ ವರ್ಷಗಳ ತರುವಾಯ ಉತ್ತರಾಪಥಕ್ಕೆ ಹಿಮ್ಮರಳಿ ಪಯಣಮಾಡಿತೆಂದು ಹೇಳಲಾಗಿರುವ ಪ್ರಸಂಗವು ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರ ಅನಂತರ ಕಾಲೀನವಾದ ಘಟನೆಯಾಗಿರುವುದೆಂದು ಹಿಂದೆ ವಿವರಿಸಲಾಗಿದೆ. ಆದ್ದರಿಂದ ಈ ಐತಿಹ್ಯಾಂಶವು, ಶ್ರುತಕೇವಲಿ ಭದ್ರಬಾಹುಸ್ವಾಮಿಯರೊಡನೆ ದಕ್ಷಿಣಾಪಥಕ್ಕೆ ಪಯಣಕೈಗೊಂಡ ಯತಿಸಂಘಕ್ಕೆ ಸಂಬಂಧಿಸಿದ ಐತಿಹ್ಯಾಂಶವಾಗಿಲ್ಲವೆಂದು ಅಧಿಗತವಾಗುವುದು. ಇಷ್ಟಲ್ಲದೆ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ವೈದೇಶಿಕ ಶಾಹಿ ಜನರಿಂದಾದ ಉಪಟಳದ ಕಾರಣದಿಂದ ಸಂಘಸಮೇತರಾಗಿ ದಕ್ಷಿಣಾಪಥಕ್ಕೆ ಪಯಣ ಮಾಡಿದರಾಗಿ ಆ ಶಾಹಿಜನರ ಪ್ರಾಬಲ್ಯವು ಕೊನೆಗೊಳ್ಳುವ ಪರ್ಯಂತ ಈ ಯತಿ ಸಂಘವು ಉತ್ತರಾಪಥಕ್ಕೆ ಹಿಂದಿರುಗಿರಲಾರದೆಂದು ಗ್ರಹಿಸಲವಕಾಶವಾಗುವುದು. ಮಹಾಪದ್ಮನು ೩೩ ವರ್ಷಕಾಲ ರಾಜ್ಯವಾಳಿರುವನೆಂದು ಹಿಂದೆ ಶ್ರುತಪಡಿಸಲಾಗಿದೆ. ಆದ್ದರಿಂದ ಈ ಅವಧಿಯಪರ್ಯಂತ ಶಾಹಿಜನರ ಪ್ರಾಬಲ್ಯವು ಕಡಿಮೆಯಾಗಿದ್ದಿತೆಂದು ಹೇಳಲಾಗುವುದಿಲ್ಲ. ಇಷ್ಟಲ್ಲದೆ ಮೌರ್ಯ ಚಂದ್ರಗುಪ್ತನಿಂದ ಪರಾಜಿತನಾದ ಅಂತಿಮ ನಂದನ ಕಾಲದಲ್ಲಿಯೂ ಮಗಧರಾಜ್ಯದಲ್ಲಿ ಶಾಹಿಜನರ ಪ್ರಾಬಲ್ಯವಿದ್ದಿರಬೇಕೆಂದು ಹೇಳಲವಕಾಶವಿದೆ: ಅಲೆಗ್ಸಾಂಡರನು ಪರ್ಶಿಯಾದೇಶದ ಮೇಲೆ ಆಕ್ರಮಣ ನಡೆಸಿದ ಸಮಯದಲ್ಲಿ ಪರ್ಶಿಯಾದೊರೆಯ ರಕ್ಷಾವ್ಯೂಹವೆನಿಸಿ ಭಾರತೀಯ ಸೈನ್ಯಪಡೆಯು ನಿಷ್ಠೆಯಿಂದ ಯುದ್ಧಮಾಡಿತೆಂದು ಗ್ರೀಕ್‌ಮೂಲದ ಇತಿಹಾಸದಿಂದ ವ್ಯಕ್ತಪಡುವುದಾಗಿ ಚರಿತ್ರಕಾರರು ಹೇಳಿದ್ದಾರೆ. ಇದರಿಂದ ಭಾರತೀಯ ಸೈನ್ಯಪಡೆಯನ್ನು ರಕ್ಷಾವ್ಯೂಹವಾಗಿ ಹೊಂದಿದ್ದ ಪರ್ಶಿಯಾದೇಶದ ದೊರೆ ಮತ್ತು ಆವನ ಸಮಕಾಲೀನನಾಗಿ ಮಗಧಸಾಮ್ರಾಜ್ಯದ ಸಾಮ್ರಾಟನಾಗಿದ್ದ ಅಂತಿಮ ನಂದ (ಧನನಂದ) ರಾಜರ ಮಧ್ಯೆ ಮೈತ್ರೀಯುತವಾದ ಸಂಬಂಧವಿದ್ದಿರಬೇಕೆಂದು ಸೂಚಿತವಾಗುವುದು. ಅಂತೆಯೇ ಅಂತಿಮನಂದನ ರಾಜ್ಯಭಾರಸಮಯದಲ್ಲಿಯೂ ಶಾಹಿಜನರು ಪ್ರಭಾವಶಾಲಿಗಳಾಗಿದ್ದಿರಬೇಕೆಂದು ವ್ಯಕ್ತವಾಗುವುದು. ಆದ್ದರಿಂದ ಮೌರ್ಯಚಂದ್ರಗುಪ್ತನಿಂದ ಅಂತಿಮ ನಂದನ ಪರಾಭವವಾದ ಅನಂತರವೇ ನಿರ್ಗ್ರಂಥಯತಿಸಂಘವು ಉತ್ತರಾಪಥಕ್ಕೆ ಹಿಮ್ಮರಳಿ ಪಯಣಮಾಡಿರಬೇಕೆಂದು ಗ್ರಹಿಸಲವಕಾಶವಾಗುವುದು.

ಯತಿಸಂಘಸಮೇತರಾಗಿ ಹಿಮ್ಮರಳಿ ಉತ್ತರಾಪಥಕ್ಕೆ ಬಂದ ವಿಶಾಖಾಚಾರ್ಯರು ಅದುವರೆವಿಗೆ ಉತ್ತರಾಪಥದಲ್ಲಿಯೇ ಇದ್ದು ಆಚಾರಶೈಥಿಲ್ಯಭಾಗಿಗಳಾಗಿದ್ದ ಸಂಘಸಮೇತರಾದ ರಾಮಿಲಾಚಾರ್ಯ, ಸ್ಥೂಲಾಚಾರ್ಯ ಮತ್ತು ಸ್ಥೂಲ

ಭದ್ರಾಚಾರ್ಯರನ್ನು ಕುರಿತು ಅರ್ಧಗಪ್ಪಡವನ್ನು ತೊರೆದು ಪ್ರಾಯಶ್ಚಿತ್ತಪೂರ್ವಕ ಪುನಃ ನಿರ್ಗ್ರಂಥಯತಿವ್ರತಧಾರಣೆಮಾಡುವಂತೆ ಹೇಳಲು ರಾಮಿಲಾಚಾರ್ಯರು ಮತ್ತು ಸ್ಥೂಲಾಚಾರ್ಯರು ತಮ್ಮ ತಮ್ಮ ಸಂಘಸಮೇತ ಯಥೋಕ್ತಶುದ್ಧಚಾರಿತ್ರ ವನ್ನು ಕೈಗೊಂಡರೆಂದೂ ಮತ್ತು ಸ್ಥೂಲಭದ್ರಾಚಾರ್ಯರು ಹಾಗೂ ಮತ್ತೆ ಕೆಲವರು ಯತಿಗಳು ಶುದ್ಧಚಾರಿತ್ರವನ್ನು ಕೈಗೊಳ್ಳದೆ ಜಿನಕಲ್ಪ ಮತ್ತು ಸ್ಥವಿರಕಲ್ಪವೆಂಬ ಎರಡುಭೇದಮಾಡಿ ಅರ್ಧಗಪ್ಪಡತೀರ್ಥವನ್ನು ಪ್ರವರ್ತಿಸಿದರೆಂದೂ ಪೂರ್ವೋಲ್ಲಿಖಿತ ವಾದ ವಡ್ಡಾರಾಧನೆಯ ಭದ್ರಬಾಹುಭಟಾರರ ಕಥೆಯುಲ್ಲಿ ಹೇಳಿರುವುದು ವಿದಿತವಿದೆ. ಈ ಕಥೆಯಲ್ಲಿ ಹೇಳಲಾಗಿರುವಂತೆ ಪಂಥಭೇದವು ಮೂಡಿರಬಹುದಾದ ಸಂಭವವನ್ನು ಪರೋಕ್ಷರೀತಿಯಿಂದ ಸಮರ್ಥನೆಗೊಳಿಸುವ ಈ ಮುಂದಿನ ಶ್ವೇತಾಂಬರ ಆಮ್ನಾಯದ ಐತಿಹ್ಯವು ಗಮನಾರ್ಹವಾಗಿದೆ :

"ಸ್ಥೂಲಭದ್ರಾಚಾರ್ಯರ ತರುವಾಯ ಆರ್ಯಮಹಾಗಿರಿ ಮತ್ತು ಆರ್ಯ ಸುಹಸ್ತಿಯವರು ಯತಿಸಂಘದ ಆಚಾರ್ಯಪದವಿಯನ್ನಲಂಕರಿಸಿದರು. ಆರ್ಯ ಮಹಾಗಿರಿಯವರು ತಮ್ಮ ಜೀವನದ ಕೊನೆಗಾಲದಲ್ಲಿ ಜಿನಕಲ್ಪಿಸಾಧುವಿನ ಆಚಾರ ವನ್ನು ಧಾರಣೆಮಾಡಲಿಚ್ಛಿಸಿದರು. ಜಿನಕಲ್ಪದ ಆಚಾರವು[1] ವರಿಷ್ಠರೀತಿಯದಾಗಿದ್ದು ಜಂಬೂಸ್ವಾಮಿಯವರ ನಿರ್ವಾಣಸಮಯಕ್ಕೆ ಮರೆಗೊಂಡಿದ್ದಿತ್ತಾದರೂ ಆರ್ಯಮಹಾಗಿರಿಯವರು ಯತಿಸಂಘಾವಾಸಾಂತಸ್ಥಿತರಾಗಿ, ಜಿನಕಲ್ಪಿಸಾಧುಗಳ ಪೂರ್ಣ ಆಚಾರವನ್ನು ಪರಿಪಾಲಿಸಿದರು. ಜಿನಧರ್ಮದ ನಿಷ್ಠಾವಂತ ಉಪಾಸಕ ನಾಗಿದ್ದ ಸಂಪ್ರತಿಮಹಾರಾಜನು ಅನೇಕ ದಾನಶಾಲೆಗಳನ್ನು ಸ್ಥಾಪಿಸಿದ್ದನು. ಈ ದಾನಶಾಲೆಗಳಲ್ಲಿ ಪ್ರತಿದಿನವೂ ಉಳಿಯುತ್ತಿದ್ದ ಆಹಾರಪಾನೀಯಗಳನ್ನು ಜೈನಸಾಧು ಗಳಿಗೆ ಅರ್ಪಿಸಬೇಕೆಂದು ಸಂಪ್ರತಿಮಹಾರಾಜನು ಆಜ್ಞೆಮಾಡಿದನು. ಈ ಆಹಾರ ಪಾನೀಯಗಳು ಅಂಗೀಕಾರಾರ್ಹವಾಗಿರುವುವೆಂದು ಭಾವಿಸಿ ಯತಿಗಳು ಸ್ವೀಕರಿಸು ತ್ತಿದ್ದರು. ಯತಿಗಳಿಗೆ ಈ ಆಹಾರಪಾನೀಯಗಳು ಅಂಗೀಕಾರಾರ್ಹವಾದವುಗಳಾ ಗಿಲ್ಲವೆಂಬುದನ್ನು ಆರ್ಯ ಸುಹಸ್ತಿಸ್ವಾಮಿಯವರು ತಿಳಿದಿದ್ದರಾದರೂ ತಮ್ಮ ಶಿಷ್ಯ ನಾದ ಸಂಪ್ರತಿಮಹಾರಾಜನಲ್ಲಿದ್ದ ವಾತ್ಸಲ್ಯಭಾವದ ಕಾರಣದಿಂದ ಈ ವಿಷಯದ ಪ್ರತಿಷೇಧರೂಪವಾಗಿ ಏನೊಂದನ್ನೂ ಹೇಳದೆ ತೂಷ್ಣೀಭಾವದಿಂದಿದ್ದರು. ಈ ವಿಷಯವನ್ನು ತಿಳಿದ ಆರ್ಯಮಹಾಗಿರಿಯವರು 'ರಾಜನಿಂದ ಆಹಾರಪಾನೀಯ ವಸ್ತುಗಳನ್ನೇಕೆ ಸ್ವೀಕರಿಸುವೆ ?' ಎಂದು ಆರ್ಯಸುಹಸ್ತಿಸೂರಿಯವರನ್ನು ಪ್ರಶ್ನಿಸಿದರು.

---

1 ಶ್ವೇತಾಂಬರ ಆಮ್ನಾಯದನುಗುಣವಾಗಿ ಶ್ರೀ ವೀರತೀರ್ಥಕರನಿಂದ ಆದಿಷ್ಟ ವಾದ ಆಚೇಲಕ ನಿಯಮಯುಕ್ತವಾದ ಯತಿಗಳ ಆಚಾರವು 'ಜಿನಕಲ್ಪ' ವೆನಿಸಿಯೂ ಸದ್ಯ ಶ್ವೇತಾಂಬರ ಯತಿಗಳಲ್ಲಿ ಪರಿಪಾಲಿತವಿರುವ ಆಚಾರವು 'ಸ್ಥವಿರಕಲ್ಪ' ವೆನಿಸಿದ್ದಾ ಗಿಯೂ ಇದೆ.

ಅದಕ್ಕೆ ಅವರು 'ಯಥಾ ರಾಜಾ ತಥಾ ಪ್ರಜಾ'-'ಸನ್ನಿವೇಶಾನುಗುಣವಾಗಿ ವ್ಯಕ್ತಿಯು ವರ್ತಿಸಬೇಕು' ಎಂದುತ್ತರಿಸಿದರು. ಈ ಜಾರಿಕೆಯ ಉತ್ತರವನ್ನು ಕೇಳಿ ಆರ್ಯ ಮಹಾಗಿರಿಯವರು ತೀವ್ರವಾಗಿ ಕೋಪಗೊಂಡು 'ಎಂತಹ ಸನ್ನಿವೇಶದಲ್ಲಿಯೂ ಅಂಗೀಕಾರಾರ್ಹವಲ್ಲದ ಆಹಾರಪಾನೀಯಗಳನ್ನು ನಾವು ಸ್ವೀಕರಿಸುವಂತಿಲ್ಲ. ನೀರಿನ ವಿಷಯದಲ್ಲಿಯೂ ಕೂಡ ಸಾಧುಗಳು ಸಾಮಾಚಾರಿನಿಯಮಗಳಿಗೆ ಬದ್ಧರಾಗಿರಬೇಕು. ನೀನು ಸರ್ವಥಾ ಭಿನ್ನಪಥಾವಲಂಬಿಯಾಗಿರುವೆ. ಆದ್ದರಿಂದ ನಿನ್ನೊಡನೆ ಯಾವುದೇ ರೀತಿಯ ಸಂಬಂಧವಿಟ್ಟುಕೊಳ್ಳುವುದು ಸಮರ್ಪಕವೆನಿಸುವುದಿಲ್ಲ' ಎಂದರು. ಇದನ್ನು ಕೇಳಿದ ಆರ್ಯಸುಹಸ್ತಿಯವರು ಭಯದಿಂದ ಮಗುವಿನಂತೆ ನಡುಗುತ್ತಾ 'ಹೇ ಸ್ವಾಮಿ! ಅದು ನನ್ನ ಮಹದಪರಾಧ, ದಯೆಯಿಟ್ಟು ಮತ್ತೊಮ್ಮೆ[1] ನನ್ನನ್ನು ಕ್ಷಮಿಸಿರಿ' ಎಂದು ಹೇಳಿದರು. ಪ್ರತಿಯಾಗಿ ಆರ್ಯಮಹಾಗಿರಿಸ್ವಾಮಿಯವರು 'ಇದು ನಿನ್ನ ದೋಷವಲ್ಲ; ಸ್ಥೂಲಭದ್ರಮುನಿಯ ಕಾಲಾನಂತರ ಯತಿಗಳು ಶಿಥಿಲಾಚಾರವುಳ್ಳವರಾಗುವರೆಂದು ಅಂತಿಮತೀರ್ಥಂಕರರಾದ ಭಗವಾನ್ ಮಹಾವೀರಸ್ವಾಮಿಯವರು ಹೇಳಿದ್ದರು.[2] ಶ್ರುತಕೇವಲಿ ಸ್ಥೂಲಭದ್ರಸ್ವಾಮಿಯವರ ಉತ್ತರಪದಾಧಿಕಾರಿಗಳಾದ ನಮ್ಮ ಕಾಲದಲ್ಲಿಯೇ ಶ್ರಮಣಭಗವಾನ್ ಮಹಾವೀರಸ್ವಾಮಿಯವರ ಆ ಭವಿಷ್ಯವಾಣಿಯು ಯಥಾರ್ಥರೂಪದಿಂದ ಪ್ರತ್ಯಕ್ಷಗೊಂಡಿದೆ.' ಎಂದು ಹೇಳಿ ಆಚಾರ್ಯಮಹಾಗಿರಿಸ್ವಾಮಿಯವರು ಬೇರೊಂದೆಡೆಗೆ ಹೊರಟುಹೋದರು." [ಪೂ. ಸೂ. ಶ್ರ. ಭ. ಮಹಾವೀರ ಪು. ಸಂ. ೨೩೪ ರಿಂದ ೨೪೩ ರವರೆವಿಗೆ–ಸಂಗೃಹೀತಾನುವಾದ]

ಸ್ಥೂಲಭದ್ರಾಚಾರ್ಯರ ತರುವಾಯ ನಿರ್ಗ್ರಂಥಯತಿಸಂಘದ ಕೆಲವರು ಯತಿಗಳಲ್ಲಿ ಆಚಾರ ಶೈಥಿಲ್ಯವೇರ್ಪಟ್ಟಿತೆಂದು ಮೇಲ್ಕಂಡಂತೆ ಶ್ವೇತಾಂಬರಆಮ್ನಾಯದ ಐತಿಹ್ಯವಿರುವುದು ಸ್ಪಷ್ಟವಿದೆ. ಇದರಿಂದ, ಹಿಂದೆ ಹೇಳಿರುವಂತೆ ಸ್ಥೂಲಭದ್ರಾ

---

1 ಹಿಂದೊಮ್ಮೆ ಆರ್ಯಸುಹಸ್ತಿಯವರ ಶಿಷ್ಯನಾದ ವಸುಭೂತಿ ಶ್ರಾವಕನು, ಯತಿಗಳಿಗೆ ಅಂಗೀಕಾರಾರ್ಹವಲ್ಲದ ಆಹಾರ ಭಿಕ್ಷೆಯನ್ನು ಕೊಡಲೆತ್ನಿಸಿದ್ದನಾಗಿ ಆರ್ಯ ಮಹಾಗಿರಿಯವರು, ಇಂತಹ ಪ್ರವೃತ್ತಿಯಿಂದ ಶಿಷ್ಯರನ್ನು ದೂರವಿಡಬೇಕೆಂದು ಆರ್ಯ ಸುಹಸ್ತಿಯವರಿಗೆ ಹೇಳಿದ್ದರು. ಆಗ ತಮ್ಮ ಶಿಷ್ಯನಿಂದ ಅಂತಾದುದಕ್ಕಾಗಿ ಆರ್ಯ ಸುಹಸ್ತಿಯವರು ಆರ್ಯಮಹಾಗಿರಿಯವರಲ್ಲಿ ಕ್ಷಮಾಯಾಚನೆಮಾಡಿದ್ದರು.

[ಶ್ರ. ಭ. ಮಹಾವೀರ–ಪು. ಸಂ. 237]

2 ಊಚೇ ಮಹಾಗಿರಿರಥ ದೋಷಃ ಕೋ ನಾಮ ತೇऽಥವಾ ।
ಪುರಾ ಭಗವತಾ ವೀರಸ್ವಾಮಿನೈತದ್ಧಿ ಭಾಷಿತಂ ॥ ೧೨೦ ॥
ಮದೀಯೇ ಶಿಷ್ಯಸಂತಾನೇ ಸ್ಥೂಲಭದ್ರಮುನೇಃ ಪರಂ ।
ಪತತ್ಪ್ರಕರ್ಷಾಸಾಧೂನಾಂ ಸಾಮಾಚಾರೀ ಭವಿಷ್ಯತಿ ॥ ೧೨೧ ॥

ಪರಿಶಿಷ್ಟಪರ್ವ–ಸರ್ಗ ೧೧]

ಚಾರ್ಯರ ತರುವಾಯ[1] ಆಚಾರ ಶೈಥಿಲ್ಯಯುಕ್ತವಾದ ಅರ್ಧಗಪ್ಪೆಡಿಗ ಯತಿ ಪಂಥವು ಮೂಡಿತೆಂಬ ದಿಗಂಬರಆಮ್ನಾಯದ ಐತಿಹ್ಯವು ಶ್ವೇತಾಂಬರಆಮ್ನಾಯದ ಮೇಲ್ಕಂಡ ಐತಿಹ್ಯದಿಂದ ಸಮರ್ಥಿತವಾಗುವುದು.

ಸ್ಥೂಲಭದ್ರಾಚಾರ್ಯರ ತರುವಾಯ ಮಹಾಗಿರಿಸ್ವಾಮಿಯವರು ಮತ್ತು ಸುಹಸ್ತಿಸ್ವಾಮಿಯವರು ಯತಿಸಂಘದ ಆಚಾರ್ಯಪದವಿಯನ್ನಲಂಕರಿಸಿದರೆಂದು ಶ್ವೇತಾಂಬರಆಮ್ನಾಯದಲ್ಲಿ ಹೇಳಿರುವುದು ಸ್ಪಷ್ಟವಿದೆ. ಆದರೆ ಶ್ರುತಕೇವಲಿ ಭದ್ರ ಬಾಹುಸ್ವಾಮಿಯವರು ತಮ್ಮೊಡನೆ ದಕ್ಷಿಣಾಪಥಕ್ಕೆ ಪಯಣಕ್ಕೈಗೊಂಡ ಯತಿಸಂಘ ವನ್ನು ಕಳ್ಬಪ್ಪುವಿನಿಂದ ಮುಂದೆ ದ್ರಮಿಳದೇಶಕ್ಕೆ ಪಯಣಮಾಡುವಂತೆ ಆದೇಶ ವಿತ್ತು ವಿಶಾಖಾಚಾರ್ಯರನ್ನು ಸಂಘದ ಪ್ರಧಾನಾಚಾರ್ಯರನ್ನಾಗಿಯೂ, ಬಳಿಕ ಮಹಾಗಿರಿಸ್ವಾಮಿ ಸುಹಸ್ತಿಸ್ವಾಮಿಯವರೇ ಮೊದಲಾದವರನ್ನು ಶಾಖಾಸಂಘ ಸಂಘ ಗಳ ಆಚಾರ್ಯರನ್ನಾಗಿಯೂ ನಿಯಮಿಸಿದರೆಂದು ವಡ್ಡಾರಾಧನೆಯ ಭದ್ರಬಾಹು ಭಟ್ಟಾರರ ಕಥಾನಕದಲ್ಲಿ ಹೇಳಿದೆ. ವಡ್ಡಾರಾಧನೆಯ ಕಥಾಕಾರರು ಪೂರ್ವೈತಿಹ್ಯದ ಆಧಾರವಿಲ್ಲದೆ, ಶ್ರುತಕೇವಲಿ ಭದ್ರಬಾಹುಸ್ವಾಮಿಯವರೊಡನೆ ದಕ್ಷಿಣಾಪಥಕ್ಕೆ ಪಯಣಕ್ಕೈಗೊಂಡ ಯತಿಸಂಘದ ಪ್ರಮುಖಯತಿಗಳ ಹೆಸರುಗಳಲ್ಲಿ ಮಹಾಗಿರಿಸ್ವಾಮಿ ಮತ್ತು ಸುಹಸ್ತಿಸ್ವಾಮಿಯವರ ಹೆಸರುಗಳನ್ನು ಸಂಯೋಜಿಸಿರುವರೆಂದು ಹೇಳಲಾಗು ವುದಿಲ್ಲ. ಆದ್ದರಿಂದ ದಕ್ಷಿಣಾಪಥದಿಂದ ಹಿಂದಿರುಗಿದ ಅನಂತರವೇ ಸ್ಥೂಲಭದ್ರಾ ಚಾರ್ಯರು ತಮ್ಮ ಸಂಘದ ಯತಿಗಳನ್ನು ಮಹಾಗಿರಿಸ್ವಾಮಿ ಮತ್ತು ಸುಹಸ್ತಿಸ್ವಾಮಿ ಯವರ ಆಚಾರ್ಯಪದಾಧಿಕೃತಸಂಘಗಳಿಗೆ ಒಪ್ಪಿಸಿ ಸ್ವರ್ಗಸ್ಥರಾಗಿರುವರೆಂದೂ ಮತ್ತು ಆರ್ಯ ಸುಹಸ್ತಿಸ್ವಾಮಿಯವರ ಸಂಘದಲ್ಲಿ ಸಂಮಿಳಿತರಾದ ಯತಿಗಳಲ್ಲಿ ಶಿಥಿಲಾಚಾರ ಪ್ರವೃತ್ತಿಯು ಮುಂದುವರಿದು ಅಂತಿಮವಾಗಿ ಅರ್ಧಗಪ್ಪೆಡಿಗ ಯತಿಪಂಥವು ಮೂಡಿದೆ ಯೆಂದೂ ತರ್ಕಿತವಾಗುವುದು. ಆದ್ದರಿಂದ ಹಿಂದೆ ಹೇಳಲಾಗಿರುವಂತೆ ಶ್ರುತಕೇವಲಿ ಭದ್ರಬಾಹುಸ್ವಾಮಿಯವರೊಡನೆ ದಕ್ಷಿಣಾಪಥಕ್ಕೆ ತೆರಳಿದ ನಿರ್ಗ್ರಂಥಯತಿಸಂಘವು ಸ್ಥೂಲಭದ್ರಾಚಾರ್ಯರು ಸ್ವರ್ಗಸ್ಥರಾಗುವ ಸ್ವಲ್ಪ ಸಮಯದ ಮುನ್ನ (ವೀ. ನಿ. ಪ.

---

1 ರಾಮಿಲ್ಲ, ಸ್ಥವಿರ ಮತ್ತು ಸ್ಥೂಲಭದ್ರಾಚಾರ್ಯರು ಈ ಮೂವರು ಸಂಘ ಸಮೇತರಾಗಿ ವಿಶಾಖಾಚಾರ್ಯರ ಬಳಿ ಹೋಗಿ ಅರ್ಧಕರ್ಪಟವನ್ನು ತ್ಯಜಿಸಿ ನೈರ್ಗ್ರಂಥ್ಯ ಆಚಾರಧಾರಣೆಮಾಡಿದುದಾಗಿಯೂ ಮತ್ತು ಈ ರೀತಿಯಾಗಿ ಪುನಃ ನೈರ್ಗ್ರಂಥ್ಯಆಚಾರ ಧಾರಣೆಮಾಡಲು ಇಷ್ಟಪಡದಿದ್ದ ಕೆಲವರು ಜಿನಕಲ್ಪ ಮತ್ತು ಸ್ಥವಿರಕಲ್ಪವೆಂಬ ಎರಡು ಆಚಾರಭೇದಗಳನ್ನು ರೂಪಿಸಿ ಅರ್ಧಪಾಲಕ ತೀರ್ಥವನ್ನು ಪ್ರವರ್ತನೆಗೊಳಿಸಿದರೆಂದೂ ಬೃಹತ್ಕಥಾಕೋಶದ ಭದ್ರಬಾಹುಸ್ವಾಮಿ ಕಥಾನಕದಲ್ಲಿ ಹೇಳಿರುವುದನ್ನು ಗಮನಿಸ ಬಹುದು.

೩೦೫-೬ ರಲ್ಲಿ) ಉತ್ತರಾಪಥಕ್ಕೆ ಹಿಮ್ಮರಳಿ ಪಯಣಮಾಡಿರುವುದೆಂದು ವ್ಯಕ್ತವಾಗು ವುದು.

ಶ್ರೀ ವೀರನಿರ್ವಾಣಪಶ್ಚಾತ್ ೨೦೬-೭ ನೇ ವರ್ಷದಲ್ಲಿ ಚಂದ್ರಗುಪ್ತಮೌರ್ಯನ ರಾಜ್ಯಾಭಿಷೇಕವು ನಡೆದಿದೆಯೆಂದು ಹಿಂದೆ ಪ್ರತಿಪಾದಿಸಿದೆ. ಇದರಿಂದ ಚಂದ್ರಗುಪ್ತ ಮೌರ್ಯನ ರಾಜ್ಯಾಭಿಷೇಕಸಮಯದಿಂದ ಸ್ವಲ್ಪಕಾಲದ ಮುನ್ನ ನಿರ್ಗ್ರಂಥಯತಿ ಸಂಘವು ಉತ್ತರಾಪಥಕ್ಕೆ ಹಿಮ್ಮರಳಿ ಪಯಣಮಾಡಿರುವುದೆಂದು ಅಧಿಗತವಾಗು ವುದು. ಯಾವ ಯತಿಸಂಘದ ಯತಿಗಳಲ್ಲೊಬ್ಬನಾಗಿ ತನ್ನ ಅಜ್ಜನಾದ ನಂದಚಂದ್ರ ಗುಪ್ತನು ಯತಿಯಾಗಿದ್ದನೋ ಆ ಯತಿಸಂಘದ ವಿಷಯವಾಗಿ ಮೌರ್ಯಚಂದ್ರ ಗುಪ್ತನು ಗೌರವಾದರಭಾವವನ್ನು ತಳೆದಿದ್ದಲ್ಲಿ ಆಶ್ಚರ್ಯವಿಲ್ಲ. ಆದರೆ ಈ ಯತಿ ಸಂಘವು ಉತ್ತರಾಪಥಕ್ಕೆ ಹಿಂದಿರುಗಿ ಬಂದ ಈ ಸಮಯದಲ್ಲಿ ನಂದಚಂದ್ರಗುಪ್ತ ಮುನಿಯು ಜೀವಂತರಿದ್ದರೆ ಅಥವಾ ಇಲ್ಲವೆ ಎಂಬುದನ್ನು ಖಚಿತವಾಗಿ ಹೇಳ ಲಾಗುವುದಿಲ್ಲ. ಯತಿಸಂಘವು ೧೨ ವರ್ಷಕಾಲ ದಮಿಳನಾಡಿನಲ್ಲಿದ್ದು ಅನಂತರ ಉತ್ತರಾಪಥಕ್ಕೆ ಹಿಂದಿರುಗುವ ಮಾರ್ಗವಾಗಿ ಕಳ್ಬಪ್ಪುವಿಗೆ (=ಶ್ರವಣಬೆಳಗುಳಕ್ಕೆ) ಬಂದು ವನದೇವತೆಗಳಿಂದ ದತ್ತವಾದ ಆಹಾರವನ್ನು ಭುಂಜಿಸಿ ಜೀವಿಸಿದ್ದ ಚಂದ್ರ ಗುಪ್ತಮುನಿಗೆ ಪುನರ್ದೀಕ್ಷೆಗೊಟ್ಟು ಆವರೊಡಗೊಂಡು ಮುಂದೆ ಪಯಣಮಾಡಿತೆಂದು ಪೂರ್ವೋಲ್ಲಿಖಿತವಾದ ವಡ್ಡಾರಾಧನೆಯ ಭದ್ರಬಾಹುಭಟಾರ ಕಥಾನಕದಲ್ಲಿ ಹೇಳಿರು ವುದು ವಿದಿತವಿದೆ. ಈ ಹೇಳಿಕೆಯಲ್ಲಿ ಅಸಂಗತವೆನಿಸಿ ಕಂಡುಬರುವ ಅಂಶವಿದೆ: ಕಳ್ಬಪ್ಪುವಿನಿಂದ ದಮಿಳನಾಡಿಗೆ ಪಯಣಮಾಡಿದ ಯತಿಗಳು ತಮ್ಮ ಗುರುಗಳಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ದೇಹಾವಸಾನದ ವಿಷಯವನ್ನು ಹಾಗೂ ಇವರ ಶುಶ್ರೂಷೆಯಲ್ಲಿ ನಿರತರಾಗಿದ್ದವರೂ ತಮ್ಮ ಸಧರ್ಮಿಯವರೂ ಆಗಿದ್ದ ಚಂದ್ರ ಗುಪ್ತಮುನಿಯವರ ಯೋಗಕ್ಷೇಮವಿಷಯವನ್ನು ಸಂಘಾಟಕರ ಮೂಲಕವಾದರೂ ತಿಳಿಯಲು ಯತ್ನಿಸದಿರಲಾರರು. ಇಷ್ಟಲ್ಲದೆ ಈ ನಿರ್ಗ್ರಂಥಯತಿಸಂಘವು ೧೨ ವರ್ಷ ಗಳ (ಅಥವಾ ಪೂರ್ವಪ್ರತಿಪಾದನೆಯಂತೆ ೪೪ ವರ್ಷಗಳ) ಧೀರ್ಘಕಾಲಪರ್ಯಂತ ದಮಿಳನಾಡಿನ ಪ್ರದೇಶದಲ್ಲಿಯೇ ನೆಲೆಗೊಂಡಿದ್ದಿತೆಂದು ಹೇಳಲಾಗುವುದಿಲ್ಲ. ದಕ್ಷಿಣಾ ಪಥಪ್ರದೇಶವರ್ತಿಯಾಗಿದ್ದು ಮಹಾಪದ್ಮನ ಶಾಸನವ್ಯಾಪ್ತಿಯಿಂದ ಸೂದೂರವಿದ್ದ ಕುಂಥಲಗಿರಿಸಿದ್ಧಕ್ಷೇತ್ರದ ದರ್ಶನಮಾಡಲು ಈ ಯತಿಸಂಘಕ್ಕೆ ಯಾವ ಆತಂಕವೂ ಇದ್ದಿರಲಿಲ್ಲ. ಆದ್ದರಿಂದ ಯತಿಸಂಘವು ಈ ಕ್ಷೇತ್ರದ ದರ್ಶನಾರ್ಥವಾಗಿಯಾದರೂ ಆಗಾಗ್ಗೆ ದಮಿಳನಾಡಿನಿಂದ ಕಳ್ಬಪ್ಪುವಿನ ಮಾರ್ಗವಾಗಿ ಪಯಣಮಾಡಿದೆಯೆಂದು ತರ್ಕಿಸಲವಕಾಶವಿದೆಯಾಗಿ ದಮಿಳನಾಡಿಗೆ ತೆರಳಿದ ಯತಿಸಂಘವು ೧೨ ವರ್ಷಗಳ ತರುವಾಯ ಕಳ್ಬಪ್ಪುವಿಗೆ ಬಂದು ಚಂದ್ರಗುಪ್ತಮುನಿಯೊಡಗೊಂಡು ಉತ್ತರಾಪಥಕ್ಕೆ ಪಯಣಮಾಡಿತೆಂಬ ಕಥಾನಕದ ಹೇಳಿಕೆಯು ಸಂಗತವೆನಿಸಿ ಕಂಡುಬರುವುದಿಲ್ಲ. ಈ ಚಂದ್ರಗುಪ್ತಸ್ವಾಮಿಯವರು ಯತಿಸಂಘದೊಡನೆ ಉತ್ತರಾಪಥಕ್ಕೆ ಹೋಗಿದ್ದು

ಅನಂತರ ತಮ್ಮ ಅವಸಾನಕಾಲದಲ್ಲಿ ಮರಳಿ ಶ್ರವಣಬೆಳಗುಳಕ್ಕೆ ಬಂದು ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ನಿಷಿಧಿಯ ಬಳಿ ತಪಸ್ಸುಮಾಡಿ ಸ್ವರ್ಗಸ್ಥರಾದರೆಂದು ಜನಶ್ರುತಿರೂಪದ ಸ್ಥಳೀಯ ಐತಿಹ್ಯವಿದೆ. ಇವರು ಯತಿಸಂಘದೊಡನೆ ಉತ್ತರಾಪಥಕ್ಕೆ ಹೋಗಿರಲಿ ಅಥವಾ ಇಲ್ಲದಿರಲಿ ಯಾವ ಯತಿಸಂಘದ ಯತಿಗಳಲ್ಲೊಬ್ಬರಾಗಿ ಇವರಿದ್ದರೋ ಆ ಯತಿಸಂಘದ ದರ್ಶನದಿಂದ ಮೌರ್ಯಚಂದ್ರಗುಪ್ತನು ಪ್ರಭಾವಿತನಾಗಿ ಶ್ರದ್ಧಾಭಕ್ತಿಯುಳ್ಳವನಾಗಿರುವನೆಂಬುದರಲ್ಲಿ ಸಂಶಯವಿಲ್ಲ. ಅಂತೆಯೇ ಶ್ರವಣಬೆಳಗುಳದ ಚಂದ್ರಗಿರಿಯ ಮೇಲಿರುವ ಬಸದಿಗಳಲ್ಲೆಲ್ಲಾ ಅತ್ಯಂತ ಪ್ರಾಚೀನ ಕಾಲದ್ದೆನಿಸಿದ ಚಂದ್ರಗುಪ್ತಬಸದಿಯು ಮೌರ್ಯಚಂದ್ರಗುಪ್ತನಿಂದ ತನ್ನ ಅಜ್ಜನ ಸ್ಮಾರಕವಾಗಿ ನಿರ್ಮಾಪಿತವಾಗಿರಬೇಕೆಂಬುದು ಸಂಭಾವಿತವೆನಿಸುವುದು.

ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಯತಿಸಂಘಸಮೇತರಾಗಿ ಕಳ್ಬಪ್ಪುವನ್ನು ಸೇರಿ ಸಲ್ಲೇಖನವನ್ನು ಕೈಗೊಂಡಸಮಯದಲ್ಲಿ ಈ ಕ್ಷೇತ್ರವು ದಟ್ಟವಾದ ಅರಣ್ಯದಿಂದ ಆವೃತವಾಗಿದ್ದಿತೆಂದು ಪೂರ್ವೋಲ್ಲಿಖಿತ ಭದ್ರಬಾಹುಭಟಾರಕಥಾನಕದ ಹೇಳಿಕೆಯಿಂದ ಸೂಚಿತವಾಗುವುದು. ಆದರೆ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರು ಸಂಘಸಮೇತರಾಗಿ ಈ ಕ್ಷೇತ್ರಕ್ಕೆ ಬಂದ ಸಮಯದಲ್ಲಿ ಈ ಕ್ಷೇತ್ರದ ಸುತ್ತುಮುತ್ತಿನ ಪ್ರದೇಶದಲ್ಲಿ ಧನಧಾನ್ಯಸಮೃದ್ಧವಾದ ಗ್ರಾಮಗಳಿದ್ದುವೆಂದು ಪೂರ್ವೋಲ್ಲಿಖಿತ ೧ ನೇ ಶಾಸನದ '........ಅರ್ಣೈವ ಜನಪದಮನೇಕಗ್ರಾಮಶತಸಂಖ್ಯಮುದಿತ ಜನಧನಕನಕಸಸ್ಯಗೋಮಹಿಷಾಜಾವಿಕಲ ಸಮಾಕೀರ್ಣಮ್ಪ್ರಾಪ್ತವಾನಾಚಾರ್ಯಃ' ಎಂಬ ಉಕ್ತಿಯಿಂದ ಸೂಚಿತವಾಗುವುದು. ಇದರಿಂದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಆಗಮನ ಸಮಯದಲ್ಲಿ ಕೇವಲ ಅರಣ್ಯವಾಗಿದ್ದ ಈ ಕ್ಷೇತ್ರವು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರ ಆಗಮನಕಾಲಕ್ಕೆ ಜನವಸತಿಗಳಿಂದ ಕೂಡಿದ ಗ್ರಾಮಗಳಿಂದ ಪರಿವೃತವಾಗಿದ್ದಿತೆಂದು ವ್ಯಕ್ತವಾಗುವುದು. ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಜೀವಿತಾಂತ್ಯಸಮಯದ ತಪೋಭೂಮಿಯಾದ ಈ ಕ್ಷೇತ್ರವು ನಿರ್ಗ್ರಂಥಯತಿಗಳಿಗೆ ವಂದನೀಯವಾದ ತೀರ್ಥಕ್ಷೇತ್ರವೆನಿಸಿದೆ. ನಿರ್ಗ್ರಂಥ ಯತಿಸಂಘವು ವಂದನಾರ್ಥವಾಗಿ ವಿಹಾರಾನುಕ್ರಮದಿಂದ ಈ ಕ್ಷೇತ್ರಕ್ಕೆ ಬಂದು ತಂಗುವ ರೂಢಿಯುಂಟಾಗಿದೆ. ಅಂತೆಯೇ ಕಾಲಾನುಕ್ರಮವಾಗಿ ಈ ಕ್ಷೇತ್ರದ ಸುತ್ತುಮುತ್ತಿನಲ್ಲಿ ಜನವಸತಿಗಳು ನಿರ್ಮಿತವಾಗಿವೆಯೆಂದು ಕಂಡುಬರುತ್ತದೆ. ಈ ರೀತಿಯಾಗಿ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಜೀವಿತಾಂತ್ಯಸಮಯದ ತಪೋಭೂಮಿಯೆನಿಸಿದ ಕಾರಣದಿಂದಲೇ ಈ ಕ್ಷೇತ್ರವು ತೀರ್ಥಕ್ಷೇತ್ರವೆನಿಸಿ ಅಂದಿನಿಂದ ಇಂದಿನವರೆವಿಗೂ ಸಂಸ್ತುತವಾಗಿರುವುದೆಂದು ವ್ಯಕ್ತವಾಗುವುದು.

ವಡ್ಡಾರಾಧನೆಯ ಭದ್ರಬಾಹುಭಟಾರಕಥಾಂತರ್ಗತವಾದ ಐತಿಹ್ಯ ಮತ್ತು ಬೃ. ಕ. ಕಥಾಕೋಶದ ಭದ್ರಬಾಹುಸ್ವಾಮಿ ಕಥಾಂತರ್ಗವಾದ ಐತಿಹ್ಯಾಂಶಗಳನ್ನು ಪರಾಮರ್ಶಿಸಲಾಗಿದೆ. ಬೃ. ಕ. ಕೋಶದ ಕಥಾಂತರ್ಗವಾದ ಮತ್ತೊಂದು ಐತಿ

ಹ್ಯಾಂಶವು ವಿಶೇಷ ಗಮನಾರ್ಹವಾಗಿದೆ. ಸರ್ವಸಾಧಾರಣವಾಗಿ ದಿಗಂಬರ ಆಮ್ನಾಯದ ಇತರ ಎಲ್ಲ ಭದ್ರಬಾಹುಸ್ವಾಮಿ ಕಥಾನಕಗಳ ಹೇಳಿಕೆ ಹಾಗೂ ಶಾಸನಗಳ ಹೇಳಿಕೆಯಂತೆ ಭದ್ರಬಾಹುಸ್ವಾಮಿಯವರು ಕಳ್ಬಪ್ಪುವಿನಲ್ಲಿ ಸ್ವರ್ಗಸ್ಥರಾಗಿರುವರಾದರೆ ಬೃ. ಕ. ಕೋಶದ ಹೇಳಿಕೆಯಂತೆ ಇವರು ಉಜ್ಜಯಿನಿಯ ಸಮೀಪವರ್ತಿಯಾದ ಭಾದ್ರಪದವೆಂಬ ಸ್ಥಾನದಲ್ಲಿ ಸ್ವರ್ಗಸ್ಥರಾಗಿದ್ದಾರೆ. 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರೊಬ್ಬರು ಭಾದ್ರಪದವೆಂಬ ಸ್ಥಾನದಲ್ಲಿ ಸ್ವರ್ಗಸ್ಥರಾದರೆಂಬ ಪರಂಪರಾಗತವಾದ ಪೂರ್ವೈತಿಹ್ಯವು ಬೃ. ಕ. ಕೋಶದ ಈ ಹೇಳಿಕೆಗೆ ಆಧಾರವಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಮತ್ತು ಆಚಾರಾಂಗಧರ ಭದ್ರಬಾಹುಸ್ವಾಮಿಯವರು ಕಳ್ಬಪ್ಪುವಿನಲ್ಲಿ ಸ್ವರ್ಗಸ್ಥರಾಗಿರುವರೆಂದು ಹಿಂದೆ ಸ್ಪಷ್ಟಪಡಿಸಿದೆ. ಆದ್ದರಿಂದ ಇವರೀರ್ವರಿಂದನ್ಯರಾದ 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರ ಐತಿಹ್ಯವು ಬೃ. ಕ. ಕೋಶದ ಈ ಕಥಾನಕದಲ್ಲಿ ಸಂಕಲಿತವಾಗಿರುವುದೆಂದೂ ಮತ್ತು ನಂದಿ ಆಮ್ನಾಯಪಟ್ಟಾವಲಿ 'ಎ' ಪ್ರತಿಯ ಹೇಳಿಕೆಯಂತೆ ಅಷ್ಟಅಂಗಶ್ರುತಧರರಾದ 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರೊಬ್ಬರಿದ್ದರಾದುದರಿಂದ, ಭಾದ್ರಪದವೆಂಬ ಸ್ಥಳದಲ್ಲಿ ಸ್ವರ್ಗಸ್ಥರಾದವರು ಇವರೇ ಆಗಿರಬೇಕೆಂದೂ ಗ್ರಹಿಸಲವಕಾಶವಾಗುವುದು.

ಶ್ವೇತಾಂಬರ ಜೈನಆಮ್ನಾಯಾನುಗುಣವಾದ ಭದ್ರಬಾಹುಸ್ವಾಮಿಯವರ ಐತಿಹ್ಯ :-ಭದ್ರಬಾಹುಸ್ವಾಮಿಯವರಿಗೆ ಜ್ಯೋತಿಷವಿದ್ಯಾಪ್ರವರರೂ ಮತ್ತು ಅನೇಕ ಜ್ಯೋತಿಷಶಾಸ್ತ್ರಗ್ರಂಥಗಳ ರಚನಕಾರರೂ ಆದ 'ವರಾಹಮಿಹಿರ' ಎಂಬ ಹೆಸರಿನ ಸಹೋದರರಿದ್ದರೆಂದು ಪೂರ್ವೋಲ್ಲಿಖಿತವಾದ ಶ್ವೇತಾಂಬರಆಮ್ನಾಯದ ಐತಿಹ್ಯದಲ್ಲಿ ಹೇಳಿರುವುದು ಸ್ಪಷ್ಟವಿದೆ. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ವೀ. ನಿ. ಪ. ೧೫೬ ರಲ್ಲಿ ಆಚಾರ್ಯಪಟ್ಟಸ್ಥರಾಗಿ ೧೪ ವರ್ಷಗಳ ತರುವಾಯ ವೀ. ನಿ. ಪ. ೧೭೦ ರಲ್ಲಿ ಸ್ವರ್ಗಸ್ಥರಾದರೆಂದು ಹೇಳಿದೆಯಾದುದರಿಂದ ಕ್ರಿ. ಪೂ. ೪ ನೇ ಶತಮಾನದಲ್ಲಿ ಜ್ಯೋತಿಶ್ಶಾಸ್ತ್ರಗ್ರಂಥ ರಚನಕಾರರಾದ 'ವರಾಹಮಿಹಿರ' ಎಂಬ ಹೆಸರಿನ ಆಚಾರ್ಯರಿದ್ದರೆಂದು ಭಾವಿತವಾಗುವುದು. ಶ್ವೇತಾಂಬರಆಮ್ನಾಯದ ಈ ಐತಿಹ್ಯದನುಗುಣವಾಗಿಯೇ ವರಾಹಮಿಹಿರಾಚಾರ್ಯರು ಬ್ರಾಹ್ಮಣಮತನೆತನದವರಾಗಿದ್ದರೆಂದು ನಿರ್ದೇಶಿತವಾಗಿದೆಯಾದರೂ ಕ್ರಿ. ಪೂ. ೪ ನೇ ಶತಮಾನದಷ್ಟು ಪ್ರಾಚೀನಕಾಲದಲ್ಲಿ ಜ್ಯೋತಿಶ್ಶಾಸ್ತ್ರಗ್ರಂಥರಚನಕಾರರಾದ 'ವರಾಹಮಿಹಿರ' ಎಂಬ ಹೆಸರಿನ ಆಚಾರ್ಯರಿದ್ದರೆಂದು ಸೂಚನೆಗೊಡುವ ಬ್ರಾಹ್ಮಣ ಮತಸಂಪ್ರದಾಯದ ಯಾವ ಸಾಕ್ಷ್ಯಾಧಾರಗಳೂ ಇಲ್ಲವಾಗಿವೆ. ಆದರೆ ಕ್ರಿ. ಪೂ. ೧ ನೇ ಶತಮಾನದಲ್ಲಿ ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲೊಬ್ಬರಾಗಿ 'ವರಾಹಮಿಹಿರ' ಎಂಬ ಹೆಸರಿನ ಆಚಾರ್ಯರಿದ್ದರೆಂಬ ಸಾಂಪ್ರದಾಯಿಕ ಕಥನವಿರುವುದೆಂಬುದಲ್ಲದೆ ಇವರು ಕ್ರಿ. ಶ. ೧ ನೇ ಶತಮಾನದ ಆದಿಯಲ್ಲಿ ಸ್ವರ್ಗಸ್ಥರಾಗಿರಬಹುದಾದ ಸಾಧ್ಯತೆಯನ್ನು ಹಿಂದೆ ವಿವರಿಸಿದೆ. ಇಂತೆಯೇ

ವಿಕ್ರಮಾದಿತ್ಯನ ಸಮಕಾಲೀನರಾಗಿ ಅಷ್ಟಾಂಗಶ್ರುತಧರರಾದ 'ಭದ್ರಬಾಹು' ಎಂಬ ಹೆಸರಿನ ಆಚಾರ್ಯರಿದ್ದರೆಂದು ದಿಗಂಬರ ಜೈನಸಂಪ್ರದಾಯದ ಪೂರ್ವೋಲ್ಲಿಖಿತ ನಂದಿಆಮ್ನಾಯಪಟ್ಟಾವಲಿ 'ಎ' ಪ್ರತಿಯ ಹೇಳಿಕೆಯಿರುವುದು ವಿದಿತವಿದೆ. ಇಷ್ಟಲ್ಲದೆ ಈ ಆಚಾರ್ಯರು ಜನ್ಮತಃ ಬ್ರಾಹ್ಮಣಮತೀಯರಾಗಿದ್ದರೆಂಬುದಾಗಿಯೂ ಹೇಳಿದೆ. ಆದ್ದರಿಂದ ಅಷ್ಟಾಂಗಶ್ರುತಧರರಾದ ಈ ಭದ್ರಬಾಹುಸ್ವಾಮಿಯವರು ವರಾಹಮಿಹಿರಾಚಾರ್ಯರ ಸಹೋದರರಾಗಿದ್ದಿರಬೇಕೆಂದೂ ಮತ್ತು ಇವರನ್ನಧಿಕರಿಸಿದ ಐತಿಹ್ಯವು ಶ್ವೇತಾಂಬರ ಜೈನಆಮ್ನಾಯದಲ್ಲಿ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯವಾಗಿ ಪರಿವರ್ತನೆಗೊಂಡು ಉಳಿದುಬಂದಿರುವುದೆಂದೂ ಗ್ರಹಿಸಲವಕಾಶವಾಗುವುದು. ಭದ್ರಬಾಹುಸ್ವಾಮಿಯವರ ಈ ಐತಿಹ್ಯವು ದೇವರ್ಧಿಗಣಿಯವರಿಂದ ಆಗಮಗಳ ಸಂಕಲನಕಾರ್ಯವು ನಡೆದ ಸಮಯದಲ್ಲಿ (ವೀ. ನಿ. ಸ. ೯೮೦ ರಲ್ಲಿ) ಉಪಲಬ್ಧವಿದ್ದ ಕಥನಾಧಾರಗಳಿಂದ ರೂಪಿತವಾಗಿದೆಯೆಂದು ಹೇಳಲವಕಾಶವಿದೆ. 'ಆವಸ್ಸಯ' ವೇ ಮೊದಲಾದ ಅನೇಕ ಕೃತಿಗಳು ಭದ್ರಬಾಹುಸ್ವಾಮಿಯವರಿಂದ ರಚಿತವಾಗಿವೆಯೆಂಬ ಹೇಳಿಕೆಗೆ ದೇವರ್ಧಿಗಣಿಯವರ ಸಮಯದಲ್ಲಿ ಉಪಲಬ್ಧವಿದ್ದ ಐತಿಹ್ಯವು ಆಧಾರವಾಗಿದೆಯೆಂಬುದರಲ್ಲಿ ಸಂಶಯವಿಲ್ಲ.[1] ಇವರಿಂದ ಉವಸಗ್ಗಹರಸ್ತೋತ್ರವು ರಚಿತವಾದ ಸಂದರ್ಭಕಥನದ ಹಿನ್ನಲೆಯಾಗಿ ಇವರ ಮತ್ತು ವರಾಹಮಿಹಿರಾಚಾರ್ಯರ ಸಾಹೋದರ್ಯಸಂಬಂಧವೇ ಮೊದಲಾದ ಐತಿಹ್ಯಾಂಶಗಳು ಪೂರ್ವೋಲ್ಲಿಖಿತವಾದ ಐತಿಹ್ಯದಲ್ಲಿ ಪ್ರಸ್ತಾವಗೊಂಡಿರುವುದನ್ನು ಗಮನಿಸಬಹುದು. ಇದರಿಂದ ಭದ್ರಬಾಹುಸ್ವಾಮಿಯವರಿಂದ ಉವಸಗ್ಗಹರಸ್ತೋತ್ರವು ರಚಿತವಾದ ಸಂದರ್ಭಕಥನರೂಪವಾಗಿ ಇವರ ಮತ್ತು ವರಾಹಮಿಹಿರಾಚಾರ್ಯರ ಸಂಬಂಧವೇ ಮೊದಲಾದ ವಿಷಯಗಳನ್ನು ಕುರಿತು ದೇವರ್ಧಿಗಣಿಯವರ ಕಾಲದಲ್ಲಿ ಯಾವ ಒಂದು ಐತಿಹ್ಯವು ಉಪಲಬ್ಧವಿದ್ದಿತೋ ಆ ಐತಿಹ್ಯದಾಧಾರದಿಂದ ಶ್ವೇತಾಂಬರಜೈನಆಮ್ನಾಯದಲ್ಲಿ ಈಗ ಉಪಲಬ್ಧವಿರುವ ಶ್ರುತಕೇವಲಿಭದ್ರಬಾಹುಸ್ವಾಮಿಯವರ ಐತಿಹ್ಯವು ರೂಪಿತವಾಗಿದೆಯೆಂದು ಅಧಿಗತವಾಗುವುದು.

ಆಚಾರಾಂಗಶ್ರುತಧರಭದ್ರಬಾಹುಸ್ವಾಮಿಯವರಿಗೆ ಸಂಬಂಧಿಸಿದ ಐತಿಹ್ಯಾಂಶವಾದ ದ್ವಾದಶಸಾಂವತ್ಸರಿಕ ದುರ್ಭಿಕ್ಷದ ಘಟನೆಯು ದಿಗಂಬರ ಆಮ್ನಾಯದ ಕಥಾ

---

1 ಭದ್ರಬಾಹುಸ್ವಾಮಿಯವರ ಸ್ತುತಿಪರವಾದ ಈ ಮುಂದಿನ ಗಾಹೆಯು, ಈ ಹೆಸರಿನ ಆಚಾರ್ಯರೊಬ್ಬರಿಂದ ರಚಿತವಾದ ಕೃತಿಗಳ ವಿಷಯವಾಗಿ ಪರಂಪರಾನುಗತವಾದ ಐತಿಹ್ಯವಿದ್ದಿರಬೇಕೆಂದು ಸೂಚನೆಗೊಡುವುದು :

ದಸಕಪ್ಪವವಹಾರಾ ನಿಜ್ಜುಘಾಜೇಣ ನವಮಪುವ್ವಾವೋ ।
ವಂದಾಮಿಭದ್ದಬಾಹುಂ ತಂ ಅಪಚ್ಛಿಮ ಸಯಲ ಸುಯಣಾಣಿ ॥

[ಶ್ರ. ಬೆಳಗುಳದ ಶಾಸನಗ್ರಂಥ—ಪು. ಸಂ. 6]

ನಕಗಳಲ್ಲಿ ಶ್ರುತಕೇವಲಿಭದ್ರಬಾಹುಸ್ವಾಮಿಯವರನ್ನಧಿಕರಿಸಿದ ಐತಿಹ್ಯಾಂಶವಾಗಿ ಸಂಯೋಜಿತವಾಗಿರುವಂತೆ ಶ್ವೇತಾಂಬರ ಆಮ್ನಾಯದ ಕಥಾನಕದಲ್ಲಿಯೂ ಸಂಯೋಜಿತವಾಗಿದೆಯೆಂದು ಹೇಳಲವಕಾಶವಿದೆ. ದ್ವಾದಶವರ್ಷಕಾಲದ ದುರ್ಭಿಕ್ಷದ ಅವಧಿಯಲ್ಲಿ ಮತ್ತು ಈ ಅವಧಿಯ ಪೂರ್ವಾಪರ ಸಮಯದಲ್ಲಿ ಸಂಘಟಿತವಾದುವೆಂದು ಹೇಳಲಾಗಿರುವ ಘಟನೆಗಳು ಯಥಾವತ್ತಾಗಿ ಆ ಕಾಲಾವಧಿಯೊಡನೆ ಸಮಾಯುಕ್ತವಾಗುವುದಿಲ್ಲ. ಈ ಅವಧಿಯಲ್ಲಿ ಸಂಘಟಿತವಾದವುಗಳೆಂದು ಹೇಳಲಾಗಿರುವ ಮುಖ್ಯ ಘಟನೆಗಳಲ್ಲಿ ಈ ಮುಂದಿನವು ಪರಿಶೀಲನಾರ್ಹವಾಗಿವೆ :

೧) ವೀ. ನಿ. ಪ. ೧೫೬ ನೇ ವರ್ಷದಲ್ಲಿ ಚಂದ್ರಗುಪ್ತನ ರಾಜ್ಯಭಾರವು ಆರಂಭವಾಯಿತು. ಇವನ ರಾಜ್ಯಭಾರಕಾಲದಲ್ಲಿ ಹನ್ನೆರಡು ವರ್ಷಕಾಲ ದುರ್ಭಿಕ್ಷವುಂಟಾಯಿತು.

೨) ದುರ್ಭಿಕ್ಷವುಂಟಾಗಲಿರುವುದನ್ನು ಭದ್ರಬಾಹುಸ್ವಾಮಿಯವರು ತಿಳಿದು ಮಹಾಪ್ರಾಣಧ್ಯಾನಾಚರಣೆಗಾಗಿ ನೇಪಾಳಕ್ಕೆ ಹೋದರು.

೩) ದುರ್ಭಿಕ್ಷಕಾಲದಲ್ಲಿ ಆಹಾರಾಭಾವವುಂಟಾದುದರಿಂದ ಸಾಧುಗಳು ಆಗಮದ ಅಧ್ಯಯನದಲ್ಲಿ ನಿರತರಾಗಿರಲು ಸಾಧ್ಯವಾಗಲಿಲ್ಲ. ಇದರ ಪರಿಣಾಮವಾಗಿ ಸಾಧುಗಳಲ್ಲಿ ಆಗಮಗಳ ವಿಸ್ಮೃತಿಯುಂಟಾಯಿತು.

೪) ಸುಭಿಕ್ಷವುಂಟಾದ ತರುವಾಯ ಸಾಧುಗಳು ಪಾಟಲೀಪುತ್ರನಗರದಲ್ಲಿ ಸಂಮಿಳಿತರಾದರು. ಪ್ರತಿಯೊಬ್ಬ ಸಾಧುವಿನ ಸ್ಮೃತಿಪಟಲದಲ್ಲಿ ಉಳಿದಿದ್ದ ಆಗಮಪಾಠವನ್ನು ಕ್ರೋಢೀಕರಿಸಿ ಹನ್ನೊಂದು ಅಂಗಗಳ ಪೂರ್ಣಪಾಠವನ್ನು ಸಂಕಲನ ಮಾಡಲಾಯಿತು.

೫) ದೃಷ್ಟಿವಾದವೆಂಬ ಹನ್ನೆರಡನೆಯ ಅಂಗವನ್ನು ಭದ್ರಬಾಹುಸ್ವಾಮಿಯವರೊಬ್ಬರು ಮಾತ್ರ ತಿಳಿದಿದ್ದರಾಗಿ ಅವರಿಂದ ಅದನ್ನು ಅಧ್ಯಯನಮಾಡಲೋಸುಗ ಸ್ಥೂಲಭದ್ರಸ್ವಾಮಿಯವರೇ ಮೊದಲಾದ ಯತಿಗಳನ್ನು ನೇಪಾಳಕ್ಕೆ ಶ್ರೀಸಂಘವು ಕಳುಹಿತು.

೬) ವೀ. ನಿ. ಪ. ೧೫೬ ರಲ್ಲಿ ಸಂಭೂತಿವಿಜಯಸ್ವಾಮಿಯವರು ಸ್ವರ್ಗಸ್ಥರಾದರಾಗಿ ಭದ್ರಬಾಹುಸ್ವಾಮಿಯವರು ನೇಪಾಳದಿಂದ ಹಿಂದಿರುಗಿ ಬಂದು ಆಚಾರ್ಯಪಟ್ಟಧರರಾಗಿ ೧೪ ವರ್ಷಗಳ ತರುವಾಯ ವೀ. ನಿ. ಪ. ೧೭೦ ರಲ್ಲಿ ಸ್ವರ್ಗಸ್ಥರಾದರು.[1]

ಮೇಲ್ಕಂಡ ೧ ನೇ ಹೇಳಿಕೆಗನುಗುಣವಾಗಿ ವೀ. ನಿ. ಪ. ೧೫೬ ನೇ ವರ್ಷದ ತರುವಾಯದಲ್ಲಿ ೧೨ ವರ್ಷಗಳಕಾಲ ದುರ್ಭಿಕ್ಷವು ಸಂಘಟಿತವಾಗಿರಬೇಕೆಂದು ಅವ

---

1 ಈ ಅಂಶಗಳನ್ನು ಪೂ. ಸೂ. 'ಶ್ರ. ಭ. ಮಹಾವೀರ' ದ ಭದ್ರಬಾಹುಸ್ವಾಮಿಯವರ ಮತ್ತು ಸ್ಥೂಲಭದ್ರಸ್ವಾಮಿಯವರ ಐತಿಹ್ಯಕಥನದಿಂದ ಸಂಗ್ರಹಿಸಲಾಗಿದೆ.

ಗತವಾಗುವುದು. ಇದರಂತೆ ವೀ. ನಿ. ಪ. (೧೫೬ + ೧೨ =) ೧೬೮ ನೇ ವರ್ಷದ ಪರಿಸರದಲ್ಲಿ ದುರ್ಭಿಕ್ಷಕಾಲವು ಕಳೆದು ಸುಭಿಕ್ಷವುಂಟಾಗಿರಬೇಕೆಂದೂ ಮತ್ತು ಈ ಸಮಯದಲ್ಲಿ ಜೈನಯತಿಸಂಘವು ಪಾಟಲೀಪುತ್ರನಗರದಲ್ಲಿ ಸಮ್ಮಿಳಿತವಾಗಿ ಏಕಾದಶಾಂಗ ಶ್ರುತದ ಸಂಕಲನ ಕಾರ್ಯವನ್ನು ನಡೆಸಿ ಹನ್ನೆರಡನೆಯದಾದ ದೃಷ್ಟಿವಾದಾಂಗದ ಅಧ್ಯಯನಕ್ಕಾಗಿ ಸ್ಥೂಲಭದ್ರಾದಿ ಮುನಿಗಳನ್ನು ನೇಪಾಳದಲ್ಲಿದ್ದ ಭದ್ರಬಾಹುಸ್ವಾಮಿಯವರ ಬಳಿಗೆ ಕಳುಹಿರಬೇಕೆಂದೂ ಪರಿಗಣಿತವಾಗುವುದು. ಆದರೆ ಮೇಲ್ಕಂಡ ೬ ನೆಯ ಹೇಳಿಕೆಯಂತೆ ಭದ್ರಬಾಹುಸ್ವಾಮಿಯವರು ವೀ. ನಿ. ಪ. ೧೫೬ ನೇ ವರ್ಷದಲ್ಲಿ ನೇಪಾಳದಿಂದ ಪಾಟಲೀಪುತ್ರನಗರಕ್ಕೆ ಹಿಂದಿರುಗಿ ಬಂದು ಆಚಾರ್ಯಪಟ್ಟಸ್ಥರಾಗಿದ್ದಾರೆ. ಇದರಂತೆ ವೀ. ನಿ. ಪ. ೧೫೬ ನೇ ವರ್ಷದ ಪೂರ್ವಭಾವಿಯಾಗಿಯೇ ಹನ್ನೆರಡು ವರ್ಷಗಳ ಕಾಲದ ದುರ್ಭಿಕ್ಷವು ಕೊನೆಗೊಂಡು ಸುಭಿಕ್ಷವುಂಟಾಗಿರಬೇಕೆಂದು ಪರಿಗಣಿತವಾಗುವುದು. ಇಷ್ಟಲ್ಲದೆ ವೀ. ನಿ. ಪ. ೧೬೦ ರಲ್ಲಿ ಪಾಟಲೀಪುತ್ರನಗರದಲ್ಲಿ ಏಕಾದಶಾಂಗಶ್ರುತದ ಸಂಕಲನಕಾರ್ಯವು (ಪಾಟಲೀಪುತ್ರ ವಾಚನವು) ನಡೆಯಿತೆಂದು 'ಶ್ರ. ಭ. ಮಹಾವೀರ' ದ ರಚನಕಾರರು ಹೇಳಿದ್ದಾರೆ. [ಪು. ಸಂ. 317] ಇದರಂತೆ ವೀ. ನಿ. ಪ. (೧೬೦ – ೧೨ =) ೧೪೮ ನೇ ವರ್ಷದ ಪರಿಸರದಲ್ಲಿ ಆರಂಭವಾದ ದುರ್ಭಿಕ್ಷವು ಕೊನೆಗೊಂಡು ಸುಭಿಕ್ಷವುಂಟಾಯಿತೆಂದು ಪರಿಗಣಿತವಾಗುವುದು. ಈ ರೀತಿಯಾಗಿ ದ್ವಾದಶಸಾಂವತ್ಸರಿಕ ದುರ್ಭಿಕ್ಷವು ಸಂಘಟಿಸಿದ ನಿಯತಕಾಲದ ಬಗ್ಗೆ ಅನಿಶ್ಚಯತೆಯಿದೆಯೆಂಬುದಲ್ಲದೆ, ಈ ಕಾಲದ ಪೂರ್ವೋತ್ತರ ಸಮಯಗಳಲ್ಲಿ ಸಂಘಟಿತವಾದುವೆಂದು ಹೇಳಲಾಗಿರುವ, ಏಕಾದಶಾಂಗಶ್ರುತದ ಸಂಕಲನ, ಸ್ಥೂಲಭದ್ರಾಚಾರ್ಯರಿಂದ ದೃಷ್ಟಿವಾದಾಂಗದ ಅಧ್ಯಯನ, ಭದ್ರಬಾಹುಸ್ವಾಮಿಯವರ ಯುಗಪ್ರಧಾನತ್ವದ ಆರಂಭ ಇವೇ ಮೊದಲಾದ ಪ್ರಸಂಗಗಳು ಪರಸ್ಪರವಾಗಿ ಅವಿರೋಧರೀತಿಯಿಂದ ಸಮನ್ವಿತವಾಗುವುದಿಲ್ಲ. ಆದ್ದರಿಂದ ದಿಗಂಬರ ಆಮ್ನಾಯದ ಭದ್ರಬಾಹು ಕಥಾನಕಗಳಂತೆ ಇಲ್ಲಿಯೂ 'ಭದ್ರಬಾಹು' ಎಂಬ ಆಚಾರ್ಯರ ಹೆಸರಿನೊಡನೆ ಸಂಗತವಾಗಿದ್ದ ದ್ವಾದಶಸಾಂವತ್ಸರಿಕ ದುರ್ಭಿಕ್ಷ ಘಟನೆಯ ಐತಿಹ್ಯಾಂಶವು ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯವೆನಿಸಿ ಪರಿವರ್ತಿತವಾಗಿರುವುದೆಂದು ವ್ಯಕ್ತವಾಗುವುದು. ಈ ರೀತಿಯಾಗಿ ಶ್ವೇತಾಂಬರ ಜೈನ ಆಮ್ನಾಯದಲ್ಲಿ ಉಳಿದು ಬಂದಿರುವ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯವು ಅಷ್ಟಾಂಗಶ್ರುತಧರ ಭದ್ರಬಾಹುಸ್ವಾಮಿಯವರ ಮತ್ತು ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರ ಐತಿಹ್ಯಾಂಶಗಳ ಸಂಯೋಜನೆಯಿಂದ ರೂಪಿತವಾಗಿರುವುದೆಂದು ಅಧಿಗತವಾಗುವುದು.

**ದಶಪೂರ್ವ ಶ್ರುತಧರ ಆಚಾರ್ಯಸಂತತಿ :** 'ಭದ್ರಬಾಹುಸ್ವಾಮಿ' ಎಂಬ ಹೆಸರಿನ ಆಚಾರ್ಯರ ಐತಿಹ್ಯವಿಷಯವಾಗಿ ಏರ್ಪಟ್ಟ ಸಂದಿಗ್ಧತೆಯ ಕಾರಣದಿಂದ ಶ್ರೀ ವೀರನಿರ್ವಾಣಾನಂತರಕಾಲೀನವಾದ ಶ್ರುತಧರ ಆಚಾರ್ಯಾನುಕ್ರಮದ ವಿಷಯ

ದಲ್ಲಿ ಮತಭೇದಗಳೇರ್ಪಡಲು ಅವಕಾಶವಾಯಿತೆಂದು ಹಿಂದೆ ಹೇಳಿದೆ. ಅಂತೆಯೇ ಈ ಹಿಂದಿನ ವಿಮರ್ಶೆಯಿಂದ ಶ್ರೀ ವೀರನಿರ್ವಾಣಾನಂತರದ ಶ್ರುತಧರ ಆಚಾರ್ಯ ಸಂತತಿಯಲ್ಲಿ 'ಭದ್ರಬಾಹುಸ್ವಾಮಿ' ಎಂಬ ಹೆಸರನ್ನು ಹೊಂದಿದ್ದ ಮೂವರು ಆಚಾರ್ಯರಿದ್ದರೆಂದೂ ಇವರಲ್ಲಿ ಮೊದಲನೆಯವರಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ವೀ. ನಿ. ಪ. ೧೬೨ ನೇ ವರ್ಷದಲ್ಲಿ ಕಳ್ಬಪ್ಪುವಿನಲ್ಲಿ (ಶ್ರ. ಬೆಳಗೊಳದಲ್ಲಿ) ಸ್ವರ್ಗಸ್ಥರಾಗಿರುವರೆಂದೂ ಶ್ರುತಪಟ್ಟಿದೆ. ಈ ಭದ್ರಬಾಹುಸ್ವಾಮಿಯವರು ದ್ವಾದಶಾಂಗ-ಚತುರ್ದಶಪೂರ್ವ ಶ್ರುತಧರವರ್ಗದ ಅಂತಿಮ ಆಚಾರ್ಯರಾಗಿದ್ದಾರೆ. ಇವರ ಅನಂತರ, ಪಟ್ಟಾವಲಿಗಳಲ್ಲಿ, ದಶಪೂರ್ವಿವರ್ಗದ ಆಚಾರ್ಯಾನುಕ್ರಮವು ನಿರ್ದೇಶಿತವಾಗಿದೆ. ದಿಗಂಬರ ಜೈನ ಆಮ್ನಾಯದನುಸಾರವಾಗಿ ೧೨ ನೆಯದಾದ ದೃಷ್ಟಿವಾದಾಂಗದ ವಿಭಾಗಗಳಾದ ೧೪ ಪೂರ್ವಗಳಲ್ಲಿ ಮೊದಲ ೧೦ ಪೂರ್ವಗಳ ಪರ್ಯಂತದ ಸಮಸ್ತಶ್ರುತವನ್ನು ಸಕಲರೀತಿಯಿಂದಲೂ ಉಳಿದ ಶ್ರುತಭಾಗವನ್ನು ವಿಕಲರೀತಿಯಿಂದಲೂ ಧಾರಣಮಾಡಿದ್ದ ಆಚಾರ್ಯಸಂತತಿಯು ದಶಪೂರ್ವಿಆಚಾರ್ಯವರ್ಗವೆಂದು ಸಂಸ್ತುತವಾಗಿದೆ. ಪಟ್ಟಾವಲಿಗಳೇ ಮೊದಲಾದ ಐತಿಹ್ಯಮೂಲಗಳ ಸರ್ವಸಮ್ಮತವಾದ ಹೇಳಿಕೆಯಂತೆ ವೀ. ನಿ. ಪ. ೧೬೨ ನೇ ವರ್ಷದ ತರುವಾಯದಲ್ಲಿ ಉದಯಗೊಂಡ ಈ ಆಚಾರ್ಯಸಂತತಿಯು ಮುಂದೆ ೧೮೩ ವರ್ಷಗಳ ಅನಂತರ ವೀ. ನಿ. ಪ. ವರ್ಷ (೧೬೨+೧೮೩=) ೩೪೫ ರಲ್ಲಿ ಮುಕ್ತಾಯಗೊಂಡಿದೆ. ದಶಪೂರ್ವಿವರ್ಗದ ಈ ಸಮಷ್ಟಿಪಟ್ಟಕಾಲದ ವಿಷಯವಾಗಿ ಐತಿಹ್ಯಮೂಲಗಳಲ್ಲಿ ಸಾಧಾರಣವಾಗಿ ಒಮ್ಮತವಿರುವುದಾದರೂ ಈ ವರ್ಗದ ಆಚಾರ್ಯರ ಒಟ್ಟು ಸಂಖ್ಯೆಯ ವಿಷಯವಾಗಿ ಮತಭೇದವಿರುವುದು ಕಂಡುಬರುತ್ತದೆ.

ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯ ಮತ್ತು ತಿಲೋಯಪಣ್ಣತ್ತಿಯಾದಿಯಾದ ಇತರಕೃತಿಗಳ ಐತಿಹ್ಯಾನುಗುಣವಾಗಿ ಈ ವರ್ಗದಲ್ಲಿ ೧೧ ಜನ ಆಚಾರ್ಯರ ಗಣನೆಮಾಡಿದೆಯಾದರೆ ನಂ. ಆ. ಪಟ್ಟಾವಲಿ 'ಇ' ಪ್ರತಿ ಮತ್ತು ಸೇನಗಣದ ಪಟ್ಟಾವಲಿ[1] ಗಳಲ್ಲಿ ನಿರ್ದೇಶಿತವಾಗಿರುವಂತೆ ಈ ವರ್ಗದಲ್ಲಿ ೯ ಜನ ಆಚಾರ್ಯರ ಗಣನೆಯಾಗಿದೆ. ಈ ರೀತಿಯಾಗಿ ದಶಪೂರ್ವಿವರ್ಗದ ಆಚಾರ್ಯರ ಒಟ್ಟು ಸಂಖ್ಯೆಯ ವಿಷಯವಾಗಿ ಕಂಡುಬರುವ ಈ ಎರಡು ಭಿನ್ನಮತಗಳಲ್ಲಿ ತಥ್ಯನಿಷ್ಠವಾಗಿರುವ ಮತವಾವುದೆಂಬುದನ್ನು ಪರಿಷ್ಕರಿಸಿ ನಿರ್ಣಯಿಸಿದಲ್ಲದೆ ಶ್ರುತಧರ ಆಚಾರ್ಯರೆಲ್ಲರ ಒಟ್ಟು ಸಂಖ್ಯೆ, ಪ್ರತ್ಯೇಕ ಆಚಾರ್ಯರ ಪಟ್ಟಕಾಲಮಾನ ಇವೇ ಮುಂತಾದ ಅಂಶಗಳ ಪರಿಷ್ಕರಣವು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ವರ್ಗದ

1 ಸೇನಗಣದ ಪಟ್ಟಾವಲಿಯು ಈ ಹೇಳಿಕೆಯು 'ಜಯಧವಲಾ' ಮುನ್ನುಡಿಯನ್ನಾಧರಿಸಿದೆ.

ಆಚಾರ್ಯರ ಒಟ್ಟು ಸಂಖ್ಯೆ ಮತ್ತು ಪಟ್ಟಕಾಲಮಾನಗಳನ್ನು ಅವಶ್ಯವಾಗಿ ಪರಿಷ್ಕರಿಸ ಬೇಕಾಗಿದೆ. ದಶಪೂರ್ವಿವರ್ಗದ ಆಚಾರ್ಯರ ನಾಮೋಲ್ಲೇಖಮಾಡುವ ಐತಿಹ್ಯಾಧಾರಗಳಲ್ಲಿ ಶ್ರ. ಬೆಳಗುಳದ ೧ ನೇ ಶಾಸನವು ಪ್ರಾಚೀನತಮವಾದುದಾಗಿದೆ. ಅದ್ದರಿಂದ ಪ್ರಸಕ್ತವಿಷಯದ ಪರಿಷ್ಕರಣದಲ್ಲಿ ಈ ಶಾಸನಗತವಾದ ಆಚಾರ್ಯನಾಮಾವಲಿಯು ಅವಶ್ಯವಾಗಿ ಗಮನಾರ್ಹವಾದ ಆಧಾರವಾಗಿದೆ. ಈ ಶಾಸನದಲ್ಲಿ ಗೌತಮಸ್ವಾಮಿಯಾದಿಯಾಗಿ ಬುದ್ಧಿಲಸ್ವಾಮಿಪರ್ಯಂತರಾದ ಆಚಾರ್ಯರನ್ನು ಅನುಬದ್ಧಕ್ರಮದಿಂದ ಹೆಸರಿಸಿರುವುದು ಸ್ಪಷ್ಟವಿದೆ. ಈ ಹೆಸರುಗಳಲ್ಲಿ ಮೊದಲ ಮೂರು ಹೆಸರುಗಳು ಕೇವಲಿಗಳ ಹೆಸರುಗಳಾಗಿಯೂ, ಅನಂತರದ ಐದು ಹೆಸರುಗಳು ಶ್ರುತಕೇವಲಿಗಳೈವರ ಹೆಸರುಗಳಾಗಿಯೂ, ತದನಂತರದ ವಿಶಾಖಾದಿ ಬುದ್ಧಿಲಾಂತ್ಯವಾದ ಹೆಸರುಗಳು ದಶಪೂರ್ವಿವರ್ಗದ ಆಚಾರ್ಯರ ಹೆಸರುಗಳಾಗಿಯೂ ಇವೆಯೆಂಬುದು ನಿಶ್ಚಿತವಿದೆ. ಇದರಿಂದ ಈ ಶಾಸನದಲ್ಲಿ ಕೇವಲಿ, ಶ್ರುತಕೇವಲಿ ಮತ್ತು ದಶಪೂರ್ವಿವರ್ಗಗಳ ಆಚಾರ್ಯರ ಹೆಸರುಗಳನ್ನು ಅನುಬದ್ಧಕ್ರಮದಿಂದ ಹೆಸರಿಸಲಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಈ ಶಾಸನದ ಐತಿಹ್ಯಾನುಗುಣವಾಗಿ ದಶಪೂರ್ವಿವರ್ಗದ ಆಚಾರಲ್ಲಿ 'ಬುದ್ಧಿಲ' ಎಂಬ ಹೆಸರಿನ ಆಚಾರ್ಯರು ಅಂತಿಮ ಆಚಾರ್ಯರಾಗಿರುವರೆಂದು ಸೂಚಿತವಾಗುವುದು. ಇಂತೆಯೇ ನಂ. ಆ. ಪಟ್ಟಾವಲಿ 'ಇ' ಪ್ರತಿಯ ಐತಿಹ್ಯದನುಗುಣವಾಗಿಯೂ ದಶಪೂರ್ವಿವರ್ಗದ ಆಚಾರ್ಯರಲ್ಲಿ ಬಹುಧೂಲಿ (=ಬುದ್ಧಿಲ) ಆಚಾರ್ಯರು ಅಂತಿಮ ಆಚಾರ್ಯರಾಗಿ ನಿರ್ದೇಶಿತರಾಗಿದ್ದಾರೆ. ಇದರಿಂದ ದಶಪೂರ್ವಿವರ್ಗದ ಆಚಾರ್ಯಸಂಖ್ಯೆಯನ್ನು ನಿರ್ದೇಶಿಸುವಲ್ಲಿ ನಂ. ಆ. ಪಟ್ಟಾವಲಿ 'ಇ' ಪ್ರತಿಯ ಹೇಳಿಕೆಯು ಶ್ರ. ಬೆಳಗುಳದ ೧ ನೇ ಶಾಸನದ ಪ್ರಾಚೀನವಾದ ಐತಿಹ್ಯಾನುಗುಣವಾದುದಾಗಿದೆಯೆಂದು ಪರಿಭಾವಿತವಾಗುವುದು, ನಂ. ಆ. ಪಟ್ಟಾವಲಿ 'ಎ' ಪ್ರತಿ ಮತ್ತು ತಿಲೋಯಪಣ್ಣತ್ತಿಯಾದಿಯಾದ ಇತರ ಕೃತಿಗಳಲ್ಲಿ, ಬುದ್ಧಿಲಾಚಾರ್ಯರ ಅನಂತರದ ಯಾವ, 'ದೇವ' (ಅಥವಾ ಗಂಗದೇವ) ಮತ್ತು 'ಧರ್ಮಸೇನ' ಎಂಬ ಹೆಸರಿನ ಮತ್ತಿಬ್ಬರು ಆಚಾರ್ಯರನ್ನು ದಶಪೂರ್ವಿವರ್ಗದ ಆಚಾರ್ಯರನ್ನಾಗಿ ನಿರ್ದೇಶಿಸಲಾಗಿದೆಯೋ ಆ ಇಬ್ಬರು ಆಚಾರ್ಯರನ್ನು ನಂ. ಆ. ಪಟ್ಟಾವಲಿ 'ಇ' ಪ್ರತಿಯಲ್ಲಿ ಏಕಾದಶಾಂಗಶ್ರುತಧರವರ್ಗದ ಪ್ರಥಮ ಮತ್ತು ದ್ವಿತೀಯ ಆಚಾರ್ಯರನ್ನಾಗಿ ನಿರ್ದೇಶಿಸಲಾಗಿದೆ. ಅಂತೆಯೇ ದಶಪೂರ್ವಿವರ್ಗದ ಆಚಾರ್ಯರ ಒಟ್ಟು ಸಂಖ್ಯೆಯ ಗಣನೆಯು ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ಈ ಇಬ್ಬರು ಆಚಾರ್ಯರ ಗಣನೆಯಿಂದ ಆಧಿಕ್ಯಗೊಂಡಿದ್ದು 'ಇ' ಪ್ರತಿಯನುಗುಣವಾದ ೯ ಜನ ಆಚಾರ್ಯರ ಗಣನೆಯ ಬದಲಾಗಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ೧೧ ಜನ ಆಚಾರ್ಯರ ಗಣನೆಯಾಗಿದೆಯೆಂದು ವ್ಯಕ್ತವಾಗುವುದು.

'ದೇವ' (= ಗಂಗದೇವ) ಎಂಬ ಹೆಸರಿನ ಆಚಾರ್ಯರನ್ನು ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ದಶಪೂರ್ವಿವರ್ಗದ ಆಚಾರ್ಯರನ್ನಾಗಿ ನಿರ್ದೇಶಿಸಲಾಗಿದ್ದು 'ಇ' ಪ್ರತಿಯಲ್ಲಿ ಈ ಆಚಾರ್ಯರನ್ನು ಏಕಾದಶಾಂಗಶ್ರುತಧರ ವರ್ಗದ ಪ್ರಥಮ ಆಚಾರ್ಯರನ್ನಾಗಿ ನಿರ್ದೇಶಿಸಿರುವುದು ವಿದಿತವಿದೆ ಈ ಆಚಾರ್ಯರು ದಶಪೂರ್ವಿವರ್ಗದ ಆಚಾರ್ಯರಾಗಿಲ್ಲವೆಂಬುದು ಈ ಹಿಂದಿನ ವಿಮರ್ಶೆಯಿಂದ ವ್ಯಕ್ತಪಟ್ಟಿದೆ. ಇಂತೆಯೇ ಇವರನ್ನು ಏಕಾದಶಾಂಗಶ್ರುತಧರವರ್ಗದ ಆಚಾರ್ಯರನ್ನಾಗಿಯೂ ಪರಿಗಣನೆಮಾಡಲು ಅವಕಾಶವಿಲ್ಲವಾಗಿದೆ. 'ಇ' ಪ್ರತಿಯಲ್ಲಿ ಗಂಗದೇವಾದಿ ಧ್ರುವಸೇನಪರ್ಯಂತರಾದ ಆರು ಜನ ಆಚಾರ್ಯರನ್ನು ಏಕಾದಶಾಂಗ ಶ್ರುತಧರವರ್ಗದ ಆಚಾರ್ಯರನ್ನಾಗಿ ನಿರ್ದೇಶಿಸಿದೆ. ಆದರೆ 'ಎ' ಪ್ರತಿಯೇ ಮೊದಲಾದ ಕೃತಿಗಳಲ್ಲಿ ಧ್ರುವಸೇನಸ್ವಾಮಿಯವರ ಅನಂತರದವರಾದ ಕಂಸಸ್ವಾಮಿಯವರನ್ನು ಏಕಾದಶಾಂಗಶ್ರುತಧರವರ್ಗದ ಅಂತಿಮ ಆಚಾರ್ಯರನ್ನಾಗಿ ನಿರ್ದೇಶಿಸಿದೆ. ಇದರಿಂದ ಏಕಾದಶಾಂಗಶ್ರುತವರ್ಗದಲ್ಲಿ ಏಳು ಜನ ಆಚಾರ್ಯರ ಗಣನೆಮಾಡಬೇಕಾದ ಪ್ರಮೇಯವುಂಟಾಗುವುದು ಆದರೆ ಈ ವರ್ಗದ ಆಚಾರ್ಯರ ಸಮಷ್ಟಿ ಪಟ್ಟಕಾಲಮಾನದ ಅಪೇಕ್ಷೆಯಿಂದ ಧರ್ಮಸೇನಾದಿ ಕಂಸಾಚಾರ್ಯಪರ್ಯಂತರಾದ ಆರುಜನ ಆಚಾರ್ಯರನ್ನು ಮಾತ್ರ ಈ ವರ್ಗದ ಆಚಾರ್ಯರನ್ನಾಗಿ ಪರಿಗಣನೆಮಾಡಬೇಕಾದ ಪ್ರಮೇಯವಿದೆ.[1] ಆದ್ದರಿಂದ 'ದೇವ' ಅಥವಾ 'ಗಂಗದೇವ' ಎಂಬ ಹೆಸರಿನ ಆಚಾರ್ಯರನ್ನು ಏಕಾದಶಾಂಗಶ್ರುತಧರವರ್ಗದ ಆಚಾರ್ಯರನ್ನಾಗಿ ಗಣನೆ ಮಾಡಲೂ ಅವಕಾಶವಿಲ್ಲವಾಗಿದೆ. ಈ ರೀತಿಯಾಗಿ ದಶಪೂರ್ವಿವರ್ಗದಲ್ಲಿಯಾಗಲಿ ಅಥವಾ ತದನಂತರದ ಏಕಾದಶಾಂಗಶ್ರುತಧರವರ್ಗದಲ್ಲಿಯಾಗಲೀ ಸಮಾಯೋಜಿಸಲಾಗದಿರುವ ಈ 'ದೇವ' ಅಥವಾ 'ಗಂಗದೇವ' ಎಂಬ ಹೆಸರು ಕಾರಣಾಂತರದಿಂದಾದ ವಿಪ್ರತಿಪತ್ತಿಯ ಪರಿಣಾಮವಾಗಿ ರೂಪಿತವಾಗಿರಬಹುದೆಂಬ ಪರಿಭಾವನೆಗೆಡೆಯಾಗುವುದು. ಸದ್ಯ ಉಪಲಬ್ಧವಿರುವ ಪಟ್ಟಾವಲಿಗಳೇ ಮೊದಲಾದ ಐತಿಹ್ಯಮೂಲಗಳಲ್ಲಿ ಒಂದು ವರ್ಗದ ಆಚಾರ್ಯರ ಹೆಸರುಗಳು ಮತ್ತೊಂದು ವರ್ಗದಲ್ಲಿ ಸಮಾವಿಷ್ಟವಾಗಿರುವುದನ್ನು ಗುರುತಿಸಬಹುದಾಗಿದೆ. ಇಂತೆಯೇ ಈ (ಗಂಗ–) 'ದೇವ' ಎಂಬ ಹೆಸರು ಶ್ರುತಕೇವಲಿವರ್ಗದಿಂದ ದಶಪೂರ್ವಿವರ್ಗಕ್ಕೆ ಸ್ಥಾನಾಂತರಗೊಂಡಿರಬಹುದಾದ ಸಂಭವವಿದೆಯೆಂದು ಹೇಳಲವಕಾಶವಿದೆ. ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ಶ್ರುತಕೇವಲಿ ವರ್ಗದ ಎರಡನೇ ಆಚಾರ್ಯರನ್ನು 'ದೇವ' ಎಂಬುದಾಗಿ ಹೆಸರಿಸಿರುವುದು ಸ್ಪಷ್ಟವಿದೆ. ಆದರೆ ಪಟ್ಟಾವಲಿಯೇ ಮೊದಲಾದ ಐತಿಹ್ಯ ಮೂಲಗಳಲ್ಲಿ ಈ ಆಚಾರ್ಯರನ್ನು 'ನಂದಿ' ಅಥವಾ 'ನಂದಿಮಿತ್ರ' ಎಂಬುದಾಗಿ ಹೆಸರಿಸಿದೆ. 'ದೇವನಂದಿ' ಎಂಬುದು ಈ ಆಚಾರ್ಯರ ಪೂರ್ಣಹೆಸರಾಗಿದ್ದಿರಬೇಕೆಂದು ಹೇಳಲವಕಾಶ

---

1 ಈ ವಿಷಯವು ಮುಂದೆ ಸ್ಪಷ್ಟವಾಗುವುದು.

ವಿದೆ. ಪ್ರಾಯಶಃ ಕಲ್ಲಿನ ಮೇಲೆ ಉತ್ಕೀರ್ಣಗೊಳಿಸುವ ಕ್ಲಿಷ್ಟಕಾರ್ಯದ ಪರಿಣಾಮದಿಂದಾಗಿ ಈ ಆಚಾರ್ಯರನ್ನು ಶ್ರ. ಬೆಳಗುಳದ ೧ ನೇ ಶಾಸನದಲ್ಲಿ 'ದೇವ' ಎಂಬ ಸಂಕೀರ್ಣರೂಪದ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ಕಂಡುಬರುತ್ತದೆ.[1] ಪಟ್ಟಾವಲಿಗಳೇ ಮುಂತಾದ ಐತಿಹ್ಯಮೂಲಗಳಲ್ಲಿ 'ದೇವನಂದಿ' ಎಂಬ ಹೆಸರಿನ ಉತ್ತರಾರ್ಧವಾದ 'ನಂದಿ' ಎಂಬುದು, ಈ ಆಚಾರ್ಯರ ನಾಮನಿರ್ದೇಶಕವಾಗಿ ಪ್ರಯುಕ್ತವಾಗಿದೆ. ಆದರೆ ಈ ಹೆಸರಿನ ಪೂರ್ವಾರ್ಧವಾದ 'ದೇವ' ಪದವು ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ಬುದ್ಧಿಲಿಂಗ (= ಬುದ್ಧಿಲ) ಎಂಬ ಹೆಸರಿನ ಅನಂತರವರ್ತಿಯಾಗಿ ಸ್ಥಾನಾಂತರಗೊಂಡಿದೆ. ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ 'ಬುದ್ಧಿಲ' ಎಂಬ ಹೆಸರು ಬುದ್ದಿಲಿಂಗ ಎಂಬುದಾಗಿ ಮಾರ್ಪಾಡುಗೊಂಡಿರುವುದು. ಪ್ರಸಕ್ತಸಂದರ್ಭದ ಅಪೇಕ್ಷೆಯಿಂದ ಗಮನಾರ್ಹವಾಗಿದೆ. ತಿಲೋಯಪಣ್ಣತ್ತಿಯಾದಿ ಇತರ ಕೃತಿಗಳಲ್ಲಿ ಈ ಹೆಸರು ಶ್ರ. ಬೆಳಗುಳದಲ್ಲಿರುವಂತೆ ಯಥಾವತ್ತಾಗಿ 'ಬುದ್ಧಿಲ' ಎಂಬುದಾಗಿಯೇ ಉಳಿದಿದೆಯಾದರೂ 'ದೇವ' ಎಂಬ ಹೆಸರು 'ಗಂಗದೇವ' ಎಂದು ಮಾರ್ಪಾಡುಗೊಂಡಿದೆ ಇದರಿಂದ ಬುದ್ಧಿಲಿಂಗ ಎಂಬ ಹೆಸರಿನ ಉತ್ತರಾರ್ಧವಾದ 'ಲಿಂಗ' ಪದವು 'ಗಂಗ' ಎಂಬ ಮಾರ್ಪಾಡಿನೊಡನೆ ತಿಲೋಯಪಣ್ಣತ್ತಿಯಾದಿ ಕೃತಿಗಳಲ್ಲಿ 'ದೇವ' ಎಂಬ ಹೆಸರಿನ ಪೂರ್ವಪದವಾಗಿ ಸಂಯೋಜನೆಗೊಂಡು 'ಗಂಗದೇವ' ಎಂಬುದಾಗಿ ರೂಪಿತವಾಗಿರುವುದೆಂದು ಪರಿಭಾವಿತವಾಗುವುದು. ಈ ರೀತಿಯಾಗಿ 'ದೇವ' ಅಥವಾ 'ಗಂಗದೇವ' ಎಂಬ ಹೆಸರು ವಿಪ್ರತಿಪತ್ತಿವಶವಾಗಿ 'ಬುದ್ಧಿಲ' ಎಂಬ ಹೆಸರಿನ ಅನಂತರವರ್ತಿಯಾಗಿ ಸಮಾಯೋಜಿತವಾಗಿರುವುದೆಂದು ವ್ಯಕ್ತವಾಗುವುದು.

ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ಉತ್ಕೀರ್ಣಗೊಂಡಿರುವ ವಿಶಾಖಾದಿ ಬುದ್ಧಿಲಾಂತ್ಯವಾದ ಹೆಸರುಗಳಲ್ಲಿ ವಿಶಾಖ, ಪ್ರೋಷ್ಠಿಲ ಕ್ಷತ್ರಿಕ(-ಆರ್ಯ), ಜಯ (-ನಾಮ), ಸಿದ್ಧಾರ್ಥ, ಧೃತಿಷೇಣ ಮತ್ತು ಬುದ್ಧಿಲ ಎಂಬ ಏಳು ಹೆಸರುಗಳು ಮಾತ್ರ ಪಟ್ಟಾವಲಿಯೇ ಮುಂತಾದ ಐತಿಹ್ಯಮೂಲಗಳಲ್ಲಿ ನಿರ್ದೇಶಿತವಿರುವ ದಶಪೂರ್ವಿವರ್ಗದ ಆಚಾರ್ಯರ ಹೆಸರುಗಳೊಡನೆ ತಾಳೆಗೂಡುವುವು. ದಶಪೂರ್ವಿವರ್ಗದಲ್ಲಿ ೯ ಜನ ಆಚಾರ್ಯರ ಗಣನೆಯಾಗಬೇಕೆಂದು ಹಿಂದೆ ವಿವರಿಸಿದೆ. ಅಂತೆಯೇ ಪಟ್ಟಾವಲಿಯೇ ಮುಂತಾದ ಐತಿಹ್ಯಮೂಲಗಳಲ್ಲಿ ನಿರ್ದೇಶಿಸಿರುವ ವಿಶಾಖಾದಿ ಬುದ್ಧಿಲಾಂತ್ಯವಾದ ಹೆಸರುಗಳಿಂದ ೯ ಜನ ಆಚಾರ್ಯರ ಗಣನೆಯಾಗುವುದಾದರೂ ಈ ೯ ಹೆಸರುಗಳಲ್ಲಿ 'ಧೃತಿಸೇನ' ಮತ್ತು 'ಬುದ್ಧಿಲ' ಎಂಬ ಹೆಸರುಗಳು ಮಧ್ಯವರ್ತಿಯಾಗಿರುವ 'ವಿಜಯ' ಎಂಬ ಹೆಸರು ಶ್ರವಣಬೆಳಗುಳದ ಶಾಸನದಲ್ಲಿ ಇಲ್ಲವಾಗಿದೆ. ಆದ್ದ

---

1 ದಶಪೂರ್ವಿವರ್ಗದ ಕೆಲವರು ಆಚಾರ್ಯರ ಹೆಸರುಗಳು ಈ ಶಾಸನದಲ್ಲಿ ಸಂಕೀರ್ಣರೂಪ ತಳೆದಿರುವುದನ್ನು ಗುರುತಿಸಬಹುದಾಗಿದೆ.

ರಿಂದ ಈ ಶಾಸನದ ಐತಿಹ್ಯದನುಗುಣವಾಗಿ 'ವಿಜಯ' ಎಂಬ ಹೆಸರಿನ ಆಚಾರ್ಯರನ್ನು ದಶಪೂರ್ವಿವರ್ಗದ ಆಚಾರ್ಯರನ್ನಾಗಿ ಪರಿಗಣನೆಮಾಡಲಾಗುವುದಿಲ್ಲ. ಈ ಆಚಾರ್ಯರ ಹೆಸರಿನಿಂದ ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ನಿರ್ದೇಶಿಸಿರುವ ಪಟ್ಟಕಾಲವು, ಏಕಾದಶಾಂಗಶ್ರುತಧರವರ್ಗದ ಅನಂತರವರ್ತಿಯಾಗಿ ದಶಅಂಗಶ್ರುತಧರ ಆಚಾರ್ಯರ ಪಟ್ಟಕಾಲವೆನಿಸಿ ನಿರಾಬಾಧವಾಗಿ ಸಮಾಯುಕ್ತವಾಗುವುದು [1] ಇದರಿಂದ 'ವಿಜಯ' ಎಂಬುದು ವಾಸ್ತವವಾಗಿ ದಶಅಂಗಶ್ರುತಧರ ಆಚಾರ್ಯರ ಹೆಸರಾಗಿದ್ದು, ಪಟ್ಟಾವಲೀ ಐತಿಹ್ಯದಲ್ಲಿ ದಶಪೂರ್ವಿವರ್ಗದ ಆಚಾರ್ಯರ ಹೆಸರೆನಿಸಿ ಸ್ಥಾನಾಂತರಗೊಂಡಿರುವುದೆಂದು ಗುರುತಿಸಬಹುದಲ್ಲದೆ ಇದೇ ಕಾರಣದಿಂದ ಶ್ರವಣಬೆಳಗುಳದ ೧ ನೇ ಶಾಸನದಲ್ಲಿ ಈ 'ವಿಜಯ' ಎಂಬ ಹೆಸರು ಉತ್ಕೀರ್ಣಗೊಂಡಿಲ್ಲವೆಂದೂ ಪರಿಭಾವಿತವಾಗುವುದು. ಈ ರೀತಿಯಾಗಿ ಪಟ್ಟಾವಲೀಮೂಲದ ಐತಿಹ್ಯದಲ್ಲಿ ನಿರ್ದೇಶಿಸಿರುವ ವಿಶಾಖಾದಿ ಬುದ್ಧಿಲಾಂತ್ಯವಾದ ದಶಪೂರ್ವಿವರ್ಗದ ಆಚಾರ್ಯರ ಹೆಸರುಗಳಲ್ಲಿ 'ವಿಜಯ' ಎಂಬ ಹೆಸರೊಂದರ ಹೊರತಾಗಿ ಇತರ ಎಂಟು ಹೆಸರುಗಳು ಮಾತ್ರ ಈ ವರ್ಗದ ಆಚಾರ್ಯರ ಹೆಸರುಗಳಾಗಿವೆಯೆಂದು ಗ್ರಹಿಸಲವಕಾಶವಾಗುವುದು.

'ಜಯ' ಮತ್ತು 'ಸಿದ್ಧಾರ್ಥ' ಎಂಬ ಹೆಸರುಗಳ ಮಧ್ಯವರ್ತಿಯಾಗಿ ಶ್ರ. ಬೆಳಗುಳದ ೧ ನೇ ಶಾಸನದಲ್ಲಿ 'ನಾಮ' ಎಂಬ ಪದವಿದೆ. ಆದರೆ ಅರ್ಥಾಪೇಕ್ಷೆಯಿಂದ ಈ ಪದಪ್ರಯೋಗದ ಔಚಿತ್ಯವು ಪ್ರಶ್ನವಶವಾಗುವುದು. ಲೋಹಾರ್ಯಾದಿಯಾಗಿ ಬುದ್ಧಿಲಾಂತ್ಯವಾದ ಇತರ ಯಾವೊಂದು ಹೆಸರಿನೊಡನೆಯೂ ವಿಶಿಷ್ಟರೀತಿಯದಾದ ಇತರ ಯಾವ ಪದಪ್ರಯೋಗವೂ ಇಲ್ಲದಿರುವಲ್ಲಿ 'ಜಯ' ಎಂಬ ಹೆಸರಿನ ಅನಂತರವರ್ತಿಯಾಗಿ ಮಾತ್ರ 'ನಾಮ' ಎಂಬ ವಿಶಿಷ್ಟ ಪದಪ್ರಯೋಗವು ಯಾವ ರೀತಿಯಿಂದಲೂ ಸಾರ್ಥಕವೆನಿಸಿ ಕಂಡುಬರುವುದಿಲ್ಲ. ಇಷ್ಟಲ್ಲದೆ ಶಾಸನದಲ್ಲಿ ಪ್ರಯುಕ್ತವಿರುವ ಈ 'ನಾಮ' ಎಂಬ ಪದದ ಸದೃಶಸ್ಥಾನವರ್ತಿಯಾಗಿ ಪಟ್ಟಾವಲಿಗಳಲ್ಲಿ 'ನಾಗ (–ಸೇನ)' ಎಂಬ ಹೆಸರಿದೆ. ಆದ್ದರಿಂದ ಶಾಸನದಲ್ಲಿರುವ 'ನಾಮ' ಎಂಬ ಪದವು 'ನಾಗ' ಎಂಬುದರ ತಪ್ಪುಪಾಠವಾಗಿದೆಯೆಂದು ಭಾವಿಸಲವಕಾಶವಾಗುವುದು. ಈ ಶಾಸನದ 'ಗ' ಮತ್ತು 'ಮ' ಅಕ್ಷರಗಳ ವಿನ್ಯಾಸದಲ್ಲಿ ಸ್ವಲ್ಪಮಾತ್ರದ ಅಂತರವಿದೆ. ಆದ್ದರಿಂದ ಮಳೆ, ಗಾಳಿ, ಬಿಸಿಲುಗಳ ಪರಿಣಾಮವಾಗಿ 'ಗ' ಅಕ್ಷರದ ತಲೆಯ ಮೇಲೆ ಗೆರೆಗಳೆರಡುಂಟಾಗಿದ್ದಲ್ಲಿ ಅಥವಾ 'ಗ' ಕಾರದ ವಿನ್ಯಾಸವು ಅಸ್ಪಷ್ಟವಾಗಿದ್ದಲ್ಲಿ ಅದನ್ನು ಶಾಸನಪಠನಕಾರರು 'ಮ' ಕಾರವನ್ನಾಗಿ ಭಾವಿಸಿರಬಹುದಾದ ಸಂಭವವಿದೆ. ಆದ್ದರಿಂದ ಈಗ ಪಠಿಸಲಾಗಿರುವಂತೆ ಈ ಪದವು 'ನಾಮ' ಎಂದಿರದೆ 'ನಾಗ' ಎಂದಿರಬೇಕೆಂದೂ ಮತ್ತು ಇದು ಜಯ ಎಂಬ ಹೆಸರಿನ ಆಚಾರ್ಯರ ಅನಂತರದವರಾದ ಆಚಾರ್ಯರ ಹೆಸರಾಗಿದೆಯೆಂದೂ ಪರಿಭಾವಿತವಾಗುವುದು.

---

1 ಮುಂದೆ ಈ ವಿಷಯ ಸ್ಪಷ್ಟವಾಗುವುದು.

'ಕ್ಷತ್ರಿಕ' ಎಂಬ ಹೆಸರಿನ ಅನಂತರವರ್ತಿಯಾಗಿ ಶ್ರ. ಬೆಳಗುಳದ ೧ ನೇ ಶಾಸನ ದಲ್ಲಿ 'ಆರ್ಯ' ಎಂಬ ಪದವು ಸಂಯೋಜಿತವಾಗಿದೆ. ಆಚಾರ್ಯರೆಲ್ಲರ ಹೆಸರುಗಳನ್ನು ಈ ಶಾಸನದಲ್ಲಿ ಏಕೈಕ ಸಮಾಸ ಪದರೂಪದಲ್ಲಿ ಒಟ್ಟುಗೂಡಿಸಿದೆಯಾದ್ದರಿಂದ 'ಕ್ಷತ್ರಿ ಕಾರ್ಯ' ಎಂಬುದನ್ನು ಸಂಯುಕ್ತಪದರೂಪದಿಂದ ಒಬ್ಬ ಆಚಾರ್ಯರ ಹೆಸರನ್ನಾಗಿ ಯಾಗಲೀ ಅಥವಾ 'ಕ್ಷತ್ರಿಕ' ಮತ್ತು 'ಆರ್ಯ' ಎಂಬ ವಿಭಜನೆಯ ಪೂರ್ವಕವಾಗಿ ಇಬ್ಬರು ಆಚಾರ್ಯರ ಹೆಸರುಗಳನ್ನಾಗಿಯಾಗಲೀ ಗ್ರಹಿಸಲವಕಾಶವಿದೆ. ದಶ ಪೂರ್ವಿವರ್ಗದಲ್ಲಿ ೯ ಜನ ಆಚಾರ್ಯರ ಗಣನೆಯಾಗಬೇಕಾಗಿರುವ ಅಪೇಕ್ಷೆಯಿಂದ 'ಆರ್ಯ' ಎಂಬುದು ಪ್ರತ್ಯೇಕ ಆಚಾರ್ಯರೊಬ್ಬರ ಹೆಸರಾಗಿದೆಯೆಂದು ಗ್ರಹಿಸ ಬೇಕಾಗುವುದು. ಪ್ರಾಯಶಃ ಈ ಹೆಸರು ಪೂರ್ಣರೂಪದ ಹೆಸರಾಗಿರಲಾರದು. ಪಟ್ಟಾವಲಿಗಳಲ್ಲಿ 'ಜಯ' ಮತ್ತು 'ನಾಗ' ಎಂಬ ಎರಡು ಹೆಸರುಗಳೊಡನೆಯೂ 'ಸೇನ' ಎಂಬ ಪದವು ಸಂಯೋಜಿತವಾಗಿರುವುದಾದರೆ ಪೂರ್ವೋಕ್ತಶಾಸನದಲ್ಲಿ ಈ ಹೆಸರುಗಳೆರಡೂ 'ಸೇನ' ಪದ ವಿರಹಿತವಾಗಿರುವುದನ್ನು ಗಮನಿಸಬಹುದು. ಆದ್ದ ರಿಂದ ಶಾಸನದಲ್ಲಿ ಉತ್ಕೀರ್ಣವಿರುವ 'ಜಯ' ಮತ್ತು 'ನಾಗ' ಎಂಬ ಹೆಸರುಗಳೂ ಅಪೂರ್ಣಹೆಸರುಗಳಾಗಿವೆಯೆಂದು ಗುರುತಿಸಬಹುದು. ಇಂತೆಯೇ 'ಆರ್ಯ' ಎಂಬುದೂ ಅಪೂರ್ಣವಾದ ಹೆಸರಾಗಿದೆಯೆಂದು ಗುರುತಿಸಬಹುದಾಗಿದೆ. ಆದ್ದರಿಂದ ಈ ವಿವರಣೆಯನುಗುಣವಾಗಿ ವಿಶಾಖ, ಪ್ರೋಷ್ಠಿಲ, ಕ್ಷತ್ರಿಕ, ಆರ್ಯ, ಜಯ, ನಾಗ, ಸಿದ್ಧಾರ್ಥ, ಧೃತಿಷೇಣ ಮತ್ತು ಬುದ್ಧಿಲ ಎಂಬ ೯ ಹೆಸರುಗಳು ದಶಪೂರ್ವಿವರ್ಗದ ಆಚಾರ್ಯರ ಹೆಸರುಗಳಾಗಿವೆಯೆಂದು ಅಧಿಗತವಾಗುವುದು.

ಶ್ರುತಧರ ಆಚಾರ್ಯಸಂತತಿಯ ಅನುಕ್ರಮವನ್ನು ನಿರೂಪಿಸುವ ಎಲ್ಲ ಕೃತಿ ಗಳಲ್ಲಿಯೂ ಸರ್ವಸಾಧಾರಣವಾಗಿ, ಈ ಆಚಾರ್ಯ ಸಂತತಿಯನ್ನು ೧) ಕೇವಲಿ ೨) ಶ್ರುತಕೇವಲಿ ೩) ದಶಪೂರ್ವಿ ೪) ಏಕಾದಶ [ದಶ, ನವ, ಅಷ್ಟ] ಅಂಗಶ್ರುತ ಪಾಠಿ ಮತ್ತು ೫) ಆಚಾರಾಂಗ ಶ್ರುತಪಾಠಿ ಎಂಬ ವರ್ಗಗಳಾಗಿ ವಿಂಗಡಿಸಿ, ಪ್ರತಿ ಯೊಂದು ವರ್ಗದ ಸಮಷ್ಟಿಪಟ್ಟಕಾಲವನ್ನು ನಿರ್ದೇಶಿಸಲಾಗಿದೆಯೆಂಬುದು ವಿದಿತವಿದೆ ಯಲ್ಲದೆ ಈ ವಿಷಯವಾಗಿ ನಂದಿ ಆಮ್ನಾಯ ಪಟ್ಟಾವಲಿ 'ಎ' ಮತ್ತು 'ಬಿ' ಪ್ರತಿ ಗಳಲ್ಲಿ ಕಂಡುಬರುವ ವೈಶಿಷ್ಟ್ಯವೇನೆಂಬುದು ಪೂರ್ವೋಲ್ಲೇಖದಿಂದ ಸ್ಪಷ್ಟಗೊಂಡಿದೆ. ನಂ. ಆ. ಪಟ್ಟಾವಲಿಯ ಈ ಪ್ರತಿಗಳಲ್ಲಿ ಇತರ ಕೃತಿಗಳಂತೆ, ಪ್ರತಿಯೊಂದು ವರ್ಗದ ಸಮಷ್ಟಿಪಟ್ಟಕಾಲಗಳನ್ನು ಹೇಳಿರುವುದಲ್ಲದೆ ಶ್ರೀವೀರನಿರ್ವಾಣಸಮಯದಿಂದ ಪ್ರತಿ ಯೊಂದು ವರ್ಗದ ಅಂತ್ಯಸಮಯಕ್ಕೆ ಆಗುವ ಕಾಲಮಾನವನ್ನೂ ಮತ್ತು ಶ್ರುತಧರ ಆಚಾರ್ಯರೆಲ್ಲರ ಪ್ರತ್ಯೇಕ ಪಟ್ಟಕಾಲಗಳನ್ನೂ ನಿರ್ದೇಶಿಸಿದೆ. ಈ ಪಟ್ಟಾವಲಿಗಳಲ್ಲಿ ಹಾಗೂ ಇತರ ಕೃತಿಗಳಲ್ಲಿ ನಿರ್ದೇಶಿತವಾಗಿರುವ ಪಟ್ಟಕಾಲಾದಿ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಇವೆಲ್ಲಕ್ಕೂ ಮೂಲವಾದ ಒಂದು ಐತಿಹ್ಯವಿದ್ದು ಅದು ಕಾಲಾನುಕ್ರಮದಲ್ಲಿ ಭ್ರಂಶರೂಪ ತಳೆದಿದ್ದಿರಬೇಕೆಂದೂ ಮತ್ತು ಅಂತಹ ಭ್ರಂಶ

ರೂಪತಳೆದಿದ್ದ ಐತಿಹ್ಯದಾಧಾರದಿಂದ ಈಗ ಉಪಲಬ್ಧವಿರುವ ಐತಿಹ್ಯವಿವರಗಳು ಕ್ರಿ. ಶ. ೭ ನೇ ಶತಮಾನದಲ್ಲಿ ರೂಪಿತವಾಗಿರಬೇಕೆಂದೂ ಹೇಳಲವಕಾಶವಿದೆ.[1] ಈ ರೀತಿಯಾಗಿ ಭ್ರಂಶರೂಪತಳೆದಿದ್ದ ಐತಿಹ್ಯದಾಧಾರದಿಂದ ಸದ್ಯ ಉಪಲಬ್ಧವಿರುವ ಐತಿಹ್ಯವನ್ನು ಪುನರ್ರಚಿಸಲಾದ ಸಮಯದಲ್ಲಿ ಶ್ರುತಧರ ಆಚಾರ್ಯರ ಉಪವರ್ಗದ ವಿಷಯವಾಗಿ ಭಿನ್ನಾಭಿಪ್ರಾಯಗಳೇರ್ಪಟ್ಟ ಕಾರಣದಿಂದ ನಂ. ಆ. ಪಟಾವಲಿಯ 'ಎ' (ಮತ್ತು 'ಸಿ') ಪ್ರತಿಯ ಹೊರತಾಗಿ ಇತರ ಎಲ್ಲ ಕೃತಿಗಳಲ್ಲಿ ಪ್ರತಿಯೊಂದು ವರ್ಗದ ಆಚಾರ್ಯರ ಸಮಷ್ಟಿಪಟ್ಟಕಾಲಗಳು ಮತ್ತು ಶ್ರೀ ವೀರನಿರ್ವಾಣಸಮಯ ದಿಂದ ಶ್ರುತಧರ ಆಚಾರ್ಯಸಂತತಿಯು ಅಂತ್ಯಗೊಂಡ ಕಾಲಮಾನ (೬೮೩ ವರ್ಷದ) ನಿರ್ದೇಶನಗಳನ್ನು ಮಾತ್ರ ಕೊಡಲಾಗಿದೆಯೆಂದು ಹೇಳಲವಕಾಶವಿದೆ. ಅಂತೆಯೇ ನಂ. ಆ. ಪಟ್ಟಾವಲಿ 'ಎ' ಮತ್ತು 'ಸಿ' ಪ್ರತಿಗಳಲ್ಲಿ ನಿರ್ದೇಶಿತವಾಗಿರುವ ಶ್ರುತಧರ ಆಚಾರ್ಯ ಸಂತತಿಯ ಪ್ರತ್ಯೇಕ ಪಟ್ಟಕಾಲಗಳು ಪರಂಪರಾಗತ ಐತಿಹ್ಯದಾಧಾರ ದಿಂದ ಪ್ರರೂಪಿತವಾಗಿವೆಯೆಂಬುದರಲ್ಲಿ ಸಂಶಯವಿಲ್ಲ. ಆದರೆ ಪ್ರತಿಯೊಂದು ವರ್ಗದ ಆಚಾರ್ಯರ ಸಂಖ್ಯೆಯನ್ನು ಗಣನೆಮಾಡುವಲ್ಲಿ ಏರ್ಪಟ್ಟ ತಪ್ಪುಗ್ರಹಿಕೆ ಮತ್ತು ಇಂತಹವುಗಳೇ ಆದ ಇತರ ದೋಷಗಳ ಪರಿಣಾಮವಾಗಿ ಪ್ರತ್ಯೇಕ ಆಚಾ ರ್ಯರ ಪಟ್ಟಕಾಲಗಳ ನಿರೂಪಣೆಯಲ್ಲಿಯೂ ಆಕ್ರಮಗಳೇರ್ಪಟ್ಟಿವೆ. ಇಂತಿದ್ದರೂ ಇಂತಹ ಆಕ್ರಮಗಳನ್ನು ಗುರುತಿಸಿ ಯಥಾಯುಕ್ತವಾಗಿ ಸಮನ್ವಯಗೊಳ್ಳುವಂತೆ ಕ್ರಮಪಡಿಸಲವಕಾಶವಿದೆ.

ದಶಪೂರ್ವಿವರ್ಗದ ಆಚಾರ್ಯರ ಸಮಷ್ಟಿಪಟ್ಟಕಾಲವು ೧೮೩ ವರ್ಷ ಪ್ರಮಾಣ ವುಳ್ಳದ್ದಾಗಿದೆಯೆಂಬ ದೃಢಮೂಲದ ಐತಿಹ್ಯವಿದೆ. ಶ್ರ. ಬೆಳಗುಳದ ೧ ನೇ ಶಾಸನ ದಲ್ಲಿ ಹೆಸರಿಸಲಾಗಿರುವ ವಿಶಾಖಾದಿ ಬುದ್ಧಿಲಾಂತ್ಯರಾದ ೯ ಜನ ಆಚಾರ್ಯರು ದಶಪೂರ್ವಿವರ್ಗದ ಆಚಾರ್ಯರಾಗಿರುವರೆಂದು ಹಿಂದೆ ವಿವರಿಸಿದೆ. ಆದ್ದರಿಂದ ೧೮೩ ವರ್ಷಗಳ ಸಮಷ್ಟಿಪಟ್ಟಕಾಲವು ಈ ೯ ಜನ ಆಚಾರ್ಯರ ಪ್ರತ್ಯೇಕ ಪಟ್ಟವರ್ಷಗಳ ಮೊತ್ತವಾಗಿರಬೇಕೆಂದು ನಿಗದಿತವಾಗುವುದು. ಆದರೆ ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿ ಈ ೧೮೩ ವರ್ಷಗಳ ಸಮಷ್ಟಿಪಟ್ಟಕಾಲವನ್ನು ೧೧ ಜನ ಆಚಾರ್ಯರ ಪಟ್ಟಕಾಲಗಳ ಮೊತ್ತವನ್ನಾಗಿ ನಿರ್ದೇಶಿಸಿರುವುದು ವಿದಿತ ವಿದೆ. ಇಷ್ಟಲ್ಲದೆ ಈ ಪಟ್ಟಾವಲಿಯ ಐತಿಹ್ಯಾನುಗುಣವಾಗಿ ದಶಪೂರ್ವಿವರ್ಗದ ಆಚಾರ್ಯರೆನಿಸಿ ನಿರ್ದೇಶಿತರಾಗಿರುವ ೧೧ ಜನ ಆಚಾರ್ಯರಲ್ಲಿ ವಿಜಯ, ಗಂಗದೇವ ಮತ್ತು ಧರ್ಮಸೇನ ಎಂಬ ಮೂವರು ಆಚಾರ್ಯರ ಹೊರತಾಗಿ ಇತರ ವಿಶಾಖ, ಪ್ರೋಷ್ಠಿಲ, ಕ್ಷತ್ರಿಯ, ಜಯಸೇನ, ನಾಗಸೇನ, ಸಿದ್ಧಾರ್ಥ, ಧೃತಿಷೇಣ ಮತ್ತು

---

1 ಗ್ರಂಥವಿಸ್ತರಿಯ ಆಪೇಕ್ಷೆಯಿಂದ ಈ ವಿಷಯವಾಗಿ ವಿಶೇಷ ವಿವರಣೆ ಕೊಡಲು ಶಕ್ಯವಿಲ್ಲವಾಗಿದೆ.

ಬುದ್ಧಿಲ ಎಂಬುವರು ಮಾತ್ರ ದಶಪೂರ್ವಿವರ್ಗದ ಆಚಾರ್ಯರಾಗಿರುವರೆಂದು ಹಿಂದೆ ವಿವರಿಸಿದೆ. ಇವರಲ್ಲಿ ಎರಡನೆಯವರಾದ ಪ್ರೋಷ್ಠಿಲಾಚಾರ್ಯರ ಪಟ್ಟಕಾಲವನ್ನು 'ಎ' ಪ್ರತಿಯಲ್ಲಿ ೧೯ ವರ್ಷಗಳೆಂದೂ 'ಸಿ' ಪ್ರತಿಯಲ್ಲಿ ೧೫ ವರ್ಷಗಳೆಂದೂ ನಿರ್ದೇಶಿಸಿದೆ. ಅಂತೆಯೇ 'ಎ' ಪ್ರತಿಯ ಹೇಳಿಕೆಯನುಣವಾಗಿ ಈ ೮ ಜನ ಆಚಾರ್ಯರ ಪ್ರತ್ಯೇಕ ಪಟ್ಟಕಾಲಗಳ ಮೊತ್ತವು (೧೦+೧೯+೧೭+೨೧+೧೮+೧೭+೧೮+೨೦=) ೧೪೦ ವರ್ಷಮಾನವುಳ್ಳದ್ದಾಗಿಯೂ, 'ಸಿ' ಪ್ರತಿಯನುಗುಣವಾಗಿ ೧೩೬ ವರ್ಷಮಾನವುಳ್ಳದ್ದಾಗಿಯೂ ಆಗುವುದು. ದಶಪೂರ್ವಿವರ್ಗದಲ್ಲಿ ೯ ಜನ ಆಚಾರ್ಯರ ಗಣನೆಯಾಗಬೇಕಿದ್ದು, ಪಟ್ಟಾವಲೀಮೂಲದ ಐತಿಹ್ಯದಲ್ಲಿ ಹೆಸರಿಸಿಲ್ಲದಿರುವ ಮತ್ತು ಶ್ರ. ಬೆಳಗುಳದ ಶಾಸನದಿಂದ ಸೂಚಿತವಾಗಿರುವ 'ಆರ್ಯ' ಎಂಬ ಹೆಸರಿನ ಆಚಾರ್ಯರನ್ನು ಈ ವರ್ಗದ ಆಚಾರ್ಯರನ್ನಾಗಿ ಗಣನೆಮಾಡಬೇಕಾಗಿರುವುದೆಂದು ಹಿಂದೆ ವಿವರಿಸಿದೆ. ಅಂತೆಯೇ ದಶಪೂರ್ವಿವರ್ಗದ ೯ ಜನ ಆಚಾರ್ಯರ ಸಮಷ್ಟಿಪಟ್ಟಕಾಲವು ೧೮೩ ವರ್ಷಮಾನವುಳ್ಳದ್ದಾಗಿರಬೇಕೆಂಬ ಐತಿಹ್ಯದನುಗುಣವಾಗಿ 'ಆರ್ಯ' ಆಚಾರ್ಯರ ಪಟ್ಟಕಾಲವು (೧೮೩ – ೧೪೦ =) ೪೩ ವರ್ಷಮಾನವುಳ್ಳದ್ದಾಗಿ ಅಥವಾ (೧೮೩ – ೧೩೬ =) ೪೭ ವರ್ಷಮಾನವುಳ್ಳದ್ದಾಗಿದೆಯೆಂದು ಗಣನೆಮಾಡಬಹುದಾಗಿದ್ದಿತು. ಆದರೆ ವಿಶಾಖಾಚಾರ್ಯರ ಪಟ್ಟಕಾಲವು ಪಟ್ಟಾವಲಿಗಳಲ್ಲಿ ನಿರ್ದೇಶಿತವಿರುವಂತೆ ೧೦ ವರ್ಷಮಾನವುಳ್ಳದ್ದಾಗಿರದೆ ಕನಿಷ್ಟಮಿತಿಯಿಂದ ೪೪ ವರ್ಷಮಾನವುಳ್ಳದ್ದಾಗಿದೆಯೆಂದು ಹೇಳಲವಕಾಶವಿದೆಯಾಗಿ ಮೇಲ್ಕಂಡ ೪೭ ವರ್ಷಗಳನ್ನು ಈ ಆಚಾರ್ಯರ ಪಟ್ಟಕಾಲಮಾನವನ್ನಾಗಿ ಗಣನೆಮಾಡಬೇಕಾಗುವುದು. ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಶ್ರ. ಬೆಳಗುಳದ ಚಂದ್ರಗಿರಿಯ ಮೇಲೆ ಸಲ್ಲೇಖನ ಕೈಗೊಂಡ ತರುವಾಯ ವೀ. ನಿ. ಪ. ೧೬೨-೩ ನೇ ವರ್ಷದಲ್ಲಿ ಆಚಾರ್ಯಪಟ್ಟಸ್ಥರಾದ ವಿಶಾಖಾಚಾರ್ಯರು ದಕ್ಷಿಣಾಪಥದಿಂದ ಯತಿಸಂಘಸಮೇತರಾಗಿ ವೀ. ನಿ. ಪ. ೨೦೫-೬ ನೇ ವರ್ಷದಲ್ಲಿ ಉತ್ತರಾಪಥಕ್ಕೆ ಹಿಮ್ಮರಳಿ ಪಯಣಮಾಡಿರುವರೆಂದು ಹಿಂದೆ ವಿವರಿಸಿದೆ. ಇದರಂತೆ ಈ ಆಚಾರ್ಯರು ಕನಿಷ್ಠಮಿತಿಯಿಂದ (೨೦೬–೧೬೨=) ೪೪ ವರ್ಷಕಾಲವಾದರೂ ಆಚಾರ್ಯಪಟ್ಟಸ್ಥರಾಗಿದ್ದಿರಬೇಕೆಂದು ಅಧಿಗತವಾಗುವುದಾದ್ದರಿಂದ ಮೇಲ್ಕಂಡ ೪೭ ವರ್ಷಗಳನ್ನು ಈ ಆಚಾರ್ಯರ ಪಟ್ಟಕಾಲಮಾನವನ್ನಾಗಿ ಗಣನೆಮಾಡಬೇಕಾಗುವುದು. ಇಂತೆಯೇ ಈ ಆಚಾರ್ಯರ ಪಟ್ಟಕಾಲವೆಂದು ಪಟ್ಟಾವಲಿಗಳಲ್ಲಿ ನಿರ್ದೇಶಿತವಿರುವ ೧೦ ವರ್ಷಗಳನ್ನು ಆರ್ಯ ಆಚಾರ್ಯರ ಪಟ್ಟಕಾಲಮಾನವನ್ನಾಗಿ ಗಣನೆಮಾಡಬೇಕಾಗುವುದು. ಈ ರೀತಿಯಾಗಿ ದಶಪೂರ್ವಿವರ್ಗದ ೯ ಜನ ಆಚಾರ್ಯರ ಅನುಕ್ರಮಪಟ್ಟಕಾಲಗಳು ೪೭, ೧೫, ೧೭, ೧೦, ೨೧, ೧೮, ೧೭, ೧೮ ಮತ್ತು ೨೦ ವರ್ಷಮಾನಗಳುಳ್ಳವಾಗಿದ್ದು ಸಮಷ್ಟಿಪಟ್ಟಕಾಲಮಾನವು ಯಥಾವತ್ತಾಗಿ ೧೮೩ ವರ್ಷಮಾನವುಳ್ಳದ್ದಾಗಿರವುದೆಂದು ಪರಿಗಣಿತವಾಗುವುದು.

ಏಕಾದಶಾಂಗ ಶ್ರುತಧರ ಆಚಾರ್ಯ ವರ್ಗ; ದಶ, ನವ ಮತ್ತು ಅಷ್ಟ ಅಂಗ ಶ್ರುತಧರ ಆಚಾರ್ಯ ಉಪವರ್ಗ ಮತ್ತು ಆಚಾರಾಂಗ ಶ್ರುತಧರ ಆಚಾರ್ಯ ವರ್ಗ:

ದಶಪೂರ್ವಿವರ್ಗದ ಆಚಾರ್ಯರ ಕಾಲಾನಂತರ ಏಕಾದಶಾಂಗ ಶ್ರುತವನ್ನು ಸಕಲರೀತಿಯಿಂದಲೂ ೧೨ ನೆಯದಾದ ದೃಷ್ಟಿವಾದಾಂಗ ಶ್ರುತವನ್ನು ವಿಕಲರೀತಿಯಿಂದಲೂ ಅವಧರಿಸಿದ ಏಕಾದಶಾಂಗ ಶ್ರುತಧರರಾದ ಆಚಾರ್ಯರಾದರೆಂಬುದು ಐತಿಹ್ಯಮೂಲಗಳ ಸರ್ವಸಾಧಾರಣವಾದ ಹೇಳಿಕೆ ಆದರೆ ಈ ಏಕಾದಶಾಂಗ ಶ್ರುತಧರ ವರ್ಗದ ಆಚಾರ್ಯರ ಒಟ್ಟು ಸಂಖ್ಯೆ ಮತ್ತು ಈ ವರ್ಗದಿಂದ ಮುಂದಿನ ಆಚಾರ್ಯಾನುಕ್ರಮವನ್ನು ಕುರಿತಾದ ಐತಿಹ್ಯಾಂಶಗಳನ್ನು ಹೇಳುವಲ್ಲಿ ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯ 'ಇ' ಪ್ರತಿಯ ಐತಿಹ್ಯ ಮತ್ತು ತಿಲೋಯಪಣ್ಣತ್ತಿಯಾದಿ ಇತರ ಕೃತಿಗಳಲ್ಲಿ ಉಕ್ತವಿರುವ ಐತಿಹ್ಯಗಳ ಮಧ್ಯೆ ಗಮನಾರ್ಹವಾದ ಮತಭೇದಗಳಿವೆ. ಆದ್ದರಿಂದ ಈ ಮೂರು ಮೂಲಗಳಲ್ಲಿ ಉಕ್ತವಿರುವ ಐತಿಹ್ಯಾಂಶಗಳನ್ನು ಈ ಮುಂದೆ ಸಂಗ್ರಹಿಸಲಾಗಿದೆ.

ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯಾಂಶಗಳು:

೧) ನಕ್ಷತ್ರ, ಜಯಪಾಲಕ, ಪಾಂಡವ, ಧ್ರುವಸೇನ ಮತ್ತು ಕಂಸ ಎಂಬುವರು ಐವರು ಏಕಾದಶಾಂಗಶ್ರುತಧರ ಆಚಾರ್ಯರು. ಇವರ ಸಮುಷ್ಟಿಪಟ್ಟಕಾಲವು (೧೮ + ೨೦ + ೩೯ + ೧೪ + ೩೨ =) ೧೨೩ ವರ್ಷಮಾನವುಳ್ಳದ್ದಾಗಿದೆ.

೨) ಏಕಾದಶಾಂಗಶ್ರುತಧರರಲ್ಲಿ ಕೊನೆಯವರಾದ ಕಂಸ ಆಚಾರ್ಯರ ತರುವಾಯ ಅನುಕ್ರಮವಾಗಿ ದಶ ಮತ್ತು ನವ ಅಂಗಶ್ರುತಧರರಾದ ಸುಭದ್ರ ಮತ್ತು ಯಶೋಭದ್ರಾಚಾರ್ಯರೂ ಇವರ ತರುವಾಯ ಅಷ್ಟಅಂಗಶ್ರುತಧರರಾದ ಭದ್ರಬಾಹು ಮತ್ತು ಲೋಹಾಚಾರ್ಯ[1] ಎಂಬ ಹೆಸರಿನ ಆಚಾರ್ಯರಾದರು. ಇವರ ಸಮುಷ್ಟಿಪಟ್ಟಕಾಲವು (೬ + ೧೮ + ೨೩ + ೫೨ =) ೯೭[1] ವರ್ಷಮಾನವುಳ್ಳದ್ದಾಗಿದೆ.

---

1 ಗಾಹೆಯಲ್ಲಿ ದಶ, ನವ ಮತ್ತು ಅಷ್ಟ ಅಂಗಶ್ರುತಧರರೆಂದು ಮಾತ್ರ ಹೇಳಲಾಗಿದೆಯಾದರೂ 'ಸಿ' ಪ್ರತಿಯ ರಾಜಾಸ್ಥಾನೀ ಅನುವಾದದಲ್ಲಿ ಲೋಹಾಚಾರ್ಯರನ್ನು ಸಪ್ತಅಂಗಶ್ರುತಧರರೆಂದು ಹೇಳಿದೆ. ಇಂತೆಯೇ ಇವರ ಪಟ್ಟಕಾಲವು ಗಾಹೆಯ ಹೇಳಿಕೆಯನುಗುಣವಾಗಿ ೫೨ ವರ್ಷಮಾನವುಳ್ಳದ್ದೆನಿಸಿ ನಿರ್ದೇಶಿತವಾಗಿದೆ. ಇಷ್ಟಲ್ಲದೆ ಗಾಹೆಗಳಲ್ಲಿ ಹೇಳಲಾಗಿರುವ ಪ್ರತ್ಯೇಕ ಪಟ್ಟಕಾಲಗಳ ಮೊತ್ತವು ವಾಸ್ತವವಾಗಿ ೯೯ ವರ್ಷಮಾನವುಳ್ಳದ್ದಾಗುವುದು. ಆದರೆ ಈ ಸಮುಷ್ಟಿಪಟ್ಟಕಾಲವು ೯೭ ವರ್ಷಕಾಲವುಳ್ಳದ್ದಾಗಿರುವುದೆಂದು ('ವಾಸಂಸತ್ತಾಣವದಿ') ಗಾಹೆಯಲ್ಲಿಯೇ ಹೇಳಿದೆ.

೩) ಅಷ್ಟ ಅಥವಾ ಸಪ್ತ ಅಂಗಶ್ರುತಧರರಾದ ಲೋಹಾಚಾರ್ಯರ ತರುವಾಯ ಅರ್ಹದ್ಬಲಿ, ಮಾಘನಂದಿ, ಧರಸೇನ, ಪುಷ್ಪದಂತ ಮತ್ತು ಭೂತಬಲಿ ಎಂಬ ಐವರು ಆಚಾರಾಂಗವೆಂಬ ಏಕಅಂಗಶ್ರುತಧರರಾದ ಆಚಾರ್ಯರಾದರು. ಇವರ ಸಮಷ್ಟಿಪಟ್ಟಕಾಲವು (೨೮+೨೧+೧೯+೩೦+೨೦=) ೧೧೮ ವರ್ಷಮಾನವುಳ್ಳದ್ದಾಗಿದೆ. (ಈ ರೀತಿಯಾಗಿ ಶ್ರೀ ವೀರನಿರ್ವಾಣಸಮಯದಿಂದ ೬೮೩ ವರ್ಷಗಳ ಪರ್ಯಂತ ಅಂಗಶ್ರುತಜ್ಞಾನಧರ ಆಚಾರ್ಯ ಸಂತತಿಯು ಪ್ರವರ್ತಿತವಿದ್ದಿತು.)

೪) ನಿರ್ಗ್ರಂಥಯತಿಗಳ ಮೂಲಸಂಘದಲ್ಲಿ 'ನಂದಿ' ಮುಂತಾದ ಶಾಖಾಸಂಘಗಳು ಆವಿರ್ಭಾವಗೊಂಡ ಐತಿಹ್ಯಾಂಶನಿರೂಪಕವಾದ ರಾಜಾಸ್ಥಾನೀ ಭಾಷಿಕೆ :

ಬಹುರಿ ಶ್ರೀ ವೀರಸ್ವಾಮಿಕೂಂ ಮುಕ್ತಿಗಯೇಂ ಪೀಛೈಂಚಾರ್ ಸೌಸತ್ತರ (೪೭೦) ವರ್ಷಗಯೇ ಪೀ ಛೈಂ ಶ್ರೀಮನ್ಮಹಾರಾಜ ವಿಕ್ರಮರಾಜತಾ ಜನ್ಮಭಯಾ. ಬಹುರಿ ಪೂರ್ವೋಕ್ತ ಸುಭದ್ರಾಚಾರ್ಯತೈಂ ವಿಕ್ರಮರಾಜಕೋ ಜನ್ಮಹೈಂ. ಬಹುರಿ ವಿಕ್ರಮಕೇ ರಾಜಪದವೈಂ ವರ್ಷಚತ್ವಾರಿ ಪೀಛೈಂ ಪೂರ್ವೋಕ್ತ ದೂಸರಾ ಭದ್ರಬಾಹು ಕೂಂ ಆಚಾರ್ಯಕಾ ಪಟ್ಟಹುವಾ. ಬಹುರಿ ಭದ್ರಬಾಹುಕಾ ಸಿಷ್ಯ ಗುಪ್ತಿನಾಮ. ತಾಕೇನಾಮ ತೀ£. ಗುಪ್ತಗುಪ್ತಿ (೧), ಅರ್ಹದ್ಬಲಿ (೨), ವಿಶಾಖಾಚಾರ್ಯ (೩) ಬಹುರಿ ಜಾಕೆ ಚ್ಯಾರ್ ಸಿಷ್ಯ; ನಂದಿ ನಾಮ ಜಾತಿ ಕೇ ವೃಕ್ಷಕೇ ಅಧೋಭಾಗ ಕೈಂ ವಿಷೈಂ ಚಾತುರ್ಮಾಸಕಾ ವರ್ಷಾಯೋಗಧಾರ್ಯಾ ಐಸಾ ಮಾಘನಂದಿ ಆಚಾರ್ಯಜೀನೇ ನಂದಿ ಸಂಘ ಸ್ಥಾಪಿತ ಕೀಯಾ........

ಬಹುರಿ ಶ್ರೀ ಮಹಾವೀರಸ್ವಾಮೀ ಪೀಛೈಂ (೪೯೨) ಚ್ಯಾರಿಸೈ ಬಾಣವೈ ವರ್ಷ ಗಯೇಂ ಸುಭದ್ರಾಚಾರ್ಯಕಾ ವರ್ತಮಾನವರ್ಷ, (೨೪) ಚೌಈಸಾ ಸೋ ವಿಕ್ರಮಜನ್ಮತೈಂ ವಾವೀಸ ವರ್ಷ, ಬಹುರಿ ತಾಕಾ ರಾಜ್ಯತೈಂ ವರ್ಷ ಚ್ಯಾರ್ ದುಸರಾ ಭದ್ರಬಾಹು ಹುವಾ ಜಾನನಾಂ.

ಐಸೇ ಪೂರ್ವೋಕ್ತಭದ್ರಬಾಹು ಭಏ ತಾಕೇ ಪೀ ಛೈಂ ಔರ್ ಆಚಾರ್ಯ ಅನುಕ್ರಮ ತೈಂ ಭಏ ಹೈಂ. ಸೋ ಕಿಂಚಿತ್ ಮಾತ್ರ ಭದ್ರಬಾಹು ತೈಂ ಲೇಕರ್ ಯೋಂಕಾ ವರ್ಣನ ಅನುಕ್ರಮ ತೈಂ ಲಿಖಿಯೆ ಹೈಂ.

ವಿಕ್ರಮರಾಜಾಕೂಂ ರಾಜ್ಯಪದಸ್ಥ ದಿನತೈಂ ಸಂವತ್ ಕೇವಲ (೪) ಚ್ಯಾರ್ ಕೇ ಚೈತ್ರಶುಕ್ಲ (೧೪) ಚತುರ್ದಶೀದಿನೇ ಶ್ರೀಭದ್ರಬಾಹು ಆಚಾರ್ಯ ಭಯೇ ತಾಕಿ ಜಾತಿ ಬ್ರಾಹ್ಮಣ, ಗೃಹಸ್ಥವರ್ಷ (೨೪) ಚೌವೀಸ್ ದೀಕ್ಷಾವರ್ಷ (೩೦) ತೀಸ್. ಪಟ್ಟವರ್ಷ ಬಾಈಸ್ ಕೇ ಉಪರಿ ಮಾಸ್ (೧೦) ದಶ, ದಿನ (೨೭) ಸತ್ತಾಈಸ್. ಬಹುರಿ ವಿರಹದಿನ (೩) ತೀ£. ತಿನಕಾ ಸರ್ವಾಯುವರ್ಷ (೭೬) ಛಿಹತ್ತರ್, ಪುನರ್ಮಾಸ್ (?) (೧೧) ಗ್ಯಾರಹರ್ದಿ.

ಬಹುರಿ ತಾಕೇ ಪೀ ಭ್ಯೆಂ ಸಂವತ್ (೨೬) ಛಹವೀಸ್ ಕಾ ಫಾಲ್ಗುನ ಶುಕ್ಲ (೧೪) ಚತುರ್ದಶೀ ದಿನಮೇಂ ಗುಪ್ತಗುಪ್ತಿನಾಮ ಆಚಾರ್ಯಭಯೇ[1]........

ಮೇಲ್ಕಂಡ ರಾಜಾಸ್ಥಾನೀ ಭಾಷಿಕೆಯ ಭಾವಾನುವಾದ ಸಂಗ್ರಹ:

ಸುಭದ್ರಸ್ವಾಮಿಯವರ ಪಟ್ಟಸಮಯದಿಂದ ೨೪ ನೇ ವರ್ಷ, ವಿಕ್ರಮಾದಿತ್ಯನ ಜನ್ಮಸಮಯದಿಂದ ೨೨ ನೇ ವರ್ಷ, ಇವನು ರಾಜ್ಯಪದಸ್ಥನಾದಸಮಯದಿಂದ ೪ ನೇ ವರ್ಷವಾದ ವೀ. ನಿ. ಪ. ೪೯೨ರಲ್ಲಿ ಪೂರ್ವೋಕ್ತರಾದ ದ್ವಿತೀಯ ಭದ್ರಬಾಹು ಸ್ವಾಮಿಯವರು ಆಚಾರ್ಯಪಟ್ಟಸ್ಥರಾದರು. ವಿಕ್ರಮನು ರಾಜ್ಯಪದಸ್ಥನಾದ ದಿನ ದಿಂದ ಸಂವತ್ ೪ರ ಚೈತ್ರ ಶುಕ್ಲ ಚತುರ್ದಶೀ ದಿನದಲ್ಲಿ ಭದ್ರಬಾಹುಸ್ವಾಮಿಯವರು ಆಚಾರ್ಯಪದಸ್ಥರಾಗಿದ್ದಾರೆ. ಇವರು ಜಾತಿಯಿಂದ ಬ್ರಾಹ್ಮಣರು, ಗೃಹಸ್ಥವರ್ಷ ೨೪, ದೀಕ್ಷಾವರ್ಷ-೩೦, ಪಟ್ಟವರ್ಷ-೨೨ ವರ್ಷ ೧೦ ತಿಂಗಳು ೨೭ ದಿನ, ವಿರಹ ದಿನ ೩. ಇವರ ಸರ್ವಾಯು ೭೬ ವರ್ಷ ೧೧ ತಿಂಗಳು (?) ಮತ್ತು ೧೧ ದಿನ.

ಅವರ ಅನಂತರ ಸಂವತ್ ೨೬ ರ ಫಾಲ್ಗುನ ಮಾಸ ಚತುರ್ದಶೀ ದಿನದಂದು ಗುಪ್ತಿಗುಪ್ತಸ್ವಾಮಿಯವರು ಆಚಾರ್ಯರಾದರು. ಇವರ ಶಿಷ್ಯರು ನಾಲ್ವರು. (ಇವರಲ್ಲೊಬ್ಬರಾದ) ಮಾಘನಂದಿಸ್ವಾಮಿಯವರು ನಂದಿಸಂಘವನ್ನು ಸ್ಥಾಪಿಸಿ ಆಚಾರ್ಯರಾದರು. [ಮುಂದೆ ಈ ನಂದಿಸಂಘದ ಪ್ರಧಾನ ಆಚಾರ್ಯರಾಗಿ ಜಿನಚಂದ್ರ, ಕುಂದಕುಂದ, ಉಮಾಸ್ವಾತಿ ಮತ್ತು ಮುಂತಾದ ಆಚಾರ್ಯರಾದರು.]

ನಂ. ಆ. ಪಟ್ಟಾವಲಿ 'ಇ' ಪ್ರತಿಯ ಐತಿಹ್ಯ:

೧) ಗಂಗಾದೇವ, ಧರ್ಮಸೇನ, ನಕ್ಷತ್ರ, ಜಯಪಾಲ, ಪಾಂಡವ ಮತ್ತು ಧ್ರುವಸೇಣ ಎಂಬುವರು ಏಕಾದಶಾಂಗಶ್ರುತಧರವರ್ಗದ ಆರುಜನ ಆಚಾರ್ಯರು. ಇವರ ಸಮಷ್ಟಿಪಟ್ಟಕಾಲವು ೨೨೦ ವರ್ಷಮಾನವುಳ್ಳದ್ದಾಗಿರುವುದು.

೨) ಕಂಸ, ಸುಭದ್ರ, ಜಸೋಭದ್ರ, ಭದ್ರಬಾಹು, ಲೋಹಾಚಾರ್ಯ ಮತ್ತು ವಿನಯಂಧರ ಎಂಬುವರು ಆಚಾರಾಂಗಶ್ರುತಧರವರ್ಗದ ಆಚಾರ್ಯರು. ಇವರ ಸಮಷ್ಟಿಪಟ್ಟಕಾಲವು ೧೧೮ ವರ್ಷಮಾನವುಳ್ಳದ್ದಾಗಿದೆ.

೩) ಆಚಾರಾಂಗಶ್ರುತಧರ ಆಚಾರ್ಯವರ್ಗದ ಅನಂತರ ಅನುಕ್ರಮವಾಗಿ ಶ್ರೀದತ್ತಸೇಣ, ಸಿವದತ್ತ, ಅರದತ್ತ ಮತ್ತು ಭದ್ರಬಾಹು ಎಂಬ ಆಚಾರ್ಯರಾದರು ಈ (ತೃತೀಯ) ಭದ್ರಬಾಹುಸ್ವಾಮಿಯವರು ಸಂವತ್ ೧೦೪ ನೇ ವರ್ಷದ ಕಾರ್ತೀ, ಸುದಿ ೧೪ ರಂದು ಆಚಾರ್ಯಪಟ್ಟಸ್ಥರಾದರು.[2] ಇವರು ಶ್ರೀ ಮಹಾವೀರಸ್ವಾಮಿ

---

1 ಈ ರಾಜಾಸ್ಥಾನೀ ಭಾಷಿಕೆಯನ್ನು ನಂ. ಆ. ಪಟ್ಟಾವಲಿ 'ಸಿ' ಪ್ರತಿಯಿಂದ ಸಂಗ್ರಹಿಸಲಾಗಿದೆ.

2 ತೃತೀಯ ಭದ್ರಬಾಹು-ಸ್ವಾಮಿಯವರು ಪಟ್ಟಸ್ಥರಾದರೆಂಬು ಹೇಳಲಾಗಿರುವ ಸಮಯದ ವಿಷಯವಾಗಿ ಸನ್ಮಾನ್ಯ ಹೋಎರ್ನಲ್‌ರವರ ವಿಮರ್ಶೆಯು ಗಮನಾರ್ಹ ವಾಗಿದೆ.

ಯವರ ಅನಂತರದ ೩೦ ನೇ ಆಚಾರ್ಯರಾಗಿದ್ದಾರೆ. ಇವರ ಪಟ್ಟಕಾಲದಲ್ಲಿ ಶ್ವೇತಾಂಬರಪಂಥವು ಉದಯಗೊಂಡು ತನ್ನದೇ ಆದ ಸ್ವತಂತ್ರ ಪಟ್ಟಾವಲಿಯನ್ನು ರೂಪಿಸಿಕೊಂಡಿತು. ಈ ಭದ್ರಬಾಹುಸ್ವಾಮಿಯವರ ಅನಂತರ (ಅರ್ಹದ್ಬಲಿ) ಮಾಘನಂದಿ ಮತ್ತು ಮುಂತಾದವರು ಆಚಾರ್ಯರಾದರು.

ತಿಲೋಯಪಣ್ಣತ್ತಿಯೇ ಮುಂತಾದ ಇತರ ಕೃತಿಗಳ ಐತಿಹ್ಯ :

೧) ನಕ್ಷತ್ರ, ಜಯಪಾಲ, ಪಾಂಡು, ಧ್ರುವಸೇನ ಮತ್ತು ಕಂಸಾರ್ಯ ಎಂಬ ಐವರು ಏಕಾದಶಾಂಗಶ್ರುತಧರ ಆಚಾರ್ಯರಾದರು. ಇವರ ಸಮಷ್ಟಿಪಟ್ಟಕಾಲ ೨೨೦ ವರ್ಷ.

೨) ಸುಭದ್ರ, ಯಶೋಭದ್ರ, ಯಶೋಬಾಹು ಮತ್ತು ಲೋಹಾರ್ಯ ಎಂಬ ನಾಲ್ವರು ಆಚಾರಾಂಗಶ್ರುತಧರ ಆಚಾರ್ಯರು. ಇವರ ಸಮಷ್ಟಿಪಟ್ಟಕಾಲ ೧೧೮ ವರ್ಷ.

೩)[1] ಆಚಾರಾಂಗ ಶ್ರುತಧರ ಆಚಾರ್ಯವರ್ಗದ ಅನಂತರ ಅಂಗಪೂರ್ವದೇಶ ಧರರಾದ ವಿನಯಂಧರ, ಶ್ರೀದತ್ತ, ಶಿವದತ್ತ ಮತ್ತು ಅರ್ಹದತ್ತ ಎಂಬ ನಾಲ್ವರು ಆರಾತೀಯ ಆಚಾರ್ಯರಾದರು. ಇವರ ಅನಂತರ ಸರ್ವಾಂಗಪೂರ್ವದೇಶೈಕದೇಶಜ್ಞ ರಾದ ಅರ್ಹದ್ಬಲಿಮುನಿಯಾದರು. ಇವರು ಮೂಲಯತಿಸಂಘವನ್ನು ನಂದಿ, ದೇವ ಮುಂತಾದ ಶಾಖಾಸಂಘಗಳನ್ನಾಗಿ ವಿಭಜಿಸಿದರು.

ಪರಾಮರ್ಶೆ :

'ಎ' ಪ್ರತಿಯ ಐತಿಹ್ಯದನುಗುಣವಾಗಿ ನಕ್ಷತ್ರಾದಿ ಕಂಸಾಚಾರ್ಯ ಪರ್ಯಂತರಾದ ಐವರು ಆಚಾರ್ಯರು ಏಕಾದಶಾಂಗ ಶ್ರುತಧರ ಆಚಾರ್ಯರೆಂದು ಗಣನೆಗೊಂಡಿದ್ದಾರೆ ಮತ್ತು ಇವರ ಸಮಷ್ಟಿಪಟ್ಟಕಾಲವು ೧೨೩ ವರ್ಷ ಪರಿಮಾಣ ವುಳ್ಳದ್ದಾಗಿದೆ. ಆದರೆ ತಿಲೋಯಪಣ್ಣತ್ತಿಯಾದಿ ಕೃತಿಗಳ ಐತಿಹ್ಯಾನುಗುಣವಾಗಿ ಈ ಆಚಾರ್ಯರೈವರ ಸಮಷ್ಟಿಪಟ್ಟಕಾಲವು ೨೨೦ ವರ್ಷಪರಿಮಾಣವುಳ್ಳದ್ದಾಗಿದೆ. ಇಂತೆಯೇ 'ಇ' ಪ್ರತಿಯ ಐತಿಹ್ಯದನುಗುಣವಾಗಿಯೂ ಈ ವರ್ಗದ ಆಚಾರ್ಯರ ಸಮಷ್ಟಿಪಟ್ಟಕಾಲವು ೨೨೦ ವರ್ಷ ಪರಿಮಾಣವುಳ್ಳದ್ದಾಗಿಯೇ ಇರುವುದಾದರೂ ಈ ವರ್ಗದ ಪ್ರಥಮ, ದ್ವಿತೀಯ ಮತ್ತು ಅಂತಿಮ ಆಚಾರ್ಯರನ್ನು ಹೆಸರಿಸುವಲ್ಲಿ ಹಾಗೂ ಆಚಾರ್ಯರೆಲ್ಲರ ಒಟ್ಟು ಸಂಖ್ಯೆಯ ವಿಷಯವಾಗಿ ಇತರ ಎರಡು ಐತಿಹ್ಯಮೂಲ ಗಳಿಂದ ಭಿನ್ನಕ್ರಮವುಳ್ಳದ್ದಾಗಿದೆ. ನಂ. ಆ. ಪಟ್ಟಾವಲಿ 'ಎ' ಪ್ರತಿ ಮತ್ತು ತಿಲೋಯಪಣ್ಣತ್ತಿಯಾದಿ ಕೃತಿಗಳಲ್ಲಿ ದಶಪೂರ್ವಿವರ್ಗದ ಅಂತಿಮ ಆಚಾರ್ಯದ್ವಯ

---

1 ಈ ಅಂಶವನ್ನು ಇಂದ್ರನಂದಿ ಆಚಾರ್ಯ ವಿರಚಿತವಾದ ಶ್ರುತಾವತಾರ ದಿಂದ ಸಂಕಲನಮಾಡಲಾಗಿದೆ.

ವೆನಿಸಿ ಹೆಸರಿಸಲಾಗಿರುವ ಗಂಗದೇವ ಮತ್ತು ಧರ್ಮಸೇನ ಎಂಬ ಆಚಾರ್ಯರು 'ಇ' ಪ್ರತಿಯಲ್ಲಿ ಏಕಾದಶಾಂಗಶ್ರುತಧರವರ್ಗದ ಪ್ರಥಮ ಮತ್ತು ದ್ವಿತೀಯ ಆಚಾರ್ಯರಾಗಿ ನಿರ್ದೇಶಿತರಾಗಿದ್ದಾರೆ. 'ಗಂಗದೇವ' ಎಂಬುದು ವಿಪ್ರತಿಪತ್ತಿವಶವಾಗಿ ರೂಪಿತವಾಗಿರುವ ಹೆಸರಾಗಿದ್ದು ವಾಸ್ತವವಾಗಿ ಈ ಹೆಸರಿನ ಆಚಾರ್ಯರೊಬ್ಬರಿದ್ದಿರಲಿಲ್ಲವೆಂದು ಹಿಂದೆ ವಿವರಿಸಿದೆ. ಇಂತೆಯೇ 'ಧರ್ಮಸೇನ' ಎಂಬುವರನ್ನು, ಹಿಂದೆ ವಿವರಿಸಲಾಗಿರುವಂತೆ, ದಶಪೂರ್ವಿವರ್ಗದ ಆಚಾರ್ಯರನ್ನಾಗಿ ಗಣನೆಮಾಡಲಾಗುವುದಿಲ್ಲವಾದ್ದರಿಂದ 'ಇ' ಪ್ರತಿಯ ಐತಿಹ್ಯದಿಂದ ಸೂಚಿತವಾಗುವಂತೆ ಏಕಾದಶಾಂಗಶ್ರುತಧರವರ್ಗದ ಆಚಾರ್ಯರಾಗಿರುವರೆಂದು ಗಣನೆಮಾಡಬಹುದಾಗಿದೆಯಲ್ಲದೆ ಇವರನ್ನೇ ಈ ವರ್ಗದ ಪ್ರಥಮ ಆಚಾರ್ಯರನ್ನಾಗಿ ಪರಿಗಣನೆಮಾಡಬೇಕಾಗುವುದು. 'ಎ' ಪ್ರತಿ ಮತ್ತು ತಿಲೋಯಪಣ್ಣತ್ತಿಯಾದಿ ಕೃತಿಗಳಿಂದ ಸೂಚಿತವಾಗುವಂತೆ 'ಕಂಸ' ಎಂಬುವರು ಈ ವರ್ಗದ ಅಂತಿಮ ಆಚಾರ್ಯರಾಗಿರುವುದರಿಂದಲೂ 'ಇ' ಪ್ರತಿಯ ಐತಿಹ್ಯದನುಗುಣವಾಗಿ ಈ ವರ್ಗದಲ್ಲಿ ಆರು ಜನ ಆಚಾರ್ಯರನ್ನು ಗಣನೆಮಾಡಲಾಗಿರುವುದರಿಂದಲೂ ಧರ್ಮಸೇನಾದಿ ಕಂಸಾಚಾರ್ಯಪರ್ಯಂತರಾದ ಆರು ಜನ ಆಚಾರ್ಯರು ಈ ವರ್ಗದ ಆಚಾರ್ಯರಾಗಿರುವರೆಂದು ಪರಿಭಾವಿತವಾಗುವುದು. ಅಂತೆಯೇ ಧರ್ಮಸೇನ, ನಕ್ಷತ್ರ, ಜಯಪಾಲಕ, ಪಾಂಡವ, ಧ್ರುವಸೇನ ಮತ್ತು ಕಂಸ ಎಂಬ ಆರು ಜನ ಆಚಾರ್ಯರು ಏಕಾದಶಾಂಗಶ್ರುತಧರರಾದ ಆಚಾರ್ಯರಾಗಿರುವರೆಂದೂ ಮತ್ತು ಇವರೆಲ್ಲರ ಸಮುಷ್ಟಿಪಟ್ಟಕಾಲವು (೧೬+೧೮+೨೦+೩೯+೧೪+೩೨=) ೧೩೯ ವರ್ಷ ಪರಿಮಾಣವುಳ್ಳದ್ದಾಗಿರುವುದೆಂದೂ ಪರಿಭಾವಿತವಾಗುವುದು.

ಏಕಾದಶಾಂಗಶ್ರುತಧರ ಆಚಾರ್ಯವರ್ಗದ ಅನಂತರದ ಆಚಾರ್ಯಾನುಕ್ರಮವನ್ನು ನಿರ್ದೇಶಿಸುವಲ್ಲಿ ನಂ. ೮ ಪಟ್ಟಾವಲಿ 'ಎ' ಪ್ರತಿಯ ಐತಿಹ್ಯ ಮತ್ತು ಇತರ ಎಲ್ಲ ಕೃತಿಗಳ ಐತಿಹ್ಯಗಳ ಮಧ್ಯೆ ವಿಷಮರೀತಿಯ ಅಂತರವಿರುವುದು ಹಿಂದಿನ ಉಲ್ಲೇಖದಿಂದ ಸ್ಪಷ್ಟಗೊಂಡಿದೆ. 'ಎ' ಪ್ರತಿಯಲ್ಲಿ ಸುಭದ್ರ, ಯಶೋಭದ್ರ, ಭದ್ರಬಾಹು ಮತ್ತು ಲೋಹಾಚಾರ್ಯ ಎಂಬ ಯಾವ ನಾಲ್ವರು ಆಚಾರ್ಯರನ್ನು ದಶ, ನವ ಮತ್ತು ಅಷ್ಟ ಅಂಗಶ್ರುತಧರ ಆಚಾರ್ಯರನ್ನಾಗಿ ನಿರ್ದೇಶಿಸಲಾಗಿದೆಯೋ ಅದೇ ಆಚಾರ್ಯರನ್ನು 'ಇ' ಪ್ರತಿಯಲ್ಲಿ ಮತ್ತು ಜಿನಸೇನಾಚಾರ್ಯ ವಿರಚಿತ ಆದಿಪುರಾಣದಲ್ಲಿ, ಆಚಾರಾಂಗ(ವೆಂಬ ಒಂದು ಅಂಗ)ಶ್ರುತಧರ ಆಚಾರ್ಯರನ್ನಾಗಿ ನಿರ್ದೇಶಿಸಿದೆ. ಇಷ್ಟಲ್ಲದೆ, ದ್ವಿತೀಯ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದ ಆಚಾರ್ಯಾನುಕ್ರಮದ ವಿಷಯವಾಗಿ 'ಎ' ಪ್ರತಿಯನುಸೃತವಾದ ಐತಿಹ್ಯದಲ್ಲಿಯೇ ಪರಸ್ಪರ ಸಂಗತವಾಗದಿರುವಂತಹ, ಎರಡು ರೀತಿಯ ಹೇಳಿಕೆಗಳಿರುವುದನ್ನು ಗಮನಿಸಬಹುದು. ಎ' ಪ್ರತಿಯಿಂದ ಹಿಂದೆ ಉಲ್ಲೇಖಿಸಲಾಗಿರುವ ಗಾಹೆಗಳ ಹೇಳಿಕೆಯಂತೆ, ದ್ವಿತೀಯ ಭದ್ರಬಾಹುಸ್ವಾಮಿಯವರ ಪಟ್ಟಸಮಯವು ವೀ. ನಿ. ಪ. ೫೧೫ ನೇ ವರ್ಷದಲ್ಲಿ

ಕೊನೆಗೊಂಡಿದ್ದು, ಮುಂದೆ ವೀ. ನಿ. ಪ. ೫೬೫ ನೇ ವರ್ಷದ ಪರ್ಯಂತ ಲೋಹಾ ಚಾರ್ಯರೂ ಅನಂತರ ವೀ. ನಿ. ಪ. ೫೯೨ ನೇ ವರ್ಷಪರ್ಯಂತದ ೨೮ ವರ್ಷಕಾಲ ಅರ್ಹದ್ಬಲಿಸ್ವಾಮಿಯವರೂ ತರುವಾಯ ವೀ. ನಿ. ಪ. ೬೧೪ ನೇ ವರ್ಷಪರ್ಯಂತದ ೨೧ ವರ್ಷಕಾಲ ಮಾಘನಂದ್ಯಾಚಾರ್ಯರೂ ಮತ್ತು ಇವರ ತರುವಾಯ ಅನುಕ್ರಮ ವಾಗಿ ಧರಸೇನ, ಪುಷ್ಪದಂತ ಮತ್ತು ಭೂತಬಲಿ ಎಂಬುವರೂ ಆಚಾರ್ಯಪಟ್ಟಸ್ಥರಾಗಿ ದ್ದಾರೆ. ಆದರೆ ಪೂರ್ವೋಲ್ಲಿಖಿತ ರಾಜಾಸ್ಥಾನೀಭಾಷಿಕೆಯ ಅರ್ವಾಚೀನ ಐತಿಹ್ಯ ದನುಗುಣವಾಗಿ, ವಿಕ್ರಮಸಂವತ್ ೪=ವೀ. ನಿ. ಪ. ೪೯೨ ರಲ್ಲಿ ಆಚಾರ್ಯಪಟ್ಟಸ್ಥ ರಾದ (ದ್ವಿ) ಭದ್ರಬಾಹುಸ್ವಾಮಿಯವರ ತರುವಾಯ ಸಂವತ್ ೨೬ = ವೀ. ನಿ. ಪ. ೫೧೪-೫ ರಿಂದ ಸಂವತ್ ೩೬=೫೨೪-೫ ನೇ ವರ್ಷದ ಪರ್ಯಂತ (೧೦ ವರ್ಷಕಾಲ) ಅರ್ಹದ್ಬಲಿಸ್ವಾಮಿಯವರೂ ಅನಂತರ ಸಂವತ್ ೪೦ = ವೀ. ನಿ. ಪ. ೫೨೮-೯ ನೇ ವರ್ಷಪರ್ಯಂತ (೪ ವರ್ಷಕಾಲ) ಮಾಘನಂದಿಸ್ವಾಮಿಯವರೂ, ಇವರ ಅನಂತರ ಜಿನಚಂದ್ರ, ಕುಂದಕುಂದ, ಉಮಾಸ್ವಾತಿಯವರೇ ಮೊದಲಾದ ಆಚಾರ್ಯರು ಅನು ಕ್ರಮವಾಗಿ ಪಟ್ಟಸ್ಥರಾಗಿದ್ದಾರೆ. ಈ ರೀತಿಯಾಗಿ ಈ ಎರಡು ರೀತಿಯ ಹೇಳಿಕೆ ಗಳಿಂದ (ದ್ವಿ) ಭದ್ರಬಾಹುಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾದವರು ಲೋಹಾಚಾರ್ಯರೇ ? ಅಥವಾ ಅರ್ಹದ್ಬಲಿ ಆಚಾರ್ಯರೆ ? ಎಂಬ ಪ್ರಶ್ನೆಮೂಡಲವ ಕಾಶವಾಗಿರುವುದಲ್ಲದೆ ಅರ್ಹದ್ಬಲಿ, ಮಾಘನಂದಿ ಆಚಾರ್ಯರ ಪಟ್ಟಸಮಯಗಳ ವಿಷಯ ಹಾಗೂ ಮಾಘನಂದಿಆಚಾರ್ಯರ ಅನಂತರಕಾಲೀನ ಆಚಾರ್ಯಾನುಕ್ರಮದ ವಿಷಯಗಳು ಸಂದಿಗ್ಧತಾಭಾಗಿಯಾಗುವುವು. ಆದ್ದರಿಂದ ಏಕಾದಶಾಂಗಶ್ರುತಧರ ವರ್ಗದ ಅನಂತರಕಾಲೀನ ದಶ, ನವ, ಅಷ್ಟಅಂಗಶ್ರುತಧರ ಆಚಾರ್ಯರ ಮತ್ತು ಆಚಾರಾಂಗಶ್ರುತಧರವರ್ಗದ ಆಚಾರ್ಯರ ನಾಮನಿರ್ದೇಶನವೇ ಮುಂತಾದ ವಿಷಯ ವಾಗಿ 'ಎ' ಪ್ರತಿಯನುಸೃತವಾದ ಐತಿಹ್ಯವು ಲೋಪದೋಷಭಾಗಿಯಾಗಿ ಉಳಿದು ಬಂದಿದೆಯೆಂದು ನಿಶ್ಚಿತವಾಗುವುದು. ಈ ರೀತಿಯಾದ 'ಎ' ಪ್ರತಿಯ ಲೋಪದೋಷ ಗಳಿಗೆ ಮುಖ್ಯವಾಗಿ ಶಾಲಿವಾಹನಶಕೆಯನ್ನು ವಿಕ್ರಮಶಕೆಯನ್ನಾಗಿ ಗ್ರಹಿಸಿದ ಪ್ರಮಾದ ಹಾಗೂ ದಶ, ನವ ಮತ್ತು ಅಷ್ಟಅಂಗಶ್ರುತಧರ ಆಚಾರ್ಯರ ಮತ್ತು ಆಚಾರಾಂಗಶ್ರುತಧರವರ್ಗದ ಆಚಾರ್ಯರ ನಾಮಸಾದೃಶ್ಯತೆಯಿಂದಾಗಿ ಏರ್ಪಟ್ಟ ವಿಪ್ರತಿಪತ್ತಿರೂಪದ ಪ್ರಮಾದವು ಕಾರಣವಾಗಿರುವುದೆಂದು ಹೇಳಲವಕಾಶವಿದೆ.

ಪೂರ್ವೋಲ್ಲಿಖಿತ ಅರ್ವಾಚೀನ ಐತಿಹ್ಯದನುಗುಣವಾಗಿ ಸುಭದ್ರಾಚಾರ್ಯರ ಪಟ್ಟಸಮಯದಿಂದ ೨೪ ನೇ ವರ್ಷ, ವಿಕ್ರಮಾದಿತ್ಯನ ಜನ್ಮಸಮಯದಿಂದ ೨೨ ನೇ ವರ್ಷ ಮತ್ತು ಇವನ ರಾಜ್ಯಭಾರಾರಂಭಸಮಯದಿಂದ ೪ ನೇ ವರ್ಷವಾದ ವೀ. ನಿ. ಪ. ೪೯೨ ನೇ ವರ್ಷದಲ್ಲಿ ದ್ವಿತೀಯ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದರೆಂದು ಗಣನೆಮಾಡಿರುವುದು ಸ್ಪಷ್ಟವಿದೆ. ಇದರಂತೆ ವಿಕ್ರಮಾದಿತ್ಯನು ವೀ. ನಿ. ಪ. (೪೯೨-೪=) ೪೮೮ ನೇ ವರ್ಷದಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂಬ ಗಣನೆ

ಯಾದಂತಾಗುವುದು. ಆದರೆ ವಿಕ್ರಮಾದಿತ್ಯನ ಜನನಾದಿಪ್ರಸಂಗಗಳ ಐತಿಹ್ಯನಿರೂಪಕವಾದ ಪೂರ್ವೋಲ್ಲಿಖಿತವಾದ 'ಸತ್ತರಿಚದುಸದಜುತ್ತೋ ..............................'[1] ಎಂಬ ಗಾಹಾದ್ವಯದ ಹೇಳಿಕೆಯನುಗುಣವಾಗಿ ಈ ರಾಜನು ವೀ. ನಿ. ಪ. ೪೯೫ ನೇ ವರ್ಷದಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಹಿಂದೆ ವಿವರಿಸಲಾಗಿದೆ. ಇಷ್ಟಲ್ಲದೆ ಈ ಗಾಹಾದ್ವಯದ ಹೇಳಿಕೆಯನುಗುಣವಾಗಿ ವಿಕ್ರಮಾದಿತ್ಯನು ವೀ. ನಿ. ಪ. ೪೮೮ ನೇ ವರ್ಷದಲ್ಲಿ ರಾಜ್ಯಭಾರಾಧಿಷ್ಠಿತನಾಗಿರುವನೆಂದು ಯಾವರೀತಿಯಿಂದಲೂ ನಿರ್ದೇಶಿತವಾಗುವುದಿಲ್ಲ. ಆದ್ದರಿಂದ ವಿಕ್ರಮಾದಿತ್ಯನ ಜನನಾದಿ ಪ್ರಸಂಗಪ್ರರೂಪಕವಾದ ಪ್ರಾಚೀನ ಐತಿಹ್ಯದೊಡನೆ 'ಭದ್ರಬಾಹುಸ್ವಾಮಿ' ಎಂಬ ಹೆಸರಿನ ಆಚಾರ್ಯರು ಪಟ್ಟಸ್ಥರಾದ ಸಮಯಸಂಬಂಧಿಯಾದ ಮೂಲ ಅರ್ವಾಚೀನ ಐತಿಹ್ಯವನ್ನು ಸಮನ್ವಯಗೊಳಿಸಲು ರಾಜಾಸ್ಥಾನೀಭಾಷಿಕಾಕಾರರು ಯತ್ನಿಸಿರುವರೆಂದೂ ಮತ್ತು ಇದರ ಪರಿಣಾಮವಾಗಿ ಮೇಲ್ಕಂಡ ಅಸಂಬದ್ಧತೆಯು ಸಮುದ್ಭೂತವಾಗಿರುವುದೆಂದೂ ಗ್ರಹಿಸಲವಕಾಶವಾಗುವುದು. ದಿಗಂಬರ ಜೈನ ಆಮ್ನಾಯದಲ್ಲಿ ಶಾಲಿವಾಹನಶಕೆಯನ್ನು 'ವಿಕ್ರಮಾಂಕ' ಶಕೆಯೆಂದು ನಿರ್ದೇಶಿಸಲಾಗಿರುವ ಸ್ಪಷ್ಟನಿದರ್ಶನಗಳನ್ನು ಹಿಂದೆ ಉದಹರಿಸಿದೆ. ಇದರಿಂದ ರಾಜಾಸ್ಥಾನೀಭಾಷಿಕೆಯ ರಚನಕಾರರು ಮೂಲ ಅರ್ವಾಚೀನ ಐತಿಹ್ಯದಲ್ಲಿ ಭದ್ರಬಾಹುಸ್ವಾಮಿಯುವರ ಪಟ್ಟಸಮಯಸೂಚಕವಾಗಿ ನಿರ್ದೇಶಿತವಿದ್ದ ಶಾಲಿವಾಹನ (ವಿಕ್ರಮಾಂಕ) ಶಕೆಯನ್ನು ಉಜ್ಜಯಿನಿಯ ವಿಕ್ರಮಾದಿತ್ಯಶಕರಾಜನ ಹೆಸರಿನಿಂದ ಪ್ರವರ್ತಿತವಾದ ವಿಕ್ರಮಶಕೆಯನ್ನಾಗಿ ಗಣನೆಮಾಡಿರಬಹುದಾದ ಸಂಭವವಿದೆಯೆಂದು ಭಾವಿಸಲವಕಾಶವಾಗುವುದು. ನಂ. ಆ. ಪಟ್ಟಾವಲಿಯ ಪ್ರತಿಗಳ ಹೊರತಾಗಿ ಇತರ ಎಲ್ಲ ಐತಿಹ್ಯಮೂಲಗಳಲ್ಲಿ ಲೋಹಾಚಾರ್ಯರನ್ನು ಶ್ರುತಧರ ಆಚಾರ್ಯಸಂತತಿಯ ಅಂತಿಮ ಆಚಾರ್ಯರನ್ನಾಗಿ ನಿರ್ದೇಶಿಸಿರುವುದು ಸ್ಪಷ್ಟವಿದೆ. ಇಂತೆಯೇ ಆದಿಪುರಾಣ ರಚನಕಾರರಾದ ಜಿನಸೇನಾಚಾರ್ಯರು ಲೋಹಾಚಾರ್ಯರಿಂದ ಪೂರ್ವಭಾವಿಯಾಗಿ ಪಟ್ಟಸ್ಥರಾಗಿದ್ದ ಆಚಾರ್ಯರನ್ನು 'ಭದ್ರಬಾಹು' ಎಂಬ ಹೆಸರಿನಿಂದ ನಿರ್ದೇಶಿಸಿರುವರೆಂಬುದು ವಿದಿತವಿದೆ. ಐತಿಹ್ಯಮೂಲಗಳಲ್ಲಿ ಕಂಡುಬರುವ ಸರ್ವಸಮ್ಮತಾಭಿಪ್ರಾಯದಂತೆ ಶ್ರುತಧರ ಆಚಾರ್ಯಸಂತತಿಯ ಕಾಲವು ವೀ. ನಿ. ಪ. ೬೮೩ ರಲ್ಲಿ ಕೊನೆಗೊಂಡಿದೆಯಾಗಿ ಈ ಆಚಾರ್ಯಸಂತತಿಯ ಅಂತಿಮ ಆಚಾರ್ಯರಾದ ಲೋಹಾಚಾರ್ಯರು ವೀ. ನಿ. ಪ. ೬೮೩ ರಲ್ಲಿ ಸ್ವರ್ಗಸ್ಥರಾಗಿರುವರೆಂದು ಅಧಿಗತವಾಗುವುದು. ಆಚಾರ್ಯಸಂತತಿಯ ಪಟ್ಟಕಾಲ ನಿರೂಪಕವಾದ ಪೂರ್ವೋಲ್ಲಿಖಿತ ಗಾಹೆಯ ಹೇಳಿಕೆಯನುಗುಣವಾಗಿ ಲೋಹಾಚಾರ್ಯರ ಪಟ್ಟಕಾಲವು ೫೨ ವರ್ಷ ಪರಿಮಿತವಾದುದನ್ನಾಗಿ ಗಣನೆಮಾಡಬೇಕಾಗುವುದಾದರೂ ರಾಜಾಸ್ಥಾನೀಭಾಷಿಕೆಯಲ್ಲಿ ೫೦ ವರ್ಷ ಪರಿಮಿತ

1 ಇದೇ ಕೃತಿಯ ಪು. ಸಂ. ೨೨೯

ವಾದುದನ್ನಾಗಿ ಗಣನೆಮಾಡಿರುವುದು ವಿದಿತವಿದೆ. ಇಂತಿದ್ದರೂ ಈ ಆಚಾರ್ಯರ ಪಟ್ಟಕಾಲದ ವಿಷಯವಾಗಿ ರಾಜಾಸ್ಥಾನೀಭಾಷಿಕೆಯ ಹೇಳಿಕೆಯೇ ತಥ್ಯನಿಷ್ಠವಿರುವು ದೆಂದು ಹೇಳಲವಕಾಶವಿದೆ. ಪಟ್ಟಕಾಲನಿರೂಪಕವಾದ ಪೂರ್ವೋಕ್ತಗಾಹೆಗಳಲ್ಲಿ ಸುಭದ್ರ, ಯಶೋಭದ್ರ, ಭದ್ರಬಾಹು ಮತ್ತು ಲೋಹಾಚಾರ್ಯ ಎಂಬ ನಾಲ್ವರು ಆಚಾರ್ಯರ ಪ್ರತ್ಯೇಕಪಟ್ಟಕಾಲಗಳನ್ನು ೬, ೧೮, ೨೩ ಮತ್ತು ೫೨ ವರ್ಷಮಾನ ವುಳ್ಳವುಗಳನ್ನಾಗಿ ಹೇಳಲಾಗಿದ್ದು, ಇವುಗಳ ಮೊತ್ತವು ೯೯ ವರ್ಷಮಾನವುಳ್ಳದ್ದಾಗು ವುದಾದರೂ ಅದೇ ಗಾಹೆಯಲ್ಲಿ ಪುನಃ ಈ ನಾಲ್ವರು ಆಚಾರ್ಯರ ಸಮಷ್ಟಿಪಟ್ಟ ಕಾಲವು ('ವಾಸಂಸತ್ತಾಣವದಿ' =) ೯೭ ವರ್ಷಮಾನವುಳ್ಳದ್ದಾಗಿದೆಯೆಂದು ಹೇಳಿದೆ. ಅಂತೆಯೇ ಲೋಹಾಚಾರ್ಯರ ಪಟ್ಟಕಾಲವು ರಾಜಾಸ್ಥಾನೀ ಭಾಷಿಕೆಯಲ್ಲಿ ಹೇಳಿರು ವಂತೆ ೫೦ ವರ್ಷಮಾನವುಳ್ಳದ್ದಾಗಿಯೇ ಇರಬೇಕೆಂದೂ ಮತ್ತು ಗಾಹೆಯಲ್ಲಿ ನಿರ್ದೇ ಶಿತವಿರುವ ೫೨ ವರ್ಷಗಳ ಕಾಲವು ಈ ನಾಲ್ವರು ಆಚಾರ್ಯರಿಂದ ಅನ್ಯರಾದ ಆಚಾ ರ್ಯರೊಬ್ಬರ ಪಟ್ಟಕಾಲವಾಗಿರಬೇಕೆಂದೂ ಭಾವಿಸಲವಕಾಶವಾಗುವುದು. ಇದರಿಂದ ಹಿಂದಿನ ವಿವರಣೆಯನುಗುಣವಾಗಿ ವೀ. ನಿ. ಪ. ೬೮೩ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿ ರುವ ಲೋಹಾಚಾರ್ಯರು ವೀ. ನಿ. ಪ. (೬೮೩ – ೫೦ =) ೬೩೩ ನೇ ವರ್ಷದ ತರುವಾಯದಲ್ಲಿ ಪಟ್ಟಸ್ಥರಾಗಿರುವರೆಂದೂ ಮತ್ತು ಇವರಿಂದ ಪೂರ್ವಭಾವಿಯಾಗಿ ಭದ್ರಬಾಹುಸ್ವಾಮಿಯವರು ವೀ. ನಿ. ಪ. ೬೧೦ ನೇ ವರ್ಷದಿಂದ ೬೩೩ ನೇ ವರ್ಷದ ಪರ್ಯಂತ ೨೩ ವರ್ಷಕಾಲ ಪಟ್ಟಸ್ಥರಾಗಿದ್ದಿರಬೇಕೆಂದೂ ಪರಿಗಣಿತವಾಗುವುದು. ಶ್ರೀವೀರನಿರ್ವಾಣಾನಂತರ ೬೦೫ ವರ್ಷ ಮತ್ತು ೫ ತಿಂಗಳುಗಳು ಗತಿಸಿರಲು ಅರ್ಥಾತ್ ವೀ. ನಿ. ಪ. ೬೦೬ ನೇ ವರ್ಷದಲ್ಲಿ ಶಾಲಿವಾಹನಶಕೆಯು ಆರಂಭವಾಗಿರುವುದೆಂದು ಹಿಂದೆ ವಿವರಿಸಿದೆ.[1] ಅಂತೆಯೇ ಭದ್ರಬಾಹುಸ್ವಾಮಿ ಯವರು ಶಾಲಿವಾಹನಶಕವರ್ಷ ೪ರಲ್ಲಿ (ವೀ. ನಿ. ಪ. ೬೦೬ + ೪ =) ೬೧೦ ರಲ್ಲಿ

---

1 ಶ್ರೀ ವೀರತೀರ್ಥಂಕರರ ನಿರ್ವಾಣವು ಕ್ರಿಸ್ತಶಕಪೂರ್ವ ೫೨೭ ವರ್ಷ ಮತ್ತು ೨ ತಿಂಗಳುಗಳ ಸಮಯದಲ್ಲಿ ಸಂಘಟಿಸಿರುವುದೆಂದು ಹಿಂದೆ ಪ್ರತಿಪಾದಿಸಿದೆ. ಇದರಂತೆ ಶಾಲಿವಾಹನಶಕೆಯು (೬೦೫ ವ., ೫ ತಿಂ. – ೫೨೭ ವ., ೨ ತಿಂ. =) ಕ್ರಿ. ಶ. ೭೯ ನೇ ಇಸವಿ ಏಪ್ರಿಲ್ ಮಾಹೆಯಲ್ಲಿ (ಚೈತ್ರಮಾಸದಲ್ಲಿ) ಆರಂಭವಾಗಿರುವುದೆಂದು ಪರಿಗಣಿತ ವಾಗುವುದು. ಪ್ರತಿಷ್ಠಾನನಗರದಲ್ಲಿ ರಾಜ್ಯವಾಳಿದ ಶಾಲಿವಾಹನ ಮನೆತನದ ಗೌತಮೀ ಪುತ್ರರಾಜನು ಈ ಶಕೆಯ ಪ್ರವರ್ತಕನಾಗಿರುವನೆಂದೂ ಮತ್ತು ಇವನು ತನ್ನ ೧೮ ನೇ ವಯೋಮಾನದಲ್ಲಿ ರಾಜ್ಯಭಾರಾಧಿಷ್ಠಿತನಾಗಿ ೬೦ ವರ್ಷಕಾಲ ರಾಜ್ಯವಾಳಿರುವನೆಂದೂ ಕಥಾಯತ್ತವಾದ ಐತಿಹ್ಯಾಂಶಗಳ ವಿಶ್ಲೇಷಣೆಯಿಂದ ಸೂಚಿತವಾಗುವುದು. ಗ್ರಂಥ ಮಿತಿಯ ಅಪೇಕ್ಷೆಯಿಂದ ಈ ವಿಷಯವನ್ನು ಪರಿಷ್ಕರಣಪೂರ್ವಕ ಇಲ್ಲಿ ಮಂಡಿಸಲವಕಾಶ ವಿಲ್ಲವಾಗಿದೆ.

ಆಚಾರ್ಯಪಟ್ಟಸ್ಥರಾಗಿರುವರೆಂದು ಅಧಿಗತವಾಗುವುದು. ಆದ್ದರಿಂದ 'ಶಕಸಂವತ್ ೪ ನೇ ವರ್ಷದಲ್ಲಿ ಭದ್ರಬಾಹುಸ್ವಾಮಿಯವರು ಆಚಾರ್ಯಪಟ್ಟಸ್ಥರಾಗಿರುವರು'. ಎಂಬ ಪೂರ್ವೋಕ್ತ ಅರ್ವಾಚೀನ ಐತಿಹ್ಯವು ವಾಸ್ತವವಾಗಿ ಶಾಲಿವಾಹನಶಕ ಸಂವತ್ ೪ ರಲ್ಲಿ ಆಚಾರ್ಯಪಟ್ಟಸ್ಥರಾದ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರನ್ನಧಿಕರಿಸಿದ ಐತಿಹ್ಯವಾಗಿರುವುದೆಂದೂ ಮತ್ತು ಹಿಂದೆ ವಿವರಿಸುವಂತೆ ಈ ಐತಿಹ್ಯವು ವಿಕ್ರಮಶಕೆಯ ಸೂಚಕವಾಗಿಯಾಗಲೀ ಅಥವಾ ಅಷ್ಟಅಂಗಶ್ರುತಧರ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದ ಸಮಯದ ನಿರ್ದೇಶಕವಾಗಿಯಾಗಲೀ ಆಗಿರುವುದಿಲ್ಲವೆಂದು ನಿಶ್ಚಿತವಾಗುವುದು. ಇಂತೆಯೇ 'ಸುಭದ್ರಾಚಾರ್ಯರ ಪಟ್ಟಸಮಯದಿಂದ ೨ ನೇ ವರ್ಷದಲ್ಲಿ ಶಕರಾಜನು ಜನಿಸಿದನು ಮತ್ತು ಈ ಆಚಾರ್ಯರ ಪಟ್ಟಸಮಯದಿಂದ ೨೪ ನೇ ವರ್ಷದಲ್ಲಿ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದರು' ಎಂಬ ಪೂರ್ವೋಕ್ತ ಅರ್ವಾಚೀನ ಐತಿಹ್ಯದ ಹೇಳಿಕೆಯು ಶಾಲಿವಾಹನಶಕರಾಜನ ಜನ್ಮಸಮಯ ಮತ್ತು ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾದ ಸಮಯಗಳ ಸೂಚಕವಾಗಿರುವುದೆಂದು ವ್ಯಕ್ತವಾಗುವುದು. ಆದ್ದರಿಂದ ತಿಲೋಯಪಣ್ಣತ್ತಿಯಾದಿ ಕೃತಿಗಳಲ್ಲಿ ನಿರ್ದೇಶಿತವಿರುವಂತೆ, ಸುಭದ್ರಾಚಾರ್ಯರು ಆಚಾರಾಂಗಶ್ರುತಧರವರ್ಗದ ಆಚಾರ್ಯರಾಗಿರುವರೆಂದೂ ಮತ್ತು ಸುಭದ್ರಾದಿ ಲೋಹಾಚಾರ್ಯಪರ್ಯಂತರಾದ ನಾಲ್ವರು ಆಚಾರ್ಯರ ಸಮಷ್ಟಿಪಟ್ಟಕಾಲವು ೯೭ ವರ್ಷಮಾನವುಳ್ಳದ್ದಾಗಿರುವುದೆಂದೂ ನಿಶ್ಚಿತವಾಗುವುದು. ಇಷ್ಟಲ್ಲದೆ ಆಚಾರಾಂಗ ಶ್ರುತಧರವರ್ಗದ ಆಚಾರ್ಯರ ಸಮಷ್ಟಿಪಟ್ಟಕಾಲವು ೧೧೮ ವರ್ಷಮಾನವುಳ್ಳದ್ದಾಗಿದೆ ಯೆಂಬ ಸರ್ವಸಮ್ಮತರೂಪದ ಐತಿಹ್ಯವಿರುವುದರಿಂದಲೂ ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದಿಂದ ಈ ವರ್ಗದಲ್ಲಿ ಐವರು ಆಚಾರ್ಯರಾಗಿರುವರೆಂದು ಸೂಚಿತವಾಗುವುದಾದ್ದರಿಂದಲೂ ಸುಭದ್ರಾಚಾರ್ಯರಿಂದ ಪೂರ್ವಭಾವಿಯಾಗಿ ಆಚಾರಾಂಗಶ್ರುತಧರರಾದ ಮತ್ತೊಬ್ಬರು ಆಚಾರ್ಯರು (೧೧೮ – ೯೭ =) ೨೧ ವರ್ಷ ಕಾಲ ಪಟ್ಟಸ್ಥರಾಗಿದ್ದಿರಬೇಕೆಂದೂ ಮತ್ತು ಇವರು ಈ ವರ್ಗದ ಪ್ರಥಮ ಆಚಾರ್ಯರಾಗಿರುವರೆಂದೂ ಪರಿಭಾವಿತವಾಗುವುದು. ಇಂತೆಯೇ ಪೂರ್ವನಿರ್ದೇಶಿತವಾದ ಏಕಾದಶಾಂಗಶ್ರುತಧರ ಆಚಾರ್ಯವರ್ಗದ ಅನಂತರಭಾವಿಯಾಗಿ ಮತ್ತು ಆಚಾರಾಂಗ ಶ್ರುತಧರಆಚಾರ್ಯವರ್ಗದ ಪೂರ್ವಭಾವಿಯಾಗಿ ಮತ್ತೂ ಮೂವರು ಆಚಾರ್ಯರಿದ್ದಿರಬೇಕೆಂದು ಗಣನೆಮಾಡಲವಕಾಶವಿದೆ :

ಸುಭದ್ರಾಚಾರ್ಯರ ಪಟ್ಟಸಮಯದಿಂದ ೨೪ ನೇ ವರ್ಷದಲ್ಲಿ ಹಾಗೂ ಶಕರಾಜನ ರಾಜ್ಯಭಾರಸಮಯದಿಂದ ೪ ನೇ ವರ್ಷದಲ್ಲಿ ಆಚಾರ್ಯಪಟ್ಟಾಧಿಷ್ಠಿತರಾದ ಭದ್ರಬಾಹುಸ್ವಾಮಿಯವರ ಶಿಷ್ಯರೂ 'ಅರ್ಹದ್ಬಲಿ' ಎಂಬ ನಾಮಾಂತರವನ್ನು ಹೊಂದಿದವರೂ ಆದ ಗುಪ್ತಿಗುಪ್ತಸ್ವಾಮಿಯವರು ಮೂಲನಿರ್ಗ್ರಂಥಯತಿಸಂಘವನ್ನು 'ನಂದಿ', 'ದೇವ' ಎಂದು ಮುಂತಾದ ಶಾಖಾಸಂಘಗಳನ್ನಾಗಿ ರೂಪಿಸಿದರೆಂದು ನಂ. ಆ. ಪ.

'ಎ' ಪ್ರತಿಯನುಸೃತವಾದ ಅರ್ವಾಚೀನ ಐತಿಹ್ಯವಿರುವುದು ವಿದಿತವಿದೆ. ಈ ಅರ್ವಾಚೀನ ಐತಿಹ್ಯವು ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರನ್ನಧಿಕರಿಸಿದೆ ಎಂಬುದು ಸ್ಪಷ್ಟಗೊಂಡಿರುವುದಾದ್ದರಿಂದ ಪೂರ್ವೋಕ್ತರಾದ ಗುಪ್ತಿಗುಪ್ತ-ಅರ್ಹದ್ಬಲಿಸ್ವಾಮಿಯವರು ಈ ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರ ಶಿಷ್ಯರಾಗಿದ್ದಿರಬೇಕೆಂದು ಅಧಿಗತವಾಗುವುದು. ನಂ. ಆ. ಪಟ್ಟಾವಲಿ 'ಇ' ಪ್ರತಿಯಲ್ಲಿ, ಈ ಅರ್ಹದ್ಬಲಿಸ್ವಾಮಿಯವರ ಗುರುಗಳಾದ ಭದ್ರಬಾಹುಸ್ವಾಮಿಯವರು ಶ್ರೀ ವೀರನಿರ್ವಾಣಾನಂತರಕಾಲೀನ ಆಚಾರ್ಯಾನುಕ್ರಮದಲ್ಲಿ ೩೦ ನೇ ಆಚಾರ್ಯರಾಗಿರುವರೆಂಬ ಮತ್ತು 'ಭದ್ರಬಾಹು' ಎಂಬ ಹೆಸರನ್ನು ಹೊಂದಿದ್ದವರಲ್ಲಿ ೩ ನೇ ಆಚಾರ್ಯರಾಗಿದ್ದರೆಂಬ ವಿಶ್ವಸನೀಯವಾದ ಐತಿಹ್ಯವು ಉಳಿದುಬಂದಿದೆ.[1] ಈ ರೀತಿಯಾಗಿ ಆಚಾರಾಂಗ ಶ್ರುತಧರ ಭದ್ರಬಾಹುಸ್ವಾಮಿಯವರು 'ಭದ್ರಬಾಹು' ಎಂಬ ಹೆಸರನ್ನು ಹೊಂದಿದ್ದ ಆಚಾರ್ಯರಲ್ಲಿ ಮೂರನೆಯವರಾಗಿರುವರೆಂದೂ ಮತ್ತು ಇವರು ಗೌತಮಸ್ವಾಮಿಯವರಾದಿಯಾಗಿ ೩೦ ನೆಯ ಆಚಾರ್ಯರಾಗಿರುವರೆಂದೂ ಸೂಚಿತವಾಗುವುದಾದ್ದರಿಂದ ಆಚಾರ್ಯಪರಂಪರಾನುಕ್ರಮನಿರೂಪಕವಾದ ಪೂರ್ವೋಲ್ಲಿಖಿತ ಗಾಹೆಗಳಲ್ಲಿ ಹೇಳಿರು

---

1 ಈ ತೃತೀಯ ಭದ್ರಬಾಹುಸ್ವಾಮಿಯವರು ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರಿಂದ ಮುಂದೆ ಆರನೇ ಆಚಾರ್ಯರಾಗಿ ಶಕಸಂವತ್ ೧೦೪ ರಲ್ಲಿ ಪಟ್ಟಸ್ಥರಾಗಿರುವರೆಂದು ನಂ. ಆ. ಪಟ್ಟಾವಲಿ 'ಇ'ಪ್ರತಿಯ ಹೇಳಿಕೆಯಿಂದ ಸೂಚಿತವಾಗುವುದು. ಆದರೆ ದಶ, ನವ ಮತ್ತು ಅಷ್ಟಅಂಗಶ್ರುತಧರ ಆಚಾರ್ಯರ ಗಣನೆಯ ಲೋಪದ ಕಾರಣದಿಂದ ಈ 'ಇ' ಪ್ರತಿಯ ಐತಿಹ್ಯದಲ್ಲಿ ಆಚಾರಾಂಗಶ್ರುತಧರರಾದ ಭದ್ರಬಾಹುಸ್ವಾಮಿಯವರು ಈ ಹೆಸರನ್ನು ಹೊಂದಿದ್ದ ಆಚಾರ್ಯರಲ್ಲಿ ಎರಡನೆಯವರಾಗಿರುವರೆಂಬ ಪರಿಗಣನೆಗವಕಾಶವಾಗಿರುವುದಲ್ಲದೆ ಇವರಿಂದ ಮುಂದೆ ಆರನೇ ಆಚಾರ್ಯರಾಗಿ ಪಟ್ಟಸ್ಥರಾದಂತೆ ನಿರ್ದೇಶಿತರಾಗಿರುವ ಮೂರನೆ ಭದ್ರಬಾಹುಸ್ವಾಮಿಯವರು ಅಂಗಶ್ರುತಧರರಾದ ಆಚಾರ್ಯರಲ್ಲೊಬ್ಬರೆನಿಸಿ ಗಣನೆಗೊಂಡಿಲ್ಲ. ಇಷ್ಟಲ್ಲದೆ ಈ ತೃತೀಯ ಭದ್ರಬಾಹುಸ್ವಾಮಿಯವರು ಶಕಸಂವತ್ ೧೦೪ ರಲ್ಲಿ ಪಟ್ಟಸ್ಥರಾಗಿರುವರೆಂಬ 'ಇ' ಪ್ರತಿಯ ಹೇಳಿಕೆಯು ಸರ್ವಥಾ ವಿಶ್ವಾಸಾರ್ಹವಾಗಿಲ್ಲವೆಂದು ಸನ್ಮಾನ್ಯರುಡೋಲ್ಫ್ ಹೋಎರ್ನಲ್‌ರವರು ಸ್ಪಷ್ಟಪಡಿಸಿದ್ದಾರೆ. ಈ ಆಚಾರ್ಯರು ಪಟ್ಟಸ್ಥರಾಗಿರುವರೆಂದು ನಿರ್ದೇಶಿತವಾಗಿರುವ ಮೇಲ್ಕಂಡ ಶಕಕಾಲಗಣನೆಯಲ್ಲಿ ಕಂಡುಬರುವ ೧೦೦ ವರ್ಷಗಳ ಆಧಿಕ್ಯವು ಕಲ್ಪಿತಾಂಶವಾಗಿರುವುದೆಂದು ಸನ್ಮಾನ್ಯರುಡೋಲ್ಫ್ ಹೋಎರ್ನಲ್‌ರವರ ವಿಮರ್ಶೆಯಿಂದ ಸ್ಪಷ್ಟವಾಗುವುದು. (ಇಂಡಿಯನ್ ಆಂಟಿಕ್ವೆರಿ; ವಾಲ್ಯೂಂ XXI; ಫೆಬ್ರವರಿ ಮತ್ತು ಮಾರ್ಚಿ ತಿಂಗಳು 1892; ಪು. ಸಂ. ೫೭ ರಿಂದ ೫೯) ಆದ್ದರಿಂದ ತೃತೀಯ ಭದ್ರಬಾಹುಸ್ವಾಮಿಯವರು ಶಕಸಂವತ್ ೪ ರಲ್ಲಿಯೇ ಪಟ್ಟಸ್ಥರಾಗಿರುವರೆಂದು ನಿಶ್ಚಿತವಾಗುವುದು.

ವಂತೆ ಏಕಾದಶಾಂಗಶ್ರುತಧರ ಆಚಾರ್ಯವರ್ಗ ಮತ್ತು ಆಚಾರಾಂಗಶ್ರುತಧರ ಆಚಾರ್ಯವರ್ಗಗಳ ಮಧ್ಯವರ್ತಿಯಾಗಿ ದಶ, ನವ ಮತ್ತು ಅಷ್ಟಅಂಗಶ್ರುತಧರರಾದ ಮೂವರು ಆಚಾರ್ಯರಿದ್ದಿರಬೇಕೆಂದೂ ಮತ್ತು ಇವರಲ್ಲಿ ಅಷ್ಟಅಂಗಶ್ರುತಧರ ಆಚಾರ್ಯರು 'ಭದ್ರಬಾಹು' ಎಂಬ ಹೆಸರಿನವರಾಗಿದ್ದಿರಬೇಕೆಂದೂ ಅಧಿಗತವಾಗುವುದು.

ಆಚಾರಾಂಗಶ್ರುತಧರರಾದ ಸುಭದ್ರಸ್ವಾಮಿಯವರ ಅನಂತರವರ್ತಿಯಾಗಿ ಪಟ್ಟಸ್ಥರಾಗಿರುವ ಆಚಾರ್ಯರನ್ನು ಇಂದ್ರನಂದಿಆಚಾರ್ಯವಿರಚಿತ ಶ್ರುತಾವತಾರದಲ್ಲಿ 'ಅಭಯಭದ್ರ'[1] ಎಂಬುದಾಗಿಯೂ, ತಿಲೋಯಪಣ್ಣತ್ತಿಯೇ ಮೊದಲಾದ ಇತರ ಕೃತಿಗಳಲ್ಲಿ 'ಯಶೋಭದ್ರ' ಎಂಬುದಾಗಿಯೂ ಹೆಸರಿಸಿದೆ. ಇಂತೆಯೇ ಈ ಆಚಾರ್ಯರ ಅನಂತರವರ್ತಿಯಾಗಿ ಪಟ್ಟಸ್ಥರಾಗಿರುವ ಆಚಾರ್ಯರನ್ನು ಶ್ರುತಾವತಾರದಲ್ಲಿ 'ವಿಜಯಬಾಹು' [1] ಎಂಬುದಾಗಿಯೂ, ತಿಲೋಯಪಣ್ಣತ್ತಿ, ಧವಲಾ, ಜಯಧವಲಾ ಮತ್ತು ಗುಣಭದ್ರಾಚಾರ್ಯವಿರಚಿತ ಉತ್ತರ ಪುರಾಣ ಕೃತಿಗಳಲ್ಲಿ 'ಯಶೋಬಾಹು' ಎಂಬುದಾಗಿಯೂ ಹೆಸರಿಸಿದೆಯಾದರೆ, ಜಿನಸೇನಾಚಾರ್ಯವಿರಚಿತ ಆದಿಪುರಾಣ ಹಾಗೂ ನಂ. ಆ. ಪಟ್ಟಾವಲಿ 'ಇ' ಪ್ರತಿಯಲ್ಲಿ 'ಭದ್ರಭಾಹು' ಎಂದು ಹೆಸರಿಸಿರುವುದು ವಿದಿತವಿದೆ. ಈ ರೀತಿಯಾಗಿ ಸುಭದ್ರಾಚಾರ್ಯರ ಅನಂತರದ ಇಬ್ಬರು ಆಚಾರ್ಯರನ್ನು ಹೆಸರಿಸುವಲ್ಲಿ ಕಂಡುಬರುವ ಮೇಲ್ಕಂಡ ಮತಭೇದಗಳಿಗೆ ಕಾರಣವೇನೆಂಬುದು ಆದಾಗಲೇ ಸ್ಪಷ್ಟಗೊಂಡಿದೆ. ಮೇಲ್ಕಂಡ ಹೆಸರುಗಳಲ್ಲೊಂದಾದ 'ಯಶೋಭದ್ರ ಎಂಬುದು ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಹೇಳಿಕೆಯಂತೆ ನವಅಂಗ ಶ್ರುತಧರ ಆಚಾರ್ಯರ ಹೆಸರಾಗಿದೆ. ಆದ್ದರಿಂದ ಈ ಹೆಸರಿನ ಸದೃಶತರವಾದುದೂ ಮತ್ತು 'ಭದ್ರಬಾಹು' ಎಂಬ ಹೆಸರಿನ ಬದಲಾಗಿ ನಿರ್ದೇಶಿತವಿರುವುದೂ ಆದ 'ಯಶೋಬಾಹು' ಎಂಬುದು ಸುಭದ್ರಾಚಾರ್ಯರು ಮತ್ತು ಭದ್ರಬಾಹುಸ್ವಾಮಿಯವರ ಮಧ್ಯವರ್ತಿಯಾಗಿ ಪಟ್ಟಸ್ಥರಾಗಿದ್ದ ಆಚಾರಾಂಗಶ್ರುತಧರಆಚಾರ್ಯರ ಹೆಸರಾಗಿದೆಯೆಂದು

---

1 ಇಂದ್ರನಂದಿ ಆಚಾರ್ಯ ವಿರಚಿತವಾದ 'ಶ್ರುತಾವತಾರ' ದ ಪ್ರತಿಗಳಲ್ಲಿ ಈ ಆಚಾರ್ಯರ ನಾಮನಿರ್ದೇಶನದ ವಿಷಯವಾಗಿ ಪಾಠಾಂತರಗಳೇರ್ಪಟ್ಟಿವೆಯೆಂದು ಹೇಳಲವಕಾಶವಿದೆ: 'ಧವಲಾಸಮನ್ವಿತ ಷಟ್ಖಂಡಾಗಮ_ಜೀವಸ್ಥಾನ_ಸತ್ಪ್ರರೂಪಣಾ' ಕೃತಿಯ ಸಂಪಾದಕರಾದ ಸನ್ಮಾನ್ಯ ಹೀರಾಲಾಲ್‌ಜೈರವರು ಸುಭದ್ರಾಚಾರ್ಯರ ಅನಂತರವರ್ತಿಯಾಗಿ ಪಟ್ಟಸ್ಥರಾದ ಇಬ್ಬರು ಆಚಾರ್ಯರನ್ನು ಶ್ರುತಾವತಾರದಲ್ಲಿ ಅನುಕ್ರಮವಾಗಿ 'ಅಭಯಭದ್ರ' ಮತ್ತು 'ಜಯಬಾಹು' ಎಂದು ಹೆಸರಿಸಿದೆಯೆಂದು ಹೇಳಿದ್ದಾರೆ. (ಮುನ್ನುಡಿ_ಪು. ಸಂ. ೨೭) ಆದರೆ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಕೈಬರಹದ 'ಶ್ರುತಾವತಾರ' ದ ಪ್ರತಿಯಲ್ಲಿ (ಪ್ರತಿ ಸಂ. A438) ಈ ಇಬ್ಬರು ಆಚಾರ್ಯರನ್ನು ಅನುಕ್ರಮವಾಗಿ 'ಯಶೋಭದ್ರ' ಮತ್ತು 'ವಿಜಯಬಾಹು' ಎಂದು ಹೆಸರಿಸಿದೆ.

ಗುರುತಿಸಬಹುದಾಗಿದೆ. 'ವಿಜಯ' ಎಂಬ ಹೆಸರು ದಶಪೂರ್ವಶ್ರುತಧರವರ್ಗದ ಆಚಾರ್ಯರ ಹೆಸರುಗಳಲ್ಲೊಂದಾಗಿ ಪಟ್ಟಾವಲಿಯೇ ಮೊದಲಾದ ಕೃತಿಗಳಲ್ಲಿ ನಿರ್ದೇಶಿತವಿರುವುದಾದರೂ ಶ್ರ. ಬೆಳಗೊಳದ ೧ ನೇ ಶಾಸನದಲ್ಲಿ ಉತ್ಕೀರ್ಣಗೊಂಡಿರುವ ದಶಪೂರ್ವಿವರ್ಗದ ಆಚಾರ್ಯರ ಹೆಸರುಗಳಲ್ಲಿ ಈ ಹೆಸರು ಸ್ಥಾನಪಡೆದಿಲ್ಲವೆಂದೂ ಆದ್ದರಿಂದ ಪಟ್ಟಾವಲಿಯೇ ಮೊದಲಾದ ಕೃತಿಗಳಲ್ಲಿ ಈ ಹೆಸರು ಬೇರೊಂದು ವರ್ಗದಿಂದ ಸ್ಥಾನಪಲ್ಲಟಪೂರ್ವಕ ದಶಪೂರ್ವಿವರ್ಗದಲ್ಲಿ ಸ್ಥಾನಪಡೆದಿರಬಹುದಾದ ಸಂಭವವಿದೆಯೆಂದೂ ಹಿಂದೆ ಹೇಳಿದೆ. ಶ್ರುತಾವತಾರದಲ್ಲಿ ಪುನಃ ಈ ಹೆಸರು ಮೇಲೆ ಹೇಳಿರುವಂತೆ, 'ವಿಜಯಬಾಹು' ಎಂಬ ರೂಪಾಂತರದೊಡನೆ 'ಭದ್ರಬಾಹು' ಎಂಬ ಹೆಸರಿನ ಸ್ಥಾನವರ್ತಿಯಾಗಿ ನಿರ್ದೇಶಿತವಿರುವುದು ವಿದಿತವಿದೆ. ಇದರಿಂದ ಈ ಹೆಸರು ಏಕಾದಶಾಂಗ ಶ್ರುತಧರ ಆಚಾರ್ಯವರ್ಗದ ಅನಂತರಕಾಲೀನರಾದ ಆಚಾರ್ಯರೊಬ್ಬರ ಹೆಸರಾಗಿದ್ದಿರಬೇಕೆಂದು ಭಾವಿಸಲವಕಾಶವಾಗುವುದಲ್ಲದೆ ಈ ಹೆಸರು ವಾಸ್ತವವಾಗಿ ದಶಅಂಗ ಶ್ರುತಧರ ಆಚಾರ್ಯರ ಹೆಸರಾಗಿದ್ದಿರಬೇಕೆಂದೂ ಮತ್ತು ಪಟ್ಟಾವಲಿಗಳಲ್ಲಿ ಇದು ದಶಪೂರ್ವಶ್ರುತಧರ ಆಚಾರ್ಯರಲ್ಲೊಬ್ಬರ ಹೆಸರೆನಿಸಿ ಸ್ಥಾನಪಲ್ಲಟಗೊಂಡು ಉಳಿದು ಬಂದಿರುವುದೆಂದೂ ಗ್ರಹಿಸಲವಕಾಶವಾಗುವುದು. ಈ ರೀತಿಯಾಗಿ ದಶ, ನವ ಮತ್ತು ಅಷ್ಟಅಂಗಶ್ರುತಧರ ಆಚಾರ್ಯರು ಅನುಕ್ರಮವಾಗಿ ವಿಜಯ, ಯಶೋಭದ್ರ ಮತ್ತು ಭದ್ರಬಾಹು ಎಂಬ ಹೆಸರಿನವರಾಗಿರುವರೆಂದು ಅಧಿಗತವಾಗುವುದಲ್ಲದೆ ಮೇಲೆ ಹೇಳಿದ ನಾಮಭೇದಗಳಲ್ಲೊಂದಾಗಿ ಉಳಿದಿರುವ 'ಅಭಯಭದ್ರ' ಎಂಬುದು ಆಚಾರಾಂಗಶ್ರುತಧರವರ್ಗದ ಪ್ರಥಮ ಆಚಾರ್ಯರ ಹೆಸರಾಗಿದೆಯೆಂದು ನಿಶ್ಚಿತವಾಗುವುದು.

ಏಕಾದಶಾಂಗಶ್ರುತಧರವರ್ಗದ ಆಚಾರ್ಯರ ಸಮಷ್ಟಿಪಟ್ಟಕಾಲವು ೧೮೩ ವರ್ಷಮಾನವುಳ್ಳದ್ದಾಗಿದೆಯೆಂದು ಹಿಂದೆ ವಿವರಿಸಲಾಗಿದೆ. ನಂ. ಆ. ಪಟ್ಟಾವಲಿ 'ಎ' ಪ್ರತಿಯನುಸೃತವಾದ ಐತಿಹ್ಯದ ಹೇಳಿಕೆಯಂತೆ ಏಕಾದಶಾಂಗಶ್ರುತಧರ ಆಚಾರ್ಯರು ಮತ್ತು ದಶ, ನವ, ಅಷ್ಟ ಅಂಗಶ್ರುತಧರ ಆಚಾರ್ಯರ ಸಮಷ್ಟಿಪಟ್ಟಕಾಲವು ೨೨೦ ವರ್ಷಮಾನವುಳ್ಳದ್ದಾಗಿದೆ. ಇದರಿಂದ ಪೂರ್ವೋಕ್ತರಾದ ದಶ, ನವ ಮತ್ತು ಅಷ್ಟ ಅಂಗಶ್ರುತಧರರಾದ ಮೂವರು ಆಚಾರ್ಯರ ಒಟ್ಟು ಪಟ್ಟಕಾಲವು (೨೨೦ – ೧೮೩=) ೮೭ ವರ್ಷಮಾನವುಳ್ಳದ್ದಾಗಿದೆಯೆಂದು ಪರಿಗಣಿತವಾಗುವುದು. ಶ್ರುತಧರಆಚಾರ್ಯ ಸಂತತಿಯ ಪ್ರತ್ಯೇಕ ಪಟ್ಟಕಾಲನಿರೂಪಕವಾದ ಪೂರ್ವೋಲ್ಲಿಖಿತ ಗಾಹಾಗತ ಐತಿಹ್ಯದಲ್ಲಿ ವಿಜಯ ಆಚಾರ್ಯರನ್ನು ದಶಪೂರ್ವಿವರ್ಗದ ಆಚಾರ್ಯರಲ್ಲೊಬ್ಬರನ್ನಾಗಿ ನಿರ್ದೇಶಿಸಿ, ಇವರ ಪಟ್ಟಕಾಲವನ್ನು ೧೩ ವರ್ಷಮಾನವುಳ್ಳದ್ದನ್ನಾಗಿ ನಿರ್ದೇಶಿಸಿರುವುದು ಸ್ಪಷ್ಟವಿದೆ. ಈ ಹಿಂದಿನ ವಿವರಣೆಯನುಗುಣವಾಗಿ ವಿಜಯ ಆಚಾರ್ಯರು ದಶಅಂಗಶ್ರುತಧರ ಆಚಾರ್ಯರಾಗಿರುವರಾದ್ದರಿಂದ ಇವರ ಪಟ್ಟಕಾಲವನ್ನು ೧೩ ವರ್ಷಗಳೆಂದು ಗಣನೆಮಾಡಬಹುದಾಗಿದೆ. ಇಂತೆಯೇ ಪೂರ್ವೋಲ್ಲಿಖಿತಗಾಹೆಗಳಲ್ಲಿ ದಶ, ನವ ಅಂಗಶ್ರುತಧರರೀರ್ವರು ಮತ್ತು ಅಷ್ಟಅಂಗಶ್ರುತಧರರೀರ್ವರ ಪಟ್ಟಕಾಲ

ಗಳೆನಿಸಿ ನಿರ್ದೇಶಿತವಿರುವ ೬, ೧೮, ೨೩ ಮತ್ತು ೫೨ ವರ್ಷಮಾನಗಳಲ್ಲಿ ಮೊದಲ ಮೂರು ಪಟ್ಟಕಾಲಗಳು ಆಚಾರಾಂಗಶ್ರುತಧರರಾದ ಸುಭದ್ರ, ಯಶೋಬಾಹು ಮತ್ತು ಭದ್ರಬಾಹು ಎಂಬ ಮೂವರು ಆಚಾರ್ಯರ ಪಟ್ಟಕಾಲಗಳಾಗಿವೆಯೆಂದು ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟಿದೆ. ಆದ್ದರಿಂದ ಅಷ್ಟಅಂಗಶ್ರುತಧರ ಆಚಾರ್ಯರ ಪಟ್ಟ ಕಾಲವೆನಿಸಿ ಅವಶಿಷ್ಟವಿರುವ ೫೨ ವರ್ಷಕಾಲವು ಅಷ್ಟಅಂಗಶ್ರುತಧರರಾದ ಭದ್ರಬಾಹು ಸ್ವಾಮಿಯವರ ಪಟ್ಟಕಾಲವಾಗಿದೆಯೆಂದು ಗುರುತಿಸಲವಕಾಶವಾಗುವುದು. ಈ ರೀತಿ ಯಾಗಿ ದಶ ಮತ್ತು ಅಷ್ಟಅಂಗಶ್ರುತಧರ ಆಚಾರ್ಯರೀರ್ವರ ಒಟ್ಟು ಪಟ್ಟಕಾಲವು (೧೩ + ೫೨ =) ೬೫ ವರ್ಷಮಾನವುಳ್ಳದ್ದಾಗುವುದರಿಂದ ಇವರೀರ್ವರ ಮಧ್ಯವರ್ತಿ ಕಾಲೀನರಾದ ನವ ಅಂಗಶ್ರುತಧರ ಯಶೋಭದ್ರಸ್ವಾಮಿಯವರು (೮೧ – ೬೫=)೧೬ ವರ್ಷಕಾಲ ಪಟ್ಟಸ್ಥರಾಗಿದ್ದರೆಂದು ಅಧಿಗತವಾಗುವುದು. ಈ ಯಶೋಭದ್ರಸ್ವಾಮಿ ಯವರ ತರುವಾಯ ವೀ. ನಿ. ಪ. ೫೧೩ ನೇ ವರ್ಷದಿಂದ ಮುಂದೆ ವೀ. ನಿ. ಪ. ೫೬೫ ನೇ ವರ್ಷಪರ್ಯಂತ ೫೨ ವರ್ಷಕಾಲ ಅಷ್ಟಅಂಗಶ್ರುತಧರ ಭದ್ರಬಾಹುಸ್ವಾಮಿ ಯವರು ಆಚಾರ್ಯಪಟ್ಟಸ್ಥರಾಗಿದ್ದರೆಂದು ಈ ಹಿಂದಿನ ವಿವರಣೆಯಿಂದ ಸ್ಪಷ್ಟ ಗೊಂಡಿದೆ.

ಶ್ವೇತಾಂಬರ ಜೈನ ಆಮ್ನಾಯದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯದಲ್ಲಿ ಉಜ್ಜಯಿನಿಯ ಅಧಿಪತಿಯಾಗಿದ್ದ ವಿಕ್ರಮಾದಿತ್ಯನ ಸಮಕಾಲೀನರೂ ಮತ್ತು ವರಾಹಮಿಹಿರಾಚಾರ್ಯರ ಸಹೋದರರೂ ಆದ ಅಷ್ಟಅಂಗಶ್ರುತಧರ ಭದ್ರ ಬಾಹುಸ್ವಾಮಿಯವರ ಐತಿಹ್ಯವು ಸಂಮಿಶ್ರಿತವಾಗಿರುವುದೆಂದು ಹಿಂದೆ ವಿವರಿಸಿದೆ. ವಿಕ್ರಮಾದಿತ್ಯನು ವೀ. ನಿ. ಪ. ೪೯೫ ನೇ ವರ್ಷದಲ್ಲಿ ಸಿಂಹಾಸನಾಧಿಷ್ಠಿತನಾಗಿ ಮುಂದೆ ೫೬ ವರ್ಷಕಾಲ ವೀ. ನಿ. ಪ. (೪೯೫ + ೫೬=) ೫೫೧ ನೇ ವರ್ಷಪರ್ಯಂತ ರಾಜ್ಯ ಭಾರಮಾಡಿರುವನಾದ್ದರಿಂದ ಇವನ ಸಮಕಾಲೀನರಾಗಿ ಅಷ್ಟಅಂಗಶ್ರುತಧರ ಭದ್ರ ಬಾಹುಸ್ವಾಮಿಯವರು ಆಚಾರ್ಯಪಟ್ಟಸ್ಥರಾಗಿದ್ದರೆಂದೂ ಮತ್ತು ಇವನ ರಾಜ್ಯಭಾರ ಸಮಯದಿಂದ (೫೬೫ – ೪೯೫=ವಿಕ್ರಮಸಂವತ್) ೭೦ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿ ರುವರೆಂದೂ ನಿಶ್ಚಿತವಾಗುವುದು. ಇಂತೆಯೇ ಶ್ವೇತಾಂಬರ ಜೈನ ಆಮ್ನಾಯದ ಶ್ರುತ ಕೇವಲಿ ಭದ್ರಬಾಹುಸ್ವಾಮಿ ಕಥಾನಕದ ಪರಿಶೀಲನದಿಂದ ಅಷ್ಟಅಂಗಶ್ರುತಧರ ಭದ್ರ ಬಾಹುಸ್ವಾಮಿಯವರು ಮತ್ತು ವರಾಹಮಿಹಿರಾಚಾರ್ಯರೀರ್ವರೂ ಸಹೋದರರಾಗಿದ್ದ ರೆಂದೂ ಮತ್ತು ವರಾಹಮಿಹಿರಾಚಾರ್ಯರು ತಮ್ಮ ಸಹೋದರರಾದ (ದ್ವಿ) ಭದ್ರ ಬಾಹುಸ್ವಾಮಿಯವರಿಂದ ಪೂರ್ವಭಾವಿಯಾಗಿಯೇ ಸ್ವರ್ಗಸ್ಥರಾಗಿರುವರೆಂದೂ ಹಾಗೂ ವರಾಹಮಿಹಿರಾಚಾರ್ಯರು ವಿಜಯಾಭಿನಂದನ ಶಕ ವರ್ಷ (=ನಂದರಾಜಶಕೆ) ೫೦೯ ರಲ್ಲಿ ಸ್ವರ್ಗಸ್ಥರಾಗಿರುವರೆಂದೂ ಹಿಂದೆ ವಿವರಿಸಿದೆ. ಇದರಂತೆ ವರಾಹಮಿಹಿರಾ ಚಾರ್ಯರು ವೀ. ನಿ. ಪ. (೫೨ + ೫೦೯ =) ೫೬೧ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರು ವರೆಂದು ಪರಿಗಣಿತವಾಗುವುದಾದ್ದರಿಂದ ಇವರು ತಮ್ಮ ಸಹೋದರರಾದ (ದ್ವಿ) ಭದ್ರ

ಬಾಹುಸ್ವಾಮಿಯವರಿಂದ (೫೬೫ – ೫೬೧=) ೪ ವರ್ಷ ಪೂರ್ವಭಾವಿಯಾಗಿಯೇ ಸ್ವರ್ಗಸ್ಥರಾಗಿರುವರೆಂದು ನಿರ್ದೇಶಿತವಾಗುವುದಾಗಿ ಪೂರ್ವೋಕ್ತ ಐತಿಹ್ಯಾಂಶವು ಸ್ಥಿರೀಕೃತವಾಗುವುದು. ಈ ರೀತಿಯಾಗಿ ವಿಕ್ರಮಾದಿತ್ಯ, ವರಾಹಮಿಹಿರಾಚಾರ್ಯರು ಮತ್ತು ಅಷ್ಟಅಂಗಶ್ರುತಧರ ಭದ್ರಬಾಹು ಸ್ವಾಮಿಯವರು ಸಮಕಾಲೀನರಾದ ಐತಿಹಾಸಿಕ ವ್ಯಕ್ತಿಗಳಾಗಿರುವರೆಂದು ನಿರಾಬಾಧವಾಗಿ ಸಿದ್ಧವಾಗುವುದು.

ಅಷ್ಟಅಂಗಶ್ರುತಧರ ಭದ್ರಬಾಹುಸ್ವಾಮಿಯವರ ಐತಿಹ್ಯದ ಪ್ರಧಾನಾಂಶವು, ಶ್ವೇತಾಂಬರ ಜೈನ ಆಮ್ನಾಯದಲ್ಲಿ ಶ್ರು. ಕೇವಲಿ ಭದ್ರಬಾಹುಸ್ವಾಮಿಯವರ ಐತಿಹ್ಯವಾಗಿ ಪರಿವರ್ತನೆಹೊಂದಿದೆಯೆಂಬುದು ಸ್ಥಿರಪಟ್ಟಿದೆ. ಇಂತೆಯೇ ಅಷ್ಟಅಂಗಶ್ರುತಧರ ಭದ್ರಬಾಹುಸ್ವಾಮಿಯವರಿಂದ ಪೂರ್ವಭಾವಿಯಾಗಿ ಪಟ್ಟಸ್ಥರಾಗಿದ್ದ ನವಅಂಗಶ್ರುತಧರ ಯಶೋಭದ್ರಸ್ವಾಮಿಯವರು ಮತ್ತು ದಶಅಂಗಶ್ರುತಧರ ವಿಜಯಸ್ವಾಮಿಯವರೀರ್ವರೂ ಶ್ವೇತಾಂಬರ ಜೈನ ಆಮ್ನಾಯದಲ್ಲಿ ಶ್ರು. ಕೇವಲಿ ಭದ್ರಬಾಹುಸ್ವಾಮಿಯವರಿಂದ ಪೂರ್ವಭಾವಿಯಾಗಿ ಪಟ್ಟಸ್ಥರಾಗಿದ್ದ ಶ್ರುತಕೇವಲಿ ಆಚಾರ್ಯದ್ವಯವೆನಿಸಿ ನಿರ್ದೇಶಿತರಾಗಿರುವರೆಂದು ಹೇಳಲವಕಾಶವಿದೆ: ಶ್ರುತಕೇವಲಿ ಯಶೋಭದ್ರಸ್ವಾಮಿಯವರು ತಮ್ಮ ಜೀವಿತಾಂತ್ಯಸಮಯದಲ್ಲಿ ಶ್ರುತಕೇವಲಿಗಳಾದ ಸಂಭೂತಿ-ವಿಜಯಸ್ವಾಮಿಯವರನ್ನು ಮತ್ತು ಭದ್ರಬಾಹುಸ್ವಾಮಿಯವರನ್ನು ಜೋಡಿಯಾಗಿ ಯತಿಸಂಘದ ಆಚಾರ್ಯರನ್ನಾಗಿ ನಿಯೋಜಿಸಿದರೆಂದು ಶ್ವೇತಾಂಬರ ಆಮ್ನಾಯದಲ್ಲಿ ಹೇಳಿದೆ.[1] ಇದರಿಂದ ನವಅಂಗಶ್ರುತಧರ ಯಶೋಭದ್ರಸ್ವಾಮಿಯವರ ಪಟ್ಟಾನುಕ್ರಮವು ಶ್ವೇತಾಂಬರ ಜೈನ ಆಮ್ನಾಯದಲ್ಲಿ ಶ್ರು. ಕೇವಲಿ ಯಶೋಭದ್ರಸ್ವಾಮಿಯವರು ಮತ್ತು ಶ್ರು. ಕೇ. ಭದ್ರಬಾಹುಸ್ವಾಮಿಯವರ ಪಟ್ಟಾನುಕ್ರಮವೆನಿಸಿ ಪರಿವರ್ತಿತವಾಗಿದೆಯೆಂದು ಗುರುತಿಸಲವಕಾಶವಾಗುವುದು. ಶ್ರು ಕೇವಲಿ ಸಂಭೂತಿವಿಜಯಸ್ವಾಮಿಯವರು ಶ್ರು. ಕೇವಲಿ ಯಶೋಭದ್ರಸ್ವಾಮಿಯವರ ತರುವಾಯದಲ್ಲಿ ಆಚಾರ್ಯಪಟ್ಟಸ್ಥರಾದರೆಂಬ ಐತಿಹ್ಯದಂತೆ ಸಂಭೂತಿವಿಜಯಸ್ವಾಮಿಯವರ ಶಿಷ್ಯರಲ್ಲೊಬ್ಬರು 'ಯಶೋಭದ್ರ' ಎಂಬ ಹೆಸರಿನವರಾಗಿದ್ದರೆಂಬ ಐತಿಹ್ಯವೂ ಶ್ವೇತಾಂಬರ ಆಮ್ನಾಯದಲ್ಲಿ ಉಳಿದುಬಂದಿದೆ.[1] ಇದರಿಂದ ದಶಅಂಗಶ್ರುತಧರ ವಿಜಯಸ್ವಾಮಿಯವರು ಮತ್ತು ನವಅಂಗಶ್ರುತಧರ ಯಶೋಭದ್ರಸ್ವಾಮಿಯವರ ಗುರು-ಶಿಷ್ಯಾನುಕ್ರಮವು, ಶ್ವೇತಾಂಬರ ಜೈನ ಆಮ್ನಾಯದಲ್ಲಿ ಶ್ರು. ಕೇವಲಿ ಸಂಭೂತಿವಿಜಯಸ್ವಾಮಿ ಮತ್ತು ಯಶೋಭದ್ರಸ್ವಾಮಿಯವರ ಗುರು-ಶಿಷ್ಯಾನುಕ್ರಮವಾಗಿ ಪರಿವರ್ತಿತವಾಗಿರುವುದೆಂದು ಪರಿಭಾವಿತವಾಗುವುದು. ಈ ರೀತಿಯಾಗಿ ದಶ, ನವ ಮತ್ತು ಅಷ್ಟಅಂಗಶ್ರುತಧರರಾದ ವಿಜಯ, ಯಶೋಭದ್ರ ಮತ್ತು ಭದ್ರಬಾಹುಸ್ವಾಮಿಯವರ ಅನುಕ್ರಮವು ಸ್ವಲ್ಪಮಾತ್ರವ್ಯತ್ಯಾಸದೊಡನೆ ಶ್ವೇತಾಂಬರ ಆಮ್ನಾಯದಲ್ಲಿ

---

1 ಪೂ. ಸೂ. 'ಶ್ರ. ಭ. ಮಹಾವೀರ'_ಪು. ಸಂ. ೨೦೬ ಮತ್ತು ೨೧೦.

ಶ್ರುತಕೇವಲಿ ಆಚಾರ್ಯತ್ರಯದ ಅನುಕ್ರಮವೆನಿಸಿ ಪರಿವರ್ತಿತವಾಗಿದೆಯೆಂದು ವ್ಯಕ್ತವಾಗುವುದು.

ಶ್ರೀವೀರನಿರ್ವಾಣಸಮಯದ ಅನಂತರ ೬೮೩ ವರ್ಷಕಾಲ ಅಂಗಶ್ರುತಜ್ಞಾನ ಧಾರೆಯು ಆಚಾರ್ಯಾನುಕ್ರಮದಲ್ಲಿ ಅನುಬದ್ಧರೀತಿಯಿಂದ ಉಳಿದುಬಂದ ಬಗೆಯು ಈವರೆವಿಗಿನ ವಿಚಾರಸರಣಿಯಿಂದ ಸ್ಪಷ್ಟಗೊಂಡಿದೆ. ಈ ವಿಚಾರಸರಣಿಯನುಗುಣ ವಾಗಿ ಪರಿಷ್ಕರಣಗೊಂಡಿರುವ ಆಚಾರ್ಯಾನುಕ್ರಮವು ಈ ಮುಂದಿನಂತಿದೆ :

ಶ್ರೀ ವೀರನಿರ್ವಾಣಾನಂತರ :

| | ಪಟ್ಟವರ್ಷಕಾಲ | ವೀ. ನಿ. ಪ. ವರ್ಷ |
|---|---|---|
| **ಕೇವಲಿಗಳು :** | | |
| ೧)-೧ ಗೌತಮಸ್ವಾಮಿ | ೧೨ ವರ್ಷ | ೧೨ |
| ೨)-೨ ಸುಧರ್ಮಸ್ವಾಮಿ | ೧೨ " | ೨೪ |
| ೩)-೩ ಜಂಬೂಸ್ವಾಮಿ | ೩೮ " | ೬೨ |
| ಮೊತ್ತ | [೬೨ " ] | |
| **ಶ್ರುತಕೇವಲಿಗಳು :** | | |
| ೪)-೧ ನಂದಿ-ವಿಷ್ಣು | ೧೪ ವರ್ಷ | ೭೬ |
| ೫)-೨ ದೇವ-ನಂದಿ | ೧೬ " | ೯೨ |
| ೬)-೩ ಅಪರಾಜಿತ | ೨೨ " | ೧೧೪ |
| ೭)-೪ ಗೋವರ್ಧನ | ೧೯ " | ೧೩೩ |
| ೮)-೫ (ಪ್ರ) ಭದ್ರಬಾಹು | ೨೯ " | ೧೬೨ |
| ಮೊತ್ತ | [೧೦೦ " ] | |
| **ದಶಪೂರ್ವಿಗಳು :** | | |
| ೯)-೧ ವಿಶಾಖ | ೪೭ ವರ್ಷ | ೨೦೯ |
| ೧೦)-೨ ಪ್ರೋಷ್ಠಿಲ | ೧೫ " | ೨೨೪ |
| ೧೧)-೩ ಕ್ಷತ್ರಿಯ | ೧೭ " | ೨೪೧ |
| ೧೨)-೪ ಆರ್ಯ | ೧೦ " | ೨೫೧ |
| ೧೩)-೫ ಜಯ (ಸೇನ) | ೨೧ " | ೨೭೨ |
| ೧೪)-೬ ನಾಗ (ಸೇನ) | ೧೮ " | ೨೯೦ |
| ೧೫)-೭ ಸಿದ್ಧಾರ್ಥ | ೧೭ " | ೩೦೭ |
| ೧೬)-೮ ಧೃತಿಸೇನ | ೧೮ " | ೩೨೫ |
| ೧೭)-೯ ಬುದ್ಧಿಲಿಂಗ | ೨೦ " | ೩೪೫ |
| ಮೊತ್ತ | [೧೮೩ " ] | |

ಏಕಾದಶಾಂಗಶ್ರುತಧರರು ಹಾಗೂ

ದಶ, ನವ ಮತ್ತು ಅಷ್ಟ ಅಂಗಶ್ರುತಧರರು :

| | | |
|---|---|---|
| ೧೮)–೧ ಧರ್ಮಸೇನ | ೧೬ ವರ್ಷ | ೩೬೧ |
| ೧೯)–೨ ನಕ್ಷತ್ರ | ೧೮ " | ೩೭೯ |
| ೨೦)–೩ ಜಯಪಾಲಕ | ೨೦ " | ೩೯೯ |
| ೨೧)–೪ ಪಾಂಡು | ೩೯ " | ೪೩೮ |
| ೨೨)–೫ ಧ್ರುವಸೇನ | ೧೪ " | ೪೫೨ |
| ೨೩)–೬ ಕಂಸ | ೩೨ " | ೪೮೪ |
| ೨೪)–೭ ವಿಜಯ | ೧೩ " | ೪೯೭ |
| ೨೫)–೮ ಯಶೋಭದ್ರ | ೧೬ " | ೫೧೩ |
| ೨೬)–೯ (ದ್ವಿ) ಭದ್ರಬಾಹು | ೫೨ " | ೫೬೫ |

ಮೊತ್ತ [೨೨೦ " ]

ಆಚಾರಾಂಗಶ್ರುತಧರರು :

| | | |
|---|---|---|
| ೨೭)–೧ ಅಭಯಭದ್ರ | ೨೧ ವರ್ಷ | ೫೮೬ |
| ೨೮)–೨ ಸುಭದ್ರ | ೬ " | ೫೯೨ |
| ೨೯)–೩ ಯಶೋಬಾಹು | ೧೮ " | ೬೧೦ |
| ೩೦)–೪ (ತೃ) ಭದ್ರಬಾಹು | ೨೩ " | ೬೩೩ |
| ೩೧)–೫ ಲೋಹಾಚಾರ್ಯ | ೫೦ " | ೬೮೩ |

ಮೊತ್ತ [೧೧೮ " ]

**ನಿರ್ಗ್ರಂಥಯತಿಗಳ ಮೂಲಸಂಘದ ಶಾಖಾಸಂಘಗಳು :** ಶ್ರೀ ವೀರ ನಿರ್ವಾಣಪಶ್ಚಾತ್ ೬೮೩ ವರ್ಷಪರ್ಯಂತಕಾಲದ ಶ್ರುತಧರ ಆಚಾರ್ಯಾನುಕ್ರಮದ ಐತಿಹ್ಯಪ್ರರೂಪಣೆಯು ಅವಿಚ್ಛಿನ್ನರೀತಿಯಿಂದ ಶ್ರುತಜ್ಞಾನವು ಉಳಿದುಬಂದ ಬಗೆಯನ್ನು ವಿವರಿಸುವ ಮೂಲೋದ್ದೇಶವುಳ್ಳದ್ದಾಗಿದೆಯೆಂದು ಹಿಂದೆ ವಿವರಿಸಿದೆ. ಆಚಾರಾಂಗಶ್ರುತಧರರಲ್ಲಿ ನಾಲ್ಕನೆಯವರಾದ (ತೃ) ಭದ್ರಬಾಹುಸ್ವಾಮಿಯವರ[1] ಜೀವಿತಾಂತ್ಯಸಮಯದಲ್ಲಿ ಹಾಗೂ ತದನಂತರ ಸಮಯದಲ್ಲಿ ಸಂಘಟಿಸಿದ ಹಲವಾರು ಘಟನೆಗಳ ಪರಿಣಾಮವಾಗಿ ಯತಿಸಂಘದ ಆಚಾರ್ಯಾನುಕ್ರಮದ ಐತಿಹ್ಯ ಮತ್ತು ಶ್ರುತಜ್ಞಾನಪ್ರವರ್ತನೆಯ ಐತಿಹ್ಯಾಂಶಗಳು ಪ್ರತ್ಯೇಕತಾರೂಪವನ್ನು ತಳೆದಿವೆ. (ತೃ) ಭದ್ರಬಾಹುಸ್ವಾಮಿಯವರ ಜೀವಿತಾಂತ್ಯಸಮಯಸಂಬಂಧಿಯಾದ ಐತಿಹ್ಯವು

---

1 ಆಚಾರಾಂಗಶ್ರುತಧರ ಭದ್ರಬಾಹುಸ್ವಾಮಿಯವರನ್ನು ಇನ್ನು ಮುಂದೆ '(ತೃ) ಭದ್ರಬಾಹುಸ್ವಾಮಿ' ಎಂದು ನಿರ್ದೇಶಿಸಲಾಗುವುದು.

ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ನಿರೂಪಿತವಾಗಿರುವುದೆಂದು ಹಿಂದೆ ಶ್ರುತಪಡಿಸಿದೆ. ಈ ಆಚಾರ್ಯರು ಕಳ್ಬಪ್ಪುವನ್ನು (ಶ್ರ. ಬೆಳಗುಳವನ್ನು) ಸಂಘಸಮೇತರಾಗಿ ಸೇರಿದ ಬಳಿಕ ತಮ್ಮ ಅವಸಾನಕಾಲವು ಸಮೀಪವರ್ತಿಯಾಗಿರುವುದನ್ನು ತಿಳಿದು, ಸಂಘದ ಅನುಮತಿಪೂರ್ವಕ ಸಲ್ಲೇಖನವನ್ನು ಕೈಗೊಂಡು 'ಪ್ರಭಾಚಂದ್ರ' ಎಂಬ ಶಿಷ್ಯರೊಬ್ಬರ ಹೊರತಾಗಿ ಸಂಘಕ್ಕೆ ಪಯಣವನ್ನು ಮುಂದುವರಿಸುವಂತೆ ಆದೇಶವಿತ್ತರೆಂದು ಪೂರ್ವೋಕ್ತಶಾಸನದ ಹೇಳಿಕೆಯಿರುವುದು ಸ್ಪಷ್ಟವಿದೆ. ಈ ರೀತಿಯಾಗಿ ಯತಿ ಸಂಘಕ್ಕೆ ಮುಂದೆ ಪಯಣಮಾಡುವಂತೆ ಆದೇಶವಿತ್ತ ಸಮಯದಲ್ಲಿ (ತೃ) ಭದ್ರಬಾಹು ಸ್ವಾಮಿಯವರು ತಮ್ಮ ಶಿಷ್ಯಾಗ್ರೇಸರರಲ್ಲೊಬ್ಬರನ್ನು ಸಮಸ್ತ ಯತಿಸಂಘದ ಪ್ರಧಾನಾಚಾರ್ಯರನ್ನಾಗಿ ನಿಯೋಜಿಸಿರುವರೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ಸಮಯದಲ್ಲಿ ಯತಿಸಂಘದ ಪ್ರಧಾನಾಚಾರ್ಯರಾಗಿ ನಿಯೋಜಿತರಾದ ಯತಿವರ್ಯರ ಹೆಸರನ್ನು ಈ ಶಾಸನದಲ್ಲಿ ನಿರ್ದೇಶಿಸಿಲ್ಲವಾಗಿರುವುದರಿಂದ ಆಧಾರಾಂತರಗಳನ್ನಾಶ್ರಯಿಸಿ ನಿರ್ಣಯಿಸಬೇಕಾಗಿದೆ. ಸದ್ಯದಲ್ಲಿ ಉಪಲಬ್ಧವಿರುವ ಈ ಮುಂದಿನ ಐತಿಹ್ಯೋಕ್ತಿಗಳು (ತೃ) ಭದ್ರಬಾಹುಸ್ವಾಮಿಯವರ ಅನಂತರವರ್ತಿಯಾಗಿ ಆಚಾರ್ಯಪಟ್ಟಸ್ಥರಾದ ಆ ಯತಿವರ್ಯರಾರೆಂಬುದನ್ನು ಗುರುತಿಸಲು ಸಹಕಾರಿಯಾಗಿವೆ :

> ಶ್ರೀಮಾನಶೇಷನರನಾಯಕವಂದಿತಾಂಘ್ರಿಃ
> ಶ್ರೀಗುಪ್ತಿಗುಪ್ತ ಇತಿ ವಿಶ್ರುತನಾಮಧೇಯಃ ।
> ಯೋ ಭದ್ರಬಾಹುಮುನಿಪುಂಗವಪಟ್ಟಪದ್ಮಃ
> ಸೂರ್ಯಃ ಸ ವೋ ದಿಶತು ನಿರ್ಮಲಸಂಘವೃದ್ಧಿಂ ||

['ಪಾಕ್ಷಿಕ ಪ್ರತಿಕ್ರಮಣ ಕ್ರಿಯಾಂತರ್ಗತ ಗುರುನಾಮಾವಲಿ'
ಎಕ್ಸ್‌ಟ್ರಾ ನಂ. ಆಫ್ ದಿ ಜರ್ನಲ್ ಆಫ್ ದಿ ಬಾಂಬೆ ಬ್ರಾಂಚ್
ರಾಯಲ್ ಏಷಿಯಾಟಿಕ್ ಸೊಸೈಟಿ-1883]

ಮೇಲ್ಕಂಡ ಪದ್ಯದ ಹೇಳಿಕೆಯಿಂದ ಭದ್ರಬಾಹುಸ್ವಾಮಿಯವರ ಅನಂತರ 'ಶ್ರೀಗುಪ್ತಿಗುಪ್ತ' ಎಂಬುವರು ಆಚಾರ್ಯಪಟ್ಟಸ್ಥರಾಗಿರುವರೆಂದು ಸೂಚಿತವಾಗುವುದು. ನಂ. ಆ. ಪಟ್ಟಾವಲಿ ಪ್ರತಿಗಳ ಹೇಳಿಕೆಯಿಂದಲೂ ಭದ್ರಬಾಹುಸ್ವಾಮಿಯವರ ತರುವಾಯ ಗುಪ್ತಿಗುಪ್ತಸ್ವಾಮಿಯವರು ಆಚಾರ್ಯಪಟ್ಟಸ್ಥರಾಗಿರುವರೆಂದು ಸಮರ್ಥಿತವಾಗುವುದಲ್ಲದೆ ಇವರಿಗೆ 'ಅರ್ಹದ್ಬಲಿ' ಮತ್ತು 'ವಿಶಾಖಾಚಾರ್ಯ' ಎಂಬ ಮತ್ತೆರಡು ಹೆಸರುಗಳಿದ್ದುವೆಂದೂ ನಿರ್ದೇಶಿತವಾಗುವುದು. ಹಿಂದೆ ಉಲ್ಲೇಖಿಸಿರುವ ನಂ. ಆ. ಪಟ್ಟಾವಲಿ 'ಎ' ಪ್ರತಿಯ ೧೬ ನೇ ಗಾಹೆಯಲ್ಲಿರುವ 'ಅಹಿವಲ್ಲಿ' ಎಂಬ ಹೆಸರು ಮತ್ತು ರಾಜಾಸ್ಥಾನೀಭಾಷಾಗತ ಐತಿಹ್ಯದಲ್ಲಿರುವ 'ಅರ್ಹದ್ಬಲಿ' ಎಂಬ ಹೆಸರುಗಳು ಅಭಿನ್ನವ್ಯಕ್ತಿನಿರ್ದೇಶಕವಾದವುಗಳಾಗಿವೆಯೆಂದು ಸನ್ಮಾನ್ಯ ಹೋಏರ್ನಲ್

ರವರು ಅಭಿಪ್ರಾಯಪಟ್ಟಿದ್ದಾರೆ. ನಂ. ಆ. ಪಟ್ಟಾವಲಿ 'ಸಿ' ಪ್ರತಿಯಲ್ಲಿರುವ ಗಾಹೆಯ ರಾಜಾಸ್ಥಾನೀ ಭಾಷಾನುವಾದದಲ್ಲಿ 'ಅಹಿವಲ್ಲಿ' ಎಂಬ ಹೆಸರನ್ನು 'ಅರ್ಹದ್ಬಲಿ' ಎಂದು ಅನುವಾದಿಸಲಾಗಿದೆ. ಶ್ರುತಾವತಾರದಲ್ಲಿಯೂ 'ಅರ್ಹದ್ಬಲಿ' ಎಂಬ ಹೆಸರೇ ಇದೆ. ಇದರಿಂದ (ತೃ) ಭದ್ರಬಾಹುಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾದ ಆಚಾರ್ಯರನ್ನು ನಿರ್ದೇಶಿಸುವಲ್ಲಿ ದಿಗಂಬರ ಆಮ್ನಾಯದಲ್ಲಿ 'ಶ್ರೀಗುಪ್ತಿಗುಪ್ತ' ಎಂಬ ಹೆಸರಿಗಿಂತಲೂ 'ಅರ್ಹದ್ಬಲಿ' ಎಂಬ ಹೆಸರೇ ಹೆಚ್ಚು ಬಳಕೆಯಲ್ಲುಳಿದು ಬಂದಿತೆಂದು ವ್ಯಕ್ತವಾಗುವುದು. ಈ ಆಚಾರ್ಯರಿಗೆ 'ವಿಶಾಖಾಚಾರ್ಯ' ಎಂಬ ಮತ್ತೊಂದು ಹೆಸರೂ ಇದ್ದಿತೆಂಬ ನಂ. ಆ. ಪಟ್ಟಾವಲಿ ಪ್ರತಿಗಳ ಹೇಳಿಕೆಯು ವಿಶೇಷ ರೀತಿಯ ಐತಿಹ್ಯಾಂಶದ ದ್ಯೋತಕವಾಗಿದೆ. ದ್ವಾದಶಾಂಗಶ್ರುತಧರರಾದ ಶ್ರುತಕೇವಲಿ ಭದ್ರಬಾಹುಸ್ವಾಮಿಯವರು ಕಳ್ಬಪ್ಪುವಿನಲ್ಲಿ ಸಲ್ಲೇಖನವನ್ನು ಕೈಗೊಂಡಸಂದರ್ಭದಲ್ಲಿ ವಿಶಾಖಾಚಾರ್ಯರು ಪ್ರಧಾನಾಚಾರ್ಯಪಟ್ಟಸ್ಥರಾದರೆಂಬ ಐತಿಹ್ಯವಿರುವುದು ವಿದಿತವಿದೆ. ಇದೇ ರೀತಿಯಾಗಿ (ತೃ) ಭದ್ರಬಾಹುಸ್ವಾಮಿಯವರು ಅದೇ ಕಳ್ಬಪ್ಪುವಿನಲ್ಲಿ ಸಲ್ಲೇಖನವನ್ನು ಕೈಗೊಂಡಸಂದರ್ಭದಲ್ಲಿ ಶ್ರೀ ಗುಪ್ತಿಗುಪ್ತಸ್ವಾಮಿಯವರು ಪ್ರಧಾನಾಚಾರ್ಯಪಟ್ಟಸ್ಥರಾಗಿದ್ದಾರೆ. ಈ ರೀತಿಯಾಗಿ ವಿಶಾಖಾಚಾರ್ಯರು ಆಚಾರ್ಯಪಟ್ಟಸ್ಥರಾದ ಪ್ರಸಂಗದ ಸದೃಶರೀತಿಯ ಪ್ರಸಂಗದಲ್ಲಿ ಶ್ರೀ ಗುಪ್ತಗುಪ್ತಸ್ವಾಮಿಯವರು ಆಚಾರ್ಯಪಟ್ಟಸ್ಥರಾದರಾಗಿ ಇವರಿಗೂ 'ವಿಶಾಖಾಚಾರ್ಯ' ಎಂಬ ಹೆಸರು ಆರೂಢವಾಗಿದೆಯೆಂದು ಗ್ರಹಿಸಲವಕಾಶವಾಗುವುದು.

'(ತೃ) ಭದ್ರಬಾಹುಸ್ವಾಮಿಯವರಿಂದ ಶ್ವೇತಾಂಬರರು ಪ್ರತ್ಯೇಕಗೊಂಡು ತಮ್ಮದೇ ಆದ ಪಟ್ಟಾವಲಿಯನ್ನು ರೂಪಿಸಿಕೊಂಡರು' ಎಂಬುದಾಗಿ ನಂ. ಆ. ಪಟ್ಟಾವಲಿ 'ಇ' ಪ್ರತಿಯಲ್ಲಿ ಹೇಳಿರುವುದು ವಿದಿತವಿದೆ. ಆದರೆ ವೀ. ನಿ. ಪ. ೨೦೬ ನೇ ವರ್ಷದ ಪರಿಸರದಲ್ಲಿ ನಿರ್ಗ್ರಂಥಯತಿಗಳ ಹಲವು ಆಚಾರನಿಯಮಗಳನ್ನು ಯಥಾವತ್ತಾಗಿ ಪಾಲಿಸಲೊಪ್ಪದಿದ್ದ ಯತಿಗಳು 'ಅರ್ಧಗಪ್ಪಡ' ವೆಂಬ ತಮ್ಮದೇ ಆದ ಪಂಥವನ್ನು ರೂಪಿಸಿಕೊಂಡರೆಂದೂ ಮತ್ತು ಮುಂದೆ ಇದೇ ಅರ್ಧಗಪ್ಪಡಿಗಪಂಥವು ಶ್ವೇತಾಂಬರಪಂಥವಾಗಿ ಪರಿವರ್ತಿತವಾಯಿತೆಂದೂ ಭದ್ರಬಾಹು ಕಥಾನಕದ ಹೇಳಿಕೆಯಿಂದ ಸೂಚಿತವಾಗುವುದೆಂದು ಹಿಂದೆ ವಿವರಿಸಿದೆ. ಈ ರೀತಿಯಾಗಿ ಸುಮಾರು ನಾಲ್ಕು ಶತಮಾನಕಾಲದ ಪೂರ್ವದಲ್ಲಿಯೇ ಸ್ವತಂತ್ರಪಂಥವಾಗಿ ರೂಪುಗೊಂಡಿದ್ದ ಅರ್ಧಗಪ್ಪಡಿಗಪಂಥವು (ತೃ) ಭದ್ರಬಾಹುಸ್ವಾಮಿಯವರು ಪಟ್ಟಸ್ಥರಾಗಿದ್ದ ಸಮಯದಲ್ಲಿ ಶ್ವೇತಾಂಬರಪಂಥವಾಗಿ ಪರಿವರ್ತಿತವಾಗಿದ್ದಲ್ಲಿ '(ತೃ) ಭದ್ರಬಾಹುಸ್ವಾಮಿಯವರಿಂದ ಬೇರ್ಪಟ್ಟ ಶ್ವೇತಾಂಬರ ಯತಿಗಳು ತಮ್ಮ ಸ್ವತಂತ್ರವಾದ ಪಟ್ಟಾವಲಿಯನ್ನು ರೂಪಿಸಿಕೊಂಡರು' ಎಂಬ ಮೇಲ್ಕಂಡ 'ಇ' ಪ್ರತಿಯ ಹೇಳಿಕೆಯು ಸಮಂಜಸವೆನಿಸುವುದಿಲ್ಲ. ಈ ಹೇಳಿಕೆಯು ತಥ್ಯನಿಷ್ಠವಾಗಿದ್ದಲ್ಲಿ (ತೃ) ಭದ್ರಬಾಹುಸ್ವಾಮಿಯವರು ಆಚಾರ್ಯಪಟ್ಟಾಧಿಷ್ಠಿತರಾದ ಸಮಯದಲ್ಲಿ ನಿರ್ಗ್ರಂಥಯತಿಸಂಗಡ ಮತ್ತು ಅರ್ಧ

ಗಪ್ಪೆಡಿಗ ಪಂಗಡಗಳೆರಡೂ ಏಕೈಕಘಟಕವಾಗಿದ್ದಿರಬೇಕೆಂದೂ ಮತ್ತು ಈ ಆಚಾರ್ಯರು ಪಟ್ಟಸ್ಥರಾಗಿದ್ದ ಸಮಯದಲ್ಲಿಯೇ 'ದಿಗಂಬರ' ಮತ್ತು 'ಶ್ವೇತಾಂಬರ' ಎಂಬ ಪಂಥಭೇದವು ಮೂಡಿರಬೇಕೆಂದೂ ಭಾವಿಸಬೇಕಾಗುವುದು. ದಿಗಂಬರ ಮತ್ತು ಶ್ವೇತಾಂಬರ ಆಮ್ನಾಯಗಳೆರಡರ ಹೇಳಿಕೆಗಳನುಗುಣವಾಗಿಯೂ 'ದಿಗಂಬರ' ಮತ್ತು 'ಶ್ವೇತಾಂಬರ' ಎಂಬ ಪಂಥಭೇದವು ವೀ. ನಿ. ಪ. ೬೩೦ ನೇ ವರ್ಷದ ತರುವಾಯದಲ್ಲಿ ಮೂಡಿರುವುದೆಂದು ಹಿಂದೆ ವಿವರಿಸಿದೆ. ಆದ್ದರಿಂದ ವೀ. ನಿ. ಪ. ೨೦೬ ನೇ ವರ್ಷದ ಪರಿಸರದಲ್ಲಿ ಮೂಡಿದ ಅರ್ಧಗಪ್ಪೆಡಿಗಪಂಥವು ಕಾಲಾನುಕ್ರಮದಲ್ಲಿ ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡು ನಿರ್ಗ್ರಂಥ ಯತಿಸಂಘದೊಡನೆ ಪುನಸ್ಸಮಾವಿಷ್ಟವಾಗಿರಬೇಕೆಂದೂ ಮತ್ತು (ತೃ) ಭದ್ರಬಾಹುಸ್ವಾಮಿಯವರು ದಕ್ಷಿಣಾಪಥದತ್ತ ಪಯಣಕೈಗೊಂಡ ಸಮಯದಲ್ಲಿ ಉತ್ತರಾಪಥದಲ್ಲಿಯೇ ಉಳಿದ ಯತಿಪಂಗಡವು ಹಿಂದೆ ಅರ್ಧಗಪ್ಪೆಡಿಗಪಂಥದಲ್ಲಿ ಸಮ್ಮಾನಿತವಾಗಿದ್ದ ಆಚಾರನಿಯಮಗಳನ್ನಾಧರಿಸಿ 'ಶ್ವೇತಾಂಬರ' ಪಂಥವಾಗಿ ರೂಪುಗೊಂಡಿರಬೇಕೆಂದೂ ಗ್ರಹಿಸಬೇಕಾಗುವುದು. ಈ ರೀತಿಯಾಗಿ ನಿರ್ಗ್ರಂಥಯತಿಸಂಘವು 'ದಿಗಂಬರ' ಮತ್ತು 'ಶ್ವೇತಾಂಬರ' ಎಂಬ ಎರಡು ಸ್ವತಂತ್ರಘಟಕಗಳಾಗಿ ರೂಪಿತವಾದ ಅನಂತರ ದಿಗಂಬರಯತಿಪಂಗಡವು ತಮ್ಮ ಸಂಘವನ್ನು 'ಮೂಲಸಂಘ' ಎಂಬ ಹೆಸರಿನಿಂದ ನಿರ್ದೇಶಿಸಲಾರಂಭಿಸಿರಬೇಕೆಂದು ವ್ಯಕ್ತವಾಗುವುದು.

(ತೃ) ಭದ್ರಬಾಹುಸ್ವಾಮಿಯವರ ಉತ್ತರಾಧಿಕಾರಿಗಳಾಗಿ ಶ್ರೀಗುಪ್ತಿಗುಪ್ತ-ಅರ್ಹದ್ಬಲಿಸ್ವಾಮಿಯವರು ಯತಿಸಂಘದ ಪ್ರಧಾನಾಚಾರ್ಯಪಟ್ಟಸ್ಥರಾದರೆಂದು ಹಿಂದಿನ ವಿಮರ್ಶೆಯಿಂದ ವ್ಯಕ್ತಪಟ್ಟಿದೆ. ಇವರು ಯುಗಪ್ರತಿಕ್ರಮಣನಿಮಿತ್ತವಾಗಿ ನಾನಾ ದಿಗ್ದೇಶಗಳಿಂದ ತಮ್ಮ ಬಳಿಗೆ ಬಂದು ಸೇರಿದ ಮುನಿಜನಸಮಾಜದಲ್ಲಿ ಗಣಪಕ್ಷಪಾತಭಾವವಿರುವುದನ್ನು ಕಂಡು ಮುಂದೆ ಕಲಿಗಾಲದಲ್ಲಿ ಜೈನಧರ್ಮವು ಗಣಪಕ್ಷಪಾತಭೇದಯುಕ್ತವಾಗಿ ಮಾತ್ರ ಇರಲು ಸಾಧ್ಯವಾಗುವುದೆಂದು ಭಾವಿಸಿ ಮುನಿಸಮಾಜದಲ್ಲಿ ಸಂಘವ್ಯವಸ್ಥೆ ಮಾಡಿದರೆಂಬ ಐತಿಹ್ಯವು ಉಳಿದುಬಂದಿದೆ. ಈ ವಿಷಯವಾಗಿ ಇಂದ್ರನಂದಿಆಚಾರ್ಯವಿರಚಿತವಾದ ಶ್ರುತಾವತಾರದ ಕಥನವು ಮುಂದಿನಂತಿದೆ:

೧) ಗುಹೆಯಿಂದ ಬಂದಿದ್ದ ಯತೀಶ್ವರರಲ್ಲಿ ಕೆಲವರನ್ನು (i) 'ನಂದಿ' ಎಂಬ ಹೆಸರುಳ್ಳವರನ್ನಾಗಿಯೂ ಮತ್ತೆ ಕೆಲವರನ್ನು (ii) 'ವೀರ' ಎಂಬ ಹೆಸರಿನವರನ್ನಾಗಿಯೂ (ಅರ್ಹದ್ಬಲಿಸ್ವಾಮಿಯವರು) ಮಾಡಿದರು.

೨) ಪ್ರಸಿದ್ಧವಾದ ಅಶೋಕವಾಟದಿಂದ ಬಂದಿದ್ದ ಮುನೀಶ್ವರರಲ್ಲಿ ಕೆಲವರನ್ನು (i) 'ಅಪರಾಜಿತ' ಎಂಬುದಾಗಿಯೂ ಮತ್ತೆ ಕೆಲವರನ್ನು (ii) 'ದೇವ' ಎಂಬುದಾಗಿಯೂ ಹೆಸರುಳ್ಳವರನ್ನಾಗಿ ಮಾಡಿದರು.

೩) ಪಂಚಸ್ತೂಪನಿವಾಸದಿಂದ ಬಂದಿದ್ದ ಮುನಿಜನರಲ್ಲಿ ಕೆಲವರನ್ನು (i) 'ಸೇನ' ಎಂಬುದಾಗಿಯೂ ಮತ್ತೆ ಕೆಲವರನ್ನು (ii) 'ಭದ್ರ' ಎಂಬುದಾಗಿಯೂ ನಾಮಕರಣಮಾಡಿದರು.

೪) ಶಾಲ್ಮಲಿ ಮಹಾದ್ರುಮಮೂಲದಿಂದ ಅಭ್ಯುಪಾಗತರಾಗಿದ್ದ ಯತಿಗಳಲ್ಲಿ ಕೆಲವರನ್ನು (i) 'ಗಣಧರ' ಸಂಜ್ಞರನ್ನಾಗಿಯೂ ಮತ್ತೆ ಕೆಲವರನ್ನು (ii) 'ಗುಪ್ತ' ಆಹ್ವಯರನ್ನಾಗಿಯೂ ಮಾಡಿದರು.

೫) ಖಂಡಕೇಸರದ್ರುಮಮೂಲದಿಂದ ಬಂದಿದ್ದ ಯತಿಗಳಲ್ಲಿ ಕೆಲವರನ್ನು (i) 'ಸಿಂಹ' ಎಂಬ ಹೆಸರಿನವರನ್ನಾಗಿಯೂ ಮತ್ತೆ ಕೆಲವರನ್ನು (ii) 'ಚಂದ್ರ' ಎಂಬ ಹೆಸರಿನವರನ್ನಾಗಿಯೂ ಮಾಡಿದರು.[1]

ಉಕ್ತಂಚ :

ಆಯಾತಾನಂದಿವೀರಾ ಪ್ರಕಟಗಿರಿಗುಹಾವಾಸತೋಽಶೋಕವಾಟಾ
ದ್ದೇವಾಶ್ಚಾನ್ಯೇಽಪರಾಜಿತ ಇತಿಯತಿಪಸೇನಭದ್ರಾಹ್ವಯೌಚ ।
ಪಂಚಸ್ತೂಪಾತ್ಸಗುಪ್ತಾಗಣಧರ ವೃಷಭೋ ಶಾಲ್ಮಲೀವೃಕ್ಷಮೂಲಾತ್
ನಿರ್ಯಾತಾ ಸಿಂಹಚಂದ್ರಪ್ರಥಿತಗುಣಗಣಾ ಕೇಸರಾತ್ಖಂಡಪೂರ್ವಾತ್ ॥

ಉಕ್ತಂಚ :

ಗುಹಾಯಾಂ ವಾಸಿಕೋ ಜ್ಯೇಷ್ಠೋ ದ್ವಿತೀಯೋಽಶೋಕವಾಟಕಾತ್
ನಿರ್ಯಾತೌ ನಂದಿದೇವಾಭಿಖ್ಯಾವನುಕ್ರಮಾತ್ ।
ಪಂಚಸ್ತೂಪಾಸ್ತು ಸೇನಾನಾಂ ವೀರಾಣಾಂ ಶಾಲ್ಮಲೀದ್ರುಮಃ
ಖಂಡಕೇಸರನಾಮಾ ಚ ಭದ್ರಸಂಘೆ ಸಮೋ ಮತಃ ॥

ಏವಂ ತಸ್ಯಾರ್ಹದ್ಬಲೇಃ ಮುನಿಜನಸಂಘಪ್ರವರ್ತಕಸ್ಯಾರ್ಸ ।
ವಿನೇಯಜನಾ ಮುನೀಂದ್ರಾಪಂಚಕುಲಾಚಾರತೋಽಪಾಸ್ಯಾಃ ॥

ಮೇಲ್ಕಂಡ ಹೇಳಿಕೆಯನುಸಾರವಾಗಿ ಮುನಿಜನರು ಯುಗಪ್ರತಿಕ್ರಮಣಕ್ಕಾಗಿ ಯಾವ ಯಾವ ಮೂಲಾವಾಸಗಳಿಂದ ಬಂದು ಸೇರಿದ್ದರೋ ಆಯಾಯ ಸ್ಥಾನಭೇದಗಳನ್ನಾಧರಿಸಿ ಅರ್ಹದ್ಬಲಿಸ್ವಾಮಿಯವರು ಐದು ಪ್ರಧಾನಸಂಘಗಳನ್ನು ರಚಿಸಿರುವರೆಂದು ಗ್ರಹಿಸಲವಕಾಶವಾಗುವುದು. ಆದರೆ ಈ ವಿಷಯವಾಗಿ ನಂದಿಆಮ್ನಾಯ ಪಟ್ಟಾವಲಿ 'ಬಿ' ಪ್ರತಿಯ ಈ ಮುಂದಿನ ಹೇಳಿಕೆಯನ್ನೂ ಗಮನಿಸಬೇಕಾದ ಆವಶ್ಯಕತೆಯಿದೆ.

---

1 ಇಂದ್ರನಂದಿ_ಶ್ರುತಾವತಾರ–ಶ್ಲೋಕಸಂಖ್ಯೆ ೯೧ ರಿಂದ ೯೫.

'ಬಹುರಿ ಭದ್ರಬಾಹು ಕಾ ಸಿಷ್ಯ ಗುಪ್ತಿನಾಮ ತಾಕೆ ನಾಮ ತೀೞ, 1) ಗುಪ್ತಿಗುಪ್ತ 2) ಅರ್ಹದ್ಬಲಿ 3) ವಿಶಾಖಾಚಾರ್ಯ. ಬಹುರಿ ಜಾಕೆ ಚ್ಯಾರ್ ಸಿಷ್ಯ. ನಂದಿನಾಮವೃಕ್ಷಕೇ ಅಧೋಭಾಗ್ ಕೈಂ ವಿಷೈಂ ಚಾತುರ್ಮಾಸಕಾ ವರ್ಷಾಯೋಗ ಧಾರ್ಯಾ ಐಸಾ ಮಾಘನಂದಿ ಆಚಾರ್ಯಜೀ ನೈಂ ನಂದಿಸಂಘ ಸ್ಥಾಪಿತ ಕೀಯಾ (೧) ಬಹುರಿ ಜಾನೈಂ ತೃಣತಲವಿಷೈಂ ವರ್ಷಾಯೋಗ ಸ್ಥಾಪಿತ ಕಿಯಾ ಸೋ ಜಿನಸೇನನಾಮ ಸೇನಸಂಘ ಸ್ಥಾಪಿತ ಕಿಯಾ.[1] ಬಹುರಿ ಸಿಂಹ ಕೇ ಗುಫಾ ವಿಷೈಂ ವರ್ಷಾಯೋಗಧಾರ್ಯಾ ಜಾತೈಂ ಸಿಂಹಸಂಘ ಸ್ಥಾಪ್ಯಾ. ಬಹುರಿ ಜಾನೈಂ ದೇವದತ್ತಾನಾಮಾ ವೇಶ್ಯಾಕೇ ಗೃಹಕೇ ವಿಷೈಂ ವರ್ಷಾಯೋಗಧಾರ್ಯಾ ಸೋ ದೇವಸಂಘ ಭಯಾ. ಐಸೇಂ ಜಿನಮತಮೇಂ ಪಾಂಚಮಾಂ ಕಾಲ ವಿಷೈಂ ಆಚಾರ್ಯನಿಕೇ ಚ್ಯಾರ್ ಸಂಘ ಭಏ

ಬಹುರಿ ಪೂರ್ವೋಕ್ತ ನಂದಿಸಂಘಕೇ ವಿಷೈಂ ನಂದಿಸಂಘ(೧) ಪಾರಿಜಾತಗಚ್ಛ ಏಕ್ ಬಲಾತ್ಕಾರಗಣ, ಚ್ಯಾರ್ ಮುನಿಕೆ ನಾಂ ಕಹಿಏ ನಂದಿ(೧), ಚಂದ್ರ(೨), ಕೀರ್ತಿ(೩), ಭೂಷಣ(೪). ಐಸೇ ಸ್ಥಾಪಿತಭಏ. ತಥಾ ಶ್ರೀಮೂಲಸಂಘ(೧), ನಂದ್ಯಾಮ್ನಾಯ(೨), ಸರಸ್ವತೀಗಚ್ಛ(೩) ಬಲಾತ್ಕಾರಗಣ(೪) ಐಸೇಂ ಚ್ಯಾರ್ ಬಹುರಿ ಪೂರ್ವೋಕ್ತ ನಂದಿ(೧), ಚಂದ್ರ(೨)ಕೀರ್ತಿ(೩), ಭೂಷಣ(೪) ಐಸೇ ಚ್ಯಾರ್ ಮುನಿಕೇ ನಾಮ್ ಸ್ಥಾಪೇ.

ಔರ್ ಸೇನಸಂಘ, ಸಿಂಹಸಂಘ, ದೇವಸಂಘಕೀ ಪಟ್ಟಾವಲೀ ಜುದೀ ಹೈ. ಸೇನಸಂಘ ಮೈಂ ಜಿನಸೇನ ಆದಿ ಐಸೇ ಹೀಂ ಸರ್ವತ್ರ ಜುದೀ ಜುದೀ ಪಟ್ಟಾವಲಿ ಆಚಾರ್ಯನಿಕೀ ಹೈಂ. ತಾಕೇ ವಿಷೈಂ ಸೇನಸಂಘಮೈಂ ರಾಜ(೧), ವೀರ(೨), ಭದ್ರ(೩), ಸೇನ(೪) ಐಸೇ ಚ್ಯಾರ್ ನಾಮ ಹೈ. ಬಹುರಿ ಸಿಂಹ(೧), ಕುಂಭ(೨). ಆಶ್ರವ(೩), ಸಾಗರ(೪) ಐಸೇ ಚ್ಯಾರ್ ಸಂಘಕೇ ನಾಂ ಸಿಂಹಸಂಘಮೇಂ ಹೈ, ಬಹುರಿ ದೇವ(೧), ದತ್ತ(೨), ನಾಗ(೩), ಲಂಗ(೪), ಸಿಂಹತೈಂ (?) ಔರ್ ಚೌಥಾ ದೇವಸಂಘ ವಿಷೈಂ ಚ್ಯಾರ್ ನಾಮ ಹೈ.

ಬಹುರಿ ಪೂರ್ವೋಕ್ತ ಸೇನಸಂಘವಿಷೈಂ ಸೇನಸಂಘ ಪುಷ್ಕರಗಚ್ಛ ಸೂರಸ್ಥಗಣ ಜಾನನಾಂ. ಬಹುರಿ ಸಿಂಹಸಂಘ ಚಂದ್ರಕಪಾಟಗಚ್ಛ ಕಾಣೂರಗಣ ಸಿಂಹಸಂಘ ವಿಷೈಂ ಹೈಂ. ಬಹುರಿ ದೇವಸಂಘ ಪುಸ್ತಕಗಚ್ಛ ದೇಶೀಗಣ ಯಹ ದೇವಸಂಘ ವಿಷೈಂ ಹೈ.

---

1 ಈ ಹೇಳಿಕೆಯ ಸ್ಥಾನದಲ್ಲಿ ನಂ. ಅ. ಪಟ್ಟಾವಲಿ 'ಎ' ಪ್ರತಿಯಲ್ಲಿ 'ಜಿನಸೇನ ನಾಮ ತೃಣತಲೇ ವರ್ಷಾಯೋಗೋ ಧೃತಃ ಸಃ ವೃಷಭ ತೇನ ವೃಷಭಸಂಘ ಸ್ಥಾಪಿತಃ' ಎಂಬ ಹೇಳಿಕೆಯಿದೆ.

ನಂ. ಆ. ಪಟ್ಟಾವಲಿಯ ಮೇಲ್ಕಂಡ ಹೇಳಿಕೆಯನುಗುಣವಾಗಿ ಅರ್ಹದ್ಬಲಿ ಸ್ವಾಮಿಯವರ ನಾಲ್ವರು ಶಿಷ್ಯರು ನಂದಿ, ವೃಷಭ (ಅಥವಾ ಸೇನ), ಸಿಂಹ ಮತ್ತು ದೇವ ಎಂಬ ನಾಲ್ಕು ಸಂಘಗಳನ್ನು ಸ್ಥಾಪಿಸಿದರೆಂದೂ ಮತ್ತು ಈ ನಾಲ್ಕು ಸಂಘ ಗಳ ಮುನಿಗಳು ಆಯಾಯ ಸಂಘನಾಮಸೂಚಕವಾದ ನಂದಿ ಮುಂತಾದ ಪದ ಗಳಿಂದ ಅಂತ್ಯಗೊಳ್ಳುವ ಹೆಸರುಗಳನ್ನು ಹೊಂದಿರಬೇಕೆಂಬ ವ್ಯವಸ್ಥೆಯಾದುದಲ್ಲದೆ ಪುನಃ ಪ್ರತಿಯೊಂದು ಸಂಘದಲ್ಲಿಯೂ ಮತ್ತೆ ಮೂರು ಮೂರು ಉಪಸಂಘಗಳಿದ್ದು, ಈ ಉಪಸಂಘಗಳ ಮುನಿಗಳ ಹೆಸರುಗಳೂ ಮೂರು ಮೂರು ತೆರನಾಗಿರಬೇಕೆಂದೂ ವ್ಯವಸ್ಥೆಯಾಗಿದ್ದಿತೆಂದು ಸೂಚಿತವಾಗುವುದು. ಆದರೆ ಅರ್ಹದ್ಬಲಿಸ್ವಾಮಿಯವ ರಿಂದಾದ ಸಂಘವ್ಯವಸ್ಥೆಯಲ್ಲಿ ಪ್ರಧಾನವಾದ ಐದು ಶಾಖೆಗಳಿದ್ದು ಇವುಗಳಲ್ಲಿ ಪ್ರತಿ ಯೊಂದರಲ್ಲಿಯೂ ಆಯಾಯ ಸಂಘದ ಹೆಸರಿನ ಪ್ರಥಮ ಉಪಸಂಘವಲ್ಲದೆ ಮತ್ತೆ ಮೂರು ಮೂರು ಉಪಸಂಘಗಳಿದ್ದಿರಬೇಕೆಂದು ಸೂಚನೆಗೊಡುವ ಅಂಶಗಳನ್ನು ಅವಶ್ಯವಾಗಿ ಗಮನಿಸಬೇಕಾಗಿದೆ.

ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಪ್ರಧಾನ ಸಂಘಭೇದಗಳಲ್ಲಿ ಮೊದಲಿನದು 'ನಂದಿ' ಎಂಬ ಹೆಸರುಳ್ಳದ್ದಾಗಿಯೂ ಎರಡನೆಯದು 'ದೇವ' ಎಂಬ ಹೆಸರುಳ್ಳದ್ದಾಗಿಯೂ ಇದ್ದಿರಬೇಕೆಂದು 'ಗುಹಾಯಾಂ ವಾಸಿಕೋ ಜ್ಯೇಷ್ಠೋ........' ಎಂಬ ಶ್ರುತಾವತಾರದ ಪೂರ್ವೋಲ್ಲಿಖಿತ ಶ್ಲೋಕದಿಂದ ಸೂಚಿತವಾಗುವುದು. 'ನಂದಿ' ಎಂಬುದು ಶ್ರುತಕೇವಲಿಗಳೈವರಲ್ಲಿ ಮೊದಲಿನ ಆಚಾರ್ಯರ ನಾಮಾಂತರ ವಾಗಿರುವುದೆಂದೂ ಮತ್ತು 'ದೇವ' ಎಂಬುದು ಎರಡನೆಯ ಆಚಾರ್ಯರ ಹೆಸರೆನಿಸಿ ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ನಿರ್ದೇಶಿತವಾಗಿರುವುದೆಂದೂ ಹಿಂದೆ ಸ್ಪಷ್ಟಪಡಿ ಸಿದೆ. ಶ್ರುತಾವತಾರದಲ್ಲಿ 'ಉಕ್ತಂಚ' ಎಂಬ ಪೀಠಿಕೆಯೊಡನೆ ಉಲ್ಲಿಖಿತವಿರುವ ಶ್ಲೋಕದಲ್ಲಿ 'ಅಪರಾಜಿತ' ಎಂಬುದು ಸಂಘನಾಮವಾಗಿ ನಿರ್ದೇಶಿತವಿರುವುದು ಸ್ಪಷ್ಟ ವಿದೆಯಲ್ಲದೆ, ಮೂರನೆ ಶ್ರುತಕೇವಲಿ ಆಚಾರ್ಯರು ಇದೇ ಹೆಸರಿನವರಾಗಿರುವ ರೆಂಬುದು ವಿದಿತವಿದೆ. ಇವರಿಂದ ಅರ್ಹದ್ಬಲಿಸ್ವಾಮಿಯವರು ತಾವು ರೂಪಿಸಿದ ಪ್ರಧಾನಸಂಘಗಳನ್ನು ಶ್ರುತಕೇವಲಿ ಆಚಾರ್ಯರೈವರ ಹೆಸರುಗಳನ್ನಾಧರಿಸಿ ನಾಮ ಕರಣಮಾಡಿರಬಹುದಾದ ಸಂಭವವಿದೆಯೆಂದು ತರ್ಕಿಸಲವಕಾಶವಾಗುವುದು. ಅಂತೆಯೇ ಇವರಿಂದ ವ್ಯವಸ್ಥಿತವಾದ ಪ್ರಧಾನಸಂಘಗಳಲ್ಲಿ ನಾಲ್ಕನೆಯದರ ಹೆಸರು ನಾಲ್ಕನೇ ಶ್ರುತಕೇವಲಿ ಆಚಾರ್ಯರ 'ಗೋವರ್ಧನ' ಎಂಬ ಹೆಸರನ್ನಧಿಕರಿಸಿರ ಬೇಕೆಂಬುದು ಯುಕ್ತವೆನಿಸುವುದು. ಆದರೆ ಶ್ರುತಾವತಾರದಲ್ಲಿಯಾಗಲಿ, ನಂ. ಆ. ಪಟ್ಟಾವಲಿಯಲ್ಲಾಗಲಿ 'ಗೋವರ್ಧನ' ಎಂಬ ಹೆಸರನ್ನಧಿಕರಿಸಿದ ಸಂಘನಾಮವಿದ್ದುದರ ಬಗ್ಗೆ ಯಾವ ಸೂಚನೆಯೂ ಇಲ್ಲವಾಗಿದೆ. ಇಂತಿದ್ದರೂ ಪ್ರಥಮ ಶ್ರುತಕೇವಲಿ ಆಚಾರ್ಯರ ಎರಡು ಹೆಸರುಗಳಲ್ಲೊಂದಾದ 'ನಂದಿ' ಎಂಬ ಹೆಸರನ್ನಧಿಕರಿಸಿ ಸಂಘ ವನ್ನು ನಾಮಕರಣಮಾಡಿರುವಂತೆ ಗೋವರ್ಧನಾಚಾರ್ಯರ ನಾಮಾಂತರವನ್ನಾಧರಿಸಿ

ನಾಲ್ಕನೆಯ ಸಂಘಕ್ಕೆ ನಾಮಕರಣಮಾಡಿರಬಹುದಾದ ಸಂಭವವಿದೆಯೆಂದು ಊಹಿಸಲವಕಾಶವಿದೆ. ಶ್ರುತಾವತಾರ ಮತ್ತು ನಂ. ಆ. ಪಟ್ಟಾವಲಿ 'ಎ' ಪ್ರತಿಗಳ ಹೇಳಿಕೆಗಳಾಧಾರದಿಂದ 'ವೃಷಭ' ಎಂಬುದು ಪ್ರಧಾನಸಂಘವೊಂದರ ಹೆಸರಾಗಿದ್ದಿರಬೇಕೆಂದು ಸೂಚಿತವಾಗುವುದು. ಇಂತೆಯೇ ಶ್ರುತಾವತಾರ ಮತ್ತು ನಂ. ಆ. ಪಟ್ಟಾವಲಿಗಳ ಹೇಳಿಕೆಯನುಗುಣವಾಗಿ 'ಭದ್ರ' ಎಂಬ ಹೆಸರಿನ ಸಂಘವಿದ್ದಿತೆಂದು ನಿರ್ದೇಶಿತವಾಗುವುದು. ಈ 'ಭದ್ರ' ಎಂಬುದು ಐದನೆ ಶ್ರುತಕೇವಲಿ ಆಚಾರ್ಯರ 'ಭದ್ರಬಾಹು' ಎಂಬ ಹೆಸರಿನ ಪೂರ್ವಾರ್ಧಾಂಶವಾಗಿದೆಯೆಂಬುದು ಸ್ಪಷ್ಟವಿದೆ. ಆದ್ದರಿಂದ ಅರ್ಹದ್ಬಲಿಸ್ವಾಮಿಯವರಿಂದಾದ ಸಂಘವ್ಯವಸ್ಥೆಯಲ್ಲಿ ಐದನೇ ಪ್ರಧಾನಸಂಘವು 'ಭದ್ರ' ಎಂಬ ಹೆಸರುಳ್ಳದ್ದಾಗಿರಬೇಕೆಂದು ತರ್ಕಿತವಾಗುವುದು.

ಪಂಚಸ್ತೂಪಾನ್ವಯ : ಶ್ರುತಾವತಾರದ ಪೂರ್ವೋಲ್ಲಿಖಿತ ಶ್ಲೋಕದಿಂದ ಸೇನ ಮತ್ತು ಭದ್ರಸಂಘಗಳು ಮಾತ್ರ ಪಂಚಸ್ತೂಪಾನ್ವಯದವರಾಗಿದ್ದಿರಬೇಕೆಂಬ ಅಭಿಪ್ರಾಯಕ್ಕೆಡೆಯಾಗುವುದು. ಆದರೆ ನಂದಿಸಂಘದ ಯತಿಗಳೂ ತಮ್ಮನ್ನು ಪಂಚಸ್ತೂಪಾನ್ವಯದವರನ್ನಾಗಿ ನಿರ್ದೇಶಿಸಿಕೊಳ್ಳುವ ರೂಢಿಯಿದ್ದಿತೆಂದು ಪ್ರಾಚೀನ ಶಾಸನೋಲ್ಲೇಖನಗಳಿಂದ ವ್ಯಕ್ತವಾಗುವುದು. ಪಹರ್‌ಪುರದ (ಕ್ರಿ. ಶ. ೫ ನೇ ಶತಮಾನದ) ತಾಮ್ರಶಾಸನದಲ್ಲಿ ಗುಹನಂದಿ ಆಚಾರ್ಯರನ್ನು ಪಂಚಸ್ತೂಪಕುಲನಿಕಾಯಿಕ ಆಚಾರ್ಯರೆಂದು ನಿರ್ದೇಶಿಸಲಾಗಿದೆ. ಇಂತೆಯೇ ಶ್ರ. ಬೆಳಗುಳದ ಶಾಸನದಲ್ಲಿ ವೃಷಭನಂದಿಸ್ವಾಮಿಯವರನ್ನು ಪಂಚಸ್ತೂಪಾನ್ವಯದವರನ್ನಾಗಿ ನಿರ್ದೇಶಿಸಲಾಗಿದೆಯೆಂದು ಸನ್ಮಾನ್ಯ ಎ. ಎನ್. ಉಪಾಧ್ಯೆಯವರು ಸ್ಪಷ್ಟಪಡಿಸಿದ್ದಾರೆ.[1] ಇದರಿಂದ ಪಂಚಸ್ತೂಪಾನ್ವಯ ಎಂಬ ಹೆಸರು ಭದ್ರಸಂಘ ಮತ್ತು ಇದರ ಶಾಖೆಯಾದ ಸೇನಸಂಘಕ್ಕೆ ಮಾತ್ರ ಅನ್ವಿತವಾದುದಾಗಿರದೆ ನಂದಿಸಂಘಕ್ಕೂ ಅನ್ವಿತವಾಗಿದ್ದಿತೆಂದು ಅಧಿಕೃತವಾಗುವುದು. ಅಂತೆಯೇ ಐವರು ಶ್ರುತಕೇವಲಿ ಆಚಾರ್ಯರ ಹೆಸರುಗಳನ್ನಾಧರಿಸಿ ಅರ್ಹದ್ಬಲಿಸ್ವಾಮಿಯವರು ತಮ್ಮಿಂದ ವ್ಯವಸ್ಥಿತವಾದ ಐದು ಪ್ರಧಾನಸಂಘಗಳನ್ನು ಹೆಸರಿಸುವರೆಂದೂ ಮತ್ತು ಈ ಕಾರಣದಿಂದ ಐವರು ಶ್ರುತಕೇವಲಿಗಳ ಹೆಸರುಗಳು 'ಸ್ತೂಪ' ಸದೃಶವಾದುವಾಗಿ, ಐದು ಸಂಘಗಳಿಗೂ 'ಪಂಚಸ್ತೂಪಾನ್ವಯ' ಎಂಬ ಹೆಸರು ಅನ್ವಿತವಾಗಿರುವುದೆಂದು ತರ್ಕಿಸಲವಕಾಶವಾಗುವುದು.

ಶಾಖಾಸಂಘಗಳು : ನಂ. ಆ. ಪಟ್ಟಾವಲಿಯ ಹೇಳಿಕೆಯನುಗುಣವಾಗಿ 'ನಂದಿ' ಮೊದಲಾದ ನಾಲ್ಕು ಸಂಘಗಳಲ್ಲಿ ಪ್ರತಿಯೊಂದರ ಯತಿಗಳು ಆಯಾಯ ಸಂಘದ ಹೆಸರಿನಿಂದ ಅಂತ್ಯಗೊಳ್ಳುವ ಹೆಸರು ಹಾಗೂ ಮತ್ತಿತರ ಮೂರು ಪದಗಳಲ್ಲಿ ಯಾವುದಾದರೊಂದರಿಂದ ಅಂತ್ಯವಾಗುವ ಹೆಸರುಗಳನ್ನು ಹೊಂದಿರಬೇಕಾದ ನಿಬಂಧನವೇರ್ಪಟ್ಟಿತೆಂದು ವ್ಯಕ್ತವಾಗುವುದು. ಆದರೆ ಈ ಪಟ್ಟಾವಲಿಯಲ್ಲಿ ನಂದಿ

---

1 ಕರ್ನಾಟಕ ಹಿಸ್ಟಾರಿಕಲ್ ರಿವ್ಯೂ—ಜೂನ್ ಅಂಡ್ ಡಿಸೆಂಬರ್—'ಪಂಚಸ್ತೂಪಾನ್ವಯ'.

ಮೊದಲಾದ ಸಂಘದ ಯತಿಗಳು ಹೊಂದಿರಬೇಕಾದ ಹೆಸರುಗಳೆನಿಸಿ ನಿರ್ದೇಶಿತವಾಗಿರುವ 'ಚಂದ್ರ', 'ವೀರ', ಮುಂತಾದವುಗಳು ಶ್ರುತಾವತಾರದಲ್ಲಿ ಸಂಘನಾಮಸದೃಶಗಳಾಗಿ ನಿರ್ದೇಶಿತವಾಗಿರುವುದನ್ನು ಗಮನಿಸಬಹುದು. ಇದರಿಂದ ಪ್ರತಿಯೊಂದು ಪ್ರಧಾನಸಂಘದಲ್ಲಿಯೂ ನಾಲ್ಕು ನಾಲ್ಕು ಶಾಖಾಸಂಘಗಳಿದ್ದು, ಪ್ರತಿಯೊಂದರ ಮೊದಮೊದಲನೆಯ ಶಾಖಾಸಂಘವು ಆಯಾಯ ಸಂಘದ ಹೆಸರನ್ನೇ ಹೊಂದಿದ್ದಿತೆಂದೂ ಮತ್ತು ಇತರ ಮೂರು ಮೂರು ಶಾಖಾಸಂಘಗಳು ನಂ. ಆ. ಪಟ್ಟಾವಲಿಯಲ್ಲಿ ಸೂಚಿತವಿರುವ ಇತರ ಹೆಸರುಗಳನ್ನು ಹೊಂದಿದ್ದುವೆಂದೂ ಗ್ರಹಿಸಲವಕಾಶವಾಗುವುದು. ನಂದಿಸಂಘದಲ್ಲಿ ನಂದಿ, ಚಂದ್ರ, ಕೀರ್ತಿ ಮತ್ತು ಭೂಷಣ ಎಂಬ ಹೆಸರಿನ ಶಾಖಾಸಂಘಗಳಿದ್ದುವೆಂಬುದು ಪಟ್ಟಾವಲಿ ಮತ್ತು ಶಾಸನಗಳಲ್ಲಿ ಉಳಿದುಬಂದಿರುವ ಯತಿಸಂತತಿಯ ಹೆಸರುಗಳಿಂದ ಸಮರ್ಥಿತವಾಗುವುದು. ಇಂತೆಯೇ ದೇವ ಮೊದಲಾದ ಇತರ ಸಂಘಗಳೂ ನಾಲ್ಕು ನಾಲ್ಕು ಶಾಖಾಸಂಘಗಳುಳ್ಳವಾಗಿದ್ದುವೆಂಬುದರಲ್ಲಿ ಸಂಶಯುಪಡುವಂತಿಲ್ಲ. ದೇವಸಂಘದ ಶಾಖಾಸಂಘಗಳ ಹೆಸರುಗಳಲ್ಲೊಂದಾದ 'ಲಂಗ' ಎಂಬ ಹೆಸರು ಸಂದೇಹಾಸ್ಪದವಾಗಿದೆ. ಈ ಪದದಿಂದ ಅಂತ್ಯವಾಗುವ ಯತಿಗಳ ಹೆಸರುಗಳ ಉಲ್ಲೇಖವು ಉಪಲಬ್ಧವಿರುವುದಿಲ್ಲ. ನಂ. ಆ. ಪಟ್ಟಾವಲಿಯ ಪೂರ್ವೋಲ್ಲಿಖಿತವಾದ ಹೇಳಿಕೆಯಲ್ಲಿ ಮೊದಲು ಸಿಂಹಸಂಘದ ಯತಿಗಳ ನಾಲ್ಕು ಹೆಸರುಗಳನ್ನೂ ತದನಂತರ ದೇವಸಂಘದ ನಾಲ್ಕು ಹೆಸರುಗಳನ್ನೂ ಹೇಳಿ ಈ ಸಂಘದ ನಾಲ್ಕನೆಯ ಹೆಸರಾದ 'ಲಂಗ' ಎಂಬುದನ್ನು ಹೇಳಿ ಪುನಃ 'ಸಿಂಹ' ಎಂದು ಹೇಳಲಾಗಿರುವುದು ಸಕ್ರಮವಿರುವುದಿಲ್ಲ. ಇಷ್ಟಲ್ಲದೆ 'ಸಿಂಹ' ಎಂಬುದು ಪ್ರಧಾನ ಸಂಘಗಳಲ್ಲಾವುದೊಂದರ ಹೆಸರಾಗಿಯೂ ಇರಲವಕಾಶವಿಲ್ಲೆಂಬುದು ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟಿದೆ. ಆದ್ದರಿಂದ 'ಸಿಂಹ' ಎಂಬುದು ದೇವಸಂಘದ ಶಾಖಾಸಂಘಗಳಲ್ಲೊಂದಾಗಿದ್ದು, ನಂ. ಆ. ಪಟ್ಟಾವಲಿಯಲ್ಲಿ ಸಿಂಹಸಂಘದ ಶಾಖಾಸಂಘಗಳೆನಿಸಿ ನಿರ್ದೇಶಿತವಿರುವ ಮೂರು ಹೆಸರುಗಳು ಅಪರಾಜಿತ ಸಂಘದ ಹೆಸರುಗಳಾಗಿದ್ದಿರಬಹುದೆ ಎಂಬ ಸಂಭಾವನೆಗೆಡೆಯಾಗುವುದು. ಶ್ರುತಾವತಾರದ ಪೂರ್ವೋಲ್ಲಿಖಿತ ಶ್ಲೋಕದಲ್ಲಿ, 'ವೃಷಭ' ಎಂಬ ಹೆಸರಿನೊಡನೆ (ಸ) ಗುಪ್ತ ಮತ್ತು (ಗಣ) ಧರ ಎಂಬ ಹೆಸರುಗಳು ಸಂಯೋಜಿತವಿವೆ ಎಂಬುದಲ್ಲದೆ ಗುಪ್ತ ಮತ್ತು ಧರ ಎಂಬ ಪದಗಳಿಂದ ಅಂತ್ಯಗೊಳ್ಳುವ ಹೆಸರುಗಳನ್ನು ಹೊಂದಿದ್ದ ಯತಿಗಳ ಹೆಸರುಗಳು ಉಪಲಬ್ಧವಿವೆ[1]

---

1 ತೃತೀಯ ಭದ್ರಬಾಹುಸ್ವಾಮಿಯವರ ಅನಂತರಕಾಲೀನರಾಗಿ ನಿರ್ದೇಶಿತರಿರುವ ಯತಿಗಳ 'ವಿನಯಂಧರ' ಮತ್ತು 'ಗುಣಧರ' ಎಂಬ ಹೆಸರುಗಳನ್ನು ಗಮನಿಸಬಹುದು. ಇಂತೆಯೇ 'ಸರ್ವಗುಪ್ತ' ಎಂಬ ಹೆಸರು ಶ್ರವಣಬೆಳಗುಳದ ಸಿದ್ಧರ ಬಸದಿಯ ಉತ್ತರಭಾಗದ ಶಾಸನದಲ್ಲಿ (ಸಂ. ೧೦೫) ನಿರ್ದೇಶಿತವಿದೆ. ಇದೇ ಶಾಸನದಲ್ಲಿರುವ ಧನಪಾಲ ಎಂಬ ಹೆಸರು ಮತ್ತು ಪಾರ್ಶ್ವನಾಥ ಬಸದಿಯ ಶಾಸನದಲ್ಲಿ (ಸಂ. ೫೪) ಉಕ್ತವಿರುವ 'ದಯಾಪಾಲ' ಎಂಬ ಹೆಸರುಗಳನ್ನು ಗಮನಿಸಬಹುದು.

ಇಂತೆಯೇ 'ಪಾಲ' ಎಂಬ ಹೆಸರಿನಿಂದ ಅಂತ್ಯಗೊಳ್ಳುವ ಹೆಸರುಗಳನ್ನು ಹೊಂದಿದ್ದ ಯತಿಸಂತತಿಯು ಇದ್ದಿತೆಂದು ಆಧಾರಾಂತರಗಳಿಂದ ಸೂಚಿತವಾಗುವುದು. ಆದ್ದರಿಂದ ಗುಪ್ತ, ಧರ ಮತ್ತು ಪಾಲ ಎಂಬವುಗಳಿಂದ ಅಂತ್ಯಗೊಳ್ಳುವ ಹೆಸರುಗಳು ವೃಷಭಸಂಘದ ಶಾಖಾಸಂಘಗಳಾಗಿದ್ದಿರಬೇಕೆಂದು ಪರಿಭಾವಿತವಾಗುವುದು.[1] ನಂ. ಅ. ಪಟ್ಟಾವಲಿಯ ಪೂರ್ವೋಲ್ಲಿಖಿತ ಹೇಳಿಕೆಯನುಗುಣವಾಗಿ 'ಸೇನ' ಎಂಬ ಹೆಸರಿನ ಪ್ರಧಾನ ಸಂಘದ ಯತಿಗಳು ಸೇನ, ಭದ್ರ, ವೀರ ಮತ್ತು ರಾಜ ಎಂಬ ಹೆಸರುಗಳನ್ನು ಹೊಂದಿದ್ದರೆಂದು ಸೂಚಿತವಾಗುವುದು. ಆದರೆ 'ಭದ್ರ' ಎಂಬುದು ಪ್ರಧಾನಸಂಘದ ಹೆಸರಾಗಿಯೂ ಸೇನ, ವೀರ ಮತ್ತು ರಾಜ ಎಂಬುವು ಶಾಖಾಸಂಘಗಳಾಗಿಯೂ ಇದ್ದಿರಬೇಕೆಂದು ಆಧಾರಾಂತರದಿಂದ ಪ್ರಮಾಣೀಕೃತವಾಗುವುದು.[2] ಈ ವಿಚಾರ ಸರಣಿಯನುಗುಣವಾಗಿ ಅರ್ಹದ್ಬಲಿಸ್ವಾಮಿಯವರಿಂದಾದ ಸಂಘವ್ಯವಸ್ಥೆಯ ಕ್ರಮವು[3] ಸಂಗ್ರಹರೂಪವಾಗಿ ಮುಂದಿನಂತಾಗುವುದು.

---

1 ಅಪರಾಜಿತ ಮತ್ತು ವೃಷಭಸಂಘಗಳ ವಿಷಯವಾಗಿ ಇಲ್ಲಿ ಉಕ್ತವಿರುವ ಅಂಶಗಳು ಕೇವಲ ಊಹಾತ್ಮಕವಾದವು. ಆಧಾರಾಂತರಗಳಿಂದ ಸಮರ್ಥಿತವಾದಲ್ಲದೆ ನಿರ್ಣಯಾತ್ಮಕಗಳಾಗಲಾರವು.

2 ಈ ಆಧಾರಾಂತರವನ್ನು ಮುಂದೆ ಸಾಕ್ಷೀಕರಿಸಲಾಗುವುದು.

3 ಐದು ಪ್ರಧಾನಸಂಘಗಳು ಮತ್ತು ಅವುಗಳ ಶಾಖಾಸಂಘಗಳಲ್ಲಿ ಮೊದಲನೆಯವುಗಳು ಪಂಚಶ್ರುತಕೇವಲಿ ಆಚಾರ್ಯರ ಹೆಸರುಗಳನ್ನಾಧರಿಸಿ ನಾಮಕರಣಗೊಂಡಿವೆಯೆಂದು ವ್ಯಕ್ತಪಟ್ಟಿದೆ. ಇನ್ನಿತರ ಶಾಖಾಸಂಘಗಳ ಒಟ್ಟು ಸಂಖ್ಯೆ (೫ × ೩ =)೧೫ ಆಗಿದ್ದು, ದಶಪೂರ್ವಿ ಹಾಗೂ ಏಕಾದಶಾಂಗಶ್ರುತಧರ ಆಚಾರ್ಯರ ಒಟ್ಟು ಸಂಖ್ಯೆಯೂ (೯+೬ =) ೧೫ ಆಗಿದೆಯಾಗಿ ಈ ೧೫ ಶಾಖಾಸಂಘಗಳನ್ನು ದಶಪೂರ್ವಿ ಮತ್ತು ಏಕಾದಶಾಂಗಶ್ರುತಧರ ಆಚಾರ್ಯರ ಹೆಸರುಗಳ ಅಂಶಗಳನ್ನಾಧರಿಸಿ ನಾಮಕರಣಮಾಡಿರಬಹುದಾದ ಸಂಭವವಿದೆಯೆಂದು ಭಾವಿಸಲವಕಾಶವಿದೆ.

ಮೂಲಸಂಘ

ಪಂಚಸ್ತೂಪಾನ್ವಯ

- ೧ ನಂದಿ
  - 1 ನಂದಿ
  - 2 ಚಂದ್ರ
  - 3 ಕೀರ್ತಿ
  - 4 ಭೂಷಣ
- ೨ ದೇವ
  - 1 ದೇವ
  - 2 ದತ್ತ
  - 3 ನಾಗ
  - 4 ಸಿಂಹ
- ೩ ಅಪರಾಜಿತ
  - 1 ಅಪರಾಜಿತ
  - 2 ಕುಂಭ
  - 3 ಆಶ್ರವ
  - 4 ಸಾಗರ
- ೪ ವೃಷಭ
  - 1 ವೃಷಭ
  - 2 ಗುಪ್ತ
  - 3 ಧರ
  - 4 ಪಾಲ
- ೫ ಭದ್ರ
  - 1 ಭದ್ರ
  - 2 ವೀರ
  - 3 ರಾಜ
  - 4 ಸೇನ

ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಐದು ಪ್ರಧಾನಸಂಘಗಳಲ್ಲಿ ನಂದಿ ಮತ್ತು ಭದ್ರಸಂಘಗಳೆರಡರ ಹೊರತಾಗಿ ಇತರ ಸಂಘಗಳ ಅಧಿಪತಿಗಳಾಗಿ ಅಧಿಷ್ಠಿತರಾದ ಆಚಾರ್ಯರ ಹೆಸರುಗಳು ಈಗ ಉಪಲಬ್ಧವಿರುವಂತೆ ಕಂಡುಬರುವುದಿಲ್ಲ. ನಂದಿಸಂಘದ ಆಚಾರ್ಯಸಂತತಿಯ ಪಟ್ಟಾನುಕ್ರಮವೇ ಮುಂತಾದ ಕೆಲವು ಐತಿಹ್ಯಾಂಶಗಳು ನಂದಿಆಮ್ನಾಯಪಟ್ಟಾವಲಿಯಲ್ಲಿ ಉಳಿದುಳಿದುಬಂದಿವೆ. ಈ ಆಚಾರ್ಯಸಂತತಿಯಲ್ಲಿ ಲೋಹಾಚಾರ್ಯ[1] ಪರ್ಯಂತರಾದ ಆಚಾರ್ಯರ ಪಟ್ಟಾನುಕ್ರಮವನ್ನು ಇಲ್ಲಿ ಗಮನಿಸಬೇಕಾದ ಆವಶ್ಯಕತೆಯಿದೆ. (ತೃ) ಭದ್ರಬಾಹುಸ್ವಾಮಿಯವರ ಪಟ್ಟಸಮಯದಿಂದಾದಿಯಾಗಿ ಮುಂದಿನ ಆಚಾರ್ಯಸಂತತಿಯ ಪಟ್ಟಕಾಲಮಾನಗಳನ್ನು ನಂದಿಆಮ್ನಾಯಪಟ್ಟಾವಲಿಯಲ್ಲಿ (ಶಕ) ಸಂವತ್ಸರಾಧಾರದಿಂದ ನಿರ್ದೇಶಿಸಲಾಗಿರುವುದೆಂದೂ ಈ ಶಕಸಂವತ್ಸರ, ಈಗ ಸಾಧಾರಣವಾಗಿ ಭಾವಿಸಲಾಗಿರುವಂತೆ ವಿಕ್ರಮಶಕೆಯಾಗಿರದೆ, ಶಾಲಿವಾಹನಶಕೆಯಾಗಿರುವುದೆಂದೂ ಹಿಂದೆ ಸ್ಪಷ್ಟಪಡಿಸಿದೆ. ಅಂತೆಯೇ ಈ ಪರಿಗಣನೆಯನುಗುಣವಾಗಿ ತೃ. ಭದ್ರಬಾಹುಸ್ವಾಮಿಯವರ ಪಟ್ಟಸಮಯಾರಂಭದಿಂದ ಲೋಹಾಚಾರ್ಯ ಪರ್ಯಂತರಾದ ಆಚಾರ್ಯರ ಪಟ್ಟಕಾಲಾನುಕ್ರಮವನ್ನು ಮುಂದಿನ ಚೌಬಂಧದಲ್ಲಿ ನಿರ್ದೇಶಿಸಲಾಗಿದೆ :

| ಕ್ರಮ ಸಂಖ್ಯೆ | ಆಚಾರ್ಯರ ಹೆಸರುಗಳು | ಆಚಾರ್ಯ ಪಟ್ಟಾರಂಭ ಸಮಯ | | | ಪಟ್ಟಾವಧಿ |
|---|---|---|---|---|---|
| | | ಶಾ. ಶಕೆ | ವೀ. ನಿ. ಸ. | ಕ್ರಿ. ಶ. | ವ.–ತಿಂ.–ದಿ. |
| ೧ | ತೃ. ಭದ್ರಬಾಹು | ೪ | ೬೧೦ | ೮೨ | ೨೨–೧೦–೨೭ |
| ೨ | ಗುಪ್ತಿಗುಪ್ತ (ಅರ್ಹದ್ಬಲಿ) | ೨೬ | ೬೩೨ | ೧೦೪ | ೯–೬–೨೫ |
| ೩ | ಮಾಘನಂದಿ | ೩೬ | ೬೪೨ | ೧೧೪ | ೪–೪–೨೬ |
| ೪ | ಜಿನಚಂದ್ರ | ೪೦ | ೬೪೬ | ೧೧೮ | ೮–೯–೬ |
| ೫ | ಕುಂದಕುಂದ (ಪದ್ಮನಂದಿ) | ೪೯ | ೬೫೫ | ೧೨೭ | ೫೨–೧೦–೧೦ |
| ೬ | ಉಮಾಸ್ವಾಮಿ | ೧೦೧ | ೭೦೭ | ೧೭೯ | ೪೦–೮–೧ |
| ೭ | ಲೋಹಾಚಾರ್ಯ | ೧೪೨ | ೭೪೮ | ೨೨೦ | ೧೦–೧೦–೨೦ |

ತೃ. ಭದ್ರಬಾಹುಸ್ವಾಮಿಯವರು ಮತ್ತು ಗುಪ್ತಿಗುಪ್ತಸ್ವಾಮಿಯವರನ್ನು ಕುರಿತು ಉಪಲಬ್ಧವಿರುವ ಐತಿಹ್ಯಾಂಶಗಳನ್ನು ಹಿಂದೆ ಸ್ಪಷ್ಟಪಡಿಸಿದೆ. ಗುಪ್ತಿಗುಪ್ತ

1 ಇವರು ಅಂಗಶ್ರುತಧರ ಲೋಹಾಚಾರ್ಯರಿಂದನ್ಯರಾದ ಮತ್ತೊಬ್ಬ ಆಚಾರ್ಯರು.

ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಐದು ಸಂಘಗಳಲ್ಲಿ ಮೊದಲನೆಯದಾದ ನಂದಿಸಂಘದ ಅಧಿಪತಿಗಳಾಗಿ ಮಾಘನಂದಿಸ್ವಾಮಿಯವರು ಅಧಿಷ್ಠಿತರಾದರೆಂಬುದು ನಿರ್ವಿವಾದವಿದೆ. ಇವರ ಶ್ರುತಜ್ಞಾನಸಂಪತ್ತಿಯ ಪ್ರಶಸಾತ್ಮಕವಾದ ಸ್ತುತಿಗಳು ಉಳಿದುಬಂದಿವೆ. ಕಥೆಯೊಂದರ ಹೇಳಿಕೆಯಂತೆ ಶಾಲಿವಾಹನಶಕನು ಇವರ ಸುತ ನಾಗಿದ್ದಾನೆ. ಇವರ ಅನಂತರ ಆಚಾರ್ಯಪಟ್ಟಸ್ಥರಾದ ಜಿನಚಂದ್ರಸ್ವಾಮಿಯವರ ನ್ನಧಿಕರಿಸಿದ ಯಾವ ಐತಿಹ್ಯಾಂಶವೂ ಉಪಲಬ್ಧವಿರುವುದಿಲ್ಲ.

**ಕುಂದಕುಂದಸ್ವಾಮಿಯವರು :** ತೃ. ಭದ್ರಬಾಹುಸ್ವಾಮಿಯವರ ಅನಂತರ ದಲ್ಲಿ ನಾಲ್ಕನೇ ಆಚಾರ್ಯರಾಗಿಯೂ ನಂದಿಸಂಘದ ೩ ನೇ ಪಟ್ಟಾಧಿಕಾರಿಯಾಗಿಯೂ ಕುಂದಕುಂದಸ್ವಾಮಿಯವರು ಅಧಿಷ್ಠಿತರಾಗಿದ್ದಾರೆ. ಇವರ ಹೆಸರು 'ಪದ್ಮನಂದಿ' ಎಂದು. ಆದರೆ ಇವರ ಹುಟ್ಟೂರಾದ ಕುಂದಕುಂದಪುರದ ಹೆಸರಿನಿಂದಲೇ ಈ ಆಚಾ ರ್ಯರು ಸುಶ್ರುತರಿದ್ದಾರೆ. ದಿಗಂಬರ ಜೈನಪಂಥದಲ್ಲಿ ಅತಿಶಯ ರೀತಿಯಿಂದ ಸಂಸ್ತುತರಾಗಿರುವ ಆಚಾರ್ಯರಲ್ಲಿ ಕುಂದಕುಂದಸ್ವಾಮಿಯವರು ಅದ್ವಿತೀಯರಾಗಿ ದ್ದಾರೆ. ಇವರ ಹೆಸರು ಮಂಗಲವೆನಿಸಿ ಸಂಸ್ತುತವಾಗಿದೆ.—'ಮಂಗಲಂ ಕುಂದ ಕುಂದಾರ್ಯೋ'.–ಎಂಭತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಇವರು ಪಾಹುಡಗ್ರಂಥಗಳನ್ನು ರಚಿಸಿರುವರೆಂಬ ಪರಂಪರಾಗತ ಹೇಳಿಕೆಯಿದೆ. ಈ ಪಾಹುಡಗ್ರಂಥಗಳಲ್ಲಿ ಪಂಚಾಸ್ತಿಕಾಯ, ಪ್ರವಚನಸಾರ ಮತ್ತು ಸಮಯಸಾರ ಪಾಹುಡಗಳು, 'ನಾಟಕ ತ್ರಯ' ಅಥವಾ 'ಪ್ರಾಭೃತತ್ರಯ' ಎಂಬ ಹೆಸರಿನಿಂದ ಪ್ರಸಿದ್ಧವಿವೆ. ನಂದಿ ಆಮ್ನಾಯಪಟ್ಟಾವಲಿ 'ಸಿ' ಪ್ರತಿಯನುಸೃತವಾದ ಐತಿಹ್ಯದನುಗುಣವಾಗಿ ಕುಂದ ಕುಂದಸ್ವಾಮಿಯವರು ತಮ್ಮ ೧೧ ವರ್ಷವಯೋಮಾನದ ಗೃಹಸ್ಥಪರ್ಯಾಯಾ ನಂತರ ಮುನಿದೀಕ್ಷೆಪಡೆದು, ತಮ್ಮ ೮೬ ನೇ ವರ್ಷವಯೋಮಾನದಲ್ಲಿ ಸ್ವರ್ಗಸ್ಥ ರಾಗಿದ್ದಾರೆ.[1] ಇದರಂತೆ ಕುಂದಕುಂದಸ್ವಾಮಿಯವರು ಕನಿಷ್ಠಮಿತಿಯಿಂದ ೭೫ ವರ್ಷಕಾಲ ಯತಿಜೀವನ ನಡೆಸಿರುವರೆಂದು ವ್ಯಕ್ತವಾಗುವುದು. ಮೇಲ್ಕಂಡ ಚೌಬಂಧದಲ್ಲಿ ನಿರ್ದೇಶಿತವಾಗಿರುವಂತೆ ಇವರು ಶಾ. ಶಕವರ್ಷ ೧೦೧ ರಲ್ಲಿ ಸ್ವರ್ಗಸ್ಥ ರಾಗಿದ್ದಾರೆ. ಅಂತೆಯೇ ಇವರು ಶಾ. ಶಕವರ್ಷ (೧೦೧ – ೭೫) ೨೬ ರಲ್ಲಿ ಮುನಿ ದೀಕ್ಷೆಪಡೆದಿರುವರೆಂದು ಪರಿಗಣಿತವಾಗುವುದು. ಇದೇ ಶಾ. ಶಕವರ್ಷ ೨೬ ರಲ್ಲಿ ತೃ. ಭದ್ರಭಾಹುಸ್ವಾಮಿಯವರು ಸಲ್ಲೇಖನವ್ರತಧಾರಣೆಮಾಡಿ ಕಳ್ಬಪ್ಪುವಿನಲ್ಲಿ ಸ್ವರ್ಗಸ್ಥರಾಗಿರುವರೆಂಬುದು ಹಿಂದೆ ಸ್ಪಷ್ಟಗೊಂಡಿದೆ. ಇದರಿಂದ ತೃ. ಭದ್ರಬಾಹು ಸ್ವಾಮಿಯವರು ಮುನಿಸಂಘಸಮೇತರಾಗಿ ಕಳ್ಬಪ್ಪುವಿನತ್ತ ಮಾರ್ಗಕ್ರಮಣಮಾಡುವ ನಿಮಿತ್ತವಾಗಿ ಕುಂದಕುಂದಪುರದಲ್ಲಿ ವಿಹರಿಸಿದ್ದ ಸಮಯದಲ್ಲಿ ಅಥವಾ ಕಳ್ಬಪ್ಪುವಿನಲ್ಲಿ

---

1 'ಎ' ಪ್ರತಿಯನುಸೃತವಾದ ಐತಿಹ್ಯದನುಗುಣವಾಗಿ ಇವರು ತಮ್ಮ ೯೬ ನೇ ವರ್ಷವಯೋಮಾನದಲ್ಲಿ ಸ್ವರ್ಗಸ್ಥರಾಗಿದ್ದಾರೆ.

ಮುನಿಸಂಘಕ್ಕೆ ಮುಂದಿನಪಯಣ ಕೈಗೊಳ್ಳುವಂತೆ ಆದೇಶ ನೀಡುವ ಮುನ್ನ, ಕುಂದಕುಂದಸ್ವಾಮಿಯವರು ಮುನಿದೀಕ್ಷೆಪಡೆದಿರುವರೆಂದೂ ಮತ್ತು ಈ ಕಾರಣದಿಂದಲೇ ಕುಂದಕುಂದಸ್ವಾಮಿಯವರು ತಮ್ಮನ್ನು 'ಭದ್ರಬಾಹುಸ್ವಾಮಿಯವರ ಶಿಷ್ಯ' ಎಂದು ನಿರ್ದೇಶಿಸಿಕೊಂಡಿರುವರೆಂದೂ ಭಾವಿಸಲವಕಾಶವಾಗುವುದು.[1] ಕುಂದಕುಂದಾಚಾರ್ಯರ ತರುವಾಯ ಉಮಾಸ್ವಾಮಿ ಆಚಾರ್ಯರು ಪಟ್ಟಸ್ಥರಾಗಿದ್ದಾರೆ. ಗೃದ್ಧ್ರಪಿಂಛಾಚಾರ್ಯ ಎಂಬುದು ಇವರ ಮತ್ತೊಂದು ಹೆಸರು ಇವರಿಂದ ರಚಿತವಾಗಿರುವ ತತ್ವಾರ್ಥಸೂತ್ರವು ದಿಗಂಬರ ಮತ್ತು ಶ್ವೇತಾಂಬರ ಪಂಥಗಳೆರಡರಲ್ಲಿಯೂ ಸನ್ಮಾನಿತವಿರುವ ಗ್ರಂಥರತ್ನವಾಗಿದೆ. ಈ ಸೂತ್ರಗ್ರಂಥದ ಮೇಲೆ ಎರಡೂ ಪಂಥದ ಆಚಾರ್ಯರಿಂದ ಅನೇಕ ವ್ಯಾಖ್ಯಾನ ಗ್ರಂಥಗಳು ರಚಿತವಾಗಿವೆ. ಈ ಆಚಾರ್ಯರ ಕಾಲದಲ್ಲಿ ಕಾಷ್ಠಾಸಂಘವು ಉದಯಿಸಿತೆಂದು ನಂ. ಆ. ಪಟ್ಟಾವಲಿ 'ಎ' ಪ್ರತಿಯಲ್ಲಿ ಹೇಳಿದೆ. ಆದರೆ ವಿಕ್ರಮನಮರಣಸಮಯದಿಂದ ೭೫೩ ರಲ್ಲಿ ವೀರಸೇನಮುನಿ ಶಿಷ್ಯರಾದ ಕುಮಾರಸೇನಮುನಿಯವರಿಂದ ಕಾಷ್ಠಾಸಂಘವು ಸ್ಥಾಪಿತವಾಗಿದೆಯೆಂದು ದೇವಸೇನಾಚಾರ್ಯ ವಿರಚಿತ ದರ್ಶನಸಾರದಲ್ಲಿ ಹೇಳಿದೆಯಾಗಿ ಈ ಸಂಘವು ವೀ. ನಿ. ಪ. (೪೯೫ + ೭೫೩=) ೧೨೪೮ (ಕ್ರಿ. ಶ. ೭೨೦) ರಲ್ಲಿ ಸ್ಥಾಪಿತವಾಗಿರಬೇಕೆಂದು ಸೂಚಿತವಾಗುವುದು. ಆದ್ದರಿಂದ ಉಮಾಸ್ವಾಮಿಆಚಾರ್ಯರ ಕಾಲದಲ್ಲಿ ಬೇರೊಂದು ಸಂಘವು ಸ್ಥಾಪಿತವಾಗಿರಬೇಕೆಂದು ಗ್ರಹಿಸಬೇಕಾಗುವುದಲ್ಲದೆ ಇಂತಹ ಯಾವುದಾದರೊಂದು ಸಂಘವು ಈ ಕಾಲದಲ್ಲಿ ಸ್ಥಾಪಿತವಾಗಿದ್ದಲ್ಲಿ ಅದು ಯಾಪನೀಯಸಂಘವಾಗಿರಬೇಕೆಂದು ಭಾವಿಸಲವಕಾಶವಿದೆ. ಯಾಪನೀಯ ಸಂಘದ ಯತಿಗಳ ಹೆಸರುಗಳು ಪ್ರಾಯಿಕವಾಗಿ 'ನಂದಿ' ಪದಾಂತ್ಯವಾದವುಗಳಾಗಿವೆ. ಇದರಿಂದ ಈ ಸಂಘವು ನಂದಿ ಸಂಘದಿಂದ ಹೊರಮೂಡಿದ ಒಂದು ಶಾಖೆಯಾಗಿರಬಹುದೆಂದು ಸೂಚಿತವಾಗುವುದು. 'ಗಣಭೇದ' ಎಂಬ ಕನ್ನಡ ಭಾಷಾಕೃತಿಯ ಹೇಳಿಕೆಯಂತೆ ಯಾಪನೀಯ ಸಂಘವು ಕುಂದಕುಂದಾನ್ವಯಾನುಗತವಾಗಿರುವುದೆಂದು ಸನ್ಮಾನ್ಯ ಎ. ಎನ್. ಉಪಾಧ್ಯೆಯವರು ಹೇಳಿದ್ದಾರೆ.[2] ಇದರಿಂದ ಯಾಪನೀಯ ಸಂಘವು ಕುಂದಕುಂದಾಚಾರ್ಯರ ಅನಂತರ ಕಾಲದಲ್ಲಿ ಉದಯಗೊಂಡಿರಬೇಕೆಂದು ಗ್ರಹಿಸಲವಕಾಶವಾಗು

---

1 ಸದ್ದವಿಯಾರೋ ಹೂಓ ಭಾಸಾಸುತ್ತೇಸು ಜಂ ಜಿಣೇ ಕಹಿಯಂ ।
ಸೋ ತಹ ಕಹಿಯಂ ಣಾಯಂ ಸೀಸೇಣಯ ಭದ್ದಬಾಹುಸ್ಸ ॥೬೧॥
[ಬೋಧಪಾಹುಡ]

ಈ ವಿಷಯವಾಗಿ ಜೈನ ಸಿದ್ಧಾಂತಭಾಸ್ಕರ–ಕಿರಣ೧–ಪು. ಸಂ. ೫೬ ರಲ್ಲಿ ಸನ್ಮಾನ್ಯ ಪಂ. ಜುಗುಲ್ ಕಿಶೋರ್‌ರವರ 'ಪ್ರವಚನಸಾರಕಾ ನಯಾ ಸಂಸ್ಕರಣ್' ಎಂಬ ಪ್ರಬಂಧವು ಗಮನಾರ್ಹವಾಗಿದೆ.

2 ಪ್ರವಚನಸಾರ ಮುನ್ನುಡಿ

ವುದು. ಇಂತೆಯೇ ಕ್ರಿ. ಶ. ೫ ನೇ ಶತಮಾನದಲ್ಲಿ ವಜ್ರನಂದಿಆಚಾರ್ಯರಿಂದ ಸ್ಥಾಪಿತವಾದ ದ್ರಾವಿಡ ಸಂಘವು ಅಸ್ತಿತ್ವದಲ್ಲಿದ್ದಿತೆಂದು ಶಾಸನಾಧಾರಗಳಿಂದ ಸೂಚಿತವಾಗುವುದು. ಆದ್ದರಿಂದ ಉಮಾಸ್ವಾಮಿ ಆಚಾರ್ಯರ ಕಾಲದಲ್ಲಿ ಉದಯ ಗೊಂಡಿತೆಂದು ನಂ. ಆ. ಪಟ್ಟಾವಲಿಯಲ್ಲಿ ಹೇಳಲಾಗಿರುವ ಸಂಘವು ಕಾಷ್ಠಾಸಂಘ ವಾಗಿರದೆ, ಯಾಪನೀಯ ಸಂಘವಾಗಿರಬೇಕೆಂದು ಪರಿಭಾವಿತವಾಗುವುದು. ಉಮಾ ಸ್ವಾಮಿ ಆಚಾರ್ಯರ ತರುವಾಯ ಲೋಹಾಚಾರ್ಯರು ನಂದಿಸಂಘದ ಪ್ರಧಾನಾ ಚಾರ್ಯರಾಗಿ ಅಧಿಷ್ಠಿತರಾಗಿದ್ದಾರೆ. ಇವರ ಅನಂತರ 'ಪ್ರಾಚ್ಯ' ಮತ್ತು 'ಉದೀಚ್ಯ' ಎಂಬ ಪಟ್ಟದ್ವಯಗಳಾದುವೆಂದು ಪಾಕ್ಷಿಕ ಪ್ರತಿಕ್ರಮಣ ಕ್ರಿಯಾಂತ ರ್ಗತಗುರುನಾಮಾವಲಿಯಲ್ಲಿ ಹೇಳಿದೆ. ಇದರಿಂದ ನಂದಿಸಂಘದಲ್ಲಿ 'ಪ್ರಾಚ್ಯ' ಮತ್ತು 'ಉದೀಚ್ಯ' ಎಂಬ ಎರಡು ಶಾಖೆಗಳು ಮೂಡಿದ್ದು, ಈ ಎರಡು ಶಾಖೆಗಳ ಪ್ರತ್ಯೇಕ ಪಟ್ಟಾನುಕ್ರಮವು ಮುಂದುವರಿದಿರಬೇಕೆಂದು ಸೂಚಿತವಾಗುವುದು.

ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಐದು ಸಂಘಭೇದಗಳಲ್ಲಿ ಕೊನೆ ಯದಾದ 'ಭದ್ರ' ಸಂಘದ ಅಧಿಪತಿಗಳಾಗಿ ಅಧಿಷ್ಠಿತರಾದ ಆಚಾರ್ಯರ ವಿಷಯವಾಗಿ ಶ್ವೇತಾಂಬರ ಜೈನ ಆಮ್ನಾಯದ ಪಟ್ಟಾವಲಿಗಳ ಈ ಮುಂದಿನ ಹೇಳಿಕೆಗಳು ಅವ ಧಾರಣಾರ್ಹವಾಗಿವೆ.

'ತುಂಬ ವನಗ್ರಾಮನಿವಾಸಿಗಳಾದ ಧನಗಿರಿ ಮತ್ತು ಸುನಂದೆಯರ ಸುತರೂ ಗೌತಮ ಗೋತ್ರಜರೂ ಸಿಂಹಗಿರಿಸ್ವಾಮಿಯವರಲ್ಲಿ ೧೧ ಅಂಗಶ್ರುತದ ಅಧ್ಯಯನ ನಡೆ ಸಿದವರೂ ದಶಪುರದಿಂದ ಅವಂತಿಗೆ(ಉಜ್ಜಯಿನಿಗೆ)ಪಯಣಮಾಡಿದವರೂ ಭದ್ರಗುಪ್ತ ಸ್ವಾಮಿಯವರಲ್ಲಿ ದೃಷ್ಟಿವಾದಾಂಗದ ಅಧ್ಯಯನಮಾಡಿದವರೂ ದಶಪೂರ್ವಧರರಲ್ಲಿ ಅಂತಿಮರೂ ಆದ ವಜ್ರಸ್ವಾಮಿಯವರಿಂದ ಭದ್ರಶಾಖೆಯು ಮೂಡಿತು.'

[ಖರತರಗಚ್ಛಪಟ್ಟಾವಲಿ–ಪೂ. ಸೂ. ಇಂಡಿಯನ್ ಆಂಟಿಕ್ವೆರಿ]

1 ಚತುಷ್ಕುಲಸಮುತ್ಪತ್ತಿ ಪಿತಾಮಹಮಹಂ ವಿಭುಂ ।
ದಶಪೂರ್ವಿವಿಧಿಂ ವಂದೇ ವಜ್ರಸ್ವಾಮಿಮುನೀಶ್ವರಂ ॥

'ವಜ್ರಸ್ವಾಮಿಯವರಿಂದ ಭದ್ರ (ಸಂಘ) ಶಾಖೆಯು ಮೂಡಿತು' ಮತ್ತು 'ವಜ್ರ ಸ್ವಾಮಿಯವರು ಚತುಷ್ಕುಲ ಸಮುತ್ಪತ್ತಿ ಪಿತಾಮಹರು' ಎಂಬ ಮೇಲ್ಕಂಡ ಹೇಳಿಕೆ ಗಳಿಂದ ನಾಲ್ಕು ಶಾಖಾಸಂಘಗಳಿಂದ ಕೂಡಿದ್ದ ಭದ್ರಸಂಘದ ಪ್ರಥಮ ಅಧಿಪತಿಯಾಗಿ ವಜ್ರಸ್ವಾಮಿಯವರು ಅಧಿಷ್ಠಿತರಾಗಿರುವರೆಂದು ಸ್ಪಷ್ಟವಾಗಿ ಸೂಚಿತವಾಗುವುದು. ವಜ್ರಸ್ವಾಮಿಯವರನ್ನು ಪ್ರಥಮ ಅಧಿಪತಿಯನ್ನಾಗಿ ಹೊಂದಿದ ಈ ಭದ್ರಸಂಘವು,

---

1 ಪಟ್ಟಾವಲೀಸಮುಚ್ಚಯದ ಹೇಳಿಕೆ_ಷಟ್ಖಂಡಾಗಮ ಜೀವಸ್ಥಾನ_ಸತ್ಪ್ರರೂ ಪಣಾ ೨_ಮುನ್ನುಡಿ_ಪು. ಸಂ. ೩೭ ರಿಂದ ಉದ್ಧೃತವಾಗಿದೆ.

ದಿಗಂಬರ ಆಮ್ನಾಯದ ಐತಿಹ್ಯೋಕ್ತಿಗಳಾಧಾರದಿಂದ ಹಿಂದೆ ಸ್ಪಷ್ಟೀಕರಿಸಿ ನಿರ್ದೇಶಿಸ ಲಾಗಿರುವ ಭದ್ರಸಂಘದಿಂದ ಅನನ್ಯವಾದುದಾಗಿದೆಯೆಂದು ಸೂಚನೆಗೊಡುವ ಇತರ ಐತಿಹ್ಯಾಂಶಗಳೂ ಇವೆ. ಇದಕ್ಕಾಗಿ ವಜ್ರಸ್ವಾಮಿಯವರ ಜೀವಿತೈತಿಹ್ಯವನ್ನು ಚಿತ್ರಿಸುವ ಶ್ವೇತಾಂಬರ ಜೈನ ಆಮ್ನಾಯದ ಈ ಮುಂದಿನ ಕಥಾಸಂಗ್ರಹವನ್ನು ಗಮನಿಸಬೇಕಾದ ಆವಶ್ಯಕತೆಯಿದೆ.

ಅವಂತೀರಾಜ್ಯದ ತುಂಬುವನ ನಿವಾಸಿಗಳಾದ ಧನಗಿರಿ ಮತ್ತು ಸುನಂದಾ ದಂಪತಿಗಳ ಸುತರಾದ ವಜ್ರಸ್ವಾಮಿಯು ಶೈಶವದಲ್ಲಿಯೇ ಜಾತಿಸ್ಮರರಾಗಿದ್ದರು. ತಮ್ಮ ಎಳೆಯ ವಯಸ್ಸಿನಲ್ಲಿಯೇ ಸಿಂಹಗಿರಿಸ್ವಾಮಿಯವರ ಮುನಿಸಂಘವನ್ನು ಸೇರಿದ ಈ ಬಾಲಮುನಿಯು ಪದಾನುಸಾರಿ ಲಬ್ಧಿಯುಳ್ಳವರಾಗಿದ್ದರು. ಅತ್ಯಲ್ಪಕಾಲ ದಲ್ಲಿಯೇ ಏಕಾದಶಾಂಗ ಶ್ರುತದ ಅಧ್ಯಯನವನ್ನು ಪೂರ್ಣಗೊಳಿಸಿದರು. ಅನಂತರ ತಮ್ಮ ಗುರುವಿನ ಆದೇಶದಂತೆ ಭದ್ರಗುಪ್ತಸ್ವಾಮಿಯವರಲ್ಲಿ ದಶಪೂರ್ವಗಳ ಅಧ್ಯಯನ ಮಾಡಲೋಸುಗ ಉಜ್ಜಯಿನಿಗೆ ಪಯಣಮಾಡಿದರು. ಇವರು ಉಜ್ಜಯಿನಿಯನ್ನು ಸೇರಲಿದ್ದ ದಿವಸದ ಪೂರ್ವಭಾವಿಯಾಗಿ ಭದ್ರಗುಪ್ತಸ್ವಾಮಿಯವರು, ಪಾತ್ರೆಯಲ್ಲಿ ತುಂಬಿದ್ದ ಹಾಲನ್ನು ತಮ್ಮ ಕೈಯಿಂದ ಆಗಂತಕನೊಬ್ಬನು ಕುಡಿದು ತೃಪ್ತಿಹೊಂದಿದ ಕನಸನ್ನು ಕಂಡು, ತಮ್ಮಿಂದ ಪೂರ್ಣವಿದ್ಯೆಯನ್ನು ಪಡೆಯಲಿರುವ ಶಿಷ್ಯನು ಬರಲಿರುವ ನೆಂದು ಸಂತೃಪ್ತರಾಗಿದ್ದರು. ಅಂತೆಯೇ ತಮ್ಮ ಬಳಿ ಬಂದ ವಜ್ರಸ್ವಾಮಿಯವರನ್ನು ಕಂಡು ಆನಂದಪರವಶರಾದರು. ವಜ್ರಸ್ವಾಮಿಯವರು ದಶಪೂರ್ವಗಳ ಅಧ್ಯಯನ ವನ್ನು ಪೂರ್ಣಗೊಳಿಸಿ, ಆಚಾರ್ಯರ ಅನುಮತಿ ಪಡೆದು, ಸಿಂಹಗಿರಿಸ್ವಾಮಿಯವರ ಬಳಿಗೆ ಹಿಂದಿರುಗಿದರು. ಸ್ವಲ್ಪಕಾಲಾನಂತರ ಸಿಂಹಗಿರಿಸ್ವಾಮಿಯವರು ವಜ್ರಸ್ವಾಮಿ ಯವರನ್ನು ಮುನಿಸಂಘದ ಆಚಾರ್ಯಪದವಿಯಲ್ಲಿ ನಿಯೋಜಿಸಿ ಸ್ವರ್ಗಸ್ಥರಾದರು. ಜನ್ಮಸಂಸಿದ್ಧಪದಾನುಸೃತಿಲಬ್ಧಿಸಂಪನ್ನರಾದ ವಜ್ರಸ್ವಾಮಿಯವರು ಕಾಲಾನಂತರದಲ್ಲಿ ಸಂಘದ ಉಪಕಾರಕ್ಕಾಗಿ ಆಚಾರಾಂಗದ ಮಧ್ಯವರ್ತಿಯಾಗಿದ್ದ ಮಹಾಪರಿಜ್ಞಾ ಧ್ಯಯನದಿಂದ ಆಕಾಶಗಾಮಿನೀ ವಿದ್ಯೆಯನ್ನು ಉದ್ಧರಿಸಿದರು. ಇಂತಿರುವಲ್ಲಿ ಒಮ್ಮೆ ದಾರುಣವಾದ ದುರ್ಭಿಕ್ಷವುಂಟಾಯಿತು. ಈ ದುಷ್ಕಾಲದಿಂದಾದ ಸಂಕಟದಿಂದ ಸಕಲ ಸಂಘವನ್ನು ಪಾರುಮಾಡಲೋಸುಗ ವಜ್ರಸ್ವಾಮಿಯವರು ವಿದ್ಯಾಶಕ್ತಿಯಿಂದ ದೊಡ್ಡ ದಾದ ಪಟವನ್ನು ರೂಪಿಸಿ ಸಂಘಸಮೇತರಾಗಿ ಆಕಾಶಯಾನಮಾಡಿ ಧನಧಾನ್ಯ ಸಮೃದ್ಧವಾದ ಮಹಾಪುರಿಯನ್ನು ಸೇರಿದರು. ಆ ನಗರದ ರಾಜನು ಬುದ್ಧದೇವನ ಉಪಾಸಕನಾಗಿದ್ದನು. ಬೌದ್ಧರ ಕೋರಿಕೆಯ ಮೇರೆಗೆ ಆ ರಾಜನು ಜಿನಭಕ್ತರಾದ ಶ್ರಾವಕರಿಗೆ ನಗರದಲ್ಲಿ ಅರ್ಚನಾಕ್ರಿಯಾವಶ್ಯಕವಾದ ಪುಷ್ಪಗಳು ದೊರೆಯದಂತೆ ಆತಂಕವುಂಟುಮಾಡಿದನು. ಶ್ರಾವಕರು ವಜ್ರಸ್ವಾಮಿಯವರ ಮರೆ ಹೊಕ್ಕು ಆತಂಕ ವನ್ನು ನಿವಾರಿಸಿ ಜಿನಧರ್ಮದ ಪ್ರಭಾವನೆಮಾಡಬೇಕೆಂದು ಪ್ರಾರ್ಥಿಸಿದರು. ಆಗ ವಜ್ರಸ್ವಾಮಿಯವರು ಆಕಾಶಮಾರ್ಗದಿಂದ ಮಾಹೇಶ್ವರೀ ಪಟ್ಟಣಕ್ಕೆ ಹೋಗಿ ಧನಗಿರಿ

ಯವರ ಮಿತ್ರನಾಗಿದ್ದ ತೋಟಗಾರನಿಗೆ ಯಥೇಚ್ಛವಾಗಿ ಪುಷ್ಪಗಳನ್ನು ಒದಗಿಸಿ ಕೊಡುವಂತೆ ಹೇಳಿ, ಅಲ್ಲಿಂದ ಪುನಃ ಆಕಾಶಮಾರ್ಗವಾಗಿ ಹಿಮವತ್ಪರ್ವತವನ್ನು ಸೇರಿ, ಶ್ರೀದೇವಿಯಿಂದ ಅನರ್ಘ್ಯವಾದ ಕಮಲಪುಷ್ಪವನ್ನು ಪಡೆದು ಹಿಂದಿರುಗಿ, ಮಾರ್ಗಮಧ್ಯದಲ್ಲಿ ಮಾಹೇಶ್ವರೀಪುರದ ತೋಟಗಾರನಿಂದ ಇಪ್ಪತ್ತು ಲಕ್ಷ ಹೂವುಗಳನ್ನು ತೆಗೆದುಕೊಂಡು, ಸ್ಮರಣಮಾತ್ರದಿಂದ ತಮ್ಮ ಬಳಿಗೆ ವಿಮಾನಗಳಲ್ಲಿ ಬಂದ ಜೃಂಭಕಾಮರರೊಡಗೊಂಡು ಮಹಾಪುರಿಗೆ ಹಿಂದಿರುಗಿದರು. ಅನಂತರ ಶ್ರಾವಕರು ಮಹಾವೈಭದಿಂದ ಪರ್ಯೂಷಣಪರ್ವವನ್ನು ಆಚರಿಸಿದರು.

ಇತ್ತ ದಶಪುರದಲ್ಲಿ ಸೋಮದೇವ ಮತ್ತು ರುದ್ರಸೋಮಾ ಎಂಬ ಬ್ರಾಹ್ಮಣ ದಂಪತಿಗಳಿಗೆ ಆರ್ಯರಕ್ಷಿತ ಮತ್ತು ಫಲ್ಗುರಕ್ಷಿತ ಎಂಬ ಇಬ್ಬರು ಮಕ್ಕಳಿದ್ದರು. ವೇದವೇದಾಂಗಪಾರಂಗತರಾದ ಆರ್ಯರಕ್ಷಿತರು ಜಿನಧರ್ಮವತ್ಸಲಳಾದ ತಮ್ಮ ತಾಯಿಯ ಪ್ರೇರಣೆಯಿಂದ ದೃಷ್ಟಿವಾದಾಂಗಶ್ರುತದ ಅಧ್ಯಯನಮಾಡಲು ನಿರ್ಣಯಿಸಿ ತೋಸಲಿಪುತ್ರಆಚಾರ್ಯರ ಬಳಿ ಹೋಗಿ, ತನ್ನ ಮನದಿಚ್ಛೆಯನ್ನು ಅವರಲ್ಲಿ ನಿವೇದಿಸಿದರು. ದೃಷ್ಟಿವಾದಶ್ರುತವನ್ನು ಅಧ್ಯಯನಮಾಡಲಿಚ್ಛಿಸುವವರು ಪ್ರವ್ರಜ್ಯೆ ಕೈಗೊಳ್ಳಬೇಕಾಗುವುದೆಂದು ಆಚಾರ್ಯರು ಹೇಳಲು, ಅದೇ ನಗರದಲ್ಲಿ ತಾನು ಮುನಿದೀಕ್ಷೆ ಕೈಗೊಂಡಲ್ಲಿ ರಾಜ ಮತ್ತು ಪುರಜನರು ಅನುರಾಗದಿಂದ ಪ್ರವ್ರಜ್ಯೆಯನ್ನು ತ್ಯಜಿಸುವಂತೆ ಮಾಡುವರೆಂದು ಮತ್ತು ಆದಕ್ಕಾಗಿ ಬೇರೊಂದೆಡೆ ಪಯಣಮಾಡಿ ಅಲ್ಲಿ ದೀಕ್ಷೆಗೊಡಬೇಕೆಂದು ಪ್ರಾರ್ಥಿಸಲು, ಅಂತೆಯೇ ಬೇರೊಂದೆಡೆಗೆ ಆಚಾರ್ಯರು ಸಾಧುಸಂಘಸಮೇತರಾಗಿ ಹೋಗಿ ಅಲ್ಲಿ ಆರ್ಯರಕ್ಷಿತರಿಗೆ ಮುನಿದೀಕ್ಷೆಯಿತ್ತರು. ಇದು ವರ್ಧಮಾನಸ್ವಾಮಿಯ ತೀರ್ಥದಲ್ಲಿ ಅನಗಾರಿಗಳ ಮೊದಲನೆಯ ಶಿಷ್ಯಚೌರ್ಯ ವ್ಯವಹಾರವಾಗಿದೆ. ಈ ರೀತಿಯಾಗಿ ಪರಿವ್ರಜಿತರಾದ ಆರ್ಯರಕ್ಷಿತಸ್ವಾಮಿಯವರು ಏಕಾದಶಾಂಗಶ್ರುತವನ್ನು ಮತ್ತು ಆ ಆಚಾರ್ಯರಿಗೆ ಪರಿಸ್ಫುಟವಿದ್ದಷ್ಟು ದೃಷ್ಟಿವಾದಾಂಗವನ್ನು ಅಧ್ಯಯನಮಾಡಿದರು. ಅನಂತರ ದೃಷ್ಟಿವಾದವು ಭೂಯಿಷ್ಟವಾಗಿ ವಜ್ರಸ್ವಾಮಿಯವರಿಗೆ ಪರಿಸ್ಫುಟವಿರುವುದೆಂದೂ ಮತ್ತು ಅವರು ಉಜ್ಜಯಿನಿಯಲ್ಲಿರುವರೆಂದೂ ವೃದ್ಧಜನೋಕ್ತಿಯಿಂದ ತಿಳಿದ ಆರ್ಯರಕ್ಷಿತಸ್ವಾಮಿಯವರು ಉಜ್ಜಯಿನಿಗೆ ಪಯಣಮಾಡಿದರು. ಆ ಸಮಯದಲ್ಲಿ ಉಜ್ಜಯಿನಿಯಲ್ಲಿ ಭದ್ರಗುಪ್ತಸ್ವಾಮಿಯವರಿದ್ದರಾಗಿ ಅವರಲ್ಲಿಗೆ ಆರ್ಯರಕ್ಷಿತಸ್ವಾಮಿಯವರು ಹೋದರು. ಆಗ ಭದ್ರಗುಪ್ತಸ್ವಾಮಿಯವರು ತಮ್ಮ ಆಯುಷ್ಯಾವಸಾನ ಸಮಯವು ಸಮೀಪಿಸಿರುವುದನ್ನು ತಿಳಿದು ಅನಶನವನ್ನಾಚರಿಸಲು ನಿರ್ಣಯಿಸಿ, ಆರ್ಯರಕ್ಷಿತಸ್ವಾಮಿಯವರನ್ನು ತಮಗೆ ನಿರ್ಯಾಮಕರಾಗಿರಬೇಕೆಂದು ಕೋರಿದರು. ಅಂತೆಯೇ ಆಗಲೆಂದು ಒಪ್ಪಿದ ಆರ್ಯರಕ್ಷಿತಸ್ವಾಮಿಯವರಿಗೆ, ವಜ್ರಸ್ವಾಮಿಯವರೊಡನೆ ಒಂದೇ ಪ್ರತಿಶ್ರಯದಲ್ಲಿ ವಾಸಮಾಡದೆ ಬೇರೊಂದು ಪ್ರತಿಶ್ರಯದಲ್ಲಿದ್ದು, ಅವರಲ್ಲಿ ಅಧ್ಯಯನಮಾಡಬೇಕೆಂದೂ ಯಾರೇ ಆಗಲಿ ವಜ್ರಸ್ವಾಮಿಯವರ ಪ್ರತಿಶ್ರಯದಲ್ಲಿ ಒಂದು ರಾತ್ರಿಯನ್ನು ಕಳೆದರೂ

ಕೂಡ ಅವನು ಮರಣದಲ್ಲಿ ವಜ್ರಸ್ವಾಮಿಯವರನ್ನು ಅನುಸರಿಸುವನೆಂದೂ ಆದೇಶವಿತ್ತು ಭದ್ರಗುಪ್ತಸ್ವಾಮಿಯವರು ಅನಶನಪೂರ್ವಕ ಸ್ವರ್ಗಸ್ಥರಾದರು. ಅನಂತರ ಆರ್ಯ ರಕ್ಷಿತಸ್ವಾಮಿಯವರು ವಜ್ರಸ್ವಾಮಿಯವರ ಬಳಿ ಹೋಗಿ ಅಪೂರ್ವ ಪ್ರತಿಭೆಯಿಂದ ಒಂಭತ್ತು ಪೂರ್ವಗಳ ಅಧ್ಯಯನವನ್ನು ಪೂರ್ಣಗೊಳಿಸಿದರು. ಮುಂದೆ ಹತ್ತನೇ ಪೂರ್ವದ ಅಧ್ಯಯನವನ್ನು ಆರಂಭಿಸಿರುವಲ್ಲಿ ಸಹೋದರನಾದ ಫಲ್ಗುರಕ್ಷಿತನು ತಂದೆ ತಾಯಿಯರ ವಾತ್ಸಲ್ಯದ ಕರೆಯನ್ನು ತಂದನಾಗಿ ಆರ್ಯರಕ್ಷಿತರ ಅಧ್ಯಯನವು ಹಿಂದಿ ನಂತೆ ಸ್ಥಿರಚಿತ್ತದಿಂದ ಸಾಗದಾಯಿತು. ಅಂತೆಯೇ ಅವರು ಗುರುವಿನಲ್ಲಿ ಅನುಜ್ಞೆ ಪಡೆದು ದಶಪುರಕ್ಕೆ ಪಯಣಮಾಡಿದರು.

ವಜ್ರಸ್ವಾಮಿಯವರು ವಿಹಾರಾನುಕ್ರಮದಿಂದ ದಕ್ಷಿಣಾಪಥವನ್ನು ಸೇರಿದರು. ದಾಕ್ಷಿಣಾತ್ಯಜನರು ವಜ್ರಸ್ವಾಮಿಯವರ ದರ್ಶನಲಾಭದಿಂದ ಅತಿಶಯವಾಗಿ ಆನಂದ ಪಟ್ಟರು. ಒಂದು ದಿನ ವಜ್ರಸ್ವಾಮಿಯವರಿಗೆ ತೀವ್ರತರವಾದ ಶ್ಲೇಷ್ಮಬಾಧೆ ಯಾಯಿತು. ಸಾಧುವೊಬ್ಬರಿಂದ ಶುಂಠಿಯನ್ನು ತರಿಸಿಕೊಂಡು ಆಹಾರಾನಂತರ ಭುಂಜಿಸುವ ಅಪೇಕ್ಷೆಯಿಂದ ಕಿವಿಯಮೇಲಿಟ್ಟುಕೊಂಡರು. ಆದರೆ ಭೋಜನಾನಂತರ ದಲ್ಲಿ ಸ್ವಾಧ್ಯಾಯಧ್ಯಾನ ವಿವಶರಾದ ಅವರಿಗೆ ಕಿವಿಯ ಮೇಲಿದ್ದ ಶುಂಠಿಯ ನೆನಪಾಗ ಲಿಲ್ಲ. ಅನಂತರ ಪ್ರದೋಷಸಮಯನಿಮಿತ್ತವಾದ ಪ್ರತಿಕ್ರಮಣಕ್ರಿಯೆಯಲ್ಲಿ ಕೊಡ ಗಿದ್ದ ಅವರ ಕಿವಿಯಿಂದ ಆ ಶುಂಠಿಯು 'ಖಟ್' ಎಂದು ಕೆಳಗೆ ಬಿದ್ದಿತು. ಇದು ನನ್ನ ಪ್ರಮಾದವಾಗಿದೆಯೆಂದು ತನ್ನನ್ನು ನಿಂದಿಸಿಕೊಂಡು ಪ್ರಮಾದವಾದಲ್ಲಿ ಸಂಯ ಮವು ನಿಷ್ಕಳಂಕವಾಗುವುದಿಲ್ಲೆಂದು ಭಾವಿಸಿ ಶರೀರತ್ಯಾಗಮಾಡಬೇಕೆಂದು ವಜ್ರ ಸ್ವಾಮಿಯವರು ಚಿಂತಿಸಿದರು. ಎಲ್ಲೆಡೆಯೂ ದ್ವಾದಶಾಬ್ದಕವಾದ ದುರ್ಭಿಕ್ಷವುಂಟಾ ಯಿತು. ಆಗ ವಜ್ರಸ್ವಾಮಿಯವರು ತಮ್ಮ ಶಿಷ್ಯರಾದ ವಜ್ರಸೇನಸ್ವಾಮಿಯವರಿಗೆ 'ನೀನು ಯಾವಂದು ಲಕ್ಷವಮೌಲ್ಯಧನದಿಂದ ಭಿಕ್ಷೆ ಪಡೆಯುವಿಯೋ ಆ ಮಾರನೆಯ ದಿನದಂದು ಸುಭಿಕ್ಷವಾಗಲಿದೆಯೆಂದು ತಿಳಿ' ಎಂದು ಹೇಳಿ ಅವರಿಗೆ ಬೇರೆಡೆ ವಿಹಾರ ಮಾಡಲು ಆದೇಶವಿತ್ತರು. ಅನಂತರ ವಜ್ರಸ್ವಾಮಿಯವರು ಮತ್ತು ಇತರ ಅನೇಕ ಸಾಧುಗಳು ಅನಶನಪೂರ್ವಕ ಪರ್ವತವೊಂದರಲ್ಲಿ ಸ್ವರ್ಗಸ್ಥರಾದರು. ಇವರ ದೇಹಾವ ಸಾನಸ್ಥಾನವಾದ ಆ ಪರ್ವತವು 'ರಥಾವರ್ತ ಪರ್ವತ' ಎಂಬ ಹೆಸರಿನಿಂದ ಸಂಸ್ತುತ ವಾಯಿತು. ದಿವಂಗತರಾದ ವಜ್ರಸ್ವಾಮಿಯವರೊಡನೆ ದಶಮಪೂರ್ವ ಮತ್ತು ಚತುರ್ಥಸಂಹನನಗಳು ಮರೆಗೊಂಡವು.

ವಜ್ರಸೇನಸ್ವಾಮಿಯವರು ತಮ್ಮ ಗುರುವರ್ಯರ ಆದೇಶದಂತೆ ವಿಹಾರವನ್ನು ಮುಂದುವರಿಸಿ, ಜಿತಶತ್ರುರಾಜನಿಂದ ಪರಿಪಾಲಿತವಾದ ಸೋಪಾರನಗರವನ್ನು ಸೇರಿ ದರು. ಆ ನಗರನಿವಾಸಿಗಳಾದ ಜಿನದತ್ತ ಮತ್ತು ಈಶ್ವರಿ ಎಂಬ ದಂಪತಿಗಳು ದುರ್ಭಿಕ್ಷದ ಸಂಕಟದಿಂದ ಪಾರಾಗಲೋಸುಗ ವಿಷಾನ್ನವನ್ನು ಭುಂಜಿಸಿ ಪಂಚನಮ

ಸ್ಕಾರಪೂರ್ವಕ ದೇಹತ್ಯಾಗಮಾಡಲು ನಿಶ್ಚಯಿಸಿದರು. ಅಂತೆಯೇ ಲಕ್ಷಮೂಲ್ಯದ ಅನ್ನವನ್ನು ಸಿದ್ಧಪಡಿಸಿ, ಅದಕ್ಕೆ ವಿಷಮಿಶ್ರಣಮಾಡಲಿರುವಷ್ಟರಲ್ಲಿ ವಜ್ರಸೇನಸ್ವಾಮಿಯವರು ಅವರಲ್ಲಿಗೆ ಹೋದರು. ಆಗ ಆ ದಂಪತಿಗಳು ವಜ್ರಸೇನಸ್ವಾಮಿಯವರಿಗೆ ಆಹಾರದಾನವಿತ್ತು, ಲಕ್ಷಮೂಲ್ಯಪಾಕದ ವಿಷಯವನ್ನು ಅವರಿಗೆ ತಿಳಿಯಪಡಿಸಿದರು. ಅದನ್ನು ಕೇಳಿದ ವಜ್ರಸೇನಸ್ವಾಮಿಯುವರು ತಮ್ಮ ಗುರುಗಳಿತ್ತಿದ್ದ ಭವಿಷ್ಯವಾಣಿಯನುಗುಣವಾಗಿ ಆ ಮರುದಿನದ ಪ್ರಭಾತ ಸಮಯಕ್ಕೆ ಸುಭಿಕ್ಷವಾಗಲಿರುವುದೆಂಬುದನ್ನು ಆ ದಂಪತಿಗಳಿಗೆ ತಿಳಿಯಪಡಿಸಿದರು. ಮಾರನೆ ದಿನದ ಪ್ರಭಾತಸಮಯದಲ್ಲಿ ಧಾನ್ಯಪೂರ್ಣವಾದ ಹಡಗು ಬಂದಿತು. ಜನರೆಲ್ಲರೂ ಸಂತುಷ್ಟರಾದರು. ವಜ್ರಸೇನಸ್ವಾಮಿಯವರು ಸ್ವಲ್ಪಕಾಲ ಆ ನಗರದಲ್ಲಿಯೇ ನಿಂತರು. ಜಿನದತ್ತ ಮತ್ತು ಈಶ್ವರೀ ದಂಪತಿಗಳು ಜಿನಾರ್ಚನೆಮಾಡಿ ಅರ್ಥಿಗಳಿಗೆ ಅರ್ಥದಾನವನ್ನಿತ್ತು, ವಜ್ರಸೇನಸ್ವಾಮಿಯವರ ಬಳಿ ಲೋಕದ್ವಯಹಿತವಾದ ವ್ರತಸ್ವೀಕಾರಮಾಡಿದರು. ಈ ರೀತಿಯಾಗಿ ಶಿಷ್ಯ-ಪ್ರಶಿಷ್ಯಾದಿ ಶಾಖೆಗಳಿಂದ ವಜ್ರಸ್ವಾಮಿಯವರ ವಂಶವು ವಟವೃಕ್ಷದಂತೆ ಪ್ರಸರಿಸಿತು.[1]

ವಜ್ರಸ್ವಾಮಿಯವರ ಜೀವನೈತಿಹ್ಯನಿರೂಪಕವಾದ ಮೇಲ್ಕಂಡ ಕಥೆಯಲ್ಲಿರುವ ಅನೇಕ ಅಂಶಗಳು ದಿಗಂಬರ ಜೈನ ಆಮ್ನಾಯದಲ್ಲಿ ಉಳಿದುಬಂದಿರುವ ಐತಿಹ್ಯಾಂತರಗಳೊಡನೆ ವಿಶೇಷ ಸಾದೃಶ್ಯತೆಯುಳ್ಳವಾಗಿವೆ. ವಜ್ರಸ್ವಾಮಿಯವರ ಪದಾನುಸಾರಿತ್ವ ಪ್ರಜ್ಞಾಶಕ್ತಿಯು ದಿಗಂಬರ ಆಮ್ನಾಯದಲ್ಲಿ ಲಕ್ಷಿತವಿರುವ 'ಪ್ರಜ್ಞಾಶ್ರಮಣತ್ವ' ದ ಲಕ್ಷಣದೊಡನೆ ಸಾದೃಶ್ಯತೆಯುಳ್ಳದ್ದಾಗಿದೆಯೆಂಬುದಲ್ಲದೆ 'ಪ್ರಜ್ಞಾಶ್ರಮಣರಲ್ಲಿ ವಜ್ರಯಶಸ್ವಾಮಿಯುವರು ಕೊನೆಯವರು' ಎಂಬ ಈ ಆಮ್ನಾಯದ ಐತಿಹ್ಯವು ಪ್ರಕೃತಸಂದರ್ಭದಲ್ಲಿ ಗಮನಾರ್ಹವಾಗುವುದು. ಮೇಲ್ಕಂಡ ಕಥೆಯಲ್ಲಿ ಉಕ್ತವಿರುವ ವಜ್ರಸ್ವಾಮಿಯವರಿಂದಾದ ಜಿನಧರ್ಮಪ್ರಭಾವನಾಪ್ರಸಂಗವು ದಿಗಂಬರ ಆಮ್ನಾಯದಲ್ಲಿ, ಸಮ್ಯಗ್ದರ್ಶನದ ಎಂಟನೆ ಅಂಗವಾದ ಪ್ರಭಾವನಾಂಗದ ಸಂಬಂಧವಾಗಿ ಪ್ರಸ್ತುತವಿರುವ, ವಜ್ರಸ್ವಾಮಿಯವರ ಕಥಾಪ್ರಸಂಗದೊಡನೆ ವಿಶೇಷ ಸಾದೃಶ್ಯತೆಯುಳ್ಳದ್ದಾಗಿದೆ. ಈ ಸಾದೃಶ್ಯತೆಗಳು ಕೇವಲ ಆಕಸ್ಮಿಕವಾಗಿ ರೂಪುಗೊಂಡವುಗಳಾಗಿರದೆ ಏಕೈಕ ಮೂಲ ಐತಿಹ್ಯದ ನಾನಾ ಪ್ರಸಂಗಗಳು ಈ ಎರಡು ಆಮ್ನಾಯಗಳಲ್ಲಿ ಕಾಲಾನುಕ್ರಮವಾಗಿ ವಿಭಿನ್ನತೆಯ ರೂಪವನ್ನು ತಳೆದು ಉಳಿದುಬಂದಿರುವುದು ಕಾರಣವಾಗಿದೆ.

ವಜ್ರಸ್ವಾಮಿಯವರ ಜೀವಿತಸಮಯದಲ್ಲಿ ಎರಡುಬಾರಿ ದುರ್ಭಿಕ್ಷವು ಸಂಘಟಿಸಿದಂತೆ ಮೇಲ್ಕಂಡ ಕಥೆಯಿಂದ ಸೂಚಿತವಾಗುವುದು. ಎರಡನೆಯ ಬಾರಿ ಸಂಘಟಿಸಿದ ದ್ವಾದಶ ವಾರ್ಷಿಕ ದುರ್ಭಿಕ್ಷದ ಸಮಯದಲ್ಲಿ ವಜ್ರಸ್ವಾಮಿಯವರು ದಕ್ಷಿಣಭಾರತ

---

1 ಈ ಕಥೆಯನ್ನು ಪರಿಶಿಷ್ಟಪರ್ವದಿಂದ ಸಂಗ್ರಹಿಸಿದೆ.

ಪ್ರದೇಶದಲ್ಲಿ ಸಂಚರಿಸುತ್ತಿದ್ದರೆಂಬ ಕಥೆಯು ಸ್ಪಷ್ಟ ಹೇಳಿಕೆಯಿದೆ. ಭದ್ರಬಾಹು ಸ್ವಾಮಿಯವರ ಐತಿಹ್ಯಪ್ರರೂಪಕವಾದ ದಿಗಂಬರ ಆಮ್ನಾಯದ ಕಥೆಗಳಲ್ಲಿ ದ್ವಾದಶ ವಾರ್ಷಿಕ ದುರ್ಭಿಕ್ಷ ನಿಮಿತ್ತದಿಂದ ನಿರ್ಗ್ರಂಥಯತಿಸಂಘವು ದಕ್ಷಿಣಭಾರತಕ್ಕೆ ಪಯಣ ಕೈಗೊಂಡ ಐತಿಹ್ಯವು ಉಳಿದುಬಂದಿರುವುದೆಂಬುದಲ್ಲದೆ ಶ್ರ. ಬೆಳಗುಳದ ೧ ನೇ ಶಾಸನ ದಲ್ಲಿಯೂ ಈ ಘಟನೆಯ ಪ್ರಸ್ತಾಪವಿರುವುದು ವಿದಿತವಿದೆ. ಇದರಿಂದ ದ್ವಾದಶ ವಾರ್ಷಿಕ ದುರ್ಭಿಕ್ಷದ ಏಕೈಕ ಘಟನೆಯು ಶ್ವೇತಾಂಬರ ಆಮ್ನಾಯದಲ್ಲಿ ವಜ್ರಸ್ವಾಮಿ ಯವರ ಐತಿಹ್ಯಾಂತರ್ಗತವಾಗಿಯೂ ದಿಗಂಬರ ಆಮ್ನಾಯದಲ್ಲಿ ಭದ್ರಬಾಹುಸ್ವಾಮಿ ಯವರ ಐತಿಹ್ಯಾಂತರ್ಗತವಾಗಿಯೂ ಉಳಿದುಬಂದಿರಬಹುದಾದ ಸಂಭವವಿದೆಯೆಂದು ಭಾವಿಸಲವಕಾಶವಾಗುವುದು. ವಜ್ರಸ್ವಾಮಿಯವರು ಅಂತಿಮ ದಶಪೂರ್ವಿಗಳಾಗಿರು ವರೆಂದು ಮತ್ತು ಇವರು ವೀ. ನಿ. ಪ. ೫೮೪ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರುವರೆಂದು ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳಲ್ಲಿ ಹೇಳಿದೆ. ದಿಗಂಬರ ಆಮ್ನಾಯದನು ಗುಣವಾಗಿ ದಶಪೂರ್ವಿಗಳ ಕಾಲವು ವೀ. ನಿ. ಪ. ೩೪೫ ನೇ ವರ್ಷಕ್ಕೆ ಕೊನೆ ಗೊಂಡಿದ್ದು, ವೀ. ನಿ. ಪ. ೫೮೪ ನೇ ವರ್ಷದ ಸಮಯದಲ್ಲಿ ಆಚಾರಾಂಗಶ್ರುತಧರರ ಕಾಲವು ಪ್ರವರ್ತಿತವಿದ್ದಿತು. ಇದರಿಂದ ದಿಗಂಬರ ಆಮ್ನಾಯದನುಗುಣವಾಗಿ ವಜ್ರಸ್ವಾಮಿಯವರನ್ನು ದಶಪೂರ್ವಿವರ್ಗದ ಆಚಾರ್ಯರನ್ನಾಗಿ ಪರಿಗಣನೆಮಾಡ ಲಾಗುವುದಿಲ್ಲವೆಂಬುದು ನಿಜ. ಆದರೆ ಚತುರ್ದಶಪೂರ್ವಿ, ದಶಪೂರ್ವಿ ಎಂದು ಮುಂತಾದ ಶ್ರುತಜ್ಞತೆಯ ಪದವಿಗಳನ್ನು ನಿರ್ದೇಶಿಸುವಲ್ಲಿ ದಿಗಂಬರ ಮತ್ತು ಶ್ವೇತಾಂಬರ ಆಮ್ನಾಯಗಳ ಮಧ್ಯೆ ನಿಬಂಧನವೊಂದರ ಅಂತರವಿರುವುದನ್ನು ಗಮನಿಸ ಬೇಕಾಗಿದೆ. ದಿಗಂಬರ ಆಮ್ನಾಯದನುಸಾರವಾಗಿ ದ್ವಾದಶಾಂಗ (ಚತುರ್ದಶಪೂರ್ವ) ಶ್ರುತದ ಸಮಸ್ತ ಪದ ಮತ್ತು ಅರ್ಥಗಳನ್ನು ಅಭಿನ್ನರೀತಿಯಿಂದ ಪರಿಪೂರ್ಣವಾಗಿ ಧಾರಣೆಮಾಡಿದವರು ಚತುರ್ದಶಪೂರ್ವಿಗಳೆಂದೂ ಇಂತೆಯೇ ದಶಪೂರ್ವಪರ್ಯಂತದ ಶ್ರುತವನ್ನು ಅಭಿನ್ನರೀತಿಯಿಂದ ಪರಿಪೂರ್ಣವಾಗಿ ಧಾರಣೆಮಾಡಿದವರು ದಶಪೂರ್ವಿ ಗಳೆಂದೂ ಪರಿಗಣಿತರಾಗುವರು. ಶ್ವೇತಾಂಬರ ಆಮ್ನಾಯದಲ್ಲಿ ಇಂತಹ ನಿಬಂಧನೆ ಯಿದ್ದಂತೆ ಕಂಡುಬರುವುದಿಲ್ಲ. ಉದಾಹರಣೆಯಾಗಿ ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳ ಹೇಳಿಕೆಯಂತೆಯೇ ಸ್ಥೂಲಭದ್ರಸ್ವಾಮಿಯವರು ವಸ್ತುದ್ವಯದಿಂದ ನ್ಯೂನವಾದ ದಶಪೂರ್ವಗಳನ್ನು ಸೂತ್ರ ಮತ್ತು ಅರ್ಥಗಳಿಂದಲೂ ಮತ್ತು ಕೊನೆಯ ನಾಲ್ಕು ಪೂರ್ವಗಳನ್ನು ಸೂತ್ರಮಾತ್ರದಿಂದ ಧಾರಣೆಮಾಡಿದವರಾಗಿದ್ದರೂ ಚತು ರ್ದಶಪೂರ್ವಿಗಳೆನಿಸಿ ಸಂಸ್ತುತರಾಗಿದ್ದಾರೆ. ಇದರಿಂದ ಚತುರ್ದಶಪೂರ್ವ ಅಥವಾ ದಶಪೂರ್ವಗಳ ಸೂತ್ರ ಮತ್ತು ಅರ್ಥಗಳನ್ನು ಅಭಿನ್ನ ರೀತಿಯಿಂದ ಪರಿಪೂರ್ಣವಾಗಿ ಧಾರಣೆಮಾಡಿದವರನ್ನು ಚತುರ್ದಶಪೂರ್ವಿ ಅಥವಾ ದಶಪೂರ್ವಿ ಎಂದು ನಿರ್ದೇಶಿಸುವ ನಿಬಂಧನವು ಶ್ವೇತಾಂಬರ ಆಮ್ನಾಯದಲ್ಲಿ ಅಂಗೀಕೃತವಾದದ್ದಾಗಿಲ್ಲವೆಂದು ಸ್ಪಷ್ಟ ವಾಗುವುದು. ಆದ್ದರಿಂದ ದಿಗಂಬರ ಆಮ್ನಾಯದ ದಶಪೂರ್ವಿಗಳ ಕಾಲಾಪೇಕ್ಷೆ

ಯಿಂದ ಶ್ವೇತಾಂಬರ ಆಮ್ನಾಯದಲ್ಲಿ ಅಂತಿಮ ದಶಪೂರ್ವಿಗಳೆನಿಸಿ ಸಂಸ್ತುತರಾಗಿರುವ ವಜ್ರಸ್ವಾಮಿಯವರ ಜೀವಿತಕಾಲವು ಪ್ರಶ್ನವಶವಾಗುವುದಿಲ್ಲ. ಆದರೆ ವಜ್ರಸ್ವಾಮಿಯವರ ಪಟ್ಟಾನುಕ್ರಮ ಮತ್ತು ಇವರ ಹಿರಿಯ ಹಾಗೂ ಕಿರಿಯ ಯತಿಗಳ ಜೀವಿತ ಕಾಲಗಳನ್ನು ಹೇಳುವಲ್ಲಿ ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳಲ್ಲಿಯೇ ಮತ ಭೇದಗಳಿರುವುದನ್ನು ಪ್ರಸಕ್ತ ಸಂದರ್ಭದಲ್ಲಿ ಗಮನಿಸಬೇಕಾಗುವುದು.

ಸಿಂಹಗಿರಿಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾಗಿ ೩೬ ವರ್ಷ ಕಾಲ ಸೂರಿಪದವಿಯಲ್ಲಿದ್ದ ವಜ್ರಸ್ವಾಮಿಯವರು ಸುಧರ್ಮಗಣಧರಸ್ವಾಮಿಯವರಾದಿಯಾಗಿ ೧೩ ನೇ ಪಟ್ಟಧರರಾಗಿದ್ದರೆಂದು ತಪಾಗಚ್ಛಪಟ್ಟಾವಲಿಯನುಸೃತವಾದ ಐತಿಹ್ಯವಿದೆ. ಖರತರಗಚ್ಛಪಟ್ಟಾವಲಿಯನುಸೃತವಾದ ಐತಿಹ್ಯದಂತೆ ಇವರು ಶ್ರೀ ವೀರತೀರ್ಥಂಕರನಾದಿಯಾಗಿ ೧೬ ನೇ ಪಟ್ಟಧರರೆನಿಸಿ (ಸುಧರ್ಮಗಣಧರಸ್ವಾಮಿಯವರಾದಿಯಾಗಿ ೧೫ ನೇ ಪಟ್ಟಧರರೆನಿಸಿ) ಪರಿಗಣಿತರಾಗಿದ್ದಾರೆ. 'ಶ್ರ. ಭ. ಮಹಾವೀರ' ಕೃತಿಕಾರರು ವಜ್ರಸ್ವಾಮಿಯವರ ಜೀವನೈತಿಹ್ಯವನ್ನು ನಿರೂಪಿಸುವಲ್ಲಿ [ಪು. ಸಂ. 251, 273] ಈ ಆಚಾರ್ಯರ ಪಟ್ಟಕಾಲವೇ ಮುಂತಾದವುಗಳ ವಿಷಯವಾಗಿ ತಪಾಗಚ್ಛಪಟ್ಟಾವಲಿಯ ಮೇಲ್ಕಂಡ ಐತಿಹ್ಯವನ್ನು ಅನುಸರಿಸಿರುವರಾದರೂ ಕೃತಿಯ ಅಂತ್ಯಭಾಗದಲ್ಲಿತ್ತಿರುವ ಚೌಬಂಧದಲ್ಲಿ [ಪು. ಸಂ. 338] ವಜ್ರಸ್ವಾಮಿಯವರನ್ನು ಶ್ರೀ ಗುಪ್ತಾಚಾರ್ಯರ ಅನಂತರವರ್ತಿಯಾಗಿ ಪಟ್ಟಸ್ಥರಾದ ಆಚಾರ್ಯರನ್ನಾಗಿಯೂ ಮತ್ತು ಸುಧರ್ಮಗಣಧರಸ್ವಾಮಿಯವರಾದಿಯಾಗಿ ೧೮ ನೇ ಪಟ್ಟಧರರನ್ನಾಗಿಯೂ ನಿರ್ದೇಶಿಸಿದ್ದಾರೆ. ಇಷ್ಟಲ್ಲದೆ ಶ್ರೀ ಗುಪ್ತಸ್ವಾಮಿಯವರ ಪೂರ್ವಾಚಾರ್ಯರೆನಿಸಿ 'ಶ್ರ. ಭ. ಮಹಾವೀರ' ಕೃತಿಯಲ್ಲಿ ನಿರ್ದೇಶಿತರಾಗಿರುವ ಭದ್ರಗುಪ್ತಸ್ವಾಮಿಯವರ ಜೀವಿತಾಂತ್ಯಸಮಯ ಮತ್ತು ಇವರ ನಿರ್ಯಾಮಕರೆನಿಸಿ ಹಾಗೂ ವಜ್ರಸ್ವಾಮಿಯವರ ಶಿಷ್ಯರೆನಿಸಿ ನಿರ್ದೇಶಿತರಾಗಿರುವ ಆರ್ಯರಕ್ಷಿತಸ್ವಾಮಿಯವರ ದೀಕ್ಷಾದಾನಸಮಯಗಳ ವಿಷಯಗಳು ವಿವಾದಾಸ್ಪದವಾಗಿದ್ದು, ತಪಾಗಚ್ಛಪಟ್ಟಾವಲಿಯಲ್ಲಿ ಚರ್ಚಿತವಾಗಿರುವುದನ್ನು ಕಾಣಬಹುದು. ಇದರಿಂದ ವಜ್ರಸ್ವಾಮಿಯವರು ವೀ. ನಿ. ಪ. ೫೮೪ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರುವರೆಂಬ ಗಣನೆಯ ತಥ್ಯವೂ ಪ್ರಶ್ನವಶವಾಗುವುದಾದ್ದರಿಂದ ಪರಿಶೀಲನಾರ್ಹವಾಗುವುದು.

ಭದ್ರಗುಪ್ತಸ್ವಾಮಿಯವರು ನಿರ್ಗ್ರಂಥಯತಿಸಂಘದ ಪ್ರಧಾನಾಚಾರ್ಯರಾಗಿದ್ದ ಸಮಯದಲ್ಲಿ ಸಿಂಹಗಿರಿಸ್ವಾಮಿಯವರು ಶಾಖಾಸಂಘವೊಂದರ ಆಚಾರ್ಯರಾಗಿದ್ದರೆಂದು ಕಥಾಪರಿಶೀಲನದಿಂದ ಸೂಚಿತವಾಗುವುದು. ಅಂತೆಯೇ ಸಿಂಹಗಿರಿಸ್ವಾಮಿಯವರು ಸ್ವರ್ಗಸ್ಥರಾದ ತರುವಾಯ ವಜ್ರಸ್ವಾಮಿಯವರು ಆ ಶಾಖಾಸಂಘದ ಆಚಾರ್ಯರಾಗಿ ಅಧಿಷ್ಠಿತರಾಗಿದ್ದಾರೆಂದು ವ್ಯಕ್ತವಾಗುವುದು. ದಿಗಂಬರ ಆಮ್ನಾಯದ ಐತಿಹ್ಯದನುಗುಣವಾಗಿ 'ಗುಪ್ತಿಗುಪ್ತ' ಎಂಬುದು ಅರ್ಹದ್ಬಲಿಸ್ವಾಮಿಯವರ

ನಾಮಾಂತರವಾಗಿದೆಯೆಂದು ಹಿಂದೆ ಸ್ಪಷ್ಟಗೊಂಡಿದ್ದು, ಇವರಿಂದ ವ್ಯವಸ್ಥಿತವಾದ ಸಂಘಗಳಲ್ಲೊಂದು 'ಭದ್ರ' ಎಂಬ ಹೆಸರಿನದಾಗಿದ್ದಿತೆಂಬುದು ಸ್ಪಷ್ಟಗೊಂಡಿದೆ. ವಜ್ರಸ್ವಾಮಿಯವರಿಂದ ಚತುಷ್ಕುಲಯುಕ್ತವಾದ ಭದ್ರಶಾಖೆಯು ಆರಂಭಗೊಂಡಿತೆಂಬ ಪೂರ್ವೋಲ್ಲಿಖಿತ ತಪಾಗಚ್ಛಪಟ್ಟಾವಲಿಯ ಐತಿಹ್ಯವು (ಗುಪ್ತಿ-) ಗುಪ್ತ-ಅರ್ಹದ್ಬಲಿ ಸ್ವಾಮಿಯವರಿಂದ ವ್ಯವಸ್ಥಿತವಾದ ಸಂಘಗಳಲ್ಲೊಂದಾದ ಭದ್ರಸಂಘದ ಪ್ರಧಾನಾ ಚಾರ್ಯರಾಗಿ ವಜ್ರಸ್ವಾಮಿಯವರು ಅಧಿಷ್ಠಿತರಾಗಿರುವರೆಂದು ಸೂಚನೆಗೊಡುವುದು ಇಷ್ಟಲ್ಲದೆ ವಜ್ರಸ್ವಾಮಿಯವರ ಅನ್ವಯಾನುಕ್ರಮದ ಆಚಾರ್ಯರ ಹೆಸರುಗಳೆನಿಸಿ ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳಲ್ಲಿ ನಿರ್ದೇಶಿತವಿರುವ ವಜ್ರಸೇನ, ಚಂದ್ರ ಸೇನ ಮತ್ತು ಸಮಂತಭದ್ರ ಎಂಬ ಹೆಸರುಗಳಿಂದಲೂ ಭದ್ರ, ಸೇನ (ರಾಜ ಮತ್ತು ವೀರ) ಎಂಬ ಶಾಖಾಸಂಘಯುಕ್ತವಾದ ಭದ್ರಸಂಘದ ಪ್ರಥಮ ಆಚಾರ್ಯರಾಗಿ ವಜ್ರಸ್ವಾಮಿಯವರು ಅಧಿಷ್ಠಿತರಾಗಿರುವರೆಂಬುದು ಸಮರ್ಥಿತವಾಗುವುದು. ಅಂತೆಯೇ 'ಶ್ರ. ಭ. ಮಹಾವೀರ' ಕೃತಿಕಾರರು ಯಾವ ಐತಿಹ್ಯದಾಧಾರದಿಂದ ಗುಪ್ತಾಚಾರ್ಯರ ತರುವಾಯ ವಜ್ರಸ್ವಾಮಿಯವರು ಆಚಾರ್ಯಪದಾಧಿಷ್ಠಿತರಾಗಿರುವರೆಂದು ನಿರ್ದೇಶಿ ಸಿರುವರೋ ಆ ಐತಿಹ್ಯದ ತಥ್ಯವು ಪ್ರಮಾಣೀಕೃತವಾದಂತಾಗುವುದು.

ವಜ್ರಸ್ವಾಮಿಯವರು ದ್ವಾದಶವಾರ್ಷಿಕ ಕ್ಷಾಮಗಾಲದಲ್ಲಿ ದಕ್ಷಿಣಭಾರತದಲ್ಲಿದ್ದ ರೆಂದು ಪೂರ್ವೋಲ್ಲಿಖಿತ ಕಥಾನಕದಲ್ಲಿ ಹೇಳಿರುವುದು ಸ್ಪಷ್ಟವಿದೆ. ಇದೇ ದ್ವಾದಶ ವಾರ್ಷಿಕ ಕ್ಷಾಮಗಾಲದ ನಿಮಿತ್ತವಾಗಿ ಭದ್ರಬಾಹುಸ್ವಾಮಿಯವರು ದಕ್ಷಿಣಭಾರತಕ್ಕೆ ಪಯಣಕೈಗೊಂಡ ಐತಿಹ್ಯವು ದಿಗಂಬರ ಆಮ್ನಾಯದ ಭದ್ರಬಾಹುಕಥಾನಕಗಳಲ್ಲಿ ಉಳಿದುಬಂದಿರುವುದಲ್ಲದೆ ಈ ಐತಿಹ್ಯವು ಶ್ರ. ಬೆಳಗುಳದ ೧ ನೇ ಶಾಸನದಲ್ಲಿಯೂ ಉತ್ಕೀರ್ಣಗೊಂಡಿರುವುದು ವಿದಿತವಿದೆ. ಈ ಹಿಂದೆ ವಿವರಿಸಿರುವಂತೆ (ತೃ) ಭದ್ರಬಾಹು ಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾದ ಗುಪ್ತಗುಪ್ತಿ (ಅರ್ಹದ್ಬಲಿ) ಸ್ವಾಮಿಯವರಿಂದ ವ್ಯವಸ್ಥಿತವಾದ ಸಂಘಗಳಲ್ಲೊಂದಾದ ಭದ್ರಸಂಘದ ಪ್ರಥಮ ಆಚಾರ್ಯರಾಗಿ ವಜ್ರಸ್ವಾಮಿಯವರು ಅಧಿಷ್ಠಿತರಾಗಿರುವರೆಂದು ವ್ಯಕ್ತಪಟ್ಟಿದೆ. ಆದ್ದರಿಂದ ಭದ್ರಬಾಹುಸ್ವಾಮಿಯವರು ದಕ್ಷಿಣದೇಶದತ್ತ ಪಯಣಮಾಡುವ ಉದ್ದೇಶ ದಿಂದ ಉಜ್ಜಯಿನಿಯನ್ನು ಬಿಡುವ ಮುನ್ನ ಎಲ್ಲ ನಿರ್ಗ್ರಂಥಯತಿಗಳಿಗಿತ್ತ ಆದೇಶಾನು ಸಾರವಾಗಿಯೇ ವಜ್ರಸ್ವಾಮಿಯವರು ತಮ್ಮ ಮುನಿತಂಡದೊಡನೆ ದಕ್ಷಿಣದೇಶದತ್ತ ಪಯಣಕೈಗೊಂಡಿರುವರೆಂದು ಗ್ರಹಿಸಲವಕಾಶವಾಗುವುದು. ಇಂತೆಯೇ ಸಂಘ ವ್ಯವಸ್ಥಾಪಕರೆನಿಸಿ, ದಿಗಂಬರ ಆಮ್ನಾಯದಲ್ಲಿ ಹೆಸರಿಸಲಾಗಿರುವ ಗುಪ್ತಗುಪ್ತಿ-ಅರ್ಹದ್ಬಲಿಸ್ವಾಮಿಯವರನ್ನು ಶ್ವೇತಾಂಬರ ಆಮ್ನಾಯದಲ್ಲಿ 'ಗುಪ್ತಾಚಾರ್ಯ' ಎಂಬುದಾಗಿ ಹೆಸರಿಸಿದೆಯೆಂಬುದೂ ಸ್ಪಷ್ಟಗೊಂಡಿದೆ. ಇದರಿಂದ (ಗುಪ್ತಗುಪ್ತಿ-ಅರ್ಹದ್ಬಲಿಸ್ವಾಮಿಯವರ ಪೂರ್ವಾಚಾರ್ಯರಾದ) (ತೃ.) ಭದ್ರಬಾಹುಸ್ವಾಮಿಯವ

ರನ್ನು ಶ್ವೇತಾಂಬರ ಆಮ್ನಾಯದಲ್ಲಿ (ಗುಪ್ತಾಚಾರ್ಯರ ಪೂರ್ವಾಚಾರ್ಯರೆನಿಸಿ) 'ಭದ್ರಗುಪ್ತ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ವ್ಯಕ್ತವಾಗುವುದು.

ವಜ್ರಸ್ವಾಮಿಯವರ ಜೀವಿತಕಾಲದಲ್ಲಿ ಅವರಿಂದಾದ ಧರ್ಮಪ್ರಭಾವನಾ ಘಟನೆಯ ಪೂರ್ವಭಾವಿಯಾಗಿ ಒಮ್ಮೆ ಮತ್ತು ಆರ್ಯರಕ್ಷಿತಸ್ವಾಮಿಯವರಿಗೆ ನವಮ ಪೂರ್ವಪರ್ಯಂತದ ಶ್ರುತವಿದ್ಯೋಪದೇಶಮಾಡಿದ ತರುವಾಯ ಮತ್ತೊಮ್ಮೆ ಹೀಗೆ ಎರಡುಬಾರಿ ದುರ್ಭಿಕ್ಷವು ಸಂಘಟಿಸಿರುವುದೆಂದು ಪೂರ್ವೋಲ್ಲಿಖಿತ ಕಥಾನಕದಿಂದ ನಿರ್ದೇಶಿತವಾಗುವುದು. ದಿಗಂಬರ ಆಮ್ನಾಯದ ಪ್ರಭಾವನಾಂಗಸಂಬಂಧಿಯಾದ ವಜ್ರಸ್ವಾಮಿಕಥಾನಕದಿಂದ ಸೂಚಿತವಾಗುವಂತೆ ವಜ್ರಸ್ವಾಮಿಯವರಿಂದಾದ ಧರ್ಮ ಪ್ರಭಾವನೆಯ ಘಟನೆಯು ಮಥುರಾ ನಗರದಲ್ಲಿ ಸಂಘಟಿಸಿದೆ. ಇದರಿಂದ ಭದ್ರ ಬಾಹುಸ್ವಾಮಿಯವರು ಕಳ್ಬಪ್ಪುವಿನಲ್ಲಿ (ಶ್ರ. ಬೆಳಗುಳದಲ್ಲಿ) ಸಲ್ಲೇಖವನ್ನು ಕೈಗೊಂಡ ತರುವಾಯ ಆಚಾರ್ಯರಾದ ಗುಪ್ತಗುಪ್ತಿ-ಅರ್ಹದ್ಬಲಿಸ್ವಾಮಿಯವರೊಡನೆ ಮುನಿ ಸಂಘವು ದಮಿಳದೇಶವನ್ನು ಸೇರಿದೆಯೆಂದೂ ಅನಂತರ ವಜ್ರಸ್ವಾಮಿಯವರಿಂದಾದ ಈ ಧರ್ಮಪ್ರಭಾವನೆಯ ಪ್ರಸಂಗವು ದಕ್ಷಿಣಮಥುರೆಯಲ್ಲಿ ಸಂಘಟಿಸಿರುವುದೆಂದೂ ಮತ್ತು ಇಲ್ಲಿಯೇ ಆರ್ಯರಕ್ಷಿತಸ್ವಾಮಿಯವರು ವಜ್ರಸ್ವಾಮಿಯವರಿಂದ ಶ್ರುತವಿದ್ಯೋ ಪದೇಶಪಡೆದಿರುವರೆಂದೂ ಪರಿಭಾವಿತವಾಗುವುದು. (ತೃ.) ಭದ್ರಬಾಹುಸ್ವಾಮಿ ಯವರು ಕಳ್ಬಪ್ಪುವಿನಲ್ಲಿ ತಮ್ಮ ಜೀವಿತಾಂತ್ಯಸಮಯವನ್ನು ಕಳೆಯಲು ನಿರ್ಣ ಯಿಸಿದ ಅನಂತರ ಅವರೊಡನೆ ಪ್ರಭಾಚಂದ್ರರೆಂಬ ಶಿಷ್ಯರೊಬ್ಬರಿದ್ದರೆಂದು ಶ್ರ. ಬೆಳ ಗುಳದ ೧ ನೇ ಶಾಸನದಲ್ಲಿ ಹೇಳಿರುವುದು ವಿದಿತವಿದೆ. ಶ್ವೇತಾಂಬರ ಆಮ್ನಾಯ ದಲ್ಲಿ, ಈ ಹಿಂದೆ ವಿವರಿಸಿರುವಂತೆ ಭದ್ರಬಾಹುಸ್ವಾಮಿಯವರನ್ನು 'ಭದ್ರಗುಪ್ತ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯಾಗಿ, ಇವರ ದೇಹಾವಸಾನಸಮಯದಲ್ಲಿ ನಿರ್ಯಾ ಮಕರಾಗಿದ್ದರೆಂದು ಹೇಳಲಾಗಿರುವ ಆರ್ಯರಕ್ಷಿತಸ್ವಾಮಿಯವರನ್ನೇ ಶ್ರ. ಬೆಳಗುಳದ ೧ ನೇ ಶಾಸನದಲ್ಲಿ 'ಪ್ರಭಾಚಂದ್ರ' ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆಯೆಂದು ಗ್ರಹಿಸಬೇಕಾಗುವುದು. 'ಆರ್ಯರಕ್ಷಿತ' ಎಂಬುದು ಗೃಹಸ್ಥಪರ್ಯಾಯದ ಹೆಸ ರಾಗಿದ್ದು, ಯತಿಪರ್ಯಾಯದಲ್ಲಿಯೂ ಇವರನ್ನು ಇದೇ ಹೆಸರಿನಿಂದ ನಿರ್ದೇಶಿಸ ಲಾಗಿದೆಯೆಂದು ಪೂರ್ವೋಲ್ಲಿಖಿತ ಕಥೆಯ ಪರಾಮರ್ಶೆಯಿಂದ ವ್ಯಕ್ತವಾಗುವುದು. ಯತಿದೀಕ್ಷೆಪಡೆಯುವಾಗ ನೂತನವಾಗಿ ನಾಮಕರಣಮಾಡುವ ರೂಢಿಯಿರುವುದಾ ದ್ದರಿಂದ ಆರ್ಯರಕ್ಷಿತರು ಯತಿದೀಕ್ಷೆಪಡೆದ ಸಮಯದಲ್ಲಿ 'ಪ್ರಭಾಚಂದ್ರ' ಎಂಬ ನೂತನ ಹೆಸರನ್ನು ಹೊಂದಿದ್ದಿರಬೇಕೆಂದೂ ಮತ್ತು ಶ್ರ. ಬೆಳಗುಳದ ೧ ನೇ ಶಾಸನ ದಲ್ಲಿ ಇವರನ್ನು ಈ ಯತಿಪರ್ಯಾಯದ 'ಪ್ರಭಾಚಂದ್ರ' ಎಂಬ ಹೆಸರಿನಿಂದ ನಿರ್ದೇ

ಶಿಸಲಾಗಿದೆಯೆಂದೂ ಭಾವಿಸಲವಕಾಶವಾಗುವುದು.[1]

ಗುಪ್ತಗುಪ್ತಿ – ಅರ್ಹದ್ಬಲಿಸ್ವಾಮಿಯವರು ಶಾ. ಶಕ ೨೬ ನೇ ವರ್ಷದಲ್ಲಿ ಆಚಾರ್ಯಪದಾಧಿಷ್ಠಿತರಾಗಿದ್ದು, ಯುಗಪ್ರತಿಕ್ರಮಣನಿಮಿತ್ತ ಯತಿಗಳೆಲ್ಲರೂ ಒಂದೆಡೆ ಸೇರಿದ್ದ ಸಂದರ್ಭದಲ್ಲಿ ಸಂಘವ್ಯವಸ್ಥೆಮಾಡಿರುವವರಾದ್ದರಿಂದ ಭದ್ರಸಂಘದ ಪ್ರಥಮ ಆಚಾರ್ಯರಾಗಿ ಅಧಿಷ್ಠಿತರಾದ ವಜ್ರಸ್ವಾಮಿಯವರು ಶಾ. ಶಕ (೨೬+೫=) ೩೧ ನೇ ವರ್ಷದಲ್ಲಿ (ವೀ. ನಿ. ಪ. ೬೩೭ ನೇ ವರ್ಷದಲ್ಲಿ) ಜೀವಿಸಿದ್ದರೆಂದು ಖಚಿತವಾಗುವುದು. ಉತ್ತರಭಾರತ ಪ್ರದೇಶದಲ್ಲಿ ವೀ. ನಿ. ಪ. ೬೩೨ ನೇ ವರ್ಷದ ಪರಿಸರದಲ್ಲಿ ದ್ವಾದಶವಾರ್ಷಿಕವಾದ ಕ್ಷಾಮಗಾಲವು ಆರಂಭವಾಗಿರಬೇಕೆಂದು ಹಿಂದೆ ವಿವರಿಸಿದೆ. ಅಂತೆಯೇ ಈ ಕ್ಷಾಮಗಾಲವು ವೀ. ನಿ. ಪ. ೬೪೪ ನೇ ವರ್ಷದ ಪರಿಸರದಲ್ಲಿ ಕೊನೆಗೊಂಡಿದೆಯೆಂದು ಪರಿಗಣಿತವಾಗುವುದು. ವಜ್ರಸ್ವಾಮಿಯವರು ತಮ್ಮ ಶಿಷ್ಯರಾದ ವಜ್ರಸೇನಸ್ವಾಮಿಯವರಿಗೆ ದುರ್ಭಿಕ್ಷವು ಅಂತ್ಯಗೊಳ್ಳುವುದರ ಸೂಚಕವಾದ ಲಕ್ಷಮೂಲ್ಯೌದನಪಾಕದ ನಿಮಿತ್ತವನ್ನು ತಿಳಿಸಿ ಅವರನ್ನು ವಿಹಾರಮಾಡಲು ಕಳುಹಿಕೊಟ್ಟು ಅನಶನಪೂರ್ವಕ ಸ್ವರ್ಗಸ್ಥರಾದರೆಂದು ಕಥೆಯಲ್ಲಿ ಹೇಳಿರುವುದು ಸ್ಪಷ್ಟವಿದೆ. ಇದರಿಂದ ದುರ್ಭಿಕ್ಷವು ಅಂತ್ಯಗೊಳ್ಳುವ ಮುನ್ನವೇ ವಜ್ರಸ್ವಾಮಿಯವರು ಸ್ವರ್ಗಸ್ಥರಾಗಿರುವರೆಂದು ಸೂಚಿತವಾಗುವುದು. ಅಂತೆಯೇ ವೀ. ನಿ. ಪ. ೬೩೭ ನೇ ವರ್ಷ ಮತ್ತು ೬೪೪ ನೇ ವರ್ಷಗಳ ಮಧ್ಯವರ್ತಿಸಮಯದಲ್ಲಿ ವಜ್ರಸ್ವಾಮಿಯವರು ಸ್ವರ್ಗಸ್ಥರಾಗಿರುವರೆಂದು ಅಧಿಗತವಾಗುವುದು.

ವಜ್ರಸ್ವಾಮಿಯವರ ಅನುಕ್ರಮದಲ್ಲಿ ೩ ನೆಯವರಾಗಿ ಸಾಮಂತಭದ್ರಸ್ವಾಮಿಯವರು ಆಚಾರ್ಯಪದಾಧಿಷ್ಠಿತರಾಗಿರುವರೆಂದು ಶ್ವೇತಾಂಬರ ಆಮ್ನಾಯದ ಪಟ್ಟಾವಲಿಗಳಿಂದ ಸೂಚಿತವಾಗುವುದು. ಇವರು ಭದ್ರಸಂಘಾಧಿಪರಾಗಿದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ದಿಗಂಬರ ಆಮ್ನಾಯದಲ್ಲಿ ಇವರು 'ಸಮಂತಭದ್ರ' ಎಂಬ ಹೆಸರಿನಿಂದ ಸಂಸ್ತುತರಾಗಿದ್ದಾರೆ. ಈ ಆಮ್ನಾಯದ ಐತಿಹ್ಯಾನುಗುಣವಾಗಿ ಸಮಂತಭದ್ರಸ್ವಾಮಿಯವರು 'ತತ್ವಾರ್ಥಸೂತ್ರ' ರಚನಕಾರರಾದ ಉಮಾಸ್ವಾತಿಸ್ವಾಮಿಯವರ ಅನಂತರಕಾಲೀನರಾಗಿಯೂ ಮತ್ತು 'ಜೈನೇಂದ್ರ ವ್ಯಾಕರಣ', 'ಸರ್ವಾರ್ಥಸಿದ್ಧಿ' ಇವೇ ಮೊದಲಾದ ಕೃತಿಗಳ ರಚನಕಾರರಾದ ಪೂಜ್ಯಪಾದಸ್ವಾಮಿಯವರ

---

1 ಪೂರ್ವೋಲ್ಲಿಖಿತ ಕಥೆಯಿಂದ ವ್ಯಕ್ತವಾಗುವಂತೆ ಆರ್ಯರಕ್ಷಿತ (=ಪ್ರಭಾಚಂದ್ರ) ಸ್ವಾಮಿಯವರ ಶ್ರುತವಿದ್ಯಾಸಂಪನ್ನತೆಯನ್ನು ಗಮನಿಸಿದಲ್ಲಿ, ಮಹಾಪುರಾಣ, ಧವಲಾಟೀಕೆ ಮತ್ತು ಜೈನೇಂದ್ರ ವ್ಯಾಕರಣಗಳಲ್ಲಿ ಪ್ರಸಂಗವಶವಾಗಿ ಪ್ರಸ್ತುತವಾಗಿರುವ 'ಪ್ರಭಾಚಂದ್ರ' ಎಂಬ ಹೆಸರು ಶ್ರ. ಬೆಳಗುಳದ ೧ ನೇ ಶಾಸನದಲ್ಲಿ ಭದ್ರಬಾಹುಸ್ವಾಮಿಯವರ ಶಿಷ್ಯರೆನಿಸಿ ನಿರ್ದೇಶಿತರಿರುವ ಪ್ರಭಾಚಂದ್ರಸ್ವಾಮಿಯವರ ಸೂಚಕವಾಗಿದೆಯೆಂದು ಭಾವಿಸಲವಕಾಶವಿದೆ.

ಪೂರ್ವಕಾಲೀನರಾಗಿಯೂ ಜೀವಿಸಿದ್ದಿರಬೇಕೆಂದು ಸೂಚಿತವಾಗುವುದು. ಉಮಾ ಸ್ವಾತಿಸ್ವಾಮಿಯವರು ಶಾ. ಶಕ ೧೪೨ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರುವುದಾಗಿಯೂ ಮತ್ತು ಪೂಜ್ಯಪಾದಸ್ವಾಮಿಯವರು ಶಾ. ಶಕ ೩೫೩ ನೇ ವರ್ಷದಲ್ಲಿ ಆಚಾರ್ಯ ಪದಾಧಿಷ್ಠಿತರಾದುದಾಗಿಯೂ ನಂ. ಆ. ಪಟ್ಟಾವಲಿ ಐತಿಹ್ಯದಿಂದ ನಿರ್ದೇಶಿತವಾಗು ವುದಾದ್ದರಿಂದ ಸಮಂತಭದ್ರಸ್ವಾಮಿಯವರು ಶಾ. ಶಕ ೩ ನೇ ಶತಮಾನದಲ್ಲಿ ಜೀವಿ ಸಿದ್ದಿರಬೇಕೆಂದು ಪರಿಗಣಿಸಬಹುದಾಗಿದೆ. ಸಮಂತಭದ್ರಸ್ವಾಮಿಯವರು 'ವನವಾಸಿ' ಗಳಾಗಿದ್ದರಾಗಿ ಅರ್ಥಾತ್ ಅರಣ್ಯವಾಸಿಗಳಾಗಿದ್ದರಾಗಿ ಇವರಿಂದ 'ವನವಾಸಿ' ಗಚ್ಛವು ಮೂಡಿತೆಂದು ಶ್ವೇತಾಂಬರ ಆಮ್ನಾಯದ ಹೇಳಿಕೆಯಿದೆ. ಈ ಹೇಳಿಕೆ ಯನುಗುಣವಾಗಿ ಸಮಂತಭದ್ರಸ್ವಾಮಿಯವರ ಪೂರ್ವಕಾಲೀನರಾದ ಯತಿಗಳಲ್ಲಿ ಹಾಗೂ ಇವರ ಸಮಕಾಲೀನರಾದ ಇತರ ಯತಿಗಳಲ್ಲಿ ವನವಾಸವು ಆಚರಿತವಿಲ್ಲ ವಾಗಿದ್ದು ಈ ಆಚರಣೆಯು ಸಮಂತಭದ್ರಸ್ವಾಮಿಯವರಿಂದ ರೂಢಿಗತವಾಗಿರು ವುದೆಂಬ ಅಭಿಪ್ರಾಯಕ್ಕೆಡೆಯಾಗುವುದು. ಆದರೆ ಶ್ವೇತಾಂಬರ ಆಮ್ನಾಯದ ಐತಿಹ್ಯಾನುಗುಣವಾಗಿಯೇ ಸಮಂತಭದ್ರಸ್ವಾಮಿಯವರ ಶಿಷ್ಯರಾದ ವೃದ್ಧದೇವ ಸೂರಿಯವರ ಕಾಲದಲ್ಲಿ ಯತಿಗಳಲ್ಲಿ ಚೈತ್ಯವಾಸದ ರೂಢಿಯು ಆರಂಭವಾಯಿ ತೆಂದು ತಿಳಿದುಬರುವುದು.[1] ಆದ್ದರಿಂದ ಸಮಂತಭದ್ರಸ್ವಾಮಿಯವರ ಹೆಸರಿನೊಡನೆ ಅನ್ವಿತವಿರುವ 'ವನವಾಸಿ' ಎಂಬ ಉಪನಾಮವು ಬೇರೊಂದು ಅರ್ಥದ ಸೂಚಕ ವಾಗಿದೆಯೆಂದು ಭಾವಿಸಲವಕಾಶವಾಗುವುದು. ಪದ್ಮನಂದಿ ಆಚಾರ್ಯರ ಮತ್ತೊಂದು ಹೆಸರು ಕುಂದಕುಂದಸ್ವಾಮಿ ಎಂದಾಗಿದ್ದು ಇದು 'ಕುಂದಕುಂದ' ಎಂಬ ಇವರ ಹುಟ್ಟೂರಿನ ಹೆಸರನ್ನಾಶ್ರಯಿಸಿ ಆರೂಢವಾಗಿರುವುದೆಂಬುದು ವಿದಿತವಿದೆ. ಇಂತೆಯೇ ಜನ್ಮತಃ ಬನವಾಸಿ ನಗರದವರಾದ ಸಮಂತಭದ್ರಸ್ವಾಮಿಯವರನ್ನು 'ಬನವಾಸಿ' ಎಂದು ನಿರ್ದೇಶಿಸುವ ರೂಢಿಯಿದ್ದಿರಬೇಕೆಂದೂ ಮತ್ತು ಕನ್ನಡನಾಡಿನ ಪ್ರಖ್ಯಾತ ಪ್ರಾಚೀನ ನಗರಗಳಲ್ಲೊಂದಾದ ಬನವಾಸಿಯು ಇವರ ಜನ್ಮಸ್ಥಾನವಾಗಿರ

---

1 ಶ್ರ. ಭ. ಮಹಾವೀರ_ಪೃ. ಸಂ. ೩೦೩.

ಬೇಕೆಂದೂ ಪರಿಭಾವಿತವಾಗುವುದು. [1]

ಶ್ರುತಗ್ರಂಥಾವತರಣ: ತೃ. ಭದ್ರಬಾಹುಸ್ವಾಮಿಯವರ ತರುವಾಯ ಆಚಾರ್ಯಪಟ್ಟಸ್ಥರಾದ ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಪ್ರಧಾನಸಂಘಭೇದಗಳಲ್ಲಿ ಮೊದಲನೆಯದು ನಂದಿಸಂಘವಾಗಿದೆಯೆಂದೂ ಮತ್ತು ಈ ನಂದಿಸಂಘದ ಆಚಾರ್ಯಪಟ್ಟಾನುಕ್ರಮದ ನಿರೂಪಣೆಯು ನಂ. ಆ. ಪಟ್ಟಾವಲಿ ಐತಿಹ್ಯದ ಮೂಲೋದ್ದೇಶವಾಗಿದೆಯೆಂದೂ ಹಿಂದಿನ ವಿಮರ್ಶೆಯಿಂದ ಸ್ಪಷ್ಟಗೊಂಡಿದೆ. ಇಂತೆಯೇ ವೀ. ನಿ. ಪ. ೬೮೩ ನೇ ವರ್ಷದಲ್ಲಿ ಸ್ವರ್ಗಸ್ಥರಾಗಿರುವ ಮತ್ತು ಅಂತಿಮ ಆಚಾರಾಂಗ ಶ್ರುತಧರ ಆಚಾರ್ಯರೆನಿಸಿ ಸಂಸ್ತುತರಾಗಿರುವ ಲೋಹಾಚಾರ್ಯರು, ಅರ್ಹದ್ಬಲಿ, ಮಾಘನಂದಿ, ಜಿನಚಂದ್ರ, ವಜ್ರಸ್ವಾಮಿಯವರೇ ಮುಂತಾದ ಅನೇಕ ಯತಿವರರ ಸಮಕಾಲೀನರಾಗಿದ್ದರೆಂಬುದೂ ವ್ಯಕ್ತಪಟ್ಟಿದೆ. ತೃ. ಭದ್ರಬಾಹುಸ್ವಾಮಿಯವರ ತರುವಾಯ ಸಮಸ್ತ ನಿರ್ಗ್ರಂಥಯತಿಸಂಘದ ಪ್ರಧಾನ ಆಚಾರ್ಯರಾಗಿ ಅಧಿಷ್ಠಿತರಾದ ಅರ್ಹದ್ಬಲಿಸ್ವಾಮಿಯವರನ್ನಾಗಲೀ ಅಥವಾ ಇವರಂತೆಯೇ ಅತಿಶಯಶ್ರುತಜ್ಞಾನಸಂಪನ್ನರೂ ಮತ್ತು ತೃ. ಭದ್ರಬಾಹುಸ್ವಾಮಿಯವರ ಶಿಷ್ಯರೂ ಆದ ಮಾಘನಂದಿ, ವಜ್ರಸ್ವಾಮಿಯವರೇ ಮೊದಲಾದ ಯತಿವರರನ್ನಾಗಲೀ, ಶ್ರುತಧರವರ್ಗದ ಆಚಾರ್ಯರನ್ನಾಗಿ ಪರಿಗಣಿಸಿರದೆ ಲೋಹಾಚಾರ್ಯರನ್ನು ಮಾತ್ರ ಶ್ರುತಧರ ಆಚಾರ್ಯರನ್ನಾಗಿ ಪರಿಗಣಿಸಿರುವುದಕ್ಕೆ ವಿಶಿಷ್ಟವಾದ ಯಾವುದಾದರೊಂದು ಕಾರಣವಿರಬೇಕೆಂದು ಪರಿಭಾವಿತವಾಗುವುದು. ಈ ವಿಶಿಷ್ಟಕಾರಣವು ನಂ. ಆ. ಪಟ್ಟಾವಲಿ ಐತಿಹ್ಯದ ಮೂಲ ಉದ್ದೇಶ ಮತ್ತು ಶ್ರುತಾವತಾರ ಐತಿಹ್ಯದ ಮೂಲಉದ್ದೇಶಗಳ ಮಧ್ಯೆ ಇರುವ ವ್ಯತ್ಯಾಸವನ್ನು ಗಮನಿಸಿದಲ್ಲಿ ಸ್ಪಷ್ಟವಾಗುವುದು. ಶ್ರೀ ವೀರತೀರ್ಥಂಕ

---

1 ಸಮಂತಭದ್ರಸ್ವಾಮಿಯವರು ದಿಗಂಬರ ಮತ್ತು ಶ್ವೇತಾಂಬರ ಪಂಥಗಳೆರಡನ್ನೂ ಒಗ್ಗೂಡಿಸಲು ಯತ್ನಿಸಿ ನಿಷ್ಫಲರಾದರೆಂದೂ ಮತ್ತು ಈ ಕಾರಣದಿಂದಲೇ ಈ ಆಚಾರ್ಯರು ತಮ್ಮ ಪಂಥದವಲಾಗಿರುವರೆಂದು ದಿಗಂಬರ ಪಂಥದವರು ವಾದಿಸಿರುವರಾದರೂ ಇವರ ಈ ವಾದವನ್ನು ಸಮರ್ಥಿಸುವ ಪ್ರಾಮಾಣಿಕವಾದಂತಹ ಯಾವ ಆಧಾರವೂ ಇಲ್ಲವೆಂದೂ 'ಶ್ರ. ಭ. ಮಹಾವೀರ' ಗ್ರಂಥಕರ್ತೃಗಳು ವಾದಿಸಿದ್ದಾರೆ (ಪು. ಸಂ. 300). ಈ ಹೇಳಿಕೆಯಿಂದ ಸೂಚಿತವಾಗುವಂತೆ ಸಮಂತಭದ್ರಸ್ವಾಮಿಯವರು ದಿಗಂಬರ ಮತ್ತು ಶ್ವೇತಾಂಬರ ಪಂಥಗಳನ್ನು ಒಗ್ಗೂಡಿಸಲು ಯತ್ನಿಸಿದರೆಂಬುದರಲ್ಲಿ ಅಶ್ರದ್ಧಾರ್ಹವಾದಂತಹುದೇನೂ ಇರುವುದಿಲ್ಲ. ಆದರೆ ಕೇವಲ ಈ ಕಾರಣದಿಂದಲೇ ಈ ಆಚಾರ್ಯರು ತಮ್ಮ ಪಂಥದವರಾಗಿರುವರೆಂದು ದಿಗಂಬರ ಪಂಥದವರು ವಾದಿಸಿರುವರೆಂಬ ಹೇಳಿಕೆ ಮತ್ತು ಈ ಆಚಾರ್ಯರು ದಿಗಂಬರ ಪಂಥದವರಾಗಿದ್ದರೆಂಬುದನ್ನು ಸಮರ್ಥಿಸುವ ಪ್ರಾಮಾಣಿಕ ಆಧಾರವಿರುವುದಿಲ್ಲೆಂಬ ಹೇಳಿಕೆಗಳು 'ಶ್ರ. ಭ. ಮಹಾವೀರ' ಕರ್ತೃಗಳ ಅಪಲಾಪಮಾತ್ರವಾಗಿವೆಯೆಂದು ತೀವ್ರವಿಷಾದಪೂರ್ವಕವಾಗಿ ಹೇಳಬೇಕಾಗುವುದು.

ರನ ನಿರ್ವಾಣಾನಂತರ ದ್ವಾದಶಾಂಗ ಶ್ರುತಜ್ಞಾನವು ಪ್ರವರ್ತಿತವಾದ ಬಗೆ ಮತ್ತು ಅಂತಿಮವಾಗಿ ಅದರ ಅವಶೇಷಾಂಶವು ಷಟ್ಖಂಡಾಗಮಗ್ರಂಥರೂಪಪಡೆದು ಪ್ರವರ್ತಿತವಾದ ಬಗೆಯನ್ನು ನಿರೂಪಿಸುವುದು ಶ್ರುತಾವತಾರಐತಿಹ್ಯದ ಮುಖ್ಯಮೂಲೋದ್ದೇಶವಾಗಿದೆ. ಈ ಷಟ್ಖಂಡಾಗಮಗ್ರಂಥದ ರಚನೆಯು ಲೋಹಾಚಾರ್ಯರ ಶಿಷ್ಯವರ್ಗದವರಿಂದಾಯಿತಾಗಿ ಮತ್ತು ಈ ಸಮಯದಿಂದ ಮುಂದೆ ಷಟ್ಖಂಡಾದಿ ಆಗಮಗ್ರಂಥಗಳೇ ಶ್ರುತಜ್ಞಾನದ ಆಕರಗಳೆನಿಸಿ ಸನ್ಮಾನಿತವಾದುವಾಗಿ ದ್ವಾದಶಾಂಗಶ್ರುತ ಅಥವಾ ಅದರ ಅವಶೇಷಭಾಗವನ್ನು ಸ್ಮೃತಿರೂಪದಲ್ಲಿ ಧಾರಣೆಮಾಡಿದ್ದ ಶ್ರುತಧರ ಗುರುಪರಂಪರೆಯು ಲೋಹಾಚಾರ್ಯರೊಡನೆ ವೀ. ನಿ. ಪ ೬೮೩ ನೇ ವರ್ಷದಲ್ಲಿ ಕೊನೆಗೊಂಡಿದೆಯೆಂಬ ಪರಿಗಣನೆಯಾಗಿದೆಯೆಂದು ಗ್ರಹಿಸಲವಕಾಶವಿದೆ. ಷಟ್ಖಂಡಾಗಮಗ್ರಂಥರಚನೆಯ ಐತಿಹ್ಯದ ವಿಷಯವಾಗಿ ಬೃ. ಕ. ಕೋಶದ ಈ ಮುಂದಿನ ಕಥಾಸಂಗ್ರಹವನ್ನು ಹಾಗೂ ಶ್ರುತಾವತಾರದಲ್ಲಿ ಉಳಿದುಬಂದಿರುವ ಐತಿಹ್ಯವನ್ನು ಅವಶ್ಯವಾಗಿ ಪ್ರಕೃತ ಸಂದರ್ಭದಲ್ಲಿ ಗಮನಿಸಬೇಕಾಗಿದೆ.

'ಸೌರಾಷ್ಟ್ರದೇಶದಲ್ಲಿ ಗಿರಿನಗರವಿದೆ. ಅಲ್ಲಿ ಧರ್ಮಸೇನನೆಂಬ ರಾಜನಿದ್ದನು. ಧರ್ಮಸೇನೆ ಎಂಬುವಳು ಅವನ ಪತ್ನಿ. ಆ ಪಟ್ಟಣದ ಸಮೀಪದಲ್ಲಿ ಚಂದ್ರಗುಹೆಯಿದೆ. ಅಲ್ಲಿ ಆಚಾರಾಂಗವೊಂದರ ವೇತ್ತ್ರರಾದ ಧರಸೇನ ಮಹಾಮುನಿಗಳು ಶಿಷ್ಯರಿಗೆ ವ್ಯಾಖ್ಯಾನಮಾಡುತ್ತಿದ್ದರು. ಧವಲವರ್ಣದ ಎರಡು ಹೋರಿಗಳು ತಮ್ಮನ್ನು ಪ್ರದಕ್ಷಿಣೆಮಾಡಿದಂತೆ ಈ ಯತೀಶ್ವರರು ಬೆಳಗಿನಝಾವದಲ್ಲಿ ಕನಸುಕಂಡರು. ಸೂರ್ಯೋದಯಾನಂತರ ದೇವಬಲಿ ಮತ್ತು ಪುಷ್ಪಬಲಿ ಎಂಬೀರ್ವರು ಸಾಧುಗಳು ಬಂದು ಯೋಗೀಂದ್ರರ ಪಾದಗಳಿಗೆ ಸ್ತುತಿಪೂರ್ವಕ ಅಭಿವಂದಿಸಿದರು. ಅನಂತರ ಕ್ಷಣಕಾಲ ತೂಷ್ಣೀಕರಾಗಿದ್ದು ಮುನೀಶ್ವರರನ್ನು ಕುರಿತು "ಸ್ವಾಮಿಯೇ! ತಮ್ಮಿಂದ ವಿದ್ಯೆಯನ್ನು ಪಡೆಯಲು ಬಂದಿದ್ದೇವೆ" ಎಂದು ಹೇಳಿದರು. ಈ ಪ್ರಾರ್ಥನೆಯನ್ನು ಮುನೀಂದ್ರರು ಮನ್ನಿಸಿ ಅವರನ್ನು ಪರೀಕ್ಷಿಸುವುದಕ್ಕಾಗಿ ಅವರಿಬ್ಬರಲ್ಲೊಬ್ಬರಿಗೆ ಹೀನಾಕ್ಷರವುಳ್ಳ (ಮಂತ್ರ) ವಿದ್ಯೆಯನ್ನೂ ಮತ್ತೊಬ್ಬರಿಗೆ ಅಧಿಕಾಕ್ಷರವುಳ್ಳ ವಿದ್ಯೆಯನ್ನೂ ಇತ್ತರು. ಅವರೀರ್ವರೂ ಆ ವಿದ್ಯೆಗಳನ್ನು ಸಾಧಿಸಿದಾಗ ಒಬ್ಬರಿಗೆ ಒಂಟಿಕಣ್ಣಿನ ದೇವತೆಯೂ ಮತ್ತೊಬ್ಬರಿಗೆ ಉಬ್ಬುಹಲ್ಲಿನ ದೇವತೆಯೂ ಪ್ರತ್ಯಕ್ಷರಾದರು. ಇಂತಹ ವಿಕೃತರೂಪದ ದೇವತೆಗಳು ಯಾವಾಗಲೂ ಪ್ರತ್ಯಕ್ಷರಾಗುವುದಿಲ್ಲೆಂದು ಭಾವಿಸಿ, ಮಂತ್ರವ್ಯಾಕರಣದ ಸಹಾಯದಿಂದ ವಿದ್ಯೆಯನ್ನು ಶೋಧಿಸಿ ಪುನಃ ವಿದ್ಯೆಯನ್ನು ಸಾಧಿಸಿದರು. ಆಗ ಸರ್ವಲಕ್ಷಣಸಂಪೂರ್ಣರಾದ ದೇವತೆಯರು ಪ್ರತ್ಯಕ್ಷರಾಗಿ ಸೇವೆ ಸಲ್ಲಿಸಲು ಸಿದ್ಧರಾದರು. ಆ ದೇವತೆಗಳನ್ನು ವಿಸರ್ಜಿಸಿ, ಅವರೀರ್ವರೂ ಗುರುಗಳ ಬಳಿ ಹೋಗಿ ನಡೆದ ವಿಷಯವನ್ನು ತಿಳಿಸಿದರು. ಆಗ ಸಂಪ್ರೀತರಾದ ಧರಸೇನ ಮುನೀಶ್ವರರು ಅವರೀರ್ವರಿಗೆ ಆಚಾರಾಂಗಶ್ರುತವಿದ್ಯೆಯನ್ನು ಉಪದೇಶಿಸಿದರು. ಸ್ವಲ್ಪಕಾಲದಲ್ಲಿಯೇ ಅವರಿಬ್ಬರೂ ಸಮಸ್ತವಿದ್ಯೆಯನ್ನೂ ಪಡೆದು ಸುರಜನವಂದಿತ

ರಾದರು. ಯಾವರೀತಿಯಾಗಿ ಆ ಯೋಗಿಗಳೀರ್ವರೂ ವ್ಯಂಜನಾರ್ಥೋಭಯಾತ್ಮಕವಾದ ವಿದ್ಯೆಯನ್ನು ಶೋಧಿಸಿ, ಶ್ರುತಾಚಾರರಾಗಿ ಸುರನರಾರ್ಚಿತರಾದರೋ ಅಂತೆಯೇ ಸಾಧುವೂ ವ್ಯಂಜನಾರ್ಥೋಭಯಾತ್ಮಕವಾದ ಜ್ಞಾನವನ್ನು ಶೋಧಿಸಿ ಪರಿಷುವವನಾಗಿ ಶೀಘ್ರವಾಗಿ ನಿರ್ವಾಣವನ್ನು ಹೊಂದುವನು.'

[ಬೃ. ಕ. ಕೋಶ–ವ್ಯಂಜನಾರ್ಥೋಭಯಶುದ್ಧಿಕಥಾನಕಂ]

ಶ್ರುತಾವತಾರದ ಐತಿಹ್ಯ: ಸುರಾಷ್ಟ್ರದೇಶದಲ್ಲಿ ಗಿರಿನಾರಪುರದ ಬಳಿಯ ಉಜ್ಜಂತಗಿರಿಯ ಚಂದ್ರಗುಹಾವಾಸಿ ಮಹಾಮುನಿಮುಖ್ಯರಾದ ಧರಸೇನಸೂರಿಯವರು ಆಗ್ರಾಯಣೀಯಪೂರ್ವ ಪಂಚಮವಸ್ತುಗತ ಚತುರ್ಥ ಮಹಾಪ್ರಾಭೃತಜ್ಞರಾಗಿದ್ದರು. ಅವರು ತಮ್ಮ ಅವಸಾನಕಾಲವು ಸನ್ನಿಹಿತವಾಗುತ್ತಿರುವುದನ್ನರಿತು ಶಾಸ್ತ್ರವ್ಯುಚ್ಛಿತ್ತಿಯಾಗುವುದೆಂದು ಯೋಚಿಸಿ ಇಂದ್ರದೇಶದ ವೇಣಾತಟಾಕಪುರದ ಬಳಿಯಿದ್ದ ಮುನಿಮುಖ್ಯರಬಳಿಗೆ ಬ್ರಹ್ಮಚಾರಿಯೊಬ್ಬನ ಮೂಲಕ ಗ್ರಹಣಧಾರಣಸಮರ್ಥರಾದ ಯತಿಗಳೀರ್ವರನ್ನು ಕಳುಹಿಕೊಡಬೇಕೆಂಬ ಕೋರಿಕೆಯ ಪತ್ರವನ್ನು ಕಳುಹಿದರು. ಅಂತೆಯೇ ಅಲ್ಲಿಂದ ಬಂದ ಯತಿಗಳೀರ್ವರನ್ನು ಪರೀಕ್ಷಿಸಿ, ಗುರುವಿನಯ ಜ್ಞಾನವಿನಯಸಂಪನ್ನರಾಗಿರುವುದನ್ನು ಮನಗಂಡು ಗ್ರಂಥವ್ಯಾಖ್ಯಾನಮಾಡಿದರು. ಈ ರೀತಿಯಾಗಿ ಆಷಾಢಮಾಸ ಶುಕ್ಲಪಕ್ಷದ ಏಕಾದಶೀ ತಿಥಿಯಂದು ಶ್ರುತವಿದ್ಯಾಧ್ಯಯನವನ್ನು ಪೂರ್ಣಗೊಳಿಸಿದ ಆ ಯತಿಗಳೀರ್ವರು ಸುರವಂದಿತರಾಗಿ ಪುಷ್ಪದಂತ ಮತ್ತು ಭೂತಬಲಿ ಎಂಬ ಹೆಸರುಗಳಿಂದ ಸಂಸ್ತುತರಾದರು. ಧರಸೇನಸ್ವಾಮಿಯವರು ತಮ್ಮ ಅವಸಾನಕಾಲವು ಅತ್ಯಂತ ಸಮೀಪವರ್ತಿಯಾಗಿರುವುದನ್ನು ಅರಿತು ಶಿಷ್ಯರು ವ್ಯಾಕುಲಕ್ಕೊಳಗಾಗಬಾರದೆಂದು ಭಾವಿಸಿ ಅವರಿಬ್ಬರನ್ನೂ ಮಾರನೇ ದಿನವೇ ಅಂಕುಲೇಶ್ವರಕ್ಕೆ ಕಳುಹಿಕೊಟ್ಟರು. ಒಂಭತ್ತು ದಿವಸ ಪ್ರಯಾಣಮಾಡಿ ಅವರೀರ್ವರೂ ಆ ಪಟ್ಟಣವನ್ನು ಸೇರಿದರು. ಅಲ್ಲಿ ವರ್ಷಾಕಾಲವನ್ನು ಕಳೆದು ಮುಂದೆ ದಕ್ಷಿಣಾಭಿಮುಖವಾಗಿ ಪಯಣಮಾಡಿದರು. ಅನಂತರ ಕರಹಾಟದಲ್ಲಿ ಪುಷ್ಪದಂತಸ್ವಾಮಿಯವರು ತಮ್ಮ ಭಾಗಿನೇಯನಿಗೆ ದೀಕ್ಷೆಗೊಟ್ಟು ಅವರೊಡನೆ ವನವಾಸದೇಶವನ್ನು ಸೇರಿದರು. ಭೂತಬಲಿಸ್ವಾಮಿಯವರು ತಮಿಳ್ದೇಶದ ಮಥುರಾನಗರಕ್ಕೆ ಹೋದರು. ಅನಂತರ ಪುಷ್ಪದಂತಸ್ವಾಮಿಯವರು ತಮ್ಮ ಭಾಗಿನೇಯನ ಅಧ್ಯಾಪನಾರ್ಥವಾಗಿ ಕರ್ಮಪ್ರಕೃತಿಪ್ರಾಭೃತವನ್ನು ಆರುಖಂಡಗಳಿಂದ ಉಪಸಂಹಾರ ಮಾಡಿ, ಗುಣಜೀವಾದಿಕ ವಿಂಶತಿವಿಧ ಸೂತ್ರ ಸತ್ಪ್ರರೂಪಣಾಯುಕ್ತವಾದ ಜೀವಸ್ಥಾನಾಧಿಕಾರವನ್ನು ವಿರಚಿಸಿದರು. ಆ ಸೂತ್ರಗಳನ್ನು ಭಾಗಿನೇಯನಿಗೆ ಅಧ್ಯಾಪನಮಾಡಿಸಿ ಭೂತಬಲಿ ಗುರುಗಳ ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ ಅವರ ಬಳಿಗೆ ಕಳುಹಿದರು. ಭೂತಬಲಿಸ್ವಾಮಿಯವರು ಆ ಸತ್ಪ್ರರೂಪಣೆಯನ್ನು ಕೇಳಿ ಪುಷ್ಪದಂತ ಗುರುವಿನ ಷಟ್ಖಂಡಾಗಮರಚನೆಯ ಅಭಿಪ್ರಾಯವನ್ನು ತಿಳಿದು, ಮುಂದಿನ ಎಲ್ಲ ಭಾಗಗಳನ್ನೂ ರಚನೆಮಾಡಿ, ಷಟ್ಖಂಡಾಗಮದ ರಚನೆಯನ್ನು ಪೂರ್ಣಗೊಳಿಸಿದರು.

ಅನಂತರ ಭೂತಬಲಿಸ್ವಾಮಿಯವರು ಋಷ್ಯಾರ್ಯಿಕಾ ಶ್ರಾವಕ-ಶ್ರಾವಿಕಾ ಸಂಘದ ಸಮ್ಮುಖದಲ್ಲಿ ಜ್ಯೇಷ್ಠ ಶುಕ್ಲ ಪಂಚಮಿಯಂದು ಆ ಷಟ್ಖಂಡಾಗಮಶ್ರುತದ ಪೂಜೋತ್ಸವವನ್ನು ನೆರವೇರಿಸಿದರು.[1] ಮುಂದೆ ಭೂತಬಲ್ಯಾಚಾರ್ಯರು ಜಿನಪಾಲಿತಯತಿಯವರ ಮೂಲಕ ಷಟ್ಖಂಡಾಗಮಗ್ರಂಥವನ್ನು ಪುಷ್ಪದಂತಸ್ವಾಮಿಯವರ ಬಳಿಗೆ ಕಳುಹಿದರು. ಪುಷ್ಪದಂತಸ್ವಾಮಿಯವರು "ನನ್ನಿಂದ ಚಿಂತಿಸಲ್ಪಟ್ಟ ಸಮಸ್ತಾಂಗೋತ್ಪನ್ನವಾದ ಷಟ್ಖಂಡಾಗಮದ ರಚನಾಕಾರ್ಯವು ಸಂಪನ್ನವಾಯಿತು" ಎಂದು ಆನಂದಪಟ್ಟು ಶ್ರುತಾನುರಾಗದಿಂದ ಚತುಸ್ಸಂಘಸಮೇತರಾಗಿ ಶ್ರುತಪಂಚಮೀ ಮಹೋತ್ಸವವನ್ನಾಚರಿಸಿದರು.

ಧರಸೇನಸ್ವಾಮಿಯವರು, ಷಟ್ಖಂಡಾಗಮ ರಚನಕಾರರಾದ ಪುಷ್ಪದಂತಸ್ವಾಮಿ ಮತ್ತು ಭೂತಬಲಿಸ್ವಾಮಿಯವರ ವಿದ್ಯಾಗುರುಗಳಾಗಿರುವರೆಂಬುದು ಮೇಲ್ಕಂಡ ಎರಡು ಐತಿಹ್ಯಮೂಲಗಳ ಕಥನದಿಂದ ಮಾತ್ರವಲ್ಲದೆ ಇತರ ಎಲ್ಲ ಐತಿಹ್ಯಮೂಲಗಳಿಂದಲೂ ನಿರ್ವಿವಾದ ರೀತಿಯಿಂದ ನಿರ್ದೇಶಿತವಿದೆ. ಇವರು ತಮ್ಮ ಆಯುಷ್ಯಾವಸಾನ ಸಮಯದಲ್ಲಿ ಉಜ್ಜಯಂತಗಿರಿಯ ಚಂದ್ರಗುಹೆಯಲ್ಲಿ ವಾಸಿಸುತ್ತಿದ್ದರೆಂಬ ಮೇಲ್ಕಂಡ ಕಥನದ ಐತಿಹ್ಯಾಂಶವು ಪ್ರಕೃತಸಂದರ್ಭದಲ್ಲಿ ಅವಶ್ಯವಾಗಿ ಗಮನಾರ್ಹವಾಗಿದೆ. ಈ ಚಂದ್ರಗುಹೆಯು ದಿಗಂಬರ ಜೈನ ಪಂಥವಲ್ಲಿ ಬಹಳ ಪ್ರಾಚೀನಕಾಲದಿಂದಲೂ ಸಂಸ್ತುತವಿದೆ.[2] ಝೂನಾಗಢದ ಬಳಿಯಿರುವ ಅನೇಕ ಗುಹೆಗಳಲ್ಲಿ ಕೆಲವು ಗುಹೆಗಳು ಜೈನಯತಿಗಳ ಆವಾಸಸ್ಥಾನವಾಗಿದ್ದುವೆಂದೂ ಮತ್ತು ಇವುಗಳಲ್ಲೊಂದರ ಸಮೀಪದಲ್ಲಿ ಅರ್ಧಚಂದ್ರಾಕಾರದ ವಿವಿಕ್ತಸ್ಥಾನವಿರುವುದಾಗಿಯೂ ಮತ್ತು ಈ ಗುಹೆಯಬಳಿ ದೊರೆತ ಶಿಲಾಶಾಸನವೊಂದರಲ್ಲಿ ಜೈನಮುನಿಯೋರ್ವರು ಸ್ವರ್ಗಸ್ಥರಾದ ಐತಿಹ್ಯವು ಅಂಕಿತಗೊಂಡಿದ್ದು, ಇದು ಧರಸೇನಾಚಾರ್ಯರು ದಿವಂಗತರಾದ ಐತಿಹ್ಯವಾಗಿದೆಯೆಂದು ಸನ್ಮಾನ್ಯ ಡಾ|| ಹೀರಾಲಾಲ್ ಜೈನರವರು ಅಭಿಪ್ರಾಯಪಟ್ಟಿದ್ದಾರೆ.[3] ಈ ಸನ್ಮಾನ್ಯರ ಅಭಿಪ್ರಾಯದಂತೆ ಈ ಶಾಸನವು ಕ್ರಿ. ಶ. ೧೫೦ ಮತ್ತು ೧೮೭ ರ ಮಧ್ಯವರ್ತಿ ಸಮಯದಲ್ಲಿ ರಚಿತವಾಗಿದೆ. ಇದರಂತೆ ಈ ಶಾಸನವು ವೀ. ನಿ. ಪ. ೬೭೮ ನೇ ವರ್ಷದ ತರುವಾಯ ಕಾಲದಲ್ಲಿ ರಚಿತವಾಗುವುದಾದ್ದರಿಂದ ಧರಸೇನ

---

1 ಈ ರೀತಿಯಾಗಿ ಆರಂಭವಾದ ಶ್ರುತಪೂಜೆಯು 'ಶ್ರುತಪಂಚಮಿ' ಎಂಬ ಹೆಸರಿನಿಂದ ಇಂದಿಗೂ ದಿಗಂಬರ ಜೈನ ಸಮಾಜದಲ್ಲಿ ಪರ್ವದಿನವಾಗಿ ಆಚರಿತವಿದೆ.

2 ದಶಭಕ್ತ್ಯಂತರ್ಗತವಾದ ಸಂಸ್ಕೃತನಿರ್ವಾಣಭಕ್ತಿಯಲ್ಲಿ 'ಶ್ರೀ ಮಚ್ಛಂದ್ರಗುಹಾವರಾಕ್ಷರಶಿಲಾಂ.........' ಎಂಬ ಸ್ತುತಿಯು ಪ್ರಾಯಶಃ ಇದೇ ಚಂದ್ರಗುಹೆಯ ಸ್ತುತಿಯಾಗಿದೆಯೆಂದು ಕಂಡುಬರುತ್ತದೆ.

3 ಮಹಾಬಂಧ—ಭಾಗ ೩—ಗ್ರಂಥಭಾಗ ೩—ಮುನ್ನುಡಿ—'ಗಿರಿನಾರ್ ಚಂದ್ರಗುಹಾ'

ಸ್ವಾಮಿಯವರು ಈ ಸಮಯದಿಂದಮುಂದೆಯೂ ಸ್ವಲ್ಪಕಾಲಪರ್ಯಂತ ಜೀವಿಸಿದ್ದಿರ ಬಹುದೆಂದು ಭಾವಿಸಬಹುದಾಗಿದೆ. ನಂ. ೩. ಪಟ್ಟಾವಲಿಯ ಪೂರ್ವೋಲ್ಲಿಖಿತ ಗಾಹೆಯಲ್ಲಿ ಧರಸೇನಸ್ವಾಮಿಯವರನ್ನು ಮಾಘನಂದಿಸ್ವಾಮಿಯವರ ಅನಂತರವರ್ತಿ ಯಾಗಿ ಹೆಸರಿಸಿದೆ. ಪಟ್ಟಾವಲಿಯ ಗಾಹೆಯಲ್ಲಿ ನಿರ್ದೇಶಿತವಿರುವ ಶ್ರುತಧರ ಆಚಾರ್ಯ ಪಟ್ಟಾನುಕ್ರಮವು ಅಸಂಗತವಿವೆಯೆಂಬುದು ನಿಜವಾದರೂ ಧರಸೇನ ಸ್ವಾಮಿಯವರು ವೀ. ನಿ. ಪ. ೬೧೪ ನೇ ವರ್ಷಾನಂತರಕಾಲದಲ್ಲಿ ಜೀವಿಸಿದ್ದರೆಂಬ ಸಮರ್ಥನೆಯು ಇದರಿಂದ ದೊರೆಯುವುದು. ಇಂತೆಯೇ 'ಯೋನಿಪ್ರಾಭೃತಂ ವೀರಾತ್ ೬೦೦ ಧಾರಸೇನಮ್' ಎಂಬ ಬೃಹಟ್ಟಿಪ್ಪಣಿಕೆಯ ಉಲ್ಲೇಖದಾಧಾರ ದಿಂದಲೂ ಧರಸೇನಸ್ವಾಮಿಯವರು ವೀ. ನಿ. ಪ. ೭ನೇ ಶತಮಾನ ಕಾಲ ದಲ್ಲಿ ಜೀವಿಸಿದ್ದರೆಂದು ಸೂಚಿತವಾಗುವುದು.[1] ಅಂತೆಯೇ ಈ ಎಲ್ಲ ಕಾರಣಗಳಿಂದ ಧರಸೇನಸ್ವಾಮಿಯವರು ವೀ. ನಿ. ಪ. ೬೦೦ ಮತ್ತು ೭೦೦ ರ ಮಧ್ಯವರ್ತಿಕಾಲದಲ್ಲಿ ಜೀವಿಸಿದ್ದರೆಂದು ನಿಶ್ಚಿತವಾಗುವುದು. ಧರಸೇನಸ್ವಾಮಿಯವರನ್ನು ಬೃ. ಕ. ಕೋಶದ ಪೂರ್ವೋಲ್ಲಿಖಿತ ಕಥೆಯಲ್ಲಿ 'ಆಚಾರಾಂಗಶ್ರುತ ಒಂದರ ವೇತ್ತೃ'-ಆಚಾರಾಂಗಸ್ಯ ಚೈಕಸ್ಯ ವೇತ್ತಾ-ಎಂದು ನಿರ್ದೇಶಿಸಿರುವುದು ಸ್ಪಷ್ಟವಿದೆ. ಈ ಕಥಾಕೋಶದ ರಚನಾ ಕಾಲದಿಂದ ಪೂರ್ವಭಾಗಿಯಾಗಿಯೇ ಧರಸೇನಸ್ವಾಮಿಯವರನ್ನು ಸರ್ವಅಂಗಶ್ರುತ ಮತ್ತು ಪೂರ್ವಗಳ ಏಕದೇಶಜ್ಞರನ್ನಾಗಿ ಪರಿಗಣಿಸಲಾಗಿದ್ದ ಸ್ಪಷ್ಟ ಉಲ್ಲೇಖಗಳಿ ದ್ದರೂ ಹರಿಷೇಣಾಚಾರ್ಯರು ತಮ್ಮ ಈ ಕೃತಿಯ ಕಥಾನಕದಲ್ಲಿ ಇವರನ್ನು 'ಆಚಾ ರಾಂಗಸ್ಯ ಚೈಕಸ್ಯ ವೇತ್ತಾ' ಎಂದು ಅನಧಿಕೃತರೀತಿಯಿಂದ ನಿರ್ದೇಶಿಸಿರುವರೆಂದು ಹೇಳಲಾಗುವುದಿಲ್ಲ. ಹರಿಷೇಣಾಚಾರ್ಯರು ತಮ್ಮ ಕಾಲದಲ್ಲಿ ಪರಂಪರಾಗತವಾಗಿ ಉಪಲಬ್ಧವಿದ್ದ ಕಥಾನಕಗಳನ್ನಾಧರಿಸಿ ಈ ಬೃ. ಕ. ಕೋಶವನ್ನು ರಚಿಸಿರುವರೆಂಬುದು ನಿಶ್ಚಿತವಿದೆ. ಆದ್ದರಿಂದ ಧರಸೇನಸ್ವಾಮಿಯವರನ್ನು ಕುರಿತಾದ ಈ ಕಥೆಯನ್ನೂ ಪರಂಪರಾಗತವಾದ ಕಥಾನಕವೊಂದನ್ನಾಧರಿಸಿ ರಚಿಸಿರುವರೆಂಬುದರಲ್ಲಿ ಸಂಶಯವಿಲ್ಲ. ಅಂತೆಯೇ ಧರಸೇನಸ್ವಾಮಿಯವರು ಆಚಾರಾಂಗಶ್ರುತದ ಪರಿಪೂರ್ಣವೇತ್ತರಾಗಿದ್ದ ರೆಂಬ ಹಾಗೂ ಇವರಿಂದ ಪುಷ್ಪದಂತ ಮತ್ತು ಭೂತಬಲಿ ಯತಿಗಳೀರ್ವರು ಆಚಾ ರಾಂಗಶ್ರುತದ ಅಧ್ಯಯನಮಾಡಿದರೆಂಬ ಪರಂಪರಾಗತ ಐತಿಹ್ಯವಿದ್ದಿರಬೇಕೆಂದು ಅಧಿಗತವಾಗುವುದು. ಈ ರೀತಿಯಾಗಿ ಧರಸೇನಸ್ವಾಮಿಯವರಲ್ಲಿ ಶ್ರುತವಿದ್ಯಾಧ್ಯ ಯನಮಾಡಿದ ಪುಷ್ಪದಂತ ಮತ್ತು ಭೂತಬಲಿ ಯತಿಶಿಷ್ಯರು ಮಹಾಕರ್ಮಪ್ರಾಭೃತ ಶ್ರುತಭಾಗವನ್ನು ಲಿಪಿಬದ್ಧಗೊಳಿಸಿದರಾದುದರಿಂದ ಈ ಸಮಯದಿಂದ ಮುಂದೆ ಶ್ರುತ ಜ್ಞಾನವು ಲಿಪಿಬದ್ಧಆಗಮಗ್ರಂಥರೂಪತಳೆದು ಉಳಿದುಬರುವಂತಾಯಿತೆಂದು ನಿಶ್ಚಿತ ವಾಗುವುದಲ್ಲದೆ ಶ್ರುತವಿದ್ಯೆಯನ್ನು ಸ್ಮೃತಿರೂಪದಲ್ಲಿ ಉಳಿಸಿಕೊಂಡುಬಂದ ಗುರು ಶಿಷ್ಯಾನುಕ್ರಮವು ಧರಸೇನಸ್ವಾಮಿಯವರೊಡನೆ ಕೊನೆಗೊಂಡಿರುವುದೆಂದೂ ಸ್ಥಿರಪಡು

1 ಷಟ್ಖಂಡಾಗಮ-ಜೀವಸ್ಥಾನ-ಸತ್ಪ್ರರೂಪಣಾ ಭಾಗ 1-ಮುನ್ನುಡಿ-ಪು. ಸಂ. 30.

ವುದು. ಶ್ರುತಧರಆಚಾರ್ಯಸಂತತಿಯಲ್ಲಿ 'ಲೋಹಾಚಾರ್ಯ' ಎಂಬ ಹೆಸರು ಕೊನೆಯದಾಗಿರುವುದರಿಂದ ಶ್ರುತವಿದ್ಯೆಯನ್ನು ಸ್ಮೃತಿರೂಪದಲ್ಲಿ ಉಳಿಸಿಕೊಂಡು ಬಂದ ಗುರುಶಿಷ್ಯಾನುಕ್ರಮವು ಲೋಹಾಚಾರ್ಯರೊಡನೆ ಕೊನೆಗೊಂಡಿರುವುದೆಂದು ಹಿಂದೆ ವಿವರಿಸಿದೆ. ಧರಸೇನಸ್ವಾಮಿಯವರ ಮೇಲ್ಕಂಡ ಐತಿಹ್ಯದಾಧಾರದಿಂದ ಶ್ರುತವಿದ್ಯೆಯನ್ನು ಸ್ಮೃತಿರೂಪದಲ್ಲಿ ಉಳಿಸಿಕೊಂಡು ಬಂದ ಗುರುಶಿಷ್ಯಾನುಕ್ರಮದಲ್ಲಿ ಧರಸೇನಸ್ವಾಮಿಯವರೇ ಕೊನೆಯವರಾಗಿರುವರೆಂದು ಸ್ಥಿರಪಟ್ಟಿದೆ. ಇಷ್ಟಲ್ಲದೆ ಇವರು ಆಚಾರಾಂಗಶ್ರುತಧರರಾಗಿದ್ದರೆಂದೂ ಮತ್ತು ಶ್ರುತಾವತಾರ ಹಾಗೂ ಬೃ. ಕ. ಕೋಶಗಳ ಮೇಲ್ಕಂಡ ಎರಡೂ ಕಥನಗಳಾಧಾರದಂತೆ ಪುಷ್ಪದಂತ ಮತ್ತು ಭೂತಬಲಿ ಯತಿಗಳೀರ್ವರೂ ಧರಸೇನಸ್ವಾಮಿಯವರಿಂದ ಶ್ರುತವಿದ್ಯೆಯನ್ನು ಅಧ್ಯಯನಮಾಡಿ ಶ್ರುತಜ್ಞಾನರಕ್ಷಣೆಯ ಬಗ್ಗೆ ಮಾರ್ಗದರ್ಶನ ಪಡೆದು ಆದುವರೆವಿಗೂ ಸ್ಮೃತಿರೂಪದಲ್ಲಿ ಉಳಿದುಬಂದಿದ್ದ ಶ್ರುತಜ್ಞಾನದ ಅಂಶವಾದ ಮಹಾಕರ್ಮಪ್ರಾಭೃತವನ್ನು ಲಿಪಿಬದ್ಧಗೊಳಿಸಿವರಾಗಿ, ಈ ಸಮಯದಿಂದ ಮುಂದೆ ಶ್ರುತ ಜ್ಞಾನದ ಅವಶೇಷವನ್ನು ಲಿಪಿಬದ್ಧ ಆಗಮಗ್ರಂಥಗಳ ರೂಪದಲ್ಲಿ ರಕ್ಷಣೆಮಾಡುವ ಯತ್ನಗಳು ನಡೆದುವೆಂದು ಅಧಿಗತವಾಗುವುದು. ಅಂತೆಯೇ ಪುಷ್ಪದಂತ ಮತ್ತು ಭೂತಬಲಿ ಯತಿಗಳ ಕಾಲದಾರಭ್ಯ ಲಿಪಿಬದ್ಧ ಆಗಮಗ್ರಂಥಗಳು 'ಶ್ರುತ' ಎಂಬ ಹೆಸರಿನಿಂದ ಸಂಪೂಜಿತವಾಗಿ ಉಳಿದು ಬಂದಿವೆ. ಇದರಿಂದ ಪುಷ್ಪದಂತ ಮತ್ತು ಭೂತಬಲಿಸ್ವಾಮಿಯವರುಗಳ ಗುರುಗಳಾದ ಧರಸೇನಾಚಾರ್ಯರ ಜೀವಿತಸಮಯದ ಅಂತ್ಯದೊಡನೆ ಶ್ರುತಜ್ಞಾನವನ್ನು ಸ್ಮೃತಿರೂಪದಲ್ಲಿ ಉಳಿಸಿಕೊಂಡು ಬಂದ ಗುರುಶಿಷ್ಯಾನುಕ್ರಮದ ಶ್ರುತಧರಆಚಾರ್ಯ ಪರಂಪರೆಯ ಕಾಲವು ಕೊನೆಗೊಂಡು ಮುಂದೆ ಲಿಪಿಬದ್ಧ ಆಗಮಗ್ರಂಥಗಳ ರೂಪದ ಶ್ರುತದ ಕಾಲವು ಆರಂಭವಾಗಿರುವುದೆಂದು ನಿಶ್ಚಿತವಾಗುವುದು. ಬೃ. ಕ. ಕೋಶದ ಮೇಲ್ಕಂಡ ಕಥನದನುಗುಣವಾಗಿ ಧರಸೇನಸ್ವಾಮಿಯವರು ಆಚಾರಾಂಗಶ್ರುತಧರರಾಗಿದ್ದರೆಂದು ಸ್ಪಷ್ಟವಾಗಿ ಸೂಚಿತವಾಗುವುದಲ್ಲದೆ ವೀ. ನಿ. ಪ. ೬೭೮ ನೇ ವರ್ಷಾನಂತರದ ಅನತಿ ದೀರ್ಘಕಾಲದಲ್ಲಿ ಇವರು ಸ್ವರ್ಗಸ್ಥರಾಗಿದ್ದರೆಂದೂ ಹಿಂದಿನ ವಿವರಣೆಯಿಂದ ವ್ಯಕ್ತಪಟ್ಟಿದೆ. ಕುಂದಕುಂದಾಚಾರ್ಯರು ಷಟ್ಖಂಡಾಗಮದ ಪ್ರಥಮ ವ್ಯಾಖ್ಯಾನಕಾರರಾಗಿರುವರೆಂದು ಶ್ರುತಾವತಾರದ ಹೇಳಿಕೆಯಿಂದ ಸೂಚಿತವಾಗುವುದು. ಇದರಂತೆ ಪುಷ್ಪದಂತ ಮತ್ತು ಭೂತಬಲಿಸ್ವಾಮಿಯವರೀರ್ವರೂ ಕುಂದಕುಂದಾಚಾರ್ಯರ ಹಿರಿಯ ಧರ್ಮಭ್ರಾತೃಗಳಾಗಿದ್ದರಬೇಕೆಂದೂ ಮತ್ತು ಷಟ್ಖಂಡಾಗಮವು ಕನಿಷ್ಠಮಿತಿಯಿಂದ ವೀ. ನಿ. ಪ. ೭ ನೇ ಶತಮಾನದ ಅಂತ್ಯಸಮಯಕ್ಕಾಗಲೇ ರಚಿತವಾಗಿದ್ದಿರಬೇಕೆಂದೂ ಪರಿಗಣಿತವಾಗುವುದು. ಅಂತೆಯೇ ಪುಷ್ಪದಂತ ಮತ್ತು ಭೂತಬಲಿಸ್ವಾಮಿಯವರುಗಳ ವಿದ್ಯಾಗುರುಗಳಾದ ಧರಸೇನಸ್ವಾಮಿಯವರು, ಹಿಂದೆ ವಿವರಿಸಿರುವಂತೆ, ವೀ. ನಿ. ಪ. ೬೭೮ನೇ ವರ್ಷದ ತರುವಾಯದಲ್ಲಿ ಮತ್ತು ವೀ. ನಿ. ಪ. ೭೦೦ ನೇ ವರ್ಷದ ಪೂರ್ವಭಾಗಿಯಾಗಿ ಸ್ವರ್ಗಸ್ಥರಾಗಿರಬೇಕೆಂದು ನಿಶ್ಚಿತವಾಗುವುದು.

ತೃ. ಭದ್ರಬಾಹುಸ್ವಾಮಿಯವರಲ್ಲಿ ಶ್ರುತವಿದ್ಯಾಧ್ಯಯನಮಾಡಿದ ಶಿಷ್ಯರಲ್ಲಿ ಅನೇಕರು ಆಚಾರಾಂಗಶ್ರುತದ ಪರಿಪೂರ್ಣಪಾಠಿಗಳಾಗಿದ್ದಲ್ಲಿ ಆಶ್ಚರ್ಯವೇನಿಲ್ಲ. ಅಂತೆಯೇ ತೃ. ಭದ್ರಬಾಹುಸ್ವಾಮಿಯವರ ಶಿಷ್ಯರಲ್ಲಿ ಮಾಘನಂದಿ, ವಜ್ರಸ್ವಾಮಿಯವರೇ ಮೊದಲಾದ ಆಚಾರ್ಯರು ಆಚಾರಾಂಗಶ್ರುತಪಾಠಿಗಳೂ ಮತ್ತು ಇತರ ಅಂಗಗಳು ಮತ್ತು ಪೂರ್ವಗಳಲ್ಲಿ ಏಕದೇಶಜ್ಞಾನಸಂಪನ್ನರಾಗಿದ್ದರೂ ಶ್ರುತಪ್ರವರ್ತನೆಯು ಗುರುಶಿಷ್ಯಾನುಕ್ರಮದ ಅಪೇಕ್ಷೆಯಿಂದ ತೃ. ಭದ್ರಬಾಹುಸ್ವಾಮಿಯವರ ಈ ಶಿಷ್ಯವರ್ಗದಲ್ಲಿ ಯಾರೊಬ್ಬರಿಂದ ಮುಂದಿನ ಶಿಷ್ಯಪೀಳಿಗೆಯು ಶ್ರುತವಿದ್ಯಾದಾನ ಪಡೆದು ಶ್ರುತವಿದ್ಯಾಪ್ರವರ್ತನೆಗೊಳಿಸಿತೋ ಅಂತಹ ಯತಿಪ್ರಮುಖರೊಬ್ಬರ ಹೆಸರನ್ನು ಮಾತ್ರ ಗಣನೆಮಾಡಬೇಕಾಗುವುದು. ಅಂತೆಯೇ ತೃ. ಭದ್ರಬಾಹುಸ್ವಾಮಿಯವರ ಅನಂತರವರ್ತಿಯಾಗಿ ಮತ್ತು ಲಿಪಿಬದ್ಧ ಆಗಮದ ಪ್ರವರ್ತನಕಾರರಾದ ಪುಷ್ಪದಂತ ಹಾಗೂ ಭೂತಬಲಿ ಯತಿಗಳ ಪೂರ್ವವರ್ತಿಯಾಗಿ ಧರಸೇನಸ್ವಾಮಿಯವರು ಶ್ರುತಪ್ರವರ್ತಕರಾದ ಆಚಾರ್ಯರೆನಿಸಿ ಪರಿಗಣಿತರಾಗಬೇಕೆಂಬುದು ಮೇಲ್ಕಂಡ ವಿವರಣೆಯಿಂದ ಸ್ಪಷ್ಟಗೊಂಡಿದೆ. ಆದ್ದರಿಂದ ಅಂತಿಮ ಆಚಾರಾಂಗ ಶ್ರುತಧರ ಆಚಾರ್ಯರ ಹೆಸರೆನಿಸಿ ನಿರ್ದೇಶಿತವಾಗಿರುವ 'ಲೋಹಾಚಾರ್ಯ' ಎಂಬ ಹೆಸರು ಧರಸೇನಾಚಾರ್ಯರ ನಾಮಾಂತರವಾಗಿರಬೇಕೆಂದು ಗ್ರಹಿಸಬೇಕಾಗುವುದು. ಅರ್ಹದ್ಬಲಿಸ್ವಾಮಿಯವರಿಂದ ವ್ಯವಸ್ಥಿತವಾದ ಸಂಘ ಮತ್ತು ಶಾಖಾಸಂಘಗಳ ಹೆಸರುಗಳಿಗನುಗುಣವಾಗಿ ಯತಿಗಳಿಗೆ ನೂತನವಾಗಿ ನಾಮಕರಣಮಾಡಲಾಯಿತೆಂದು ಹಿಂದೆ ಹೇಳಿದೆ. ಅಂತೆಯೇ ಲೋಹಾಚಾರ್ಯರು ಭದ್ರಸಂಘ ಸೇನಗಣದವರಾಗಿ ವರ್ಗೀಕೃತರಾದ ಕಾರಣ 'ಸೇನ' ಪದಾಂತ್ಯವಾದ 'ಧರಸೇನ' ಎಂಬ ಮತ್ತೊಂದು ಹೆಸರನ್ನು ಹೊಂದಿರುವರೆಂದು ಭಾವಿಸಲವಕಾಶವಿದೆ ಆದ್ದರಿಂದ ಷಟ್ಖಂಡಾಗಮದ ರಚನಕಾರರಾದ ಪುಷ್ಪದಂತ ಮತ್ತು ಭೂತಬಲಿಸ್ವಾಮಿಯವರೀರ್ವರ ಶ್ರುತವಿದ್ಯಾಗುರುಗಳಾದ ಧರಸೇನಸ್ವಾಮಿಯವರು 'ಲೋಹಾಚಾರ್ಯ' ಎಂಬ ಮತ್ತೊಂದು ಹೆಸರುಳ್ಳರಾಗಿದ್ದರೆಂದೂ ಮತ್ತು ಶ್ರುತಧರಆಚಾರ್ಯಸಂತತಿಯಲ್ಲಿ ಇವರೇ ಅಂತಿಮ ಆಚಾರ್ಯರಾಗಿರುವರೆಂದೂ ಪರಿಭಾವಿತವಾಗುವುದು. ಶ್ರೀ ವೀರತೀರ್ಥಂಕರನ ವಾಣಿಯ ಅವಶೇಷಾಂಶವಾದ ಮಹಾಕಮ್ಮ ಪಯಡಿ ಪಾಹುಡವನ್ನು ಸೂತ್ರರೂಪದಲ್ಲಿ ಲಿಪಿಬದ್ಧಗೊಳಿಸಿ ಸಂರಕ್ಷಣೆಮಾಡುವ ಕಾರ್ಯವು ಪ್ರಪ್ರಥಮವಾಗಿ ಕನ್ನಡ ನಾಡಿನ ಸಂಸ್ಕೃತಿಯ ಪ್ರಾಚೀನ ಕೇಂದ್ರವೆನಿಸಿ ಸಂಸ್ತುತವಿರುವ ಬನವಾಸಿಯಲ್ಲಿ ನಡೆಯಿತೆಂಬುದು ಕನ್ನಡನಾಡಿನ ಸಮಸ್ತ ಜೈನಮತೀಯರಿಗೆ ಹೆಮ್ಮೆಪಟ್ಟುಕೊಳ್ಳುವಂತಹ ವಿಷಯವಾಗಿದೆಯಲ್ಲದೆ, ಶ್ರೀ ವೀರವಾಣಿಯ ಪ್ರಥಮ ಶ್ರುತಗ್ರಂಥವಿಹಾರ ಭೂಮಿಯಾದ ಬನವಾಸಿಯು ಸಮಸ್ತ ದಿಗಂಬರ ಜೈನಮತೀಯರಿಗೆ ವಂದನಾರ್ಹವಾದ ಅತಿಶಯಕ್ಷೇತ್ರವಾಗಿದೆ. ಪುಷ್ಪದಂತಸ್ವಾಮಿ ಮತ್ತು ಭೂತಬಲಿಸ್ವಾಮಿಯವರಿಂದ ಈ ಆಗಮಗ್ರಂಥದ ರಚನೆಯು ಪೂರ್ಣಗೊಂಡ ಅನಂತರ ಋಷ್ಯಾರ್ಯಿಕಾ ಶ್ರಾವಕ-

ಶ್ರಾವಿಕಾ ಎಂಬ ಚತುಸ್ಸಂಘದ ಸಮ್ಮುಖದಲ್ಲಿ ಜ್ಯೇಷ್ಠ ಶುಕ್ಲ ಪಂಚಮಿಯಂದು ನಡೆದ ಶ್ರುತಪೂಜಾ ಸಮಾರಂಭವು ಹಬ್ಬವಾಗಿ ಇಂದಿಗೂ ದಿಗಂಬರ ಜೈನಮತೀಯ ರಲ್ಲಿ ಆಚರಿತವಿದೆ.

ಇಂದ್ರನಂದಿ ಆಚಾರ್ಯರು ಶ್ರುತಾವತಾರದಲ್ಲಿ, ಪುಷ್ಪದಂತ ಮತ್ತು ಭೂತಬಲಿ ಸ್ವಾಮಿಯವರಿಂದ ಷಟ್ಖಂಡಾಗಮವು ರಚಿತವಾದ ಐತಿಹ್ಯವನ್ನು ಹೇಳಿ ಮುಂದೆ ಮತ್ತೊಂದು ಆಗಮವಾದ ಕಷಾಯಪಾಹುಡದ ರಚನೆ ಹಾಗೂ ಈ ಎರಡು ಆಗಮ ಗಳ ಮೇಲೆ ಕಾಲಾನುಕ್ರಮವಾಗಿ ರಚಿತವಾದ ವ್ಯಾಖ್ಯಾನಗಳ ಐತಿಹ್ಯ ವಿಷಯವನ್ನು ಈ ಮುಂದಿನಂತೆ ಹೇಳಿದ್ದಾರೆ :

"ಜ್ಞಾನಪ್ರವಾದವೆಂಬ ಐದನೇ ಪೂರ್ವದ ಹತ್ತನೇ ವಸ್ತುವಿನಲ್ಲಿ ಮೂರನೆಯ ದಾದ 'ಪ್ರಾಯೋದೋಷ ಪ್ರಾಭೃತಕ' ಅಥವಾ 'ಕಷಾಯ ಪ್ರಾಭೃತ' ಶ್ರುತಜ್ಞಾನ ಧರರಾದ ಗುಣಧರಮುನೀಂದ್ರರಿದ್ದರು. ಇವರು ಈ ಪಾಹುಡದ ಜ್ಞಾನವು ತಮ್ಮ ಕಾಲಾನಂತರ ಲುಪ್ತವಾಗುವುದೆಂದು ಭಾವಿಸಿ, ೧೮೩ ಮೂಲಸೂತ್ರಗಾಥೆಗಳು ಮತ್ತು ೫೩ ವಿವರಣಗಾಥೆಗಳಿಂದ ಕೂಡಿದ ೧೫ ಮಹಾಧಿಕಾರಗಳ ಗ್ರಂಥವನ್ನು ರಚನೆಮಾಡಿ ಶಿಷ್ಯರಾದ ಆರ್ಯಮಂಕ್ಷು ಮತ್ತು ನಾಗಹಸ್ತಿ ಯತಿಗಳಿಗೆ ವ್ಯಾಖ್ಯಾನಪೂರ್ವಕವಾಗಿ ಉಪದೇಶಿಸಿದರು. ಇವರಿಬ್ಬರ ಬಳಿ ಶಾಸ್ತ್ರಾರ್ಥ ನಿಪುಣರಾದ ಯತಿ ವೃಷಭಸ್ವಾಮಿ ಯವರು ಆ ಸೂತ್ರಗಳನ್ನು ಅಧ್ಯಯನಮಾಡಿ, ಆರು ಸಹಸ್ರಶ್ಲೋಕಪರಿ ಮಿತವಾದ ಚೂರ್ಣಿಸೂತ್ರವನ್ನು ರಚಿಸಿದರು. ಇವರ ಸನ್ನಿಧಿಯಲ್ಲಿ ಉಚ್ಚಾರಣಾ ಚಾರ್ಯರೆಂಬುವರು ಗ್ರಂಥಾರ್ಥರೂಪದಿಂದ ಆ ಸೂತ್ರಗಳನ್ನು ಅಧ್ಯಯನಮಾಡಿ, ಚೂರ್ಣಿಸೂತ್ರಗಳಿಗೆ ೧೨೦೦೦ ಶ್ಲೋಕಪ್ರಮಾಣದ 'ಉಚ್ಚಾರಣ ಸೂತ್ರ' ಎಂಬ ಹೆಸ ರಿನ ಸೂತ್ರಗಳನ್ನು ರಚಿಸಿದರು. ಈ ರೀತಿಯಾಗಿ ಕಷಾಯಪ್ರಾಭೃತವು ಗುಣಧರ, ಯತಿ ವೃಷಭ ಮತ್ತು ಉಚ್ಚಾರಣಾಚಾರ್ಯರಿಂದ ಗಾಥಾ, ಚೂರ್ಣಿ ಮತ್ತು ಉಚ್ಚಾ ರಣಸೂತ್ರರೂಪದಲ್ಲಿ ಉಪಸಂಹೃತವಾಯಿತು.

ಪದ್ಮನಂದಿ-ಕುಂದಕುಂದಾಚಾರ್ಯರು ಷಟ್ಖಂಡಾಗಮದ ಮೂರು ಖಂಡಗಳಿಗೆ ಪರಿಕರ್ಮವೆಂಬ ಟೀಕೆಯನ್ನು ರಚಿಸಿದರು. ಇವರ ತರುವಾಯ ಶ್ಯಾಮಕುಂದಾ ಚಾರ್ಯರು ಆರನೇ ಖಂಡವೊಂದರ ಹೊರತಾಗಿ ಷಟ್ಖಂಡಾಗಮ ಮತ್ತು ಕಷಾಯ ಪ್ರಾಭೃತಗಳೆರಡಕ್ಕೂ ಪ್ರಾಕೃತ, ಸಂಸ್ಕೃತ ಮತ್ತು ಕರ್ಣಾಟಕ ಭಾಷೆಗಳಲ್ಲಿ 'ಪದ್ಧತಿ' ಎಂಬ ವ್ಯಾಖ್ಯಾನವನ್ನು ರಚಿಸಿದರು. ಅನಂತರ ಕಾಲಾನುಕ್ರಮವಾಗಿ ತುಂಬು ಲೂರಾಚಾರ್ಯ, ಸಮಂತಭದ್ರಸ್ವಾಮಿ, ಬಪ್ಪದೇವಗುರುಗಳು, ವೀರಸೇನಾಚಾರ್ಯರು ಮತ್ತು ಜಿನಸೇನಾಚಾರ್ಯರು ವ್ಯಾಖ್ಯಾನಗಳನ್ನು ರಚಿಸಿದರು."

ಗುಣಧರ, ಯತಿವೃಷಭ ಮತ್ತು ಉಚ್ಚಾರಣಾಚಾರ್ಯರಿಂದ ಗಾಥಾ, ಚೂರ್ಣಿ ಮತ್ತು ಉಚ್ಚಾರಣಾ ಸೂತ್ರರೂಪದಲ್ಲಿ ಉಪಸಂಹೃತವಾದ ಆಗಮವನ್ನು 'ಕಷಾಯ

ಪ್ರಾಭೃತ' ವೆಂದು ನಿರ್ದೇಶಿಸಿರುವುದು ಸ್ಪಷ್ಟವಿದೆ. ಆದರೆ ಈ ಮೂವರು ಆಚಾರ್ಯರ ಜೀವಿತಕಾಲದ ವಿಷಯವಾಗಿ ಶ್ರುತಾವತಾರದಲ್ಲಿ ಸ್ಪಷ್ಟರೀತಿಯದಾದ ಯಾವ ಹೇಳಿಕೆಯೂ ಇಲ್ಲವಾಗಿದೆ. ಆದ್ದರಿಂದ ಈ ಆಚಾರ್ಯರ ಜೀವತಕಾಲವಿಷಯವನ್ನು ಖಚಿತರೀತಿಯಿಂದಲ್ಲದಿದ್ದರೂ ಸ್ಥೂಲರೀತಿಯಾಗಿ ಆಧಾರಾಂತರಗಳನ್ನಾಧರಿಸಿ ನಿರ್ಣಯಿಸಬೇಕಾಗುವುದು. ಷಟ್ಖಂಡಾಗಮಕ್ಕೆ ವ್ಯಾಖ್ಯಾನರಚನೆಮಾಡಿದವರಲ್ಲಿ ಕುಂದಕುಂದಾಚಾರ್ಯರು ಮೊದಲನೆಯವರಾಗಿರುವರೆಂದೂ ಮತ್ತು ಷಟ್ಖಂಡಾಗಮ ಹಾಗೂ ಕಷಾಯಪ್ರಾಭೃತ ಆಗಮಗಳೆರಡಕ್ಕೂ ವ್ಯಾಖ್ಯಾನ ರಚನೆಮಾಡಿದವರಲ್ಲಿ ಶ್ಯಾಮಕುಂದಸ್ವಾಮಿಯವರು ಮೊದಲನೆಯವರಾಗಿರುವರೆಂದೂ ಶ್ರುತಾವತಾರದ ಮೇಲ್ಕಂಡ ಐತಿಹ್ಯದಿಂದ ಸ್ಪಷ್ಟಗೊಂಡಿದೆ. ಇಂತೆಯೇ ಶ್ರುತಾವತಾರದ ಮೇಲ್ಕಂಡ ಹೇಳಿಕೆಯಿಂದ ಶ್ಯಾಮಕುಂದಸ್ವಾಮಿಯವರು ಸಮಂತಭದ್ರಸ್ವಾಮಿಯವರಿಂದ ಸ್ವಲ್ಪ ಮಾತ್ರವಾದರೂ ಪೂರ್ವಕಾಲೀನರಾಗಿದ್ದಿರಬೇಕೆಂದು ಸೂಚಿತವಾಗುವುದು. ಸಮಂತಭದ್ರಸ್ವಾಮಿಯವರು ಕ್ರಿ. ಶ. ನಾಲ್ಕನೇ ಶತಮಾನದ ಆದಿಭಾಗದಲ್ಲಿ ಜೀವಿಸಿದ್ದಿರಬೇಕೆಂದು ಹಿಂದೆ ವಿವರಿಸಿದೆಯಾದುದರಿಂದ ಶ್ಯಾಮಕುಂದಸ್ವಾಮಿಯವರು ಕ್ರಿ. ಶ. ೩ನೇ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದಿರಬಹುದೆಂದು ತರ್ಕಿಸಲವಕಾಶವಾಗುವುದಲ್ಲದೆ ಇವರು ಉಮಾಸ್ವಾತಿಸ್ವಾಮಿಯವರ ಜೀವಿತಕಾಲದ ನಿಕಟವರ್ತಿಸಮಯದಲ್ಲಿ ಜೀವಿಸಿದ್ದಿರಬೇಕೆಂದೂ ಭಾವಿಸಲವಕಾಶವಾಗುವುದು. ದಿಗಂಬರ ಮತ್ತು ಶ್ವೇತಾಂಬರ ಪಂಥಗಳೆರಡರಲ್ಲಿಯೂ ಅನೇಕ ಜನ ಆಚಾರ್ಯರನ್ನು ತಮ್ಮತಮ್ಮ ಪಂಥದವರೆಂದು ಹೇಳಿಕೊಂಡಿರುವುದು ಹಿಂದೆ ಅನೇಕ ಸಂದರ್ಭಗಳಲ್ಲಿ ವ್ಯಕ್ತಪಟ್ಟಿದೆ. ಈ ರೀತಿಯಾಗಿ ಎರಡೂ ಪಂಥಗಳಿಂದ ತಮ್ಮ ತಮ್ಮ ಪಂಥದವರೆಂದು ಸಂಸ್ತುತರಾಗಿರುವ ಪ್ರಮುಖ ಆಚಾರ್ಯರಲ್ಲಿ ಉಮಾಸ್ವಾತಿಸ್ವಾಮಿಯವರು ಒಬ್ಬರಾಗಿದ್ದಾರೆ. 'ಆರ್ಯ ಶಾಮಾಚಾರ್ಯ' ಎಂಬುವರು ಉಮಾಸ್ವಾತಿಸ್ವಾಮಿಯವರ ಶಿಷ್ಯರಾಗಿದ್ದರೆಂದು ಶ್ವೇತಾಂಬರ ಆಮ್ನಾಯದ ಹೇಳಿಕೆಯಿದೆ.[1] ಕಾಲೈಕ್ಯತೆ ಮತ್ತು ಹೆಸರಿನ ಸಮಾನತೆಗಳ ಕಾರಣದಿಂದ ಪೂರ್ವೋಕ್ತವಾದ ದಿಗಂಬರ ಆಮ್ನಾಯದ 'ಶ್ಯಾಮಕುಂದ' ಮತ್ತು ಶ್ವೇತಾಂಬರ ಆಮ್ನಾಯದ ಆರ್ಯ ಶ್ಯಾಮಾಚಾರ್ಯ ಎಂಬ ಹೆಸರುಗಳು ಏಕೈಕ ಆಚಾರ್ಯರ ಸೂಚಕವಾಗಿವೆಯೆಂದು ಗ್ರಹಿಸಲವಕಾಶವಾಗುವುದು. ಇದರಿಂದ ಕ್ರಿ. ಶ. ೨೫೦ ನೇ ವರ್ಷದ ಪೂರ್ವಭಾವಿಯಾಗಿಯೇ ಗುಣಧರಸ್ವಾಮಿಯವರ ಗಾಥಾಸೂತ್ರ, ಯತಿವೃಷಭಸ್ವಾಮಿಯವರ ಚೂರ್ಣಿಸೂತ್ರ ಮತ್ತು ಉಚ್ಚಾರಣಾಚಾರ್ಯರ ಉಚ್ಚಾರಣಾ ಸೂತ್ರಗಳಿಂದ ಉಪಸಂಹೃತವಾದ ಕಷಾಯಪಾಹುಡದ ಆಗಮವು ರಚಿತವಾಗಿದ್ದಿತೆಂದು ಪರಿಭಾವಿತವಾಗುವುದು. ಕಷಾಯಪಾಹುಡದ ಉಪಸಂಹೃತಿಯು ೧) ಗುಣಧರ ೨) ಆರ್ಯಮಂಕ್ಷು, ನಾಗಹಸ್ತಿ ೩) ಯತಿ ವೃಷಭ ಮತ್ತು ೪) ಉಚ್ಚಾ

---

1 ಪೂ. ಸೂ. 'ಶ್ರ. ಭ. ಮಹಾವೀರ' ಪು. ಸಂ. ೨೫೧.

ರಣಾಚಾರ್ಯರ ಅನುಬದ್ಧ ಗುರುಶಿಷ್ಯಾನುಕ್ರಮದಲ್ಲಿ ಆಗಿರುವುದಾದ್ದರಿಂದ, ಈ ಗುರುಶಿಷ್ಯಾನುಕ್ರಮವನ್ನು ಉಮಾಸ್ವಾತಿಸ್ವಾಮಿಯವರ ಪರ್ಯಂತವಾದ ನಂದಿ ಸಂಘದ ಆಚಾರ್ಯ ಅನುಕ್ರಮದೊಡನೆ ಸ್ಥೂಲಾಪೇಕ್ಷೆಯಿಂದ ಸಮಕಾಲೀನವಾದು ದನ್ನಾಗಿ ಪರಿಗಣನೆಮಾಡಿದಲ್ಲಿ ಅಸಂಗತವೆನಿಸುವುದಿಲ್ಲ. ಅಂತೆಯೇ ಉಚ್ಚಾರಣಾ ಚಾರ್ಯರನ್ನು ಉಮಾಸ್ವಾತಿಸ್ವಾಮಿಯವರ ಸಮಕಾಲೀನರನ್ನಾಗಿಯೂ ಯತಿವೃಷಭ ಸ್ವಾಮಿಯವರನ್ನು ಕುಂದಕುಂದಸ್ವಾಮಿಯವರ ಸಮಕಾಲೀನರನ್ನಾಗಿಯೂ ಆರ್ಯ ಮಂಕ್ಷು ಮತ್ತು ನಾಗಹಸ್ತಿಸ್ವಾಮಿಯವರೀರ್ವರನ್ನು ಜಿನಚಂದ್ರಾಚಾರ್ಯರ ಸಮ ಕಾಲೀನರನ್ನಾಗಿಯೂ, ಗುಣಧರಸ್ವಾಮಿಯವರನ್ನು ಅರ್ಹದ್ಬಲಿಸ್ವಾಮಿಯವರೇ ಮೊದಲಾದ ತೃ. ಭದ್ರಬಾಹುಸ್ವಾಮಿಯವರ ಶಿಷ್ಯರ ಧರ್ಮಭ್ರಾತೃವನ್ನಾಗಿಯೂ ಪರಿಗಣನೆಮಾಡಬಹುದಾಗಿದೆ. ಗುಣಧರಸ್ವಾಮಿಯವರು, ತೃ. ಭದ್ರಬಾಹುಸ್ವಾಮಿ ಯವರ ಶಿಷ್ಯರಾದ ಅರ್ಹದ್ಬಲಿಸ್ವಾಮಿಯವರೇ ಮೊದಲಾದ ಯತಿನಾಯಕರ ಸಮ ಕಾಲೀನರಾಗಿದ್ದರೆಂದೂ ಮತ್ತು ಯತಿ ವೃಷಭಸ್ವಾಮಿಯವರು ಪುಷ್ಪದಂತ, ಭೂತಬಲಿ ಮತ್ತು ಕುಂದಕುಂದಾಚಾರ್ಯರೇ ಮೊದಲಾದ ಯತಿಪತಿಗಳ ಸಮಕಾಲೀನರಾಗಿದ್ದ ರೆಂದೂ ಸಮರ್ಥನೆಗೊಡುವ ಮತ್ತೊಂದು ಐತಿಹ್ಯಾಂಶವಿದೆ. ಗುಣಧರಸ್ವಾಮಿಯವರು ತಮ್ಮಿಂದ ರಚಿತವಾದ ಕಷಾಯಪಾಹುಡದ ಗಾಥಾ ಸೂತ್ರಗಳನ್ನು ಆರ್ಯಮಂಕ್ಷು ಮತ್ತು ನಾಗಹಸ್ತಿಯತಿಗಳಿಗೆ ಉಪದೇಶಿಸಿದರೆಂದು 'ಶ್ರುತಾವತಾರ' ಕರ್ತೃಗಳು ಹೇಳಿರುವುದು ಸ್ಪಷ್ಟವಿದೆ. ನಾಗಹಸ್ತಿಸ್ವಾಮಿಯವರು ವೀ. ನಿ. ಪ. ೬೮೬ ರಲ್ಲಿ ಸ್ವರ್ಗಸ್ಥರಾಗಿದ್ದಾರೆಂಬ ಐತಿಹ್ಯವು ಶ್ವೇತಾಂಬರ ಜೈನ ಆಮ್ನಾಯದಲ್ಲಿ ಉಳಿದು ಬಂದಿದೆ. ಅಂತೆಯೇ ಇವರ ಗುರುಗಳಾದ ಗುಣಧರಸ್ವಾಮಿಯವರು ಸುಮಾರು ಹತ್ತಿ ಪ್ಪತ್ತು ವರ್ಷಗಳ ಪೂರ್ವಭಾವಿಯಾಗಿ ಜೀವಿಸಿದ್ದಿರಬೇಕೆಂದು ಗ್ರಹಿಸಬಹುದಾದ್ದ ರಿಂದ ಇವರು ತೃ. ಭದ್ರಬಾಹುಸ್ವಾಮಿಯವರ ಶಿಷ್ಯವರ್ಗದ ಯತಿಗಳಲ್ಲೊಬ್ಬರಾಗಿ ದ್ದಿರಬೇಕೆಂದು ಪರಿಗಣನೆಮಾಡಬಹುದಾಗಿದೆ. ಇದೇ ರೀತಿಯಾಗಿ ನಾಗಹಸ್ತಿಸ್ವಾಮಿ ಯವರಿಂದ ಕಷಾಯಪಾಹುಡದ ಉಪದೇಶಪಡೆದು ಚೂರ್ಣಿವೃತ್ತಿಯನ್ನು ರಚಿಸಿದ ಯತಿವೃಷಭಸ್ವಾಮಿಯವರು ವೀ. ನಿ. ಪ. ೬೮೪ ನೇ ವರ್ಷಾನಂತರದಲ್ಲಿ ಸುಮಾರು ಹತ್ತಿಪ್ಪತ್ತು ವರ್ಷಕಾಲ ಜೀವಿಸಿದ್ದಿರಬಹುದೆಂದು ಭಾವಿಸಲವಕಾಶವಿದೆಯಾದ್ದರಿಂದ ಇವರು ಪುಷ್ಪದಂತ, ಭೂತಬಲಿ, ಕುಂದಕುಂದಸ್ವಾಮಿಯವರೇ ಮುಂತಾದ ಯತಿಪತಿ ಗಳ ಸಮಕಾಲೀನರಾಗಿದ್ದರೆಂದು ಪರಿಗಣನೆಮಾಡಬಹುದಾಗಿದೆ. ಈ ರೀತಿಯಾಗಿ ಷಟ್ಖಂಡಾಗಮವು ರಚಿತವಾದ ಸಮಯದ ಅತ್ಯಂತ ನಿಕಟವರ್ತಿ ಸಮಯದಲ್ಲಿಯೇ ಕಷಾಯಪಾಹುಡಾಗಮವೂ ರಚಿತವಾಗಿರುವುದೆಂದು ನಿಶ್ಚಿತವಾಗುವುದು. ಇದೇ ಸಮಯದಲ್ಲಿ ಸಮಯಸಾರ, ಪ್ರವಚನಸಾರ, ನಿಯಮಸಾರ, ಪಂಚಾಸ್ತಿಕಾಯಗಳೇ ಮೊದಲಾದ ಅನೇಕ ಪಾಹುಡ ಆಗಮಗ್ರಂಥಗಳು ಕುಂದಕುಂದಾಚಾರ್ಯರಿಂದ ರಚಿತ ವಾಗಿವೆ.

ಪುಷ್ಪದಂತಸ್ವಾಮಿಯವರ ಅಭಿಮತದಂತೆ ಷಟ್ಖಂಡಾಗಮವು ಸಮಸ್ತ ದ್ವಾದಶಾಂಗಶ್ರುತದ ಸಾರಸಂಗ್ರಹವಾಗಿರುವುದೆಂದು ಶ್ರುತಾವತಾರದ ಈ ಮುಂದಿನ ಹೇಳಿಕೆಯಿಂದ ವ್ಯಕ್ತವಾಗುವುದು.

ಅಥ ಪುಷ್ಪದಂತಗುರುರಪಿ ಜಿನಪಾಲಿತಹಸ್ತಸಂಸ್ಥಿತಮುದ್ವೀಕ್ಷ್ಯ ।
ಷಟ್ಖಂಡಾಗಮಪುಸ್ತಕಮಹೋ ಮಯಾ ಚಿಂತಿತಂ ಕಾರ್ಯಂ ॥೧೪೭॥
ಸಂಪನ್ನಮಿದಂ ಸಮಸ್ತಾಂಗೋತ್ಪನ್ನಮಿತಿ ಶ್ರುತಾನುರಾಗತಃ ।
ಚಾತುರ್ವರ್ಣಸಂಘಾನ್ವಿತಾ ವಿಹಿತಂ ಕ್ರಿಯಾಕರ್ಮ ॥ ೧೪೭ ॥

ಇದರಿಂದ ಷಟ್ಖಂಡಾಗಮವು ಶ್ರೀ ವೀರತೀರ್ಥಂಕರನ ದಿವ್ಯವಾಣಿಯ ಅವಶೇಷಾಂಶವಾಗಿರುವುದೆಂಬುದು ಸಮರ್ಥಿತವಾಗುವುದಲ್ಲದೆ ದ್ವಾದಶಾಂಗಶ್ರುತದ ವಿಪುಲ ವಾಙ್ಮಯದ ಅವಶೇಷವು ಸೂತ್ರರೂಪದಿಂದ ಇದರಲ್ಲಿ ಗರ್ಭೀಕೃತವಾಗಿರುವುದೆಂದು ವ್ಯಕ್ತವಾಗುವುದು. ಇಂತೆಯೇ ಗುಣಧರಸ್ವಾಮಿಯವರಿಂದ ಸೂತ್ರಗಾಥಾರೂಪದಲ್ಲಿ ರಚಿತವಿರುವ ಕಷಾಯಪ್ರಾಭೃತದಲ್ಲಿಯೂ ಅಂಗಶ್ರುತಗತವಾದ ಅಪಾರ ವಾಙ್ಮಯವನ್ನು ಸೂತ್ರರೂಪದಿಂದ ನಿಬಂಧನಗೊಳಿಸಲಾಗಿದೆ.[1] ಈ ರೀತಿಯಾಗಿ ಅಂಗಶ್ರುತದ ಅಪಾರ ವಾಙ್ಮಯವನ್ನು ಸೂತ್ರರೂಪದಿಂದ ಗರ್ಭೀಕರಿಸಿಕೊಂಡಿರುವ ಈ ಆಗಮಗ್ರಂಥಗಳಿಗೆ ಶ್ರುತವೇತ್ತರ ವ್ಯಾಖ್ಯಾನವು ಅವಶ್ಯಕವೆನಿಸಿತೆಂಬುದರಲ್ಲಿ ಸಂಶಯವಿಲ್ಲ. ಷಟ್ಖಂಡಾಗಮದ ಇಂತಹ ವ್ಯಾಖ್ಯಾನ ರಚನಕಾರರಲ್ಲಿ, ಈ ಆಗಮದ ರಚನಕಾರರಾದ ಪುಷ್ಪದಂತ ಮತ್ತು ಭೂತಬಲಿಸ್ವಾಮಿಯವರ ಕಿರಿಯ ಸಮಕಾಲೀನರೂ, ಪ್ರಾಭೃತಕಶ್ರುತವೇತ್ತರೂ ಆದ ಕುಂದಕುಂದಸ್ವಾಮಿಯವರು ಪ್ರಪ್ರಥಮ ವ್ಯಾಖ್ಯಾನಕಾರರಾಗಿ ಸಂಸ್ತುತರಾಗಿದ್ದಾರೆ. ಕಷಾಯ ಪ್ರಾಭೃತದ ವ್ಯಾಖ್ಯಾನ ರಚನಕಾರರಲ್ಲಿ ಅಗ್ರಸ್ಥಾನವು ಯತಿವೃಷಭಸ್ವಾಮಿಯವರಿಗೆ ಸಲ್ಲುವುದು. ಈ ಇರ್ವರು ಆಚಾರ್ಯರ ಅನಂತರ ಕಾಲಾನುಕ್ರಮದಲ್ಲಿ ಅನೇಕ ಆಚಾರ್ಯರು ಈ ಆಗಮಗಳಿಗೆ ವ್ಯಾಖ್ಯಾನಗಳನ್ನು ರಚಿಸಿರುವರೆಂದು ಶ್ರುತಾವತಾರದ ಐತಿಹ್ಯದಿಂದ ಶ್ರುತಪಡುವುದು. ಈ ಎಲ್ಲ ವ್ಯಾಖ್ಯಾನಗಳನ್ನಾಧರಿಸಿ ಅಂತಿಮವಾಗಿ ಶಾ. ಶಕ ೮ ನೇ ಶತಮಾನದಲ್ಲಿ ವೀರಸೇನಸ್ವಾಮಿಯವರು ಷಟ್ಖಂಡಾಗಮದ ಮೊದಲ ಐದು ಖಂಡಗಳಿಗೆ ಎಪ್ಪತ್ತೆರಡು ಸಹಸ್ರಗ್ರಂಥ (= ಶ್ಲೋಕ) ಪ್ರಮಾಣದ 'ಧವಲಾ' ಎಂಬ ಹೆಸರಿನ ಟೀಕೆಯನ್ನು ರಚಿಸಿ, ಮುಂದೆ ಎರಡನೇ ಆಗಮಗ್ರಂಥವಾದ ಕಷಾಯಪಾಹುಡಕ್ಕೆ 'ಜಯಧವಲಾ' ಎಂಬ ಹೆಸರಿನ ಟೀಕೆಯನ್ನು ರಚಿಸಲಾರಂಭಿಸಿ, ಸುಮಾರು ಇಪ್ಪತ್ತು ಸಹಸ್ರಗ್ರಂಥ ಪ್ರಮಾಣದ ಟೀಕೆಯು ಪೂರ್ಣವಾಗುವಷ್ಟರಲ್ಲಿ ದಿವಂಗತರಾದರು. ಅನಂತರ ಅವರ ಶಿಷ್ಯರಾದ ಜಿನಸೇನಾಚಾರ್ಯರು ಅದನ್ನು ಮುಂದುವರಿಸಿ, ನಲವತ್ತು ಸಹಸ್ರಗ್ರಂಥ

---

1 'ಗ್ರಂಥಕಾರ್‌ನೇ ಗಾಗರಮೇಂ ಸಾಗರ್‌ಭರ್ ದಿಯಾ ಹೈ' ಎಂಬ 'ಕಸಾಯ ಪಾಹುಡಂ' ಮುನ್ನುಡಿಕಾರರ ಹೇಳಿಕೆಯು (ಪು. ಸಂ. ೬) ಈ ಕೃತಿಯ ಸೂತ್ರಸ್ವರೂಪವನ್ನು ಸ್ಪಷ್ಟಪಡಿಸುವುದು.

ಪ್ರಮಾಣದ ಟೀಕೆಯನ್ನು ರಚಿಸಿದರು.[1] ಹೀಗೆ ಅಂತಿಮವಾಗಿ 'ಧವಲಾ' ಮತ್ತು 'ಜಯಧವಲಾ' ಎಂಬ ಟೀಕೆಗಳಿಂದ ಉಪನಿಬದ್ಧವಾದ ಷಟ್ಖಂಡಾಗಮ ಮತ್ತು ಕಷಾಯಪ್ರಾಭೃತ ಆಗಮಗಳು 'ಸಿದ್ಧಾಂತ' ಗ್ರಂಥಗಳೆನಿಸಿ ಸಂಸ್ತುತಿಗೊಂಡು ಉಳಿದುಬಂದಿವೆ. ಈ ರೀತಿಯಾಗಿ ದಿಗಂಬರ ಜೈನ ಆಮ್ನಾಯದ ಈ ಸಿದ್ಧಾಂತ ಗ್ರಂಥಗಳು ದ್ವಾದಶಾಂಗಶ್ರುತದ ಅವಶೇಷಾಂಶಗಳಾಗಿವೆಯೆಂಬುದು ಇದುವರೆಗಿನ ಪರಾಮರ್ಶೆಯಿಂದ ಪ್ರಮಾಣೀಕರಿಸಲ್ಪಟ್ಟಿದೆ. ಇಷ್ಟಲ್ಲದೆ ಜೈನ ಆಮ್ನಾಯದ ಪುರಾಣಗಳೇ ಮುಂತಾದ ಇತರ ಧರ್ಮಗ್ರಂಥಗಳೂ, ಅವುಗಳಲ್ಲಿ ಪ್ರಣೀತವಿರುವ ವಸ್ತುವಿನ ಅಪೇಕ್ಷೆಯಿಂದ, ದ್ವಾದಶಾಂಗಶ್ರುತದ ಅವಶೇಷಗಳಾಗಿವೆಯೆಂದು ಜಿನಸೇನಾಚಾರ್ಯರ ಪೂರ್ವಪುರಾಣೋಕ್ತಿಯಿಂದ ಶ್ರುತಪಡುವುದು.

[ಪ್ರಥಮ ಪರ್ವ–ಶ್ಲೋ. ಸಂ. ೧೯೮-೨೦೩]

ಅಂತೆಯೇ ಈ ಸಿದ್ಧಾಂತ, ಪುರಾಣಾದಿ ಧರ್ಮಗ್ರಂಥಗಳು ಸನ್ಮತಿ, ಮಹತಿ, ಮಹಾವೀರ, ವರ್ಧಮಾನ ಎಂಬ ಸನ್ನುತಾಭಿಧಾನಗಳಿಂದ ಸಂಸ್ತುತನಾದ ಶ್ರೀ ವೀರ ತೀರ್ಥಂಕರನ ಧರ್ಮತೀರ್ಥ ಶ್ರೀವಿಹಾರದ ಪ್ರತಿಬಿಂಬಗಳೆನಿಸಿದ್ದು ಜೈನಧರ್ಮಪಂಥದ ಪ್ರಾಚೀನ ಇತಿಹಾಸದ ಮೂರ್ತಸ್ವರೂಪಗಳಾಗಿ ವಿರಾಜಿಸುತ್ತಿವೆ.

ಣಾಣೀ ಸಿವ ಪರಮೇಟ್ಠೀ ಸವ್ವಣ್ಹೂ ವಿಣ್ಹು ಚಉಮುಹೋ ಬುದ್ಧೋ ।
ಅಪ್ಪೋ ವಿಯ ಪರಮಪ್ಪೋ ಕಮ್ಮವಿಮುಕ್ಕೋ ಯ ಹೋಇ ಫುಡಂ ॥
ಇಮ ಘಾಇಕಮ್ಮಮುಕ್ಕೋ ಅಟ್ಠಾರಹದೋಸವಜ್ಜಿಯೋ ಸಯಲೋ ।
ತಿಹುವಣಭವಣದೀವೋ ದೇವೂ ಮಮ ಉತ್ತಮಂ ಬೋಹಿಂ ॥

---

1 ಷಟ್ಖಂಡಾಗಮದ ಆರನೇ ಖಂಡವಾದ ಮಹಾಬಂಧದ ವ್ಯಾಖ್ಯಾನಗಳಾವುವೂ ಉಳಿದುಬಂದಂತೆ ಕಂಡುಬರುವುದಿಲ್ಲ. ಈ ಆರನೇ ಖಂಡಕ್ಕೆ ಸಮಂತಭದ್ರಸ್ವಾಮಿಯವರ ಸನ್ನಿಹಿತ ಪೂರ್ವಾಚಾರ್ಯರಾದ ತುಂಬುಲೂರುಸ್ವಾಮಿಯವರಿಂದ ಸಪ್ತಸಹಸ್ರ ಗ್ರಂಥಪ್ರಮಾಣದ 'ಪಂಚಿಕಾ' ಎಂಬ ಟಿಪ್ಪಣಿಯೂ ಮತ್ತು ವೀರಸೇನಸ್ವಾಮಿಯವರ ಸನ್ನಿಹಿತ ಪೂರ್ವಾಚಾರ್ಯರಾದ ಬಪ್ಪದೇವಗುರುಗಳಿಂದ ಎಂಟುಸಾವಿರದೈದುಗ್ರಂಥ ಪ್ರಮಾಣದ ವ್ಯಾಖ್ಯಾನವೂ ರಚಿತವಾಗಿದ್ದುವೆಂದು ಶ್ರುತಾವತಾರದಲ್ಲಿ ಹೇಳಿದೆ. ಆದರೆ ಈ ವ್ಯಾಖ್ಯಾನಗಳು ಈಗ ಉಪಲಬ್ಧವಿದ್ದಂತೆ ಕಂಡುಬರುವುದಿಲ್ಲ. ಇಂತಿದ್ದರೂ ವೀರಸೇನಸ್ವಾಮಿಯವರಿಂದ ಈ ಆಗಮದ ಮೊದಲ ಐದು ಖಂಡಗಳಿಗೆ 'ಧವಲಾ' ಎಂಬ ಟೀಕೆಯು ರಚಿತವಾದ ತರುವಾಯ ಆರನೇ ಖಂಡವಾದ ಮಹಾಬಂಧದ ಮೂಲಗ್ರಂಥವೇ 'ಮಹಾಧವಲಾ' ಎಂಬ ಹೆಸರನ್ನು ಹೊಂದಿದಂತೆ ಕಂಡುಬರುತ್ತದೆ. ಈ ವಿಷಯದ ವಿಶೇಷ ಮಾಹಿತಿಗೆ ಸನ್ಮಾನ್ಯ ಪಂ. ಸುಮೇರುಚಂದ್ರ ದಿವಾಕರಶಾಸ್ತ್ರಿಯವರಿಂದ ಸಂಪಾದಿತವಿರುವ 'ಮಹಾಬಂಧೋ' ಗ್ರಂಥದ ಮುನ್ನುಡಿಯನ್ನು ನೋಡಬೇಕು.



